ಅಂತರಭಾರತೀಯ ಪುಸ್ತಕ ಮಾಲೆ

# ಇಪ್ಪತ್ತೊಂದು ಬಂಗಾಳಿ ಕಥೆಗಳು

ಸಂಪಾದನೆ

**ಅರುಣ ಕುಮಾರ ಮುಖೋಪಾಧ್ಯಾಯ**

ಅನುವಾದ

**ಎಸ್.ಎ. ಶ್ರೀನಿವಾಸರಾವ್**



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-0950-1

ಮೊದಲ ಮುದ್ರಣ: 1994 (ಶಕ 1915)

Original Title in Bengali: Ekushti Bangla Galp
Compiled by Arun Kumar Mukhopadhyaya
Kannada Translation: Ippattondu Bangali Kathegalu
ರೂ. 46.00
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ–5 ಗ್ರೀನ್ ಪಾರ್ಕ್, ಹೊಸ ದೆಹಲಿ–11016 ಇವರಿಂದ ಪ್ರಕಟಿತ

# ಪರಿವಿಡಿ

# ಪೀಠಿಕೆ

ನ್ಯಾಷನಲ್ ಬುಕ್ ಟ್ರಸ್ಟ್ ಭಾರತೀಯ ಓದುಗರಿಗಾಗಿ 'ಆದಾನ್ ಪ್ರದಾನ್' ಯೋಜನೆಯನ್ನು ನಿಯೋಜಿಸಿ ಅದರಡಿ ಸಂವಿಧಾನದಲ್ಲಿ ಅಡಕವಾಗಿರುವ ಭಾರತೀಯ ಭಾಷೆಗಳಲ್ಲಿ ರಚಿತಗೊಂಡಿರುವ ಕಥಾ ಸಂಗ್ರಹಗಳನ್ನು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದ ಮಾಡಿಸಿ ಪ್ರಕಟಿಸುವ ಕಾರ್ಯ ಹಮ್ಮಿಕೊಂಡಿದೆ. ಇದರಡಿ ಬಾಂಗ್ಲಾದ ಈ ಕಥಾ ಸಂಕಲನವೂ ಬರುತ್ತದೆ. ಈ ಸಂಕಲನದಲ್ಲಿ ಅಲ್ಲಿನ ಸಾಮಾಜಿಕ ಜನಜೀವನದ ಚಿತ್ರ ನೀಡಲು ಪ್ರಯತ್ನ ನಡೆದಿದೆ.

ಬಾಂಗ್ಲಾ ಸಾಹಿತ್ಯದ ಸಮರ್ಥ ಪ್ರಥಮ ಶಿಲ್ಪಿ ಅಥವಾ ಲೇಖಕರು ರವೀಂದ್ರನಾಥ ಠಾಕೂರ್, ಕಥೆಗಳ ಪ್ರಾಣ ಪ್ರತಿಷ್ಠಾನ ಮಾಡಿದವರೇ ಅವರು. ಅನಂತರ ಈ ವಿಭಾಗ ಆಶ್ಚರ್ಯ ರೀತಿಯಲ್ಲಿ ವಿಕಾಸಗೊಂಡಿತು. ಕಥಾ ರಚನೆಯ ಎಲ್ಲಾ ಕ್ಷೇತ್ರಗಳಲ್ಲೂ ಅವರ ಪ್ರತಿಭೆಯ ಪರಿಚಯ ಕಂಡುಬರುತ್ತದೆ. ಪ್ರೇಮ, ಪ್ರಕೃತಿ ಚಿತ್ರಣ, ಸಾಮಾಜಿಕ ಸಮಸ್ಯೆ, ದಾರ್ಶನಿಕತೆ, ಕಾವ್ಯದ ಧರ್ಮ, ರೊಮಾನ್ಸ್, ಚರಿತ್ರೆ, ವ್ಯಂಗ್ಯ ಈ ಎಲ್ಲಾ ಕ್ಷೇತ್ರಗಳಲ್ಲೂ ಠಾಕೂರರು ಸ್ವಚ್ಛಂದ ವಿಹರಿಸಿದ್ದರು. ಕ್ರಿ. ಶ. 1890ರಿಂದ 1940ರವರೆಗೆ ಸುಮಾರು 50 ವರ್ಷ ಇವರು ಕಥಾ ರಚನೆ ಮಾಡಿದ್ದರು.

ರವೀಂದ್ರನಾಥರ ಸಮಕಾಲೀನರಾಗಿದ್ದ ತ್ರೈಲೋಕನಾಥ್ ಮುಖ್ಯೋಪಾಧ್ಯಾಯ ಪ್ರಭಾತ್ ಕುಮಾರ್ ಮುಖ್ಯೋಪಾಧ್ಯಾಯ, ಶರತ್‌ಚಂದ್ರ ಚಟ್ಟೋಪಾಧ್ಯಾಯ ಹಾಗೂ ಪ್ರಮಥ ಚೌದುರಿ ಅವರು ಬಾಂಗ್ಲಾದ ಸಣ್ಣ ಕಥೆಗಳ ಭಂಡಾರವನ್ನು ಮತ್ತಷ್ಟು ಸಮೃದ್ಧಗೊಳಿಸಿದರು.

ಈ ಸಂಕಟದಲ್ಲಿ ನಮಗೆ ಪರಿಚಯುವಿರುವ ಕಾಲದಲ್ಲಿ ರಚಿತಗೊಂಡ ಕಥೆಗಳ ದರ್ಶನವಿದೆ. ರವೀಂದ್ರನಾಥ ಮತ್ತು ಶರತ್‌ಚಂದ್ರರನ್ನು ಇದೇ ಕಾಲದ ಕಥೆಗಾರರೆಂದು ಹೇಳಲು ಸಾಧ್ಯವಿಲ್ಲ. ರವೀಂದ್ರನಾಥ ಹಾಗೂ ಶರತ್‌ಚಂದ್ರರ ನಂತರದ ನಲವತ್ತು ವರ್ಷಗಳಲ್ಲಿ ಬಂಗಾಳದಲ್ಲಿ ಮಾನಸಿಕ ವಿಕಾಸ ಬಹಳ ಹೆಚ್ಚಿನ ಮಟ್ಟದಲ್ಲಿ ಆಗಿದೆ. ಆದ್ದರಿಂದ ಶರತ್‌ರ ನಂತರ ಇಂದಿನವರೆಗೆ ಬೆಳೆದು ಬಂದ ಕಥೆಗಳಲ್ಲಿ ಕೆಲವನ್ನು ಸಂಕಲಿಸಲಾಗಿದೆ.

ಬಾಂಗ್ಲಾ ಸಾಹಿತ್ಯದಲ್ಲಿ ರವೀಂದ್ರನಾಥ ಹಾಗೂ ಶರತ್‌ಚಂದ್ರರ ನಂತರ ಬಂದ ಕಾಲ 'ಕಲ್ಲೋಲ್‌ಯುಗ್' ಈ ಯುಗದ ಕಾಲ 1923ರಿಂದ 1939. 'ಕಲ್ಲೋಲ'

ಮತ್ತು 'ಕಾಲಿಕಲಮ್' ಗೋಷ್ಠಿಯು ಕಥನಕಾರರು ಪ್ರಪಂಚದಾದ್ಯಂತ, ಆರ್ಥಿಕ ಆಂದೋಳನ ಮತ್ತು ಭಾರತದಲ್ಲಿನ ಬ್ರಿಟಿಷ್ ವಿರೋಧಿ ಚಟುವಟಿಕೆಗೆ ಹರಡಿದ್ದರೂ ಶಾಂತಿ ಹಾಗೂ ಸುರಕ್ಷತೆ ಮಧ್ಯೆ ಇದ್ದುಕೊಂಡೇ ಕಥೆಗಳ ರಚನೆ ಮಾಡಿದ್ದಾರೆ. ಈ ಯುಗದಲ್ಲಿ ಪ್ರಾಮುಖ್ಯತೆಗೆ ಬಂದ ಲೇಖಕರೆಂದರೆ ತಾರಾಶಂಕರ್ ಬಂದೋಪಾಧ್ಯಾಯ, ಅಂಚಿತ್ಯಕುಮಾರ್ ಸೇನ್‌ಗುಪ್ತ, ಪ್ರಮೇಂದ್ರಮಿತ್ರ, ಬುಧದೇವ್ ಬಸು, ಮನೀಶ್ ಘಟಕ್ (ಯುವನಾಶ್ವ), ಪ್ರಬೋಧ್‌ಕುಮಾರ್ ಸಾನ್ಯಾಲ್ ಮತ್ತು ಭವಾನಿ ಮುಖ್ಯೋಪಾಧ್ಯಾಯ. 'ವಿಚಿತ್ರ' ಮತ್ತು 'ಶನಿವಾರ್ ಕಿ ಚಿಟ್ಟಿ' ಈ ಪತ್ರಿಕೆಗಳ ಮುಖೇನ ಪ್ರಸಿದ್ಧಿಗೆ ಬಂದ ಲೇಖಕರೆಂದರೆ ವಿಭೂತಿ ಭೂಷಣ್ ಬಂದೋಪಾಧ್ಯಾಯ, ಮಾಣಿಕ್ ಬಂದೋಪಾಧ್ಯಾಯ, ಅನ್ನದಾ ಶಂಕರರಾಯ್, ಬನಫೂಲ್, ಶರತ್‌ಚಂದ್ರ ಬಂದೋಪಾಧ್ಯಾಯ, ರವೀಂದ್ರನಾಥ ಮೈತ್ರೆ, ಪರಿಮಲ್ ಗೋಸ್ವಾಮಿ, ಸಜನೀಕಾಂತ್ ದಾಸ್, ಪ್ರೇಮಾಂಕುರ್ ಆತರ್ಥಿ, ಸರೋಜ್‌ಕುಮಾರ್ ರಾಯ್ ಚೌಧುರಿ, ಪ್ರಮಥನಾಥ ಬಿಶಿ, ಗಜೇಂದ್ರಕುಮಾರ್ ಮಿತ್ರ, ಆಶಾಪೂರ್ಣದೇವಿ, ಮನೋಜ್ ಬೋಸ್ ಹಾಗೂ ವಿಮಲ್ ಮಿತ್ರ. ಈ ಯುಗದ ಉದಯೋನ್ಮುಖ ಲೇಖಕ ಪರಶುರಾಮ (ರಾಜಶೇಖರ ಬಸು) ಶ್ರೇಷ್ಠ ಹಾಸ್ಯ, ವ್ಯಂಗ್ಯರಸದ ಲೇಖಕರಾಗಿದ್ದರು.

'ಕಲ್ಲೋಲ' ಯುಗದ ನಂತರದ ಕಾಲ ನಮಗೆ ಬಹು ಪರಿಚಿತ. ಈ ಯುಗದ ಕಾಲ ಮಿತವಾದುದು. ಒಂದು ಕಡೆ ವಿಶ್ವ ಯುದ್ಧದ ಅಸ್ತಮಾನವಾದರೆ, ಇನ್ನೊಂದೆಡೆ ನಮ್ಮ ದೇಶದ ಸ್ವಾತಂತ್ರ್ಯ ಹಾಗೂ ದೇಶ ವಿಭಜನೆ (1839–47). ವಾಸ್ತವವಾಗಿ ಈ ಯುಗದ ಈ ಹತ್ತು ವರ್ಷ ಬಂಗಾಳ ಸಮಾಜ ಮತ್ತು ರಾಷ್ಟ್ರದ ಪರಿವರ್ತನೆಯ ಕಾಲವೆಂದು ಸ್ಪಷ್ಟವಾಗಿದೆ. ಬರಗಾಲ, ವಿಮಾನಪಹರಣದ ಘಟನೆ, ಕಂಟ್ರೋಲ್ ಹಾಗೂ ರೇಷನ್ ವ್ಯವಸ್ಥೆ, ಮಿಲಿಟರ್ ಸರಬರಾಜು, ಕಾಳಸಂತೆ ವ್ಯಾಪಾರ, ಸಾಮಾಜಿಕ ಜೀವನದ ಆರ್ಥಿಕ ವಿಶೇಷಗಳ ನೈತಿಕ ಮೌಲ್ಯಗಳ ವಿನಾಶ, ದಂಗೆ, ಸ್ವಾತಂತ್ರ್ಯ, ದೇಶದ ವಿಭಜನೆ, ನಿರಾಶ್ರಿತರ ವಲಸೆ ಮುಂತಾದವು ಈ ಅಲ್ಪಕಾಲದಲ್ಲಿ ಘಟಿಸಿವೆ.

ಈ ಯುಗದಲ್ಲಿ ಬರೆಯಲಾದ ಕಥೆಗಳಲ್ಲಿ ಸಾಹಿತ್ಯದ ಅಭ್ಯುದಯದ ಜೊತೆಗೆ ಆ ಯುಗದ ಏರುಪೇರುಗಳೂ ಕಂಡುಬರುತ್ತವೆ. ಈ ಅಕ್ರಮಣಕಾರಿ ಸಾಮಾಜಿಕ ವಾತಾವರಣ ಅಶಾಂತ ಹಾಗೂ ವಿಕ್ಷುಬ್ಧಮಯವಾಗಿತ್ತು.

ಈ ವಾತಾವರಣ ಅವರ ದೃಷ್ಟಿಯನ್ನು ಕೊಂಚ ಸಂಕುಚಿತಗೊಳಿಸಿತ್ತು, ಹರಿತಗೊಳಿಸಿತ್ತು. ಜೊತೆಗೆ ಕೊಂಚ ಅಶುದ್ಧವಾಗಿರಿಸಿತ್ತು. ಈ ಯುಗದ ಕಥೆಗಳಲ್ಲಿ ಕಲ್ಲೋಲ ಯುಗದ ರೊಮ್ಯಾಂಟಿಕತೆ ಮತ್ತು ಮನಸ್ಸನ್ನು ತಲ್ಲಣಗೊಳಿಸುವ ಮಾನಸಿಕ ತುಮುಲ, ದಡ ಸೇರಲಾರದ ಒಡೆದ ನೌಕೆಯಲ್ಲಿನ ದಾರುಣ ಪ್ರೇಮದ ಉತ್ಕಲಿಕೆ ಈ ಯುಗದ ಕಥೆಗಳಲ್ಲಿ ಕಾಣಸಿಗದು. ಈ ಯುಗದ ಸಮಾಜದಲ್ಲಿ ಅಸಂಖ್ಯ ಬದಲಾವಣೆಗಳು ಬೇಗ ಜರುಗಿದವು. ಈ ಕಾಲದಲ್ಲಿ ಸಮಾಜದಲ್ಲಿ ಹಾಗೂ ವೈಯಕ್ತಿಕ ಜೀವನದಲ್ಲಿ ಆದ ಅನೇಕ ಏರುಪೇರುಗಳು ಹಾಗೂ ಉದ್ಭವಿಸಿದ ಇತರ

ಸಮಸ್ಯೆಗಳಿಂದಾಗಿ ಪ್ರಬಲವಾಗಿ ಪರಿವರ್ತನಗಳಾದವು. ಇವು ಅಂದಿನ ಕಥೆಗಾರರ ಮನಸ್ಸಿನ ಮೇಲೆ ಬಹಳ ಪ್ರಭಾವ ಬೀರಿದವು. ಯುದ್ಧಪೂರ್ವ ಕಾಲದಲ್ಲಿ ಕಲ್ಪಿಸಲು ಅಸಾಧ್ಯವಾಗಿದ್ದ ಪರಂಪರಾಗತ ಸಾಮಾಜಿಕ ಬಂಧನ ಶಿಥಿಲಗೊಂಡಿತ್ತು. ಜನರ ಮಧ್ಯದ ಸಂಬಂಧದಲ್ಲಿ ಅಸ್ವಾಭಾವಿಕತೆ ತಲೆದೋರಿತು. ಕಾಣದ ಯಾವುದೋ ಅತೃಪ್ತಿಯಿಂದ ಮನುಷ್ಯ ತಳಮಳಗೊಂಡ. ಆಸೆ ಆಕಾಂಕ್ಷೆಗಳಲ್ಲಿ ಪರಿವರ್ತನೆ ಕಾಣಿಸಿಕೊಂಡಿತು. ಹೊಸ ಕಟ್ಟುಕಟ್ಟಳೆಗಳು ಹಾಗೂ ವಾದದಲ್ಲಿ 'ಜೀವನ ಸಂಗ್ರಾಮ'ದ ಹೊಸ ರೂಪ ಕಾಣಿಸಿಕೊಳ್ಳತೊಡಗಿತ್ತು. ಯುದ್ಧವೆಂದರೆ ಒಂದು ಭಯಂಕರ ಭೂಕಂಪದಂತೆ ಕಾಣಿಸತೊಡಗಿತ್ತು. ಇದರಲ್ಲಿ ವ್ಯವಹಾರಿಕ ಕಟ್ಟು-ಕಟ್ಟಳೆ, ನೀತಿ-ಕವಚ, ವಂಶದ ಮಾನಮರ್ಯಾದೆ, ಸ್ನೇಹ, ಮಮತೆ, ಧಾರ್ಮಿಕ ಸಂಸ್ಕಾರ ಇವೆಲ್ಲವೂ ಸರ್ವನಾಶಗೊಂಡಿದ್ದವು. ಇವೆಲ್ಲವುಗಳ ಮಧ್ಯೆ ಹೊಸ ಸಮಾಜ ನಿರ್ಮಾಣದ ಗರ್ಜನೆ ಹಾಗೂ ಹೊಸ ಸಂಕಲ್ಪಗಳ ಜಯ ಜಯಕಾರ ಮೊಳಗತೊಡಗಿತು.

ಈ ಎಲ್ಲ ಪರಿವರ್ತನೆಗಳು ಸುಬೋಧಘೋಷ್, ಸತೀನಾಥ ಭೌದುಡಿ, ಸಂತೋಷ್‌ಕುಮಾರ್ ಬೋಧ್, ನಾರಾಯಣ ಗಂಗೋಪಾಧ್ಯಾಯ, ನರೇಂದ್ರನಾಥ ಮಿತ್ರ, ನರೇಂದ್ರಘೋಷ್, ನನಿಭೌಮಿಕ್, ಸುಶೀಲ್ ಜಾನಾ ಮತ್ತು ಜ್ಯೋತಿರಿಂದ್ರ ನಂದಿ ಮುಂತಾದವರುಗಳ ಕಥೆಗಳಲ್ಲಿ ಕಾಣಿಸಿಕೊಂಡವು. ಇದರ ಜೊತೆಯಲ್ಲೇ ಹಿಂದಿನ ಈ ಕೆಲವು ಕಥಾ ಲೇಖಕರು ಜಗದೀಶ ಗುಪ್ತ ಮಾಣಿಕ್ ಬಂದೋಪಾಧ್ಯಾಯ, ಅಚಿಂತ್ಯಕುಮಾರ ಸೇನ್‌ಗುಪ್ತ, ಪ್ರಬೋಧ್‌ಕುಮಾರ್ ಸಾನ್ಯಾಲ್ ಹಾಗೂ ಪ್ರಮುಖ ಕಲ್ಲೋಲ್ ಗೋಷ್ಠಿಯ ಲೇಖಕರಾದ ವಿಭೂತಿ ಭೂಷಣ್ ಬಂದೋಪಾಧ್ಯಾಯ, ತಾರಾಶಂಕರ ಬಂದೋಪಾಧ್ಯಾಯ, ಮನೋಜ್ ಬಸು, ಸರೋಜ್‌ಕುಮಾರ್ ರಾಯ್ ಚೌಧುರಿ, ಆಶಾಪೂರ್ಣದೇವಿ, ಪ್ರಮಥನಾಥ ಬಿಸಿ, ಪರಿಮಲ್ ಗೋಸ್ವಾಮಿ, ಬನ್‌ಫೂಲ್, ವಾಣಿರಾಯ್, ಸುಶೀಲಘೋಷ್, ಚಾರುಚಂದ್ರ ಚಕ್ರವರ್ತಿ ಹಾಗೂ 'ವಿಚಿತ್ರ' ಮತ್ತು 'ಶನಿವಾರ್ ಕಿ ಚಿಟ್ಠಿ' ಪತ್ರಿಕೆಗಳ ಲೇಖಕರುಗಳು.

ಇದಾದ ನಂತರವೇ ಬಂದುದು ರಕ್ತರಂಜಿತ ಸ್ವಾತಂತ್ರ್ಯ ಕಾಲ. ಶರಣಾರ್ಥಿಗಳ ಪ್ರವಾಹ ಉಕ್ಕಿ ಬಂತು. ಹಾಗೆಯೇ ಸಾಮಾಜಿಕ ಅಸಂತೋಷ ಸಹ ವ್ಯಾಪಕವಾಗಿ ಹರಿಯಿತು. ಸ್ವಾತಂತ್ರ್ಯದ ಮಹಾದ್ವಾರದ ಮೂಲಕ ಬಂದ ಆಸೆ ಹಾಗೂ ಆನಂದದ ವಾಣಿಯನ್ನು ಮೆಟ್ಟಿ ನಿಂತು ಶರಣಾರ್ಥಿಗಳ ಹಾಗೂ ವಂಚಿತರ ಅಟ್ಟಹಾಸ ಗರ್ಜಿಸತೊಡಗಿತು. ಇಂತಹ ವಿಕ್ಷುಬ್ಧ ಹಾಗೂ ರಕ್ತರಂಜಿತ ಸ್ವದೇಶ ಭೂಮಿಯಲ್ಲಿ ಕಥೆಗಾರರ ಹೊಸ ಪೀಳಿಗೆಯೇ ಜನಿಸಿ ಬಂತು. ಅವರುಗಳೆಂದರೆ ಸಮರೇಶ್ ಬಸು, ವಿಮಲ್‌ಕರ್, ರಮಾಪದ್ ಚೌಧುರಿ, ಸೈಯದ್ ಮುಜತಫಾಅಲಿ, ಹರಿನಾರಾಯಣ್ ಚಟ್ಟೋಪಾಧ್ಯಾಯ, ಪ್ರಭಾತ್‌ದೇವ್ ಸರಕಾರ್, ಶಾಂತಿರಂಜನ್ ಬಂದೋಪಾಧ್ಯಾಯ, ಸ್ವರಾಜ್ ಬಂದೋಪಾಧ್ಯಾಯ, ಪ್ರಾಣಿತೋಷ ಘಟಕ್, ಸುಧೀರಂಜನ್ ಮುಖ್ಯೋಪಾಧ್ಯಾಯ, ಸುಶೀಲ್ ರಾಯ್, ರಂಜನ್,

ಶಚೀಂದ್ರನಾಥ್ ಬಂದೋಪಾಧ್ಯಾಯ, ಸುಲೇಖಾ ಸನ್ಯಾಲ್, ಗೌರ್ ಕಿಶೋರ್ ಘೋಷ್, ಅಶುತೋಷ್ ಮುಖ್ಯೋಪಾಧ್ಯಾಯ, ಸರ್ವಪ್ರಿಯ ಘೋಷ್, ಅಶೀಷ್ ಬರ್ಮನ್, ಅಮಿಯ ಭೂಷಣ್ ಮಜೂಮದಾರ್, ಗೌರಿಶಂಕರ ಭಟ್ಟಚಾರ್ಯ, ದೀಪಕ್ ಚೌಧರಿ, ಮಹಾಶ್ವೇತಾದೇವಿ ಹಾಗೂ ಅನೇಕರು.

ಇಂದಿನ ಯುಗದ ಕಥೆಗಾರರು ತಮ್ಮ ಹಿಂದಿನ ಯುಗದ ಕಥೆಗಾರರ ಸಹಯಾತ್ರಿಗಳೇ ಆಗಿದ್ದರು. ಏತಕ್ಕೆಂದರೆ ಅವರಿಬ್ಬರನ್ನು ಪ್ರತ್ಯೇಕಿಸಿ ನೋಡಲಾಗುವುದಿಲ್ಲ. ನರೇಂದ್ರನಾಥ ಮಿತ್ರ, ನಾರಾಯಣ ಗಂಗೋಪಾಧ್ಯಾಯ, ಸಂತೋಷ್ ಕುಮಾರ್ ಘೋಷ್, ಸಮರೇಶ್ ಬಸು, ವಿಮಲ್‌ಕರ್, ರಮಾಪದ್ ಚೌಧರಿ, ನವೇಂದು ಘೋಷ್, ಸನೀಭೌಮಿಕ್, ಸುಶೀಲ್ ಜಾನಾ, ಶಾಂತಿ ರಂಜನ್ ಬಂದೋಪಾಧ್ಯಾಯ, ಸ್ವರಾಜ್ ಬಂದೋಪಾಧ್ಯಾಯ, ಪ್ರಾಣತೋಷ್ ಘಟಕ್, ಅಶುತೋಷ್ ಮುಖ್ಯೋಪಾಧ್ಯಾಯ ಈ ಎಲ್ಲರೂ 1916ರಿಂದ 1922ರೊಳಗೆ ಜನಿಸಿದವರಾಗಿದ್ದರು. ಎರಡನೇ ಮಹಾಯುದ್ಧದ ನಂತರ ಬಂಗಾಳಿ ಮತ್ತು ಕಲ್ಕತ್ತಾದ ಜನಜೀವನದ ಎಲ್ಲಾ ಹಂತಗಳಲ್ಲೂ ಪರಿಣಾಮಕಾರಿ ಪರಿವರ್ತನೆ ಆಗ ಹತ್ತಿತು. ಆಗ ಈ ಕಥೆಗಾರರು ಇನ್ನೂ ಯೌವ್ವನಾವಸ್ಥೆಗೆ ಕಾಲಿಕ್ಕುತ್ತಿದ್ದರು. ಆ ದಿನದಿಂದ ಇಂದಿನ ದಿನದವರೆಗೆ ಈ ಜನರು ದೃಢವಾಗಿ ನಿಂತು ಬರೆಯುತ್ತಿದ್ದಾರೆ. 1940ರಿಂದ 1970ರವರೆಗಿನ ಈ 30 ವರ್ಷಗಳಲ್ಲಿ ಬರೆಯಲಾದ ಕಥೆಗಳು ಸಮಾಜ ಹಾಗೂ ವೃತ್ತಿ ಜೀವನದ ಪರಿವರ್ತನೆಗೆ ಸಾಕ್ಷಿರೂಪದಲ್ಲಿ ನಿಂತಿವೆ.

ಇದಕ್ಕೆ ಮುಂದಿನ ಯುಗದಲ್ಲಿ ಅಂದರೆ ಈ ಶತಮಾನದ ಎರಡನೇ ಚರಣದಲ್ಲಿ ನಾವು ಕಾಣುವ ಮುಖ್ಯ ಅಂಶವೆಂದರೆ ಬಾಂಗ್ಲಾ ಕಥಾ ಸಾಹಿತ್ಯ ಹಿಂದಿನದಕ್ಕಿಂತ ಸಂಕುಚಿತಗೊಂಡದ್ದು. ಈ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದ ಕಥೆಗಾರರ ಜನ್ಮ 1930ರಿಂದ 1940ರೊಳಗೆ ಆಗಿರುವುದು ಕಂಡು ಬರುತ್ತದೆ. ವಾಸ್ತವವಾಗಿ ಇವರೆಲ್ಲಾ ಹೊಸ ವಿಚಾರದ ಲೇಖಕರು. ಸೈಯದ್ ಮುಸ್ತಫಾ ಸಿರಾಜ್, ಮತೀನದಿ ಸನೀಲ್ ಗಂಗೋಪಾಧ್ಯಾಯ, ಶ್ಯಾಮಲ ಗಂಗೋಪಾಧ್ಯಾಯ, ಬರೇನ್ ಗಂಗೋಪಾಧ್ಯಾಯ, ಶೀರ್ಷೇಂದು ಮುಖ್ಯೋಪಾಧ್ಯಾಯ, ಪ್ರಫುಲ್ಲರಾಯ್, ಅತೀನ್ ಬಂದೋಪಾಧ್ಯಾಯ, ದಿವ್ಯೇಂದು ಪಾಲಿತ್, ದೀಪೇಂದ್ರನಾಥ ಬಂದೋಪಾಧ್ಯಾಯ, ದೇವೇಶ್‌ರಾಯ್, ಸಂದೀಪನ ಚಟ್ಟೋಪಾಧ್ಯಾಯ, ಕವಿತಾ ಸಿಂಹ, ಲೋಕನಾಥ ಭಟ್ಟಚಾರ್ಯ ಹಾಗೂ ಶಂಕರ್ ಈ ಕಾಲದ ಪ್ರಮುಖ ಲೇಖಕರು.

ತಮ್ಮ ಹಿಂದಿನ ಲೇಖಕರೊಡನೆ ಯಾವ ತರಹ ತಾರತಮ್ಯವನ್ನು ಹೊಂದಿರದ ಈ ಹೊಸ ವಿಚಾರವಂತ ಲೇಖಕರು ಹೊಸ ಲೇಖಕ ವರ್ಗದ ನಿರ್ಮಾತರು.

ಈ ಜನ ಹಿಂದಿನದನ್ನು ನೋಡದವರು, ಇವರ ಸಾಹಿತ್ಯಕ ವೃತ್ತಿ ಸುಮ್ಮನೆ ದಕ್ಕಿದುದೂ ಅಲ್ಲ. ಇವರ ಸಾಹಿತ್ಯ ಸೃಷ್ಟಿ ಆದದ್ದು ಬ್ಲಾಕ್ ಔಟ್, ಬರಗಾಲ, ದಂಗೆ, ರಕ್ತರಂಜಿತ ಸ್ವಾತಂತ್ರ್ಯ ಹಾಗೂ ಸ್ವಾತಂತ್ರ್ಯ ಶಿಬಿರದ ಅಕ್ಕಪಕ್ಕದಲ್ಲಿ. ಹಿಂದಿನ ಲೇಖಕರ ದೃಷ್ಟಿಯಲ್ಲಿ ಈ ಲೇಖಕರು ಹೊಸ ರಕ್ತದ ಗಣಕ್ಕೆ ಸೇರಿದವರು. ಹಿಂದಿನ ಲೇಖಕರೊಡನೆ ಇವರು ಯಾವ ತರದ ಆತ್ಮೀಯ ಸಂಬಂಧವನ್ನು ಹೊಂದಿರಲಿಲ್ಲ.

ಹಿಂದಿನ ಜೀವನಕ್ಕೆ ಆಧಾರ ಸ್ತಂಭದಂತಿದ್ದ ಸಂಯುಕ್ತ ಜೀವನ ಮುರಿದು ಬಿದ್ದಿತ್ತು. ಶ್ರದ್ಧೆ, ಭಕ್ತಿ ನೆಪ ಮಾತ್ರಕ್ಕೆ ಅಸ್ತಿತ್ವದಲ್ಲಿತ್ತು. ಇಂತಹ ಸಂದಿಗ್ಧ ಸ್ಥಿತಿಯಲ್ಲಿ ಇವರು ಹುಟ್ಟಿ ಬಂದಿದ್ದುದು. ನರನಾರಿ ಸಂಬಂಧದಲ್ಲಿ ಬಹಳ ಬದಲಾವಣೆಯಾಗಿತ್ತು. ಹಿಂದೆ ಈ ಸಂಬಂಧ ಮೌಲಿಕ ಬದಲಾವಣೆಗೆ ಒಳಗಾಗಿತ್ತು. ಹಿಂದೆ ಇದ್ದ ಸ್ನೇಹ ಸಂಬಂಧ ಪರಿಸಮಾಪ್ತಿಗೊಂಡಿತ್ತು. ಶತ್ರುಗಳಿಂದ ತುಂಬಿದ ಈ ವಿಶ್ವದಲ್ಲಿ ಲೇಖಕರು ಹಲವು ಬಾರಿ ಜೊತೆ ಜೊತೆಯಲ್ಲಿರುವ ಧೂರ್ತತನ ಪ್ರದರ್ಶಿಸಿದರು. ವಾಸ್ತವವಾಗಿ ಇವರು ಹಿಂದಿನವರಿಗಿಂತಲೂ ಅಧಿಕ ಏಕಾಂಕಿಗಳು ಹಾಗೂ ನಿಸ್ಸಂಗಿಗಳಾಗಿದ್ದಾರೆ. ಏಕಾಂಗಿ ಈ ಜನ ಮತ್ತೇನೂ ಮಾಡಲರಿಯದೆ ಅಕಾರಣ ವಿಕ್ಷುಬ್ಧ ಸ್ಥಿತಿಗೇರಿ ಈ ಸ್ಥಿತಿಗೆ ಪರಿಹಾರ ಹುಡುಕುವ ಮಾನಸಿಕ ಸೆಳೆತಕ್ಕೆ ಸಿಕ್ಕಿ ತೊಳಲುತ್ತಾರೆ.

ಹಿಂದಿನ ಲೇಖಕರು ಈಗಿನ ಲೇಖಕರನ್ನು ಇದೇ ದೃಷ್ಟಿಯಿಂದ ನೋಡಿದ್ದಾರೆ. ಈ ಎರಡೂ ವಿಚಾರಧಾರೆಯ ಲೇಖಕರು ಒಂದೊಂದು ಪ್ರತ್ಯೇಕ ದ್ವೀಪವಾಸಿಗಳಂತೆ ಕಾಣುತ್ತಾರೆ. 'ಕಲ್ಲೋಲ ಯುಗ' ಹಾಗೂ ಎರಡನೆಯ ಮಹಾಯುದ್ಧ ಕಾಲದ ಲೇಖಕರ ಮಧ್ಯೆ ಮೂಲಭೂತ ವಿಚಾರಗಳಲ್ಲೇ ಅಂತರವಿದೆ.

ಮೂಲತಃ ಈ ತರುಣ ಲೇಖಕರು ಹಾಗೂ ಎರಡನೆ ವಿಶ್ವ ಯುದ್ಧಕಾಲದ ಲೇಖಕರ ದೃಷ್ಟಿಕೋನದಲ್ಲಿ ಅಂತರ ಕಂಡುಬರುತ್ತದೆ. 'ಕಲ್ಲೋಲ ಯುಗ'ದ ರೊಮಾಂಟಿಕತೆ ಮುಂದಿನ ಯುಗದಲ್ಲಿ ಕಂಡುಬರುವುದಿಲ್ಲ. ಆದರೆ ಜೀವನದ ಆನಂದ ಮತ್ತು ಮೌಲ್ಯದ ಬಗ್ಗೆ ಶ್ರದ್ಧೆ ಇತ್ತು. ಆದರೆ ಇಂದಿನ ತರುಣ ಲೇಖಕರಲ್ಲಿ ಈ ಭಾವನೆ ಇಲ್ಲ. ಈ ಕ್ಷೇತ್ರದಲ್ಲಿ ಅಂತರ ಬಹಳವಿದೆ. ಇವರು ಕೆಲವು ಕ್ಷೇತ್ರಗಳಲ್ಲಂತೂ ಬಹುಶಃ ಉದ್ಧಾರ ಆಗಲಾರರು.

ಈ ಅಂತರ ಮನಸ್ಸಿಗೆ ಮಾತ್ರವಲ್ಲದೆ ಭಾಷೆ ಹಾಗೂ ಶೈಲಿಗೂ ಸಂಬಂಧಿಸಿದೆ. ಮತ್ತೆ ಇದು ಕೇವಲ ಜೀವನ ದೃಷ್ಟಿಯಲ್ಲಿ ಮಾತ್ರವಲ್ಲ. ಜೀವನದೊಡನೆ ಸಂಪರ್ಕ ಕಲ್ಪಿಸಿದ ವಸ್ತುಗಳು ಹಾಗೂ ವ್ಯವಹಾರಿಕ ಉಪಯುಕ್ತ ವಸ್ತುಗಳಿಗೂ ಸಂಬಂಧಿಸಿದೆ. ಇದರಿಂದ ರವೀಂದ್ರನಾಥರಲ್ಲೇ ಬಾಂಗ್ಲಾಸಾಹಿತ್ಯದ ಅಂತಿಮ ಸಿದ್ಧಿಯನ್ನು ಕಾಣಲು ತವಕಿಸುವುದು ಸರಿಯಾಗದು ಎಂದು ಸಿದ್ಧವಾಗುತ್ತದೆ.

ಬಾಂಗ್ಲಾ ಕಥಾ ಸಾಹಿತ್ಯ ಸತತವಾಗಿ ಮುಂದೆ ಮುಂದೆ ಸರಿದಿದೆ. ಚೌಕ ತಲುಪಿ ಹಿಂತಿರುಗುವ ಎಚ್ಚರಿಕೆ ಘಂಟೆಯನ್ನೂ ಹಲವು ಬಾರಿ ಬಾರಿಸಿದೆ. ಪರೀಕ್ಷೆ – ನಿರೀಕ್ಷೆಯಲ್ಲಿ ಎಂದೂ ಮಂದಗತಿಯಾಗಲಿಲ್ಲ. ಜೀವನವನ್ನು ಹೊಸ ದೃಷ್ಟಿಯಿಂದ ನೋಡುವ ಉತ್ಸಾಹವೂ ಎಂದೂ ನಷ್ಟವಾಗಿಲ್ಲ. ಕೆಲವೇ ನಿರ್ದಿಷ್ಟ ನಿಯಮಗಳನ್ನು ಅನುಸರಿಸಿ, ನಿರ್ದಿಷ್ಟ ಸಂಖ್ಯೆಯ ಪುಟಗಳಲ್ಲಿ ಕೆಲವೇ ನಿರ್ದಿಷ್ಟ ಕಥೆಗಳನ್ನು ಅಳವಡಿಸಿ ಈ ಸಂಕಲನವನ್ನು ತಯಾರಿಸುವ ಅವಕಾಶ ಲಭಿಸಿದೆ. ಈ ಸಂಕಲನ ಎಲ್ಲರಿಗೂ ಪ್ರಿಯವಾಗುವುದೆಂದು ನಾನು ನಂಬಿರುವುದಿಲ್ಲ. ಆದರೂ ಇಲ್ಲಿ ಎಲ್ಲಾ ತರಹ ನಿಯಮ ಪಾಲಿಸಿ ಅವರು ಹಾಕಿದ ಗೆರೆಯೊಳಗೆ ಶ್ರಮಿಸಿದ್ದೇನೆ. ಇದು ಬಿಟ್ಟು ನನಗೆ ಬೇರೆ ದಾರಿಯೇ ಇರಲಿಲ್ಲ. ರವೀಂದ್ರನಾಥ ಮತ್ತು ಶರತ್‌ಚಂದ್ರರ ಪರಿವರ್ತನಶೀಲ ಯುಗದಲ್ಲಿ ರಚಿತಗೊಂಡ ಮೂರು ದಶಕಗಳ ಕಥಾ ಸಂಕಲನ

ಎಷ್ಟು ಪರಿಪೂರ್ಣ ಹಾಗೂ ವೈವಿಧ್ಯಪೂರ್ಣವಾಗಿದೆ ಎಂದರೆ ಅದರಿಂದ ಆಯ್ಕೆ ಮಾಡುವುದು ದುಸ್ಸಾಧ್ಯದ ಕೆಲಸ. ಆದ್ದರಿಂದಲೇ ನನಗೆ ಓದುಗರ ಸಹಾನುಭೂತಿ ಮತ್ತು ಪ್ರೋತ್ಸಾಹವನ್ನು ಅವಲಂಬಿಸದೆ ಬೇರೆ ಉಪಾಯುವೇ ಕಾಣಿಸದು.

ಈ ಕಥಾ ಸಂಕಲನದಲ್ಲಿ ಆಧುನಿಕ ಕಥಾ ಸಾಹಿತ್ಯದ ಇಬ್ಬರು ಸಾಹಿತಿಗಳ ಕಥೆಗಳನ್ನು ಕೊನೆಗಳಿಗೆಯಲ್ಲಿ ತೆಗೆದು ಹಾಕಬೇಕಾಯಿತು. ಏತಕ್ಕೆಂದರೆ (ವಿಭೂತಿ ಭೂಷಣ್ ಬಂದೋಪಾಧ್ಯಾಯರ 'ಆಹ್ವಾನ' ಮತ್ತು ಮಾಣಿಕ್ ಬಂದೋಪಾಧ್ಯಾಯರ 'ನಮೂನಾ') ಅವರ ಕಥೆಗಳ ಕಾಪಿರೈಟ್ ಪಡೆಯಲು ಸುಮಾರು ಒಂದು ವರ್ಷದ ನನ್ನ ಶ್ರಮ ಸಾರ್ಥಕವಾಗಿರಲಿಲ್ಲ. ಓದುಗರು ನನ್ನ ಈ ಅಸಫಲತೆಯನ್ನು ಕ್ಷಮಿಸುತ್ತೀರೆಂದು ನಂಬಿದ್ದೇನೆ.

**ಅರುಣ ಕುಮಾರ್ ಮುಖೋಪಾಧ್ಯಾಯ**

# ಕೊನೆಯ ಮಾತು

*ತಾರಾಶಂಕರ ಬಂದೋಪಾಧ್ಯಾಯ*

ಪೂರ್ವಿಚೌಕ ಪರಗಣದ ಭರತ್‌ಪುರ ಜಹಗೀರು ಒಂದು ಭಾರಿ ಸಂಪತ್ತು. ಅಲ್ಲಿನ ರಸ್ತೆಗಳು ಬೃಹತ್ ಮರದ ಶಾಖೆಗಳಂತೆ ಸುತ್ತಲೂ ಹರಡಿದ್ದವು. ಮೊರದಂತೆ ಅಗಲವಾಗಿದ್ದವು. ಅಲ್ಲಿನ ಮಣ್ಣು ಚಂದನದಂತೆ ಮೃದುವಾಗಿತ್ತು. ಅದನ್ನು ಶರೀರಕ್ಕೆ ಹಚ್ಚಿದರೆ ಸುಖದ ಅನುಭವವಾಗುತ್ತಿತ್ತು. ಧಾನ್ಯವನ್ನು ಬಿತ್ತುವುದೇ ತಡ ಕಣ್ಣು ಮುಚ್ಚಿ ತೆರೆಯುವುದರಲ್ಲಿ ಫಸಲು ನಳನಳಿಸುತ್ತಾ ಬೆಳೆದು ನಿಲ್ಲುತ್ತಿತ್ತು. ಇಷ್ಟೇ ಅಲ್ಲದೆ ಭರತಪುರದಲ್ಲಿ ಸಿಗದೇ ಇರದ ವಸ್ತುಗಳೇ ಇರಲಿಲ್ಲ. 'ಚಿನ್ನದ ಜಹಗೀರು' ಎಂದು ಕರೆಯಲಾಗುತ್ತಿದ್ದ ಈ ಮಾತು ಕೇವಲ ಸವಕಲು ಮಾತಾಗಿರಲಿಲ್ಲ. ಹಿಂದೆ ಇಲ್ಲಿ ಈ ಜನರು ನದಿಯ ದಡದ ಮರಳಿನಿಂದ ಚಿನ್ನವನ್ನು ಆಯ್ದು ತೆಗೆಯುತ್ತಿದ್ದರು. ವಾಸ್ತವವಾಗಿ ಇಲ್ಲಿನ ಮಣ್ಣಿನ ಅಡಿಯಲ್ಲಿ ಚಿನ್ನ ಅಡಗಿದೆ.

ಇಲ್ಲಿನ ಜನಗಳೆಲ್ಲರೂ ಮೂರ್ಖರೇ ಸರಿ. ಭೂಮಿ ಉತ್ತು ಹೇಗೋ ಹೊಟ್ಟೆಯನ್ನು ಹೊರೆದುಕೊಳ್ಳುತ್ತಾರೆ. ಹೊಡೆತ ತಿಂದೂ ನಗುತ್ತಿರುತ್ತಾರೆ. ನೀವೇನು ನಮಗೆ ಹೊರಗಿನವರೇ ಎಂದು ಇತರರಿಗೆ ಹೇಳುತ್ತಾರೆ. ಮಂಡಿಯ ಮೇಲೆ ಪಂಚೆಯ ತುಂಡು, ಇದೇ ಅವರ ಪೋಷಾಕು. ಹಣೆಯ ಮೇಲೆ ಚಂದನದ ತಿಲಕ, ಕೊರಳಲ್ಲಿ ತುಳಸಿಮಣಿ, ಕಂದುಬಣ್ಣ ಇವುಗಳಿಂದಲೇ ಅವರ ಪೆದ್ದುತನ ಎದ್ದು ಕಾಣುತ್ತದೆ. ಎಷ್ಟಾದರೂ ಇವರು ಬೇಸಾಯಗಾರರು ತಾನೆ.

ಜಮೀನುದಾರರ ಪರವಾಗಿ ಜನ ಹೇಳುತ್ತಾರೆ. ಹಿಂದೆ ರೈತರು ಹೊಟ್ಟೆ ತುಂಬಾ ಉಣ್ಣುತ್ತಿದ್ದರು. ಮೈ ಬೆವರುವಂತೆ ದುಡಿಯುತ್ತಿದ್ದರು. ತಾಂಬೂಲದ ರಸ ಹೀರುತ್ತಾ, ದೇವರಿಗೆ ಪೂಜೆ ನಮಸ್ಕಾರ ಮಾಡುತ್ತಿದ್ದರು ಹಾಗೂ ಚೆನ್ನಾಗಿ ನಿದ್ರಿಸುತ್ತಿದ್ದರು. ಆದರೆ ಈಗ ಆ ಕಾಲ ಕಳೆದುಹೋಗಿದೆ. ಕಲಿಯುಗದ ನಾಲ್ಕು ಪಾದಗಳು ಗತಿಸಿವೆ. ಇದರ ಫಲವಾಗಿ ಇಂದು ಈ ಜನ ಅರ್ಧ ಹೊಟ್ಟೆ ಮಾತ್ರ ತುಂಬಿಕೊಳ್ಳುತ್ತಿದ್ದಾರೆ. ಕಾಯಿಲೆಯಿಂದ ತತ್ತರಿಸುತ್ತಾರೆ. ಹೇಗೋ ವ್ಯವಸಾಯವನ್ನು ಮಾಡಿಕೊಂಡು ಹೋಗುತ್ತಿದ್ದಾರೆ. ಆಗಾಗ್ಗೆ ಕೆಲವರು ದೇವರನ್ನು ನೆನೆಯುವುದುಂಟು, ಮತ್ತೆ ಕೆಲವರು ಇದೂ ಇಲ್ಲ. ಅದಕ್ಕೆ ಬದಲಾಗಿ ಕೆಲವರು ಅಳುತ್ತಾ ಕೂಡುತ್ತಾರೆ. ಮತ್ತೆ ಕೆಲವರು ಕುಳಿತೇ ಹಲ್ಲು ಕಡಿಯುತ್ತಾರೆ.

ಈ ದಿನದಲ್ಲಿ ಪದ್ಮಾ ನದಿಯ ದಡದ ಆ ಸಾಹುಕಾರರು ಭರತಪುರದ ಜಮೀನ್ದಾರರು. ಇದಕ್ಕೆ ಹಿಂದೆ ಇಲ್ಲಿ ಮಂಗಳ ಕೋಟ್‌ನ ಸಾಹೇಬರ ಜಮೀನ್ದಾರಿ ಇತ್ತು. ಈ ಸಾಹುಕಾರರು ಆ ದಿನಗಳಲ್ಲಿ ಇಲ್ಲಿಗೆ ವ್ಯಾಪಾರ ಮಾಡಲು ಬಂದಿದ್ದರು. ಕುಟುಂಬದಲ್ಲಿ ಒಳಜಗಳ ಪ್ರಾರಂಭವಾಗಿ ಅವರ ಸಂಬಂಧಿಕನೊಬ್ಬ ಈ ಸಾಹುಕಾರರಿಂದ ಸಾಲ ಪಡೆದಿದ್ದನು. ಈ ಸಾಲದ ಹಣ ಸಾವಿರ ಪಾಲು ಹೆಚ್ಚಾದಾಗ ಇದನ್ನು ತೀರಿಸಲು ಅಸಾಧ್ಯವಾಯಿತು. ರೈತರ ಮುಖ್ಯಸ್ಥರು ಹಾಗೂ ಬಹಳಷ್ಟು ರೈತರು ಈ ಸಾಹುಕಾರನ ಪರವಾಗಿಯೇ ಸಾಕ್ಷಿ ಹೇಳಿದರು.

ಸರಿ ಈ ಮಾತನ್ನು ಬಿಡುವುದೊಳ್ಳೆಯದು. ಆದರೆ ಒಂದು ಮಾತು. ಈ ಜನ ತಮ್ಮಲ್ಲೇ ಗೊಣಗಿಕೊಳ್ಳುವುದನ್ನು ಮಾತ್ರ ನಿಲ್ಲಿಸುವುದಿಲ್ಲ. ಈ ಮಾತನ್ನೂ ಇಲ್ಲೇ ಬಿಟ್ಟು ಬಿಡೋಣ. ಹಿಂದಿನ ಮಾತನ್ನು ಕೆದಕುವುದರಲ್ಲಿ ಏನೂ ಫಲವಿಲ್ಲ. ಬಿಚ್ಚಿ ಹೇಳಿದಷ್ಟೂ ಗ್ರಂಥ ದೊಡ್ಡದಾಗುತ್ತದೆ. ನೇರವಾಗಿ ನಡೆದದ್ದನ್ನು ಹೇಳುವುದೊಳ್ಳೆಯದು. ಏತಕ್ಕೆಂದರೆ ಪದ್ಮಾ ನದಿಯ ದಡದ ಈ ಜನ ಭರತಪುರದ ಜಮೀನ್ದಾರರಾಗಿದ್ದಾರೆ. ಭರತಪುರದಲ್ಲಿ ಒಂದು ಕಛೇರಿ. ಈ ಕಛೇರಿಗೆ ಒಬ್ಬ ನಾಯಕನಾದರೆ ದೊಡ್ಡ ಕಛೇರಿಗೆ ದೊಡ್ಡ ನಾಯಕ. ಈ ಸಾಹುಕಾರರು ತಮ್ಮ ದೇಶದ ಗೂಂಡಾಗಳ ಗುಂಪನ್ನೇ ಕರೆತಂದು ರಕ್ಷಣೆಯ ಎಲ್ಲಾ ಏರ್ಪಾಡುಗಳನ್ನು ಮಾಡಿಕೊಂಡಿದ್ದರು. ಇದಲ್ಲದೆ ಈ ಸಾಹುಕಾರರ ವಂಶದ ಕೆಲವರು ಅಂಗಡಿ ಮುಂಗಟ್ಟುಗಳನ್ನು ತೆರೆದು ಈ ಜನಗಳ ಮಧ್ಯೆ ಚೆನ್ನಾಗಿ ಬೇರು ಬಿಟ್ಟಿದ್ದರು. ಮತ್ತೆ ಕೆಲವರು ಕಾರ್ಖಾನೆಗಳನ್ನು ಸಹ ಪ್ರಾರಂಭಿಸಿದ್ದರು. ಇಲ್ಲಿಯ ನಿವಾಸಿಗಳು ಈ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದರು. ಇವರಲ್ಲಿ ಕೆಲವರು ದುಃಖಿಸುತ್ತಿದ್ದರೆ ಮತ್ತೆ ಕೆಲವರು ಅತೃಪ್ತಿಯಿಂದ ಹಲ್ಲು ಕಡಿಯುತ್ತಿದ್ದರು. ಸರಿ ಯಾರೇ ಅಳಲಿ, ಯಾರೇ ಹಲ್ಲು ಕಡಿಯಲಿ, ದಿನಗಳು ಕಳೆದುಹೋಗುತ್ತಿದ್ದವು. ಕೆಲವೊಮ್ಮೆ ಜಮೀನ್ದಾರರ ಸೇವಕರೊಡನೆ ಮರದ ಒಡೆತನ, ಕೆಲವೊಮ್ಮೆ ಜಮೀನಿನ ಅತಿಕ್ರಮಣ ಮತ್ತು ಸೈನಿಕರ ದೌರ್ಜನ್ಯದ ಬಗ್ಗೆ ಸಣ್ಣಪುಟ್ಟ ಜಗಳವಾಗುತ್ತಿದ್ದರೆ ಮತ್ತೆ ಆಗಾಗ್ಗೆ ಜನ ಮತ್ತು ವರ್ತಕರ ಮಧ್ಯೆ ಉಪ್ಪು, ಎಣ್ಣೆ, ಬಟ್ಟೆ ಮುಂತಾದವುಗಳ ಬೆಲೆಯ ಬಗ್ಗೆ ಮಾತುಕತೆ, ಮನಸ್ತಾಪ, ಸುಳ್ಳುಪಳ್ಳು ವಾಗ್ದಾನ ಇವುಗಳ ಮಧ್ಯೆ ಅಂತೂ ದಿನಗಳು ಉರುಳಿ ಹೋಗುತ್ತಿದ್ದವು. ಕೊಂಬು ಅಲ್ಲಾಡಿಸುತ್ತಾ ಕಣ್ಣಿಗೆ ಬಟ್ಟೆಯನ್ನು ಕಟ್ಟಿಕೊಂಡಂತೆ ಏಕಮುಖವಾಗಿ ಸುತ್ತುವ ಗಾಣದ ಎತ್ತಿನಂತೆ, ಈ ಜನಗಳ ಜೀವನ ಹೇಗೋ ನಡೆಯುತ್ತಿತ್ತು. ಗಾಣದಲ್ಲಿ ಎಣ್ಣೆಯಂತೂ ಒಸರುತ್ತಿತ್ತು. ಸಾಹುಕಾರರು ಎಣ್ಣೆಯನ್ನು ತೆಗೆದುಕೊಂಡರೆ ಉಳಿಯುವ ಹಿಂಡಿ ಎತ್ತುಗಳ ಪಾಲಾಗುತ್ತಿತ್ತು.

ಭೂಕಂಪದಿಂದ ಇದ್ದಕ್ಕಿದ್ದಂತೆಯೇ ಎಲ್ಲಾ ವಸ್ತುಗಳು ಚೆಲ್ಲಾಪಿಲ್ಲಿಯಾಗುವಂತೆ ಎಲ್ಲವೂ ಅಸ್ತವ್ಯಸ್ತಗೊಂಡಿತು. ಒಂದು ಭಯಂಕರ ಅಧ್ಯಾಯವೇ ಘಟಿಸಿತು. ಸಾಹುಕಾರ ಜಮೀನ್ದಾರರು, ಹಲ್ದಿವಾಡಿಯ ಮುಸಲ್ಮಾನ ಜಮೀನ್ದಾರರ ಮಧ್ಯೆ ಗಡಿ ಕುರಿತು ಒಂದು ದೊಡ್ಡ ಮೊಕದ್ದಮೆ ಪ್ರಾರಂಭವಾಯಿತು. ಈ ಅನಿರೀಕ್ಷಿತ ಜಗಳದಲ್ಲಿ ಮಾತಿಲ್ಲ ಕತೆಯಿಲ್ಲ. ನೋಟೀಸ್ ಇಲ್ಲ, ಪತ್ರವಿಲ್ಲ. ಇದ್ದಕ್ಕಿದ್ದಂತೆಯೇ

ಈ ಮುಸಲ್ಮಾನರ ಕಡೆಯ ಗೂಂಡಾಗಳು ಕಾಡುಮೇಡನ್ನು ಧ್ವಂಸ ಮಾಡಿ ದೊಣ್ಣೆ ಕುಡುಗೋಲು, ಭರ್ಜಿ ಮುಂತಾದವುಗಳನ್ನು ಹಿಡಿದುಕೊಡು ಭರತಪುರದ ಬಳಿಯ ಧರ್ಮಪುರದ ಮೇಲೆ ಧಾಳಿ ಮಾಡಿದರು. ಕಛೇರಿ ಹೊಕ್ಕು ಹೊಡೆದು ಬಡಿದು ರಕ್ತ ಹರಿಸಿ ತಮ್ಮ ನೆಲೆಯನ್ನು ಭದ್ರಪಡಿಸಿಕೊಂಡರು. ಸಾಹುಕಾರರ ದಳ ಭರತಪುರದ ಕಛೇರಿಗೆ ಬಂತು. ಈ ಮುಸಲ್ಮಾನರನ್ನು ನೋಡಿ ಭರತಪುರದ ಜನರಿಗೆ ಚಿಂತೆ ಹತ್ತಿತು. ಲಾಠಿಗಳಿಗೆ ಎಣ್ಣೆ ಹಚ್ಚಿ ಕತ್ತಿಗೆ ಸಾಣೆ ಹಿಡಿದು ಇವರು ತಯಾರಿ ನಡೆಸಿದ್ದರು. ಭರತಪುರಕ್ಕೆ ಈ ಮುಸಲ್ಮಾನ್ ಗೂಂಡಾಗಳು ಬಂದು ಹೀಗೆ ಹಲ್ಲೆ ನಡೆಸಾರೆಂದು ಈ ಜನ ಕಿಂಚಿತ್ತೂ ಯೋಚಿಸಿರಲಿಲ್ಲ. ನಾಲ್ಕು ಕಡೆ ಕೂಗಾಟ ಕೇಳಿ ಬರಹತ್ತಿತು. ಭರತಪುರದ ಕಛೇರಿಯಲ್ಲಿ ಭರದಿಂದ ಸಿದ್ಧತೆ ನಡೆಯುತ್ತಿತ್ತು.

ಇದೆಲ್ಲದರಿಂದಾಗಿ ರೈತರು ಬೆದರಿದ್ದರು. ಈ ಎರಡು ಗುಂಪುಗಳ ಮಧ್ಯದ ಯುದ್ಧದಿಂದಾಗಿ ಹೋರಿಗೆ ಕಾಲ್ಕೆಳಗೆ ಸಿಕ್ಕಿದ ಕಾಡುಹುಲ್ಲಿನಂತೆ ಇವರ ಸ್ಥಿತಿಯಾಗಿತ್ತು. ರೈತರು ತಲ್ಲಣಗೊಂಡಿದ್ದರು. ಹಿರಿಯ ಮೋಹನಪಾಂಡೆ ಭರತಪುರದ ರೈತರ ಮುಖ್ಯಸ್ಥನಾಗಿದ್ದ. ಚಿಕ್ಕ ಚಿಕ್ಕ ಬಿಳಿ ತಲೆಕೂದಲು, ಡೊಂಕು ಹಲ್ಲುಗಳು, ನಿಧಾನ ಮಾತು, ಸಿಹಿ ಮುಗುಳ್ನಗು. ಇವರು ಚಿಂತಿತರಾಗಿ ಮುಂದಲೆಯನ್ನು ಸವರಿಕೊಳ್ಳುತ್ತಿರುವರು.

ಭರತಪುರದ ಜನಗಳು ಗುಂಪಾಗಿ ಬಂದು ಈ ವೃದ್ಧರನ್ನು ಸುತ್ತುವರಿದರು. ಬಹಳ ಗೌರವಪೂರ್ವಕವಾಗಿ ಈ ವೃದ್ಧ ಎಲ್ಲರಿಗೂ ಕೈಮುಗಿದ. ತಾಯಿಯ ತೊಡೆಯ ಮೇಲಿನ ಮಗು ನಗುವಂತೆ ಬೊಚ್ಚು ಬಾಯಿ ಅಗಲಿಸಿ, ನಗುತ್ತಾ "ದಯಮಾಡಿಸಿ ಪಂಚಾಯಿತ ಸದಸ್ಯರೇ" ಎಂದು ಸ್ವಾಗತಿಸಿದ.

ಎಲ್ಲರೂ ಬಂದು ಕುಳಿತರು. ಅನಂತರ ನುಡಿದರು. "ತಮ್ಮಲ್ಲಿ ಒಂದು ಮಾತು ಹೇಳುವುದಿದೆ". ಇದೊಂದು ಮಾತಿನಲ್ಲಿ ಅವರ ಹೇಳಿಕೆ ಎಲ್ಲಾ ಪೂರ್ಣಗೊಂಡಿತ್ತು. ಇವರು ಕೂಡ ಅದನ್ನು ಅರ್ಥ ಮಾಡಿಕೊಂಡಿದ್ದರು.

ಈ ವೃದ್ಧ ಸುಖದಲ್ಲೂ ನಗುತ್ತಾನೆ, ದುಃಖದಲ್ಲೂ ನಗುತ್ತಾನೆ, ಚಿಂತೆಯಲ್ಲೂ ನಗುತ್ತಾನೆ, ಯೋಚಿಸುತ್ತಲೇ ಮುಗುಳ್ನಕ್ಕ.

ಗೋರಪುರದ ಒಬ್ಬ ನುಡಿದ "ಈ ಸಾಹುಗಳು ನಮ್ಮ ಜಮೀನಿನ ಮೇಲಿನ ಹಕ್ಕನ್ನು ಮಾನ್ಯ ಮಾಡುತ್ತಿಲ್ಲ. ನಮ್ಮ ಹಕ್ಕನ್ನು ಏಕೆ ಬಿಟ್ಟುಕೊಡೋಣ. ಈ ಸಾಹುಗಳು ಜಮೀನ್ದಾರರು, ಈ ಸಾಯಿಗಳೂ ಜಮೀನ್ದಾರರು. ಈ ಸಾಯಿಗಳು ನಮ್ಮ ಜಮೀನಿನ ಮೇಲಿನ ಹಕ್ಕನ್ನು ಒಪ್ಪಿಕೊಳ್ಳುವುದಾದರೆ ಇವರ ಪರವಾಗಿ ನಾವು ಏತಕ್ಕೆ ಸಾಕ್ಷಿ ನುಡಿಯಬಾರದು ?" ವೃದ್ಧ ತಲೆ ಅಲ್ಲಾಡಿಸಿದ.

"ಇಲ್ಲ, ಇದು ಸಾಧ್ಯವಿಲ್ಲ. ಇದು ಪಾಪವಾಗುತ್ತದೆ." ಮತ್ತೊಬ್ಬ ನುಡಿದ. "ಸರಿ ಬನ್ನಿ ಹಾಗಾದರೆ ನಾವೆಲ್ಲ ಸೇರಿ ಈ ದೊಂಬಿಯನ್ನು ಕೊನೆಗಾಣಿಸೋಣ." ವೃದ್ಧ ತಲೆ ಅಲ್ಲಾಡಿಸಿದ.

"ಉಹೂ." ನುಡಿದ.

"ಏಕೆ ಹೆದರಿಕೆಯಾಗುತ್ತಿದೆಯೇ ?" ಒಬ್ಬ ಹುಡುಗ ಸಿಟ್ಟಿನಿಂದ ಪ್ರಶ್ನಿಸಿದ.

ಮುದುಕ ನಕ್ಕನು. ಈ ನಗುವಿನಲ್ಲಿ ಆ ಹುಡುಗ ಹುದುಗಿಹೋದ. ಮುದುಕ ನಗುತ್ತಲೇ ನುಡಿದ "ಇದರಲ್ಲಿ ಹೆದರುವ ಮಾತೇನೂ ಇಲ್ಲ. ಇದರಿಂದ ಪಾಪ ಹೆಚ್ಚುತ್ತದೇ ಅಷ್ಟೇ...."

"ಸರಿ, ಹಾಗಾದರೆ ಮತ್ತೇನು ಮಾಡಲು ಹೇಳುವಿರಿ? ಯಾವುದನ್ನು ಮಾಡುವುದರಿಂದ ಪಾಪವಿಲ್ಲ ಅದನ್ನು ಹೇಳಿ."

"ಸರಿ, ಸ್ವಲ್ಪ ನಿಧಾನಿಸು, ಮನಸ್ಸನ್ನು ಪ್ರಶ್ನಿಸುತ್ತೇನೆ. ಮನಸ್ಸು ದೇವರನ್ನು ಪ್ರಶ್ನಿಸಲಿ."

ರತನ್‌ಲಾಲ್ ಹೇಳಿದ "ಸರಿ, ಏನಾದರೂ ಆಗಲಿ ಮೊದಲು ತೀರ್ಮಾನಿಸಿ ಹೇಳಿ ಯಜಮಾನರೆ, ನೀವು ಏನು ಹೇಳುತ್ತೀರೋ ಅದನ್ನೇ ನಾವು ಮಾಡುತ್ತೇವೆ."

ವೃದ್ಧ ನಕ್ಕನು. ರತನ್ ಬಹಳ ಒಳ್ಳೆಯ ಹುಡುಗ ಹಾಗೂ ಧೈರ್ಯವಂತ ಎಂಬ ನಂಬಿಕೆ ಇತ್ತು ವೃದ್ಧನಿಗೆ.

ಟಕ್.... ಟಕ್ ಕೋಲನ್ನು ಬಡಿಯುತ್ತಾ ವೃದ್ಧ ಕಛೇರಿಗೆ ಬಂದನು.

"ರಾಮ್... ರಾಮ್." ನುಡಿದ.

"ಯಾರು ? ಲಾಲ್ ಮೋಹನನೆ ? ಬಾ.... ಬಾ."

"ಹೌದು. ನಾನೇ ಬಂದೆ ಸರಕಾರ್."

"ಎಲ್ಲರ ಸೊಂಟ ಹಿಡಿದು ತಂದು ಕಲೆಹಾಕು. ಸಾಯಿಯುವರ ಮಕ್ಕಳನ್ನು ಹೊಡೆದು ಹೊಡೆದು ಜಜ್ಜಿ ಹಾಕಿಬಿಡಬೇಕಾಗುತ್ತದೆ. ಎಲ್ಲರನ್ನೂ ಸಾಲಾಗಿ ನಿಲ್ಲಿಸಿ ಗುಂಡು ಹಾರಿಸಿಬಿಡು." "ಏನು ಹೇಳುತ್ತಿದ್ದೀರಿ ನಾಯಬ್ ಜಿ ?" ಮುದುಕ ನಗುತ್ತಾ ಪ್ರಶ್ನಿಸಿದ.

"ಏನು ?"

"ಅದೇ ಕಡಿದರೆ ರಕ್ತ ಹರಿಯುತ್ತದೆ, ಜನಗಳು ಸಾಯುತ್ತಾರೆ, ಪಾಪ ಘಟಿಸುತ್ತದೆ."

ಮುದುಕನ ಕಣ್ಣಲ್ಲಿ ನೀರು ತುಳುಕತೊಡಗಿತು.

ಮುದುಕನ ಈ ಸ್ಥಿತಿ ಕಂಡು ನಾಯಬ್ ನೆತ್ತಿಯಿಂದ ಉಂಗುಷ್ಟದವರೆಗೆ ಬೆವೆತುಹೋದ. ಎಷ್ಟೇ ಆದರೂ ಈತ ದೊಡ್ಡ ಯಜಮಾನನ ಕಡೆಯವನು ತಾನೆ. ಆದ್ದರಿಂದ ಕೋಪವನ್ನೆಲ್ಲಾ ನುಂಗಿ ಗಂಭೀರವಾಗಿ ನುಡಿದ.

"ಹುಂ, ನನಗೆ ಅರ್ಥವಾಗುತ್ತದೆ. ಅವರ ರಕ್ತ ಹರಿಸುವ ಮಾತು ಕೇಳಿ ನಿನ್ನ ಕಣ್ಣಲ್ಲಿ ಕಣ್ಣೀರು ಸುರಿಯುತ್ತಿದೆ. ನನಗೆ ಎಲ್ಲವೂ ಅರ್ಥವಾಗುತ್ತಿದೆ." ಇಷ್ಟು ಹೇಳಿ ಆತ ಸರಸರನೆ ಕೆಲವು ಪಂಕ್ತಿಗಳನ್ನು ಗೀಚಿ ಮತ್ತೆ ಹೇಳಿದ. "ನಮ್ಮ ಯುವಕರ ಕೊಲೆಯಾಗುತ್ತಿದೆ. ಅವರು ಗಾಯಗೊಳ್ಳುತ್ತಿದ್ದಾರೆ. ರಕ್ತದ ನದಿಯೇ ಹರಿಯುತ್ತಿದೆ. ಇದಕ್ಕೆ ಏನು ಹೇಳುವೆ ?"

ಮುದುಕನ ತುಟಿಗಳು ಕಂಪಿಸಿದವು. ಕಣ್ಣುಗಳಲ್ಲಿ ಮತ್ತಷ್ಟು ನೀರು ತುಂಬಿ ಬಂತು. ಮುದುಕ ಹೇಳಿದ. "ಹೇ ಪರಮಾತ್ಮ ಈ ಮಾತು ಕೇಳಿದಾಗಿನಿಂದ ಅಳುತ್ತಲೇ ಇದ್ದೇನೆ. ನಾಯಬ್‌ಸಾಬ್ ಓಹ್-ಓಹ್ ರಾಮ ರಾಮ. ಪಾಪ ಅವರಿಗೆ

ಈ ಗಾಯಗಳಿಂದ ಎಷ್ಟು ನೋವಾಗಿರಬಹುದು ಸ್ವಲ್ಪ ಯೋಚಿಸಿ. ಈ ಗಾಯ ನನ್ನ ಎದೆಯಲ್ಲೇ ಆಗುತ್ತಿದೆ ಎಂದನ್ನಿಸುತ್ತಿದೆ'' ನಾಯಬ್ ತೀಕ್ಷ್ಣದೃಷ್ಟಿಯನ್ನು ಈತನತ್ತ ಹರಿಸಿದ. ಯೋಚಿಸತೊಡಗಿದ..... ''ಈತನು ಢೋಂಗಿಯೇ ಪಾಖಂಡಿಯೇ.....? ಅಥವಾ ಸತ್ಯವಾಗಿ ಸಾಧುವೆ?'' ಆಡಿನ ಕೊಂಬಿಗೆ ಸಿಲುಕಿದರೆ ರತ್ನವು ಕೂಡ ಮುಕ್ಕಾಗುತ್ತದೆ. ಅದೇ ರೀತಿ ನಾಯಬ್‌ನ ಉಕ್ಕಿನಷ್ಟು ಗಡುಸಾದ ಮೊನಚು ಬುದ್ಧಿಶಕ್ತಿಯು ವೃದ್ಧನ ಸಬಲ ಬುದ್ಧಿಯ ಬಾಗಿಲಲ್ಲಿ ರಂಧ್ರ ಕೊರೆಯಲು ಅಶಕ್ತವಾಗಿತ್ತು. ಸಾಕಷ್ಟು ಹೊತ್ತು ಆತನನ್ನು ದಿಟ್ಟಿಸಿ ನಾಯಬ್ ನುಡಿದ. ''ಸರಿ ಆಮೇಲೆ ಏನು ಮಾಡೋಣ ಎನ್ನುವುದಾದರೂ ಹೇಳು, ಕೇಳೋಣ.''

''ನಾನು ಇದನ್ನೇ ತಮಗೆ ಹೇಳಬೇಕೆಂದಿರುವುದು.'' ಮುದುಕನ ಕಣ್ಣಲ್ಲಿ ಹನಿ ತುಂಬಿದ್ದರೂ, ತುಟಿಗಳ ಮಧ್ಯೆ ನಗು ಅರಳಿತ್ತು.

''ನೀವು ಏನು ಹೇಳುತ್ತಿದ್ದೀರಿ?'' ''ತಾವು ನಮ್ಮ ಜಮೀನಿನ ಮೇಲಿನ ನಾಯಕತ್ವವನ್ನು ಒಪ್ಪಬೇಕು. ಇದನ್ನೇ ನಾನು ಹೇಳಬಯಸುವುದು. ಮತ್ತೆ ತಾವು ಎಲ್ಲಾ ಚೌಕಿದಾರರು ಹಾಗೂ ಬೆಂಗಾಲಿನವರನ್ನು ಕರೆದುಕೊಂಡು ದೂರ ಹೊರಟುಹೋಗಿ. ಮತ್ತೆ ನೋಡಿ ನಾವು ಈ ಸಾಯಿಗಳನ್ನು ಹೇಗೆ ತಡೆಯುತ್ತೇವೆ ಎಂಬುದನ್ನು.''

''ಏನು ? ತಡೆಯಬಲ್ಲಿರಾ ? ಫೌಜಾದಾರಿಯನ್ನು ನೀವು ಏನೆಂದು ತಿಳಿದಿದ್ದೀರಿ ? ಉಳುತ್ತೀರಿ, ಹೊಟ್ಟೆ ಹೊರೆದುಕೊಳ್ಳುತ್ತೀರಿ, ಲಾಠಿ ಹಿಡಿಯುವುದು ಬರುತ್ತದೆಯೇ ? ಚಾಕು ಹಾಕುವುದು ಬರುತ್ತದೆಯೇ ?''

ಮುದುಕ ಜೋರಾಗಿ ನಕ್ಕುಬಿಟ್ಟ.

''ಏತಕ್ಕೆ ನಗುತ್ತಿದ್ದಿ ?''

''ತಮ್ಮ ಮಾತು ಕೇಳಿ ನನಗೆ ನಗು ಬರುತ್ತಿದೆ, ನಮಗಂತೂ ಲಾಠಿ, ಭರ್ಜಿ ಹಿಡಿಯುವುದೇ ಗೊತ್ತಿಲ್ಲ.''

''ಹಾಗಾದರೆ ಅವರನ್ನು ತಡೆಯುವುದು ಹೇಗೆ ?''

''ಅವರು ಬಂದೊಡನೆ ನಾವು ಅವರ ಮುಂದೆ ಬೆನ್ನು ಬಗ್ಗಿಸಿ ನಿಂತು ಹೇಳುತ್ತೇವೆ. 'ಹೂಂ ಲಾಠಿಯಿಂದ ಹೊಡೆಯಿರಿ, ಎದೆ ಉಬ್ಬಿಸಿ ನಿಲ್ಲುತ್ತೇವೆ, ಭರ್ಜಿಯಿಂದ ತಿವಿಯಿರಿ. ರಕ್ತ ಹರಿಯಲಿ, ಭೂಮಿ ಮಣ್ಣು ಕೆಂಪಾಗಲಿ, ನಾವು ಸಾಯುತ್ತೇವೆ.' ನಮ್ಮ ಸಾವಿನಿಂದ ಅವರಿಗೆ ಬುದ್ಧಿ ಬರುತ್ತದೆ. ಅವರ ಹೃದಯ ದುಃಖದಿಂದ ತಳಮಳಗೊಳ್ಳುತ್ತದೆ. ಕಣ್ಣಲ್ಲಿ ಹನಿ ಮೂಡುತ್ತದೆ. ಭಗವಂತನು ಅವರಲ್ಲಿ ಜ್ಞಾನೋದಯ ಉಂಟು ಮಾಡುವನು. ಅವರು ನೊಂದು ತಾವಾಗಿ ಹಿಂತಿರುಗಿ ಹೋಗುತ್ತಾರೆ.''

ನಾಯಬ್ ಆಹಾಹಾ ಎಂದು ಗಹಗಹಿಸಿ ನುಡಿದ ''ಇದೇನಾ ನಿಮ್ಮ ಬುದ್ಧಿ ?''

ಈ ಮಾತು ಕೇಳಿ ವೃದ್ಧನಿಗೆ ಆಶ್ಚರ್ಯವಾಯಿತು. ಆತನಿಗೆ ನಾಯಬ್‌ನ ನಡವಳಿಕೆ ಸ್ವಲ್ಪವೂ ಸಹನವಾಗಲಿಲ್ಲ. ಹಲ್ಲಿಲ್ಲದ ಆ ಮುದುಕನ ಮುಖದಲ್ಲಿ ಮುಗ್ಧ ನಗು ಅರಳಿತು. ನುಡಿದ ''ಸರಿ ಆಗುತ್ತದೆ. ನಾನು ಹೇಳಿದ ಹಾಗೇ ಆಗುತ್ತದೆ. ನನ್ನ

ಮನಸ್ಸು ಭಗವಂತನಲ್ಲಿ ಮೊರೆ ಹೋಗುತ್ತದೆ. ಆತ ಸರ್ವಜ್ಞಾನಿ. ನಿಮ್ಮ ಮನಸ್ಸು ಭಗವಂತನಲ್ಲಿ ಏನನ್ನು ಪ್ರಶ್ನಿಸುವುದು ಇಲ್ಲವೆ ? ಹಾಗೆ ಪ್ರಶ್ನಿಸುವಂತಿದ್ದಾದರೆ ನನ್ನ ಮಾತು ತಮಗೆ ಅರ್ಥವಾಗುತ್ತಿತ್ತು.''

ವೃದ್ಧ ದೇವತೆಗಳಂತೆಯೇ ಅವರ ಪತ್ನಿಯರೂ ಸಹ. ವೃದ್ಧನ ಪತ್ನಿಯೂ ಹುಚ್ಚಳಂತೆ ಇದ್ದಳು. ಎಲ್ಲಾ ಮಾತು ಕೇಳಿ ಆಕೆ ಚಿಂತೆಯಲ್ಲಿ ಮುಳುಗಿದಳು. ವೃದ್ಧನಂತೆಯೇ ಆಕೆಗೂ ಸಾಹುಕಾರರ ನಾಯಬ್ ಬಗ್ಗೆ ಚಿಂತೆ ಹತ್ತಿತು. ರೀ, ಇದೇನೋ ಅರ್ಥವಾಗುವ ನೇರ ವಿಷಯ. ಇದನ್ನು ಅವರು ಏಕೆ ಅರ್ಥ ಮಾಡಿಕೊಳ್ಳುವುದಿಲ್ಲ. ?''

"ಇದೇ ಮಾತನ್ನೇ ನಾನು ಯೋಚಿಸುತ್ತಿರುವುದು.''

"ಈಗ ಏನಾಗಬಲ್ಲದು ? ನೀವು ಏನು ಮಾಡುತ್ತೀರಿ ? ?

"ನಾನು ?'' ಬಹಳ ಯೋಚಿಸಿ ವೃದ್ಧ ನುಡಿದ. "ಹಾಂ, ಮಾತು ಈಗ ಒಂದು ಹಂತಕ್ಕೆ ಬಂದಂತಾಗಿದೆ.''

"ಏನು ?''

"ನಾನು ಸಾಯುತ್ತೇನೆ.''

"ಏನು ಸಾಯುವಿರಾ ?''

"ಹೌದು, ಸಾಯುತ್ತೇನೆ. ಒಂದು ವೇಳೆ ನಾನು ಸತ್ತರೆ ನನ್ನ ಮರಣದಿಂದ ಅವರ ಮನಸ್ಸಿನಲ್ಲಿ ದುಃಖ ಉಂಟಾಗುತ್ತದೆ. ದೇವರು ಒಳ್ಳೆಯ ಬುದ್ಧಿ ನೀಡುತ್ತಾನೆ. ಆಗ ಅವರು ನಮ್ಮ ಮಾತನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಾರೆ.''

ವೃದ್ಧೆ ಸ್ವಲ್ಪ ಹೊತ್ತು ಯೋಚಿಸಿ ಸಂತೋಷಗೊಂಡಳು. ತಲೆ ಅಲ್ಲಾಡಿಸುತ್ತಾ ನಕ್ಕು ನುಡಿದಳು. "ಸರಿ ನೀವು ಹೇಳುವುದೇ ಸರಿ.''

"ಹಾಗಾದರೆ ನಾನು ಹೇಳುತ್ತಿರುವುದು ಸರಿ ತಾನೇ'' ತೃಪ್ತಿಯ ನಗೆ ಮುದುಕಿಯತ್ತ ಹರಿಸಿದ.

"ಊಂ ನೀವು ಹಾಗೇ ಮಾಡಿರಿ. ಸತ್ತು ಅವರಿಗೆ ಬುದ್ಧಿ ಕಲಿಸಿರಿ.''

"ಚಿಕ್ಕಪ್ಪಾ'' ಹೊರಗಡೆ ರತನ್‌ಲಾಲ್ ಕೂಗಿದ.

"ಬಾ ಮಗು ಬಾ'' ಮುದುಕ ಲಾಲ್ ಮೋಹನ್‌ನ ಮುಖ ಸಂತೋಷದಿಂದ ಅರಳಿತು.

ರತನ್‌ಲಾಲ್ ನಗುತ್ತಾ ಒಳಗೆ ಬಂದು ನಿಂತುಕೊಂಡು ನುಡಿದ. "ಚಿಕ್ಕಪ್ಪಾ ಎಲ್ಲರೂ ಹೊರಗೆ ನಿಂತಿದ್ದಾರೆ. ಏನು ತೀರ್ಮಾನವಾಯಿತು. ? ನಾವು ಈಗ ಏನು ಮಾಡಬೇಕು ತಿಳಿಸಿ.'' ರತನ್ ಅಗ್ನಿಯ ಜ್ವಾಲೆಯಂತೆ ಏರಿ ಇಳಿಯುತ್ತಿದ್ದ.

ವೃದ್ಧ ಹೊರಗೆ ಹೋಗಿ ನಿಂತು ಕೈ ಮುಗಿದು ನುಡಿದ.

"ಪಂಚ ಮಹಾಶಯರಿಗೆ ನಮಸ್ಕಾರಗಳು.''

ಕೋಲಾಹಲ ಇದಕ್ಕೆ ಮುಂಚೆಯೇ ಪ್ರಾರಂಭವಾಗಿಬಿಟ್ಟಿತು. ಸಾಹುಕಾರರ ಲಾಠಿ ಹಿಡಿದ ಗೂಂಡಾಗಳು, ಸೈನಿಕರು, ಬಂದು ಮುತ್ತಿಗೆ ಹಾಕಿದರು. ಸಾಹುಕಾರರ ಮುಖ್ಯಸ್ಥ ಚಾರುಶೀಲ ಒಬ್ಬ ಗಟ್ಟಿಮುಟ್ಟಾದ ಮನುಷ್ಯ. ಆತ ಯಾರಿಗೂ

ಹೆದರುತ್ತಿರಲಿಲ್ಲ. ಆತ ತನ್ನ ಅನುಚರರಿಗೆ ಆಜ್ಞಾಪಿಸಿದ. "ಆ ಹುಚ್ಚನನ್ನು ಹಿಡಿಯಿರಿ. ಅವನೊಬ್ಬನನ್ನೇ ಅಲ್ಲಾ ಅವನ ಜೊತೆಯಲ್ಲಿರುವ ರತನ್‌ಲಾಲ್, ಟತನ್‌ಲಾಲ್ ಮುಂತಾದವರನ್ನು ಹಿಡಿಯಿರಿ. ಆತನ ಸಮಸ್ತ ಅನುಯಾಯಿಗಳನ್ನು ತಡೆದು ನಿಲ್ಲಿಸಿ."

ಮುದುಕ ನಗುತ್ತಾ ನುಡಿದ. "ಹೂಂ ನಡೆಯಿರಿ" ರತನ್‌ಲಾಲ್ ಹಾಗೂ ಇತರ ಸಹಚರರತ್ತ ದೃಷ್ಟಿ ಹರಿಸಿ ಮತ್ತೆ ನುಡಿದ "ನಡೆಯಿರಿ ಮಕ್ಕಳೇ."

ಮುದುಕಿ ಗಹಗಹಿಸಿ ನಗುತ್ತಾ ಪ್ರಶ್ನಿಸಿದಳು "ಮತ್ತೆ ನಾನು ?"

ಸಾಹುಕಾರನ ಆಳು ನುಡಿದ "ನಿನ್ನ ಬಗ್ಗೆಯೂ ಆಜ್ಞೆ ಆಗಿದೆ ?"

ಮುದುಕಿ ನುಡಿದಳು "ನಿಲ್ಲಿ ಮಕ್ಕಳೇ, ಸ್ವಲ್ಪ ನಿಧಾನಿಸಿ, ಮುದುಕನ ಲಂಗೋಟಿ, ನನ್ನ ಬಟ್ಟೆಬರೆ ಹಾಗೂ ಈ ಲೋಟ ತೆಗೆದುಕೊಳ್ಳುತ್ತೇನೆ. ಈ ಲೋಟದಲ್ಲಿ ನೀರು ಕುಡಿಯದಿದ್ದರೆ ನನ್ನ ಬಾಯಾರಿಕೇನೇ ಹಿಂಗಲ್ಲ."

ವೃದ್ಧ ನಗುತ್ತಾ ನುಡಿದ "ಎಷ್ಟಾದರೂ ಹೆಂಗಸು ತಾನೇ ? ಲೋಟದ ಮೇಲಿನ ಮೋಹ ಹೋಗಲ್ಲ."

ಸಾಹುಕಾರರ ಜನ ಮುದುಕನನ್ನೇನೋ ಹಿಡಿದಿಟ್ಟರು. ಆದರೆ ಗೌರವದಿಂದಲೇ ನೋಡಿಕೊಂಡರು. ಆದರಾತಿಥ್ಯದಲ್ಲಿ ಕೊಂಚವೂ ಕಡಿಮೆ ಮಾಡಲಿಲ್ಲ. ಎಷ್ಟಾದರೂ ಮುದುಕ. ಆ ಮುದುಕ ತಾನೇ ? ಆತ ಬಂಧನದಲ್ಲೂ ಹಸನ್ಮುಖಿಯಾಗಿಯೇ ಇದ್ದ. ಭಗವಂತನ ಧ್ಯಾನ ಮಾಡುತ್ತಿದ್ದ ಮತ್ತು ಯೋಚಿಸುತ್ತಿದ್ದ. ತನ್ನ ಮನಸ್ಸಿನಲ್ಲಿ ತಾನೇ ಹೇಳಿಕೊಳ್ಳುತ್ತಿದ್ದ. ಹೇ ಭಗವಾನ್ ನಾನು ಈಗ ಏನು ಮಾಡಲಿ ತಿಳಿಸು. ನಾನು ಸಾಯಲೇ, ನನ್ನ ಮರಣದಿಂದ ಇವರಿಗೆ ಸುಖ ಲಭಿಸುವುದೇ ? ಅವರಿಗೆ ನೀನೇ ಜ್ಞಾನ ದಯಪಾಲಿಸು.

ಮುದುಕಿ ಬಂದಿಖಾನೆಯಲ್ಲಿ ನುಸುಳಿ ಬಂದು ಒಳಗೆಲ್ಲಾ ಸುಮ್ಮನೆ ಸುತ್ತಾಡುವಳು. ಮುದುಕನಿಗಾಗಿ ಊಟ ತಯಾರಿಸುವಳು. ಆತ ಮಲಗುವ ಕಂಬಳಿಯನ್ನೇ ಜಾಡಿಸಿ ಕೊಡವಿ ಸ್ವಚ್ಛ ಮಾಡುವಳು. ಲೋಟವನ್ನು ಹೊಳೆಯುವಂತೆ ತೊಳೆದಿಡುವಳು. ಈ ಎಲ್ಲಾ ಕೆಲಸಗಳು ಆ ಮುದುಕನಿಗೆ ಇಷ್ಟವಾಗೇ ಇದ್ದವು. ಈಗ ಮುದುಕನನ್ನು ತನ್ನ ಸನಿಹ ಸೆಳೆದುಕೊಳ್ಳಲು ಶಕ್ತಳಾಗಿದ್ದಳು.

ಮುದುಕ ಹೊರಗಡೆ ಇದ್ದಾಗ ಆತನ ಕೆಲಸಗಳು ಹಲವಾರು. ಮುದುಕಿಯೊಡನೆ ಮಾತನಾಡಲೂ ಆತನಿಗೆ ಕ್ಷಣದ ಬಿಡುವು ದೊರೆಯುತ್ತಿರಲಿಲ್ಲ. ಆತನು ಮಾತನಾಡುತ್ತಿದ್ದುದು ಕೇವಲ ಭರತಪುರದ ವಿಷಯ ಅಥವಾ ಆ ಜನಗಳ ವಿಷಯ ಮಾತ್ರ. ಇಂದು ಇಲ್ಲಿದ್ದರೆ ನಾಳೆ ಇನ್ನೆಲ್ಲೋ ಸುತ್ತುತ್ತಿದ್ದ. ಯಾವಾಗಲೂ ಈತನ ಸುತ್ತ ಜನಗಳು ತುಂಬಿರುತ್ತಿದ್ದರು.

ಬಹಳ ದಿನಗಳ ನಂತರ ಮುದುಕಿಯ ಆ ಹಿಂದಿನ ಭ್ರಮೆ ಹರಿದಿದೆ. ಎಷ್ಟಾದರೂ ಆ ಹಿಂದಿನ ಮುದುಕ ತಾನೇ. ಈಗ ಆತನ ಸುತ್ತ ಜನಗಳ ಗುಂಪು ಇಲ್ಲ. ಆದರೆ ಮುದುಕನ ಮುಖ ಮಾತ್ರ ಚಿಂತೆಯಿಂದ ಕೂಡಿದೆ. ಹೊರಗಿನ ಜನ ಈಗ

ಹೇಳತೊಡಗಿದ್ದಾರೆ. "ಆ ಮುದುಕ ಒಂದು ಕಲ್ಲು ಬಂಡೆ". ಆದರೆ ಆಕೆಯು ಮನಸ್ಸಿನ ಭಾವವೇ ಬೇರೆಯಾಗಿತ್ತು.

ಅವಳು ಕರೆಯುತ್ತಾಳೆ "ರೀ ಯಜಮಾನರೇ."

"ಹೂಂ...." ಮುದುಕ ಆಕೆಯತ್ತ ತಿರುಗುತ್ತಾನೆ. ಆದರೆ ಮುದುಕಿಗೆ ಅನ್ನಿಸುತ್ತದೆ. ತನ್ನತ್ತ ನೋಡುತ್ತಿಲ್ಲ. ಬೆಟ್ಟದ ಮೇಲಿರುವ ದೇವಮಂದಿರ ನೋಡುತ್ತಿದ್ದಾಳೆ. ದೃಷ್ಟಿ ಮಂದಿರದ ಗೋಪುರದಲ್ಲಿ ನೆಟ್ಟಿದೆ.

"ಏನು ಯೋಚಿಸುತ್ತಿದ್ದೀರಿ ?"

"ಯೋಚಿಸುತ್ತಿದ್ದೇನೆ." ಮುದುಕ ನಗುತ್ತಾನೆ.

"ನೀವು ನಗಬೇಡಿ. ನಿಮ್ಮ ಈ ನಗು ನನಗೆ ಹಿಡಿಸದು."

"ಹೂ !" ಮೊಟಕಾಗಿ "ಹೂ" ಗುಟ್ಟಿ ಸುಮ್ಮನಾಗುತ್ತಾನೆ. ಭಯ ಮತ್ತು ವಿಸ್ಮಯದಿಂದ ಮುದುಕಿ ಸುಮ್ಮನಾಗುತ್ತಾಳೆ. ಮನದಲ್ಲೇ ದೇವರಲ್ಲಿ ಪ್ರಾರ್ಥನೆ ಸಲ್ಲಿಸುತ್ತಾಳೆ. 'ಹೇ ಭಗವಾನ್ ಅವರನ್ನು ಸುರಕ್ಷಿತವಾಗಿಡು'.

ಇದ್ದಕ್ಕಿದ್ದಂತೆಯೇ ಒಂದು ದಿನ ಮುದುಕ ನುಡಿದ "ನಾನು ಸಾಯುತ್ತೇನೆ." ಇದನ್ನು ಕೇಳುತ್ತಿದ್ದಂತೆಯೇ ಮುದುಕಿಯು ಎದೆ ಸೀಳಿದಂತಾಯಿತು. ಆದರೆ ಇದನ್ನು ಮುಖದಲ್ಲಿ ತೋರಿಸುವಂತಿರಲಿಲ್ಲ. ಮುದುಕ ಗೇಲಿ ಮಾಡಿಬಿಡುತ್ತಿದ್ದ. 'ಛೀಛೀ' ಮುದುಕಿ ನಾಚಿಕೆಯಿಂದ ಮುದುಡಿ ಹೋಗುತ್ತಿದ್ದಳು. ಅವಳು ಕೇವಲ ಇಷ್ಟನ್ನು ಕೇಳಲು ಸಮರ್ಥಳಾದಳು. "ಏನು... ಏತಕ್ಕೆ ನೀವು ಸಾಯಬೇಕು,?"

"ಸಾಯುತ್ತೇನೆ. ಸಾಹುಕಾರರು ಜನರಲ್ಲಿ ವದಂತಿ ಹಬ್ಬಿಸಿದ್ದಾರೆ. ನಾನು ದಂಗೆ ಹಬ್ಬಿಸಿದ್ದೇನಂತೆ. ಫೌಜುದಾರಿ ನಡೆಸಿದ್ದೇನಂತೆ, ಹೊರಗಡೆ ಈಗ ಜನಗಳ ಜೊತೆ ಈ ಬಾಬುವಿನ ಗೂಂಡಾಗಳು ಮಾರಾಮಾರಿ ಮಾಡಿದ್ದಾರೆ. ನಮ್ಮ ಜನಗಳೂ ಅವರನ್ನು ಹೊಡೆದಿದ್ದಾರೆ. ಬಹಳ ನಷ್ಟವಾಗಿರುವುದಂತೂ ನಿಜ. ಇದು ನಾನು ಹೇಳಿ ಮಾಡಿಸಿದೆನೆಂದು ಬಾಬುವಿನ ಜನ ಹೇಳುತ್ತಿದ್ದಾರೆ."

ರತನ್‌ಲಾಲ್ ನುಡಿದ "ಇದೇ ಕಾರಣದಿಂದಾಗಿ ಬಾಬುವಿನ ಸಿಪಾಯಿಗಳು ಜನರನ್ನು ನಿರ್ದಯತೆಯಿಂದ ಯದ್ವತದ್ವಾ ಹೊಡೆದಿದ್ದಾರೆ."

ಮುದುಕ ತಲೆ ಅಲ್ಲಾಡಿಸುತ್ತಾ ಕಿರುನಗೆ ಬೀರಿ ನುಡಿದ. "ಇಷ್ಟೇ ಅಲ್ಲಾ ರತನ್, ನಮ್ಮ ಜನ ಹೊಡೆದಾಗಲೂ ಪಾಪ ಘಟಿಸಿತು. ಪ್ರಾಯಶ್ಚಿತ್ತವಾಗಿ ನಾನು ಸಾಯುತ್ತೇನೆ. ಸತ್ತು ದೇವರಲ್ಲಿ ಪ್ರಾರ್ಥಿಸುತ್ತೇನೆ. ಹೇ ಭಗವಂತಾ ಈ ಜನಗಳ ಪಾಪವನ್ನು ಪರಿಹರಿಸು. ನಮ್ಮ ಜನಗಳ ಪಾಪವನ್ನು ಮಾತ್ರವಲ್ಲ. ಆ ಗೂಂಡಾಗಳ ಪಾಪವನ್ನು ಪರಿಹರಿಸು ಮತ್ತೆ."

ಮತ್ತೇನು ತಾತಾ ?

ಉತ್ತರವಾಗಿ ಮತ್ತೆ ಮುಗುಳ್ನಕ್ಕು ಮುದುಕ ನುಡಿದ "ಇದರಿಂದ ಅವರಿಗೆ ನಾನು ಪಾಪಿಯಲ್ಲವೆಂದು ಅರ್ಥವಾಗುತ್ತದೆ."

ಮುದುಕ ಸಾಯಲೇ ನಿರ್ಧರಿಸಿಬಿಟ್ಟ. ಊಟ ತಿಂಡಿಯನ್ನು ತ್ಯಜಿಸಿದ. ದಿನವಿಡಿ ಸುಮ್ಮನೆ ಹಾಸಿಗೆ ಮೇಲೆ ಮಲಗಿರುತ್ತಿದ್ದ. ಬಹುಶಃ ಮುದುಕಿಯು ಮಾತೆಲ್ಲಾ

ಮುಗಿದು ಹೋಗಿತ್ತು. ಅವಳು ಸುಮ್ಮನೆ ಆತನನ್ನು ನೋಡುತ್ತಾ ಕುಳಿತಿರುತ್ತಿದ್ದಳು. ಆದರೆ ಆತನ ಮನಸ್ಸೆಲ್ಲೋ ? ಒಮ್ಮೆಯೂ ಆಕೆಯತ್ತ ದೃಷ್ಟಿ ಹರಿಸುತ್ತಿರಲಿಲ್ಲ. ಅಳುವುದಂತೂ ನಾಚಿಕೆಯ ವಿಷಯ. ಮುದುಕಿ ಅಳುವಂತೆಯೂ ಇರಲಿಲ್ಲ, ಹೊರಗಡೆ ಗದ್ದಲ ಕೇಳಿ ಬಂತು. "ಭಗವಂತ, ನಮ್ಮ ಯಜಮಾನನನ್ನು ರಕ್ಷಿಸು."

ರತನ್‌ಲಾಲ್ ಮತ್ತು ಸಹಚರರು ಉದ್ದಾಸಗೊಂಡಿದ್ದರು. ಮುದುಕಿಯಂತೂ ಏನೂ ಹೇಳದವಳಾಗಿದ್ದಳು. ಮುದುಕನೊಡನೆ ಮಾತನಾಡುವ ಧೈರ್ಯವೂ ಇಲ್ಲದಾಗಿತ್ತು. ಮನದಲ್ಲೇ ದೇವರನ್ನು ನೆನೆಯುತ್ತಿದ್ದಳು. "ನನ್ನ ಮುದುಕನನ್ನು ರಕ್ಷಿಸು, ಸುತ್ತ ಇರುವ ಈ ಜನರನ್ನು ನೋಡು..." ಎಂದು ಮೊರೆ ಹೋಗುತ್ತಿದ್ದಳು. ಅವಳಿಗೆ ಅನಿಸುತ್ತಿತ್ತು, ದೇವರ ಮನಸ್ಸು ಮುದುಕನತ್ತ ಮೃದುವಾಗಿದೆ.

ದೇವರು ಈಚೆಗೆ ಸಂತೋಷಚಿತ್ತನಾಗಿದ್ದಾನೆ ಅನಿಸಿತ್ತು. ಮುದುಕ ಸಾಯಲಿಲ್ಲ. ಆದರೆ ಮರಣ ಲಕ್ಷಣಗಳು ಕಂಡುಬಂದವು. ಸಾಹುಕಾರರು ದೊಡ್ಡ ದೊಡ್ಡ ಪಂಡಿತರಿಗೆ ಇವರನ್ನು ತೋರಿಸಿದರು. "ನಾವು ಏನೂ ಮಾಡಲು ಸಾಧ್ಯವಿಲ್ಲ. ಊಟ ತಿಂಡಿ ಇಲ್ಲದೆ ಯಾರೂ ಬದುಕಿ ಉಳಿಯಲಾರರು." ಇಷ್ಟೆಲ್ಲಾ ಆದರೂ ಕೊನೆಗೂ ಆ ಮುದುಕ ಬದುಕಿ ಉಳಿದ, ವಿಚಿತ್ರ ಮನುಷ್ಯ. ಈ ಸ್ಥಿತಿಯಲ್ಲೂ ಆತನ ಮುಖದಲ್ಲಿ ಎಳೆ ಹಸುಳೆಯ ನಗು ಅರಳುತ್ತಿತ್ತು. ನಿಧಾನವಾಗಿ ಮರಣದ ಲಕ್ಷಣಗಳೆಲ್ಲಾ ಮಾಯವಾಗತೊಡಗಿದವು. ಕಣ್ಣಿನ ಕಪ್ಪು ಉಂಗುರ ಮಾಯವಾಗಿ ಕಣ್ಣುಗಳು ಕಮಲದಂತೆ ಅರಳಿ ಶೋಭಿಸುತ್ತಿದ್ದವು. ಮುಖದಲ್ಲಿ ಆರೋಗ್ಯದ ಕಳೆ ಹೊಮ್ಮಿತ್ತು. ತಾಯಿಯ ತೊಡೆಯ ಮೇಲಿನ ಮಗುವಿನಂತೆ ಆತ ಉತ್ಸಾಹದಿಂದ ಕಳಕಳಿಸುತ್ತಿದ್ದ. ಮುದುಕ ನುಡಿದ "ನಾನು ಬದುಕಿಬಿಟ್ಟೆ, ದೇವರು ನನ್ನ ಮನಸ್ಸನ್ನು ಅರ್ಥ ಮಾಡಿಕೊಂಡುಬಿಟ್ಟ. ನಂದು ಏನೂ ತಪ್ಪಿಲ್ಲವೆಂದು ತೀರ್ಮಾನ ಕೊಟ್ಟುಬಿಟ್ಟ."

ಮುದುಕಿಯ ಮುಖವೂ ಸಂತೋಷದಿಂದ ಅರಳಿತು.

"ಸರಿ ಇನ್ನು ನಾನು ಸಾಯುತ್ತೇನೆ."

"ಏತಕ್ಕೆ ?"

"ನನ್ನ ಆರೋಗ್ಯ ಕೆಡುತ್ತಿದೆ. ಅಲ್ಲದೆ...."

"ಅಲ್ಲದೆ ಮತ್ತೇನು ?"

ಮುದುಕಿ ಉತ್ತರಿಸಲಿಲ್ಲ. ಬದಲಾಗಿ ಕಿರುದಾಗಿ ನಕ್ಕಳು.

ಮುದುಕಿ ನಿಜವಾಗಿ ಸತ್ತೇ ಹೋದಳು. ಕೇವಲ 2 ದಿನ ಜ್ವರ ಬಂತು. ಅದರಿಂದಲೇ ಮರಣಿಸಿದಳು. ಸಾಯುವಾಗ ಅವಳು ನೆಟ್ಟಗಣ್ಣಿನಿಂದ ಗಂಡನನ್ನೇ ದಿಟ್ಟಿಸುತ್ತಿದ್ದಳು.

ಮುದುಕ ಕಲ್ಲಿನ ಮೂರ್ತಿ. ಜನಗಳ ಹೇಳಿಕೆ ಸುಳ್ಳಾಗಿರಲಿಲ್ಲ. ಆದರೆ ಇದೆಲ್ಲಾ ಸುಳ್ಳು ಹೇಳಿಕೆ ಎಂದು ಇದ್ದಕ್ಕಿದ್ದಂತೆಯೇ ಮುದುಕನಿಗೆ ಅನ್ನಿಸಿತ್ತು. ಇದೆಲ್ಲಾ ಸುಳ್ಳು. ನಿಜವಾಗಿರಲು ಸಾಧ್ಯವೇ ಇಲ್ಲ.

ಮುದುಕನ ಕಣ್ಣಲ್ಲಿ ನೀರು, ಹೌದು, ನಿಜವಾಗಿಯೂ ಮುದುಕನ ಕಣ್ಣಲ್ಲಿ ನೀರು ತುಂಬಿತ್ತು.

ಮುದುಕಿ ನುಡಿದಳು. "ರೀ"

ಮುದುಕನ ಕಣ್ಣು ನೀರಿನಿಂದ ತೊಯ್ದಿತ್ತು. ಆದರೂ ಮುಖದಲ್ಲಿ ತಿಳಿನಗುವಿತ್ತು.

"ಹೂಂ ಹೇಳು ಏನು ಹೇಳಬೇಕು ಅಂತಿದ್ದಿಯೋ ಹೇಳು."

"ಮೃತ್ಯು ಬಹು ಸುಂದರ. ಮೃತ್ಯು ಆನಂದದಾಯಕ."

ಮುದುಕ ನಕ್ಕನು. ಕಣ್ಣಿನಿಂದ ನೀರು ತೊಟ್ಟಿಡತೊಡಗಿತ್ತು. ಈ ಕಣ್ಣೀರು ಮುದುಕಿಯು ಕಪೋಲದ ಮೇಲೂ ಬಿತ್ತು. ಮುದುಕ ಈ ಕಣ್ಣೀರನ್ನು ಒರೆಸಲು ಮುಂದಾದ. ತಡೆದು ಮುದುಕಿ ನುಡಿದಳು. "ಬೇಡ ಇರಲಿ ಬಿಡಿ."

# ಮತದಾರಳು ಸಾವಿತ್ರಿಬಾಲಾ

*ಬನಫೂಲ್*

'ರಿಪುನಾಶ್' ಆತನ ಈ ಹೆಸರು ವಿಚಿತ್ರವಾಗಿ ತೋರುತ್ತದೆ. ಆತನ ಅಣ್ಣನ ಹೆಸರು ತಮೋನಾಶ್. ಆದರೆ ವಿಧಿಯ ಕೈವಾಡ, ಆತನ ಎದಿರು ಯಾರೂ ಯಾರ ನಾಶವನ್ನೂ ಮಾಡಲಾರರು. ಆತ ತನ್ನನ್ನು ತಾನೇ ವಿನಾಶ ಮಾಡಿಕೊಂಡ. ತಮೋನಾಶನ ಜೀವನದಲ್ಲಿ ಕೊಂಚವೂ ಬೆಳಕು ಬರದಾಗಿತ್ತು. ಅ....ಆ....ಕ....ಖ.. ಅಕ್ಷರಮಾಲೆಯೂ ಇಣುಕದಾಗಿತ್ತು. ಆತ ಸಂಪೂರ್ಣವಾಗಿ ಅನಕ್ಷರಸ್ಥನಾಗಿಯೇ ಉಳಿದ. ಬ್ರಾಹ್ಮಣ ವಂಶದಲ್ಲಿ ಈ ಮಕ್ಕಳು ಹುಟ್ಟಿದ್ದುದರಿಂದ ಇವರಿಗೆ ಸಾಂಪ್ರದಾಯಿಕವಾಗಿ ನಾಮಕರಣವಾಗಿತ್ತು. ಅವರ ತಂದೆ ಪಾಠಶಾಲೆಯ ವಿದ್ವಾಂಸರು. ಹೆಸರು ಮೋಹನಾಶ್. ಸಂಕ್ಷಿಪ್ತವಾಗಿ ಜನಗಳು ಈತನನ್ನು ಮೋಹನ್ ಪಂಡಿತ ಎಂದು ಕರೆಯುತ್ತಿದ್ದರು. ಈಗಿನ ಸಮಾಜದಲ್ಲಿ ಸಂಸ್ಕೃತ ಪಂಡಿತರಿಗೆ ಮರ್ಯಾದೆ ಕಡಿಮೆ ಆಗಿದೆ. ಮೇಲಾಗಿ ಅವರಂತೂ ಮಹಾದರಿದ್ರರಾಗಿದ್ದರು. ಅವರು ಆಗಾಗ್ಯೆ ಪೌರೋಹಿತ್ಯ ಸಹ ನಡೆಸುತ್ತಿದ್ದುದುಂಟು. ಇವರು ಮರಣ ಹೊಂದಿದಾಗ ತಮೋನಾಶ್‌ಗೆ ಆರು ವರ್ಷ ಮತ್ತು ರಿಪುನಾಶ್‌ಗೆ ಮೂರು ವರ್ಷ ವಯಸ್ಸು. ಇವರ ತಾಯಿ ಬೇರೆ ಮನೆಗಳಲ್ಲಿ ಅಡಿಗೆ ಕೆಲಸ ಮಾಡಿ ಸಂಸಾರ ನಿರ್ವಹಿಸುತ್ತಿದ್ದಳು. ತಮೋನಾಶ್ ಹದಿನಾರು ವರ್ಷದ ಹೊತ್ತಿಗೆ ಸೊಕ್ಕಿ ಬೆಳೆದಿದ್ದ. ದಿನವೆಲ್ಲಾ ಯೌವ್ವನದ ಹುರುಪಿನಲ್ಲೇ ಇರುತ್ತಿದ್ದ. ಅಲ್ಲಿ ಗೂಂಡಾಗಳ ಗುಂಪೊಂದಿತ್ತು. ಇದರಲ್ಲಿ ತಮೋನಾಶನ ಹೆಸರು 'ತಮನಾ'. ಗೂಂಡಾಗಿರಿ ಮಾಡಿ ತಮೋನಾಶ್ ಗಳಿಸುತ್ತಿದ್ದ ಸಂಪಾದನೆಯಲ್ಲಿ ಕೆಲಭಾಗವನ್ನು ತಾಯಿಗೆ ನೀಡುತ್ತಿದ್ದ. ಉಳಿದುದನ್ನು ಗುಂಡು ಹಾಕಿ ಮೋಜು ಮಾಡಲು ಉಡಾಯಿಸುತ್ತಿದ್ದ. ಈ ತರಹದ ಮೋಜು ಜೀವನ ಹೆಚ್ಚು ದಿನ ನಡೆಸಲು ಈತನಿಗೆ ಸಾಧ್ಯವಾಗಲಿಲ್ಲ. ಗೂಂಡಾಗಿರಿಯಲ್ಲಿ ಯಾರದೋ ಚೂರಿಯ ಏಟಿಗೆ ಬಲಿಯಾದ. ಈತನ ಶವ ಒಂದು ದಿನ ಫುಟ್‌ಪಾತ್ ಮೇಲೆ ದೊರಕಿತು. ಸ್ವಲ್ಪ ಹೊತ್ತು ಅಲ್ಲೇ ಬಿದ್ದಿದ್ದ ಈ ಶವವನ್ನು ಆನಂತರ ಪೊಲೀಸ್‌ನವರು ಶವಪರೀಕ್ಷೆಗಾಗಿ ಕೊಂಡೊಯ್ದರು. ಡಾಕ್ಟರುಗಳು ಈತನ ಶರೀರವನ್ನು ಸೀಳಿ ಕತ್ತರಿಸಿ ಶವಾಗಾರಕ್ಕೆ ಒಪ್ಪಿಸಿದರು. ತಮೋನಾಶ್‌ನ ತಾಯಿ ಶವಸಂಸ್ಕಾರಕ್ಕೆ ಬೇಕಾಗುವಷ್ಟು ಜನ ಹಾಗೂ ಹಣವನ್ನು

ಕೂಡಿಸಲು ಅಸಮರ್ಥಳಾದುದರಿಂದ ಆಕೆ ಶವವನ್ನು ಪಡೆಯಲು ಯಾವ ಪ್ರಯತ್ನವನ್ನೂ ನಡೆಸಲಿಲ್ಲ.

ಆಕೆ ಈಗಾಗಲೇ ಸಾಕಷ್ಟು ಸಾಲದ ಹೊರೆಯಿಂದ ಪರಿತಪಿಸುತ್ತಿದ್ದುದರಿಂದ ಮತ್ತೆ ಸಾಲ ಮಾಡಲು ಮುಂದಾಗಲಿಲ್ಲ. ಶವಾಗಾರದ ವಾರಸುದಾರ ತಪೋನಾಶ್‌ನ ಶರೀರದಿಂದ ಅಸ್ಥಿಗಳನ್ನು ತೆಗೆದು ಅನಾಟಮಿ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕೊಟ್ಟು ಕೆಲವು ರೂಪಾಯಿ ಗಳಿಸಿದ. ಹೀಗೆ ತಮೋನಾಶ್‌ನ ಜೀವನ ಕಥೆ ಪರಿಸಮಾಪ್ತಿಗೊಂಡಿತು. ತಮೋನಾಶ್‌ನ ತಾಯಿ ಸಾವಿತ್ರಿ ಸಹ ಮಗನ ಮರಣದ ಬಗ್ಗೆ ಹೆಚ್ಚಿಗೆ ರೋಧಿಸಲಿಲ್ಲ. ಆದರೆ ಆಕೆಯ ಅಂತರಾಳದ ನೋವಿನ ಉಸಿರು ಹೊರಹೊಮ್ಮುತ್ತಿತ್ತು. ಅದಕ್ಕೆ ಯಾವ ಭಾಷೆಯೂ ಇರಲಿಲ್ಲ. ನೋಟಕ್ಕೆ ಕಂಡುಬರುತ್ತಿರಲಿಲ್ಲ. ಆದರೂ ಆ ನೋವು ಬಹು ದಾರುಣವಾಗಿತ್ತು. ಈಕೆ ಅಡಿಗೆ ಮಾಡುತ್ತಿದ್ದ ಮನೆಯ ಯಜಮಾನ ಈಕೆಯ ಸ್ಥಿತಿ ನೋಡಿ ಕನಿಕರಿಸಿ ಎರಡು ರೂಪಾಯಿ ಸಂಬಳ ಏರಿಸಿದ. ಆದರೆ ಸಾವಿತ್ರಿ ಅದನ್ನು ನಿರಾಕರಿಸಿಬಿಟ್ಟಳು. ತಲೆತಗ್ಗಿಸಿ ನುಡಿದಳು "ಅಗತ್ಯ ಇಲ್ಲ, ಬೇಡ ಬಿಡಿ."

ರಿಪುನಾಶ್ ದಿನವೂ ರಸ್ತೆಯಲ್ಲಿ ಉಂಡಾಡಿ ಗುಂಡನಂತೆ ತಿರುಗುತ್ತಿದ್ದ. ರಸ್ತೆಯಲ್ಲಿ ಸುತ್ತಿ ತಿರುಗುವ ನಿರುದ್ಯೋಗಿಗಳು, ಯಾವುದೋ ರಸ್ತೆಯಲ್ಲಿ ಜರುಗುವ ತಮಾಷೆ, ವಾಹನಗಳ ದುರ್ಘಟನೆ ನೋಡಿ ದಿನ ತಳ್ಳುವ ಜನಗಳೇ ಈತನ ಸಹಪಾಠಿಗಳಾಗಿದ್ದರು. ಈತ ಆ ಗುಂಪಿನಲ್ಲಿ 'ರಿಪುನ್' ಎಂದೇ ಪ್ರಚಲಿತನಾಗಿದ್ದ. ಆದರೆ ರಿಪುನ್ 'ತಮುನಾ' ನಂತೆ ಸದೃಢನಾಗಿರಲಿಲ್ಲ. ತೆಳುಮುಖ, ತೆಳು ಶರೀರ. ಈತ ಸುಮ್ಮನೆ ರಸ್ತೆಯಲ್ಲಿ ಸುತ್ತಾಡುತ್ತಿದ್ದ. ಕೆಲ ಸಾರಿ ಸಾಮಾನು ಹೊತ್ತು ಸ್ವಲ್ಪ ಹಣ ಸಂಪಾದಿಸುತ್ತಿದ್ದ. ಬೀಡಿ ಸೇದುವುದನ್ನು ಕಲಿತಿದ್ದುದರಿಂದ ಪ್ರತಿದಿನ ಒಂದು ಕಟ್ಟು ಬೀಡಿ ಸೇದಿ ಉಳಿದ ಕೆಲಕಾಸನ್ನು ಅಮ್ಮನ ಕೈಲಿ ಹಾಕುತ್ತಿದ್ದ. ಹೀಗೆ ದಿನಗಳು ಕಳೆಯುತ್ತಿದ್ದವು. ರಿಪುನ್‌ಗೆ 16–17 ವರ್ಷಗಳಾದಾಗ ಒಂದು ಘಟನೆ ಜರುಗಿತು. ಕಾಪಿ ಪುಸ್ತಕಗಳ ಒಂದು ಕಟ್ಟನ್ನು ಹೊತ್ತು ಒಬ್ಬ ಗ್ರಾಹಕನ ಕಾರಿನ ಕ್ಯಾರಿಯರ್ ಮೇಲಿರಿಸುತ್ತಿದ್ದಾಗ ಗಂಟಲು ಕೆರೆದಂತಾಯಿತು. ಕೆಮ್ಮು ಬಂತು. ಕಾರಿನ ಮಾಲೀಕ ಇವನಿಗೆ 12 ಆಣೆ ಕೂಲಿ ನೀಡಿ ಹೊರಟುಹೋದ. ಫುಟ್‌ಪಾತ್ ಮೇಲೆ ಕುಳಿತು ರಿಪುನ್ ಕೆಮ್ಮಲು ಪ್ರಾರಂಭಿಸಿದ. ಇದ್ದಕ್ಕಿದ್ದಂತೆಯೇ ಕೆಮ್ಮಿದಾಗ ಕಫದ ಜೊತೆಯಲ್ಲಿ ಗಡ್ಡೆ ಕಟ್ಟಿದ ರಕ್ತದ ತುಣುಕೊಂದು ಬಿದ್ದಂತೆನಿಸಿತು. ರಿಪುನ್ ಕೆಲಕ್ಷಣ ಆ ರಕ್ತದತ್ತ ದೃಷ್ಟಿ ಬೀರಿ ಅನಂತರ ಮನೆಯತ್ತ ನಡೆಯಹತ್ತಿದ.

ಸಾವಿತ್ರಿ ರಿಪುನ್‌ನನ್ನು ಕರೆದುಕೊಂಡು ಅದೇ ಬೀದಿಯ ಡಾಕ್ಟರೊಬ್ಬನ ಬಳಿ ಕರೆದೊಯ್ದಳು. ಡಾಕ್ಟರ್ ಆತನ ಎದೆ ಬೆನ್ನು ಪರೀಕ್ಷಿಸಿ ಆತನಿಗೆ ಕ್ಷಯರೋಗ ತಗುಲಿದೆ ಎಂದು ತಿಳಿಸಿದ. ಮತ್ತೆ ನುಡಿದ "ನನಗೇನೂ - ನೀವು ಫೀಜು ಕೊಡಬೇಕಾಗಿಲ್ಲ. ಆದರೆ ಔಷಧ, ಇಂಜೆಕ್ಷನ್‌ಗಳನ್ನಂತೂ ಕೊಳ್ಳಲೇಬೇಕಾಗುತ್ತದೆ. ಈ ರೋಗಕ್ಕೆ ಮುಖ್ಯವಾಗಿ ಒಳ್ಳೆಯ ಆಹಾರ ಅತ್ಯಗತ್ಯ. ರೊಟ್ಟಿ, ಬೆಣ್ಣೆ, ಮಾಂಸ, ಮೀನು, ಹಣ್ಣು ಮುಂತಾದವು."

ಸಾವಿತ್ರಿ ಸುಮ್ಮನೆ ಡಾಕ್ಟರತ್ತ ಮೂಕದೃಷ್ಟಿ ಹರಿಸಿದಳು. ಅವಳ ಮುಖದ ಅಸಹಾಯ ದೃಷ್ಟಿ ಆತನ ಮನಸ್ಸನ್ನು ತಟ್ಟಿರಬೇಕು. ಆತನೇ ನುಡಿದ "ನಿನ್ನ ಕೈಲಿ ಇವೆಲ್ಲಾ ನಿರ್ಧರಿಸಲು ಸಾಧ್ಯವಿಲ್ಲದಿದ್ದಲ್ಲಿ ಇವನನ್ನು ಆಸ್ಪತ್ರೆಗೆ ಸೇರಿಸುವುದೇ ಉತ್ತಮ, ನಿನಗೆ ಒಂದು ಕಾಗದ ಬರೆದುಕೊಡುತ್ತೇನೆ. ಅದನ್ನು ತೆಗೆದುಕೊಂಡು ಆಸ್ಪತ್ರೆಗೆ ಹೋಗು."

ಸಾವಿತ್ರಿ ಆ ಕಾಗದ ಹಿಡಿದು ಏಳು ದಿನ ಪರ್ಯಂತ ಆಸ್ಪತ್ರೆಗೆ ಸುತ್ತಿದಳು. ಆದರೆ ಏನೂ ಪ್ರಯೋಜನ ಆಗಲಿಲ್ಲ. ಅಲ್ಲಿನ ಒಬ್ಬ ರೋಗಿ ನುಡಿದ "ಇಲ್ಲೂ ಹಣವಿಲ್ಲದೆ ಏನೂ ಕೆಲಸ ಆಗಲ್ಲ .... ಲಂಚ ಕೊಡಬೇಕಾಗುತ್ತೆ."

ಈ ಮಾತನ್ನು ಕೇಳಿದ ನಂತರ ರಿಪುನ್ ಮತ್ತೆ ಆಸ್ಪತ್ರೆಗೆ ಹೋಗಲಿಲ್ಲ. ಅಷ್ಟೊಂದು ಹಣವನ್ನು ಆತ ಹೊಂದುವುದು ತಾನೇ ಹೇಗೆ? ಏನೊಂದೂ ಔಷಧೋಪಚಾರವಿಲ್ಲದೆ ಆತ ದಿನ ಕಳೆಯುತೊಡಗಿದ. ರಸ್ತೆಯಲ್ಲಿ ಮೂಟೆ ಹೊರುವ ಕೆಲಸವನ್ನು ಮತ್ತೆ ಪ್ರಾರಂಭಿಸಿದ. ಒಂದು ದಿನ ಆತನ ಜೊತೆಗಾರನೊಬ್ಬ ಹೇಳಿದ "ನೋಡು ನನಗೆ ಒಂದು ಮಾತು ಜ್ಞಾಪಕ ಬರುತ್ತಿದೆ. ನೀನು ಹೇಗಾದರೂ ಆರು ತಿಂಗಳು ಅಲೀಪುರ್ ಜೈಲಿನಲ್ಲಿ ಕಳೆಯಬಲ್ಲೆಯಾದರೆ ನಿನ್ನ ಟಿ.ಬಿ. ಹೊರಟುಹೋಗುತ್ತೆ."

ಜೈಲಿಗೆ ಹೋಗುವುದರಿಂದ ಟಿ.ಬಿ. ಕಾಯಿಲೆ ವಾಸಿಯಾಗುತ್ತದೆಯೇ? ರಿಪುನ್‌ಗೆ ಮೊದಲು ಅದು ಅರ್ಥ ಆಗಲಿಲ್ಲ.

ಸ್ನೇಹಿತ ಮತ್ತೆ ವಿವರಿಸಿದ. "ಹರು ಜೈಲಿನಿಂದ ಸ್ವಸ್ಥವಾಗಿ ಹಿಂತಿರುಗಿದ್ದಾನೆ. ಮೊದಲು ಆತನಿಗೂ ಟಿ.ಬಿ. ಅಂಟಿತ್ತು, ಅಲ್ಲಿ ಒಳ್ಳೆಯ ಆಸ್ಪತ್ರೆ ಇದೆ. ಖರ್ಚಿಲ್ಲದೆ ಔಷಧೋಪಚಾರ ನಡೆಯುತ್ತೆ. ನೀನು ಹೇಗಾದರೂ ಜೈಲಿಗೆ ಹೋಗಿ ಬಾ."

ಇದಾದ ಕೆಲ ದಿನಗಳಲ್ಲೇ ರಿಪುನ್ ಟ್ರ್ಯಾಮ್ ಗಾಡಿಯಲ್ಲಿ ಪಿಕ್‌ಪಾಕೆಟ್ ಮಾಡುವಾಗ ಮಾಲು ಸಹಿತ ಸಿಕ್ಕಿಬಿದ್ದ. ಜನಗಳು ಈತನನ್ನು ಚೆನ್ನಾಗಿ ಥಳಿಸಿ ಕೊನೆಗೆ ಪೊಲೀಸ್‌ಗೆ ಒಪ್ಪಿಸಿದರು.

ನ್ಯಾಯಾಲಯದಲ್ಲಿ ನ್ಯಾಯಾಧೀಶರು ಪ್ರಶ್ನಿಸಿದರು. "ಈ ಆರೋಪದ ವಿರುದ್ಧ ಹೋರಾಡಲು ನೀನು ಯಾರಾದರೂ ಲಾಯರನ್ನು ನೇಮಿಸಿಕೊಳ್ಳಬಹುದು. ಲಾಯರನ್ನು ನೇಮಿಸಿಕೊಳ್ಳಲು ನಿನ್ನ ಬಳಿ ಹಣವಿಲ್ಲದಿದ್ದರೆ ಸರ್ಕಾರದ ಕಡೆಯಿಂದ ಲಾಯರೊಬ್ಬರನ್ನು ನಾನು ಕೊಡಬಲ್ಲೆ."

ರಿಪುನ್ ಕೈ ಜೋಡಿಸಿ ನುಡಿದ "ಸ್ವಾಮಿ, ನನಗೆ ಲಾಯರಿನ ಅವಶ್ಯಕತೆ ಇಲ್ಲ, ಪೊಲೀಸರು ಹೇಳುತ್ತಿರುವುದೆಲ್ಲಾ ಸತ್ಯ. ಕಳ್ಳತನ ಮಾಡುವ ಉದ್ದೇಶದಿಂದಲೇ ನಾನು ಆ ಸಜ್ಜನನ ಜೇಬಿನಲ್ಲಿ ಕೈ ಹಾಕಿದ್ದುದು."

ನ್ಯಾಯಾಧೀಶರು ತೀರ್ಪಿತ್ತರು "ಐವತ್ತು ರೂಪಾಯಿ ಜುಲ್ಮಾನೆ, ಅದನ್ನು ಕಟ್ಟಲಾಗದಿದ್ದರೆ ಒಂದು ತಿಂಗಳು ಸಜೆ."

ರಿಪುನ್ ಕೈ ಜೋಡಿಸಿಕೊಂಡು ಬೇಡಿದ. "ಸ್ವಾಮಿ, ನ್ಯಾಯದೇವತೆಗಳೇ ನಾನು

ಹಣ ಕಟ್ಟಲಾರೆ, ನನ್ನ ಶಿಕ್ಷೆ ಜೈಲುವಾಸ ಒಂದು ತಿಂಗಳು ಸಾಲದು. ಮಹಾಪ್ರಭುಗಳು ಆರು ತಿಂಗಳು ದಯಪಾಲಿಸಬೇಕು."

ಈ ಮಾತು ಕೇಳಿ ನ್ಯಾಯಾಧೀಶರಿಗೆ ಆಶ್ಚರ್ಯವಾಯಿತು. "ನೀನು ಏಕೆ ಆರು ತಿಂಗಳ ಸಜೆಯನ್ನು ಬಯಸುತ್ತೀಯಾ ?"

"ನನಗೆ ಟಿ.ಬಿ. ಕಾಯಿಲೆ ಆಗಿದೆಯಂತೆ. ಅಲೀಪುರ ಜೈಲಿನಲ್ಲಿ ಟಿ.ಬಿ.ಗೆ ಒಳ್ಳೆಯ ಆರೈಕೆ ನಡೆಯುತ್ತದೆ, 6 ತಿಂಗಳಲ್ಲಿ ರೋಗ ವಾಸಿಯಾಗುತ್ತದೆ."

ನ್ಯಾಯಾಧೀಶರು ತಮ್ಮ ತೀರ್ಪನ್ನು ಬದಲಿಸಲಿಲ್ಲ. ಜೈಲಿನ ಆಸ್ಪತ್ರೆಯಲ್ಲಿ ಕಾಯಿಲೆ ವಾಸಿಯಾಗಲಿಲ್ಲ. ರಿಪುನ್ ಕೆಮ್ಮು ಕೆಮ್ಮುತ್ತಲೆ ಒಂದು ತಿಂಗಳ ನಂತರ ಜೈಲಿನಿಂದ ಹೊರಬಂದ. ಇದಾದ ನಂತರವೂ ಆತ ಒಂದು ತಿಂಗಳು ಜೀವಿಸಿದ್ದ.

ಒಂದು ದಿನ ಅರ್ಧ ರಾತ್ರಿ ಕಳೆದಿತ್ತು. ರಿಪುನ್ ಕೆಮ್ಮುತ್ತಾ ಹಾಸಿಗೆಯ ಮೇಲೆ ಎದ್ದು ಕುಳಿತ. ರಕ್ತವನ್ನು ಕಕ್ಕಿ ಆತ ಇಹಲೋಕ ತ್ಯಜಿಸಿದ.

ಸಾವಿತ್ರಿ ಮೂಕಳಾಗಿ ಕುಳಿತಳು. ಆಕೆಯ ಕಣ್ಣಲ್ಲಿ ನೋವಿನ ಹಬೆ ಚಿಮ್ಮುತ್ತಿತ್ತು. ಆದರೆ ಒಂದು ಹನಿ ಕಣ್ಣೀರನ್ನು ಸುರಿಸಲಿಲ್ಲ.

ಇದಾದ ಎರಡು ತಿಂಗಳ ನಂತರ ಚುನಾವಣೆಯ ಕಾಲ ಬಂತು. ಸಾವಿತ್ರಿ ಕೂಡ ಒಬ್ಬ ಓಟುದಾರಳಾಗಿದ್ದಳು. ಒಬ್ಬ ಅಭ್ಯರ್ಥಿ ಮಹಾಶಯ ಆಕೆಯ ಮನೆಗೂ ದಯಮಾಡಿಸಿದ.

ಸಾವಿತ್ರಿ ಕೆಂಡಕಾರುವ ಕಣ್ಣನ್ನು ಆತನತ್ತ ತಿರುಗಿಸಿ ನುಡಿದಳು. "ತಮಗೆ ಮತ ನೀಡಬೇಕೆ ? ತಾವು ನಮಗೆ ಏನು ಉಪಕಾರ ಮಾಡಿದ್ದೀರಿ ? ತಾವು ಅಧಿಕಾರದಲ್ಲಿದ್ದಾಗ ನನ್ನ ವಿದ್ವಾಂಸ ಪತಿ ಒಬ್ಬ ಭಿಕಾರಿಯಂತೆ ಸತ್ತ. ನನ್ನ ದೊಡ್ಡ ಮಗನಿಗೆ ಏನೂ ವಿದ್ಯಾಭ್ಯಾಸ ಕಲಿಸಲಾಗಲಿಲ್ಲ. ಗೂಂಡಾಗಳ ಚೂರಿಗೆ ಆತ ಆಹುತಿ ಆದ. ಚಿಕ್ಕ ಹುಡುಗ ಟಿ.ಬಿ.ಯಿಂದ ಸತ್ತ. ಆತನಿಗೆ ಏನೂ ಚಿಕಿತ್ಸೆ ನಡೆಸಲಾಗಲಿಲ್ಲ. ಎಲ್ಲ ಕಡೆಯೂ ಎಲ್ಲರಿಗೂ ಲಂಚ ಬೇಕು. ನಾನು ನಿಮಗೆ ಏಕೆ ಓಟು ಕೊಡಲಿ ? ನಡೆಯಿರಿ ನಾನು ಯಾರಿಗೂ ಓಟು ಮಾಡುವುದಿಲ್ಲ."

ಅಭ್ಯರ್ಥಿ ಹೇಳಲು ಪ್ರಯತ್ನಿಸಿದ "ಆದರೆ ನೋಡಿ ಈ ಗಣತಂತ್ರದಲ್ಲಿ......"

ಆದರೆ ಸಾವಿತ್ರಿ ಆತನ ಮಾತನ್ನು ಮುಗಿಸಲು ಬಿಡಲಿಲ್ಲ. ಮಧ್ಯದಲ್ಲೇ ಅಬ್ಬರಿಸಿದಳು. "ಮೊದಲು ನನ್ನ ಮನೆಯಿಂದ ಹೊರಗೆ ಹೋಗಿ."

ಆ ಸಜ್ಜನರು ತಕ್ಷಣ ಹೊರ ನಡೆದರು. ಸಾವಿತ್ರಿ ಪಟಾರನೆ ಬಾಗಿಲನ್ನು ಮುಚ್ಚಿದಳು.

# ಕಪ್ತಾನ

*ಅಚಿಂತ್ಯಕುಮಾರ್ ಸೇನ್‌ಗುಪ್ತ*

ನನ್ನ ತಾಯಿ ಹೊಡೆದಿದ್ದಳು. ಅವಳು ತಾಯಿ, ಹೊಡೆಯಬಹುದು. ಆದರೆ ಆತ ಏಕೆ ಹೊಡೆಯುತ್ತಾನೆ ? ಹಾಗೆ ಮಾಡಲು ಅವನ್ಯಾರು ?

ಹಸು ಕರು ಸಾಕಲಿ ಬಿಡಲಿ, ವ್ಯವಸಾಯ ಮಾಡಲಿ, ಬಿಡಲಿ, ಜಮೀನು ಹಾಳಾದರೆ ಹಾಳಾಗಲಿ, ಇದರಿಂದ ಅವನಿಗೇಕೆ ತಲೆನೋವು ? ಗುಡಿಸಲಿನ ಛಾವಣಿಗೆ ಹುಲ್ಲು ಹೊದಿಸುವ ಅಗತ್ಯವಿದೆಯೋ ಇಲ್ಲವೇ ಅದು ನನಗೆ ಗೊತ್ತಿದೆ. ಮಳೆಯಿಂದ ನೆನೆಯುವುದಾದರೆ ತಾಯಿ ಮಗ ಇಬ್ಬರೂ ನೆನೆಯುತ್ತೇವೆ. ನನ್ನ ತಲೆ ಮೇಲೆ ಛತ್ರಿ ಹಿಡಿದು ನಿಲ್ಲೆಂದು ಖಂಡಿತಾ ಅವನಿಗೆ ಹೇಳುವುದಿಲ್ಲ.

ಗೋಲ್‌ಬಾನು ನುಡಿದಳು "ಬೇಡ ಇನ್ನು ಮೇಲೆ ಗಹರ್‌ಆಲಿ ಉಸ್ತುವಾಗಿ ನೋಡಿಕೊಳ್ಳುತ್ತಾನೆ."

"ಯಾರು ಗಹರ್, ಆಲಿ ?" ಕೋಪದಿಂದ ಕನಲಿದ ನಾಸಿಮು.

"ಅವನು ಬಹಳ ದೊಡ್ಡ ಮನುಷ್ಯ. ಐದು ಕಟ್ಟೆ ಜಮೀನಿನ ಮಾಲೀಕ. ಬಾಗಿಲ ಬಳಿಯೇ ಕಛೇರಿ ಇದೆ. ಅವನ ಬಳಿ ನೂರಾರು ಖಟ್ಲೆಗಳಿವೆ."

"ಅದರಿಂದ ನಮಗೇನು ?"

"ಅವನಿಗೆ ಜಮೀನು ಒಪ್ಪಿಸುವುದರಿಂದ ಅದು ಸುರಕ್ಷಿತವಾಗಿರುತ್ತದೆ. ಉಣ್ಣಲು, ಉಡಲು ಕಷ್ಟವಿರುವುದಿಲ್ಲ. ಹುಲ್ಲು ಛಾವಣಿಯ ಬದಲು ಕಲ್ನಾರಿನ ಛಾವಣಿ ಬರುತ್ತದೆ."

"ಇವು ಯಾವುದೂ ನನಗೆ ಬೇಡ. ನಮಗೆ ಈ ಮುರಿದ ಗುಡಿಸಲೇ ಸಾಕು. ಹಾಗೂ ಹೀಗೂ ಜೀವನ ಸಾಗಿಸುತ್ತಿದ್ದೇವೆ. ಅಷ್ಟೇ ಸಾಕು. ಮೊದಲು ನೀನು ಅವನನ್ನು ಹೊಡೆದು ಓಡಿಸು." ಗಹರ್ ಆಲಿ ಹೊಡೆದಂತೆ ನುಡಿದ. ಇದಕ್ಕೆ ಗೋಲ್‌ಭಾನು ಸಹ ಸಮ್ಮತಿಸಿದಳು.

ತಂದೆ ಬದುಕಿದ್ದರೆ ತನ್ನನ್ನು ಹೀಗೆ ಹೊಡೆಯಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಜಮೀನಿನ ಬಳಿ ಹೋಗೆಂದೂ ಯಾರೂ ಬಲವಂತ ಮಾಡುತ್ತಿರಲಿಲ್ಲ. ಆತ ತನ್ನ ಬಲೆ ತೆಗೆದುಕೊಂಡು ಮೀನು ಹಿಡಿಯಲು ಕೆರೆಯ ಬಳಿ ಹೊರಟುಹೋಗುತ್ತಿದ್ದ. ತಂದೆ ಹೇಳುತ್ತಿದ್ದ "ಮಗು ನಿನಗೆ ಒಂದು ಕಟ್‌ಪೀಸ್

ಬಟ್ಟೆ ಅಂಗಡಿ ತೆರೆದು ಕೊಡುತ್ತೇನೆ.'' ಅದಕ್ಕೆ ಉತ್ತರವಾಗಿ ನಾಸಿವ್ ನುಡಿಯುತ್ತಿದ್ದ ''ಇದಕ್ಕೆ ಬದಲಾಗಿ ನನಗೆ ಒಂದು ದೋಣಿಯನ್ನು ಕೊಂಡುಕೊಡು. ನದಿಯ ನೀರು ನನಗೆ ಜಮೀನಿಗಿಂತ ಹೆಚ್ಚು ಪ್ರೀತಿ.''

ದೋಣಿ ಕೊಂಡುಕೊಡುವ ಧೈರ್ಯ ಅಪ್ಪನಿಗೆ ಇರಲಿಲ್ಲ. ನಾಸಿವ್ ಇನ್ನೂ ಚಿಕ್ಕ ಹುಡುಗ. ಬಾಡಿಗೆ ದೋಣಿಯನ್ನು ನಡೆಸಿ ಹಣವನ್ನು ಸಂಪಾದಿಸಲಾರ. ತಂದೆಯ ಬಲೆ ಸಹ ಹಳೆಯದು. ಅಲ್ಲಲ್ಲಿ ಹರಿದು ಹೋಗಿತ್ತು. ಆದರೂ ನಾಸಿವ್‌ನ ಮನಸ್ಸು ಅತ್ತಲೇ ಓಡುತ್ತಿತ್ತು. ಗಂಟೆಗಟ್ಟಲೆ ನದಿಯ ದಡದಲ್ಲಿ ಸುಮ್ಮನೆ ಕುಳಿತಿರುತ್ತಿದ್ದ. ಗಲ್ಲದ ಮೇಲೆ ಕಣ್ಣೀರು ಹರಿಯತೊಡಗುತ್ತಿತ್ತು.

ತಾಯಿ ಗಹರ್ ಆಲಿಯನ್ನು ಮದುವೆಯಾಗಲಿದ್ದಾಳೆ. ಅವನು ಇದೇ ಮನೆಯಲ್ಲಿ ಇರುತ್ತಾನೆ ಎಂಬ ಮಾತು ಕೇಳಿದ್ದೆ. ಹಾಗೇನಾದರೂ ಆದರೆ ಆಗ ನಾಸಿವ್ ಸ್ಥಾನವೇನು ? ಮುಂದಿನ ಅಂಗಳದಲ್ಲಿ ಅಥವಾ ಹಿಂದಿನ ಬಾಗಿಲು ಬಳಿಯೇ ? ಜನಗಳು ಆತ ಯಾರೆಂದು ತಾಯಿಯನ್ನು ಪ್ರಶ್ನಿಸಿದರೆ ಆಗ ತಾಯಿ ನುಡಿಯುತ್ತಾಳೆ 'ಅವನು ನನ್ನ ಮೊದಲ ಗಂಡನ ಮಗ ಎಂದು'. ನಾಸಿವ್ ನೀನು ಯಾರ ಅನ್ನ ಉಣ್ಣುವೆ ಎಂದು ಪ್ರಶ್ನಿಸಿದರೆ 'ನಾನು ಗಹರ್ ಆಲಿಯ ಅನ್ನ ಉಣ್ಣುವೆ' ಎಂದು ಹೇಳಲೇಬೇಕಾಗುತ್ತಿತ್ತು. ಇದನ್ನು ನೆನೆದೇ ನಾಸಿವ್‌ನ ಎದೆಯಲ್ಲಿ ಕೊಳ್ಳಿ ಇಟ್ಟಂತಾಯಿತು.

ಸುಮಾರು ಒಂದು ಮೈಲಿ ದೂರದಲ್ಲಿ ಸೆಣಬಿನ ಗದ್ದೆಯ ಬಳಿಯ ಉಪದಾರಿಯಲ್ಲಿ ಒಂದು ಹಡಗು ನಿಲ್ಲುತ್ತಿತ್ತು. ಆದರೆ ಅಲ್ಲಿ ಲಂಗರು, ಕಟ್ಟೆ ಯಾವುದೂ ಇರಲಿಲ್ಲ. ಹಡಗನ್ನು ಅಲ್ಲೇ ದಡದಲ್ಲಿ ನಿಲ್ಲಿಸಿ ಬಾದಾಮಿ ಗಿಡದ ಬುಡಕ್ಕೆ ಕಟ್ಟುತ್ತಿದ್ದರು. ದಡದಲ್ಲಿ ಎರಡು ಮೆಟ್ಟಲುಗಳನ್ನು ಇಡುತ್ತಿದ್ದರು. ಈ ಮೆಟ್ಟಲುಗಳ ಬದಿಯಲ್ಲಿ ಕಟ್ಟಿದ ಗಳು ಹಿಡಿದು ಹಡಗಿನ ಇಬ್ಬರು ಕೂಲಿಯಾಳುಗಳು ನಿಂತುಕೊಳ್ಳುತ್ತಿದ್ದರು. ಯಾತ್ರಿಕರು ಮೆಟ್ಟಿಲ ಮೇಲೆ ಹತ್ತಿ ಇಳಿಯುತ್ತಿದ್ದರು. ಬಾದಾಮಿ ಮರದ ಕೆಳಗೆ ನಿರ್ಮಿಸಿದ್ದ ಸೂರಿನ ಕೆಳಗೆ ಒಬ್ಬ ಟಿನ್ನಿನ ಪೆಟ್ಟಿಗೆ ತೆರೆದು ಕುಳಿತು ಟಿಕೇಟ್ ಮಾರುತ್ತಿದ್ದ. ಆತ ಅಲ್ಲಿ ಇಳಿದವರಿಂದ ಟಿಕೇಟ್ ಪಡೆಯುತ್ತಿದ್ದ. ಯಾರಾದರೂ ಈತನ ಕಣ್ಣು ತಪ್ಪಿಸಿ ಹಡಗು ಹತ್ತಿದರೆ ಅಂಥವರನ್ನು ಗುರುತಿಸಿ ಅವರೊಡನೆ ಮಾತನಾಡುತ್ತಿದ್ದ. ಆನಂತರ ಹಡಗು ಹತ್ತಿ ಕ್ಯಾಪ್ಟನ್ ಜೊತೆ ಲೆಕ್ಕಪತ್ರದ ಬಗ್ಗೆ ಮಾತನಾಡುತ್ತಿದ್ದ. ಬಂದರಿನ ಅಧಿಕಾರಿ ಇಳಿಯುವ ಮೊದಲು ಮೆಟ್ಟಲುಗಳನ್ನು ತೆಗೆಯುತ್ತಿರಲಿಲ್ಲ. ಒಂದು ಮೆಟ್ಟಲನ್ನು ತೆಗೆದರೂ ಇನ್ನೊಂದು ಇದ್ದೇ ಇರುತ್ತಿತ್ತು. ಈ ಅಧಿಕಾರಿಗಳಿಗೆ ಆಸರೆಯ ಅವಶ್ಯಕತೆ ಇರಲಿಲ್ಲ.

ಹಳ್ಳಿಯ ಜಮೀನು ಕೆಳಮಟ್ಟದಲ್ಲಿತ್ತು. ಅಲ್ಲಿ ಯಾವಾಗಲೂ ನೀರು ತುಂಬಿರುತ್ತಿತ್ತು. ಮರಗಳ ಕಾಂಡ ಮಾತ್ರ ಒಣಗಿರುತ್ತಿತ್ತು. ಯಾತ್ರಿಕರು ನೀರಿನಲ್ಲಿ ನಡೆದೇ ಹಳ್ಳಿಯ ರಸ್ತೆ ಹಿಡಿಯುತ್ತಿದ್ದರು. ಕೈಯಿಂದ ಹುಟ್ಟು ಹಾಕುವ ಒಂದು ಚಿಕ್ಕ ದೋಣಿ ಸಹ ಇತ್ತು. ಯಾತ್ರಿಕರ ಜೊತೆ ಸಾಮಾನು ಇದ್ದರೆ ಇದು ಉಪಯೋಗವಾಗುತ್ತಿತ್ತು. ಮಕ್ಕಳನ್ನು ಕಂಕಳಲ್ಲಿ ಎತ್ತಿಕೊಂಡು ಅಥವಾ ಹೆಗಲ

ಮೇಲೆ ಹೊತ್ತೇ ಸಾಗಿಸುತ್ತಿದ್ದರು. ಹೆಂಡತಿ ಚಿಕ್ಕವಳಾಗಿದ್ದರೂ ಅವಳನ್ನು ಹೊತ್ತುಕೊಂಡೇ ಸಾಗಿಸುತ್ತಿದ್ದರು.

ಹಡಗಿನ ಅಧಿಕಾರಿಯ ಆಜ್ಞೆಯ ಮೇರೆಗೆ ಮೆಟ್ಟಲುಗಳು ತೆಗೆಯಲ್ಪಟ್ಟವು. ಬಂದರಿನ ಅಧಿಕಾರಿ ಇನ್ನು ಹಡಗಿನಿಂದ ಇಳಿದು ಬಂದಿಲ್ಲವೇ? ಇದೇ ತಾನೇ ಇಳಿದು ಹೋದರಲ್ಲಾ. ಕೊನೆಯ ಮೆಟ್ಟಲು ಸಹ ತೆಗೆಯಲ್ಪಟ್ಟಿದೆ. ಕಟಕಟ ಶಬ್ದ ಮಾಡುತ್ತಾ ಸರಪಣಿ ಕಟ್ಟಿದ ಲಂಗರ್ ಮೇಲೇರಿತು.

ಏನು ಒಬ್ಬ ಅವಸರದಲ್ಲಿ ಇಳಿಯಲು ಸಾಧ್ಯವಾಗಿಲ್ಲವೆ?

ಆರೇ.... ಆ ಮನುಷ್ಯ ಎಲ್ಲಿ? ಅವನು 10–12 ವರ್ಷದ ಹುಡುಗ. ಏನು ಅವನು ಪ್ರವಾಸಿಯೇ. ಯಾರಿಗೆ ಗೊತ್ತು? ಯಾವಾಗಲೋ ಹಡಗನ್ನು ನೋಡಲು ಮೇಲೇರಿ ಹೊರಟು ಹೋಗಿರಬೇಕು. ಮುಂದಿನ ಘಾಟ್‌ನಲ್ಲಿ ಅಂದರೆ 'ಪಾತಾ ಕಾಟಾ'ನಲ್ಲಿ ಇಳಿಯಲು ತಿಳಿಸಬೇಕು. ಸಾಯಂಕಾಲ ನದಿಯ ನೀರು ಸ್ವಲ್ಪ ಇಳಿದಾಗ ಒಂದು ಮೌಲಾ ಮಾಜಿಯ ದೋಣಿ ದಡದಡ ಶಬ್ದ ಮಾಡುತ್ತಾ ಹೊರಡುತ್ತದೆ. ಕತ್ತಲಾದರೆ ಪಾಪ ಆತ ಹೇಗೆ ಮನೆ ಸೇರುತ್ತಾನೆ? ಪಾಪ ಆತನ ತಂದೆ ತಾಯಿ ಅದೆಷ್ಟು ಗೋಳಾಡುತ್ತಿದ್ದಾರೋ?

ಅದೊಂದು ಪುಟ್ಟ ಹಡಗು. ಮೇಲಿನ ಡೆಕ್ ಕೇವಲ ಮೂರನೇ ದರ್ಜೆಯ ಪ್ರಯಾಣಿಕರಿಗಾಗಿ ಇತ್ತು. ಮುಂದುಗಡೆ ಪ್ರಥಮ ಶ್ರೇಣಿಯದೆಂದು ಕರೆಯಲಾಗುತ್ತಿದೆ. ಪಾರಿವಾಳದ ಗೂಡಿನಂತಹ ಎರಡು ಕೋಣೆಗಳಿದ್ದವು. ಇದರ ಎದುರುಗಡೆ ಖಾಲಿ ಇದ್ದ ಜಾಗದಲ್ಲೇ ಹಡಗಿನ ತಿರುಗಣೆ ಇತ್ತು. ನಾಸಿಮ್ ಸೀದಾ ಅಲ್ಲಿಗೆ ಹೋಗಿ ತಲುಪಿದ. ಜನಗಳು ಆತನನ್ನು ಕಂಡರೂ ಗಮನ ಹರಿಸಿರಲಿಲ್ಲ. ಯಾವನೋ ಹುಡುಗ ಹಡಗು ನೋಡಲು ಬಂದು ಉಳಿದು ಹೋಗಿದ್ದಾನೆಂದುಕೊಂಡು ಸುಮ್ಮನಾಗಿದ್ದರು. ಆದರೆ ಆ ಹುಡುಗ ಕೆಳಗೆ ಇಳಿಯುವ ಪ್ರಯತ್ನವನ್ನೇ ಮಾಡುತ್ತಿರಲಿಲ್ಲ.

"ಏನು ಬೇಕು?" ತಲೆಯ ಮೇಲೆ ಟೋಪಿಯನ್ನು ಏರಿಸಿ ಚುಟ್ಟಾ ಸೇದುತ್ತಾ ಕತ್ತನ್ನು ನಿಡಿದಾಗಿ ನೀಡಿ ಕಪ್ತಾನ ಪ್ರಶ್ನಿಸಿದ.

"ಹುಜೂರ್ ನೌಕರನ ಅಗತ್ಯವಿದ್ದರೆ ನನ್ನನ್ನು ಇಟ್ಟುಕೊಳ್ಳಿ."

"ನಿನ್ನ ಊರು ಯಾವುದು?" ಕಪ್ತಾನ ಹುಡುಗನನ್ನೇ ದೃಷ್ಟಿಸಿದ.

"ಇಲ್ಲೇ ಇದೇ ಹುಜೂರು.... 'ಕನಕದೀಯ' ಹೆಸರು."

"ತಂದೆ ತಾಯಿಗಳಿದ್ದಾರೆಯೆ?"

"ಹುಜೂರ್ ನನಗೆ ಯಾರೂ ಇಲ್ಲ."

ಕಪ್ತಾನ ಇನ್ನು ಕೆಲಕ್ಷಣ ಆತನನ್ನು ದಿಟ್ಟಿಸಿದ. "ಏನಾದರೂ ಕೆಲಸ ಗಿಲ್ಸ ಮಾಡ್ತೀಯಾ?" "ಏನೇನು ಕೆಲಸ ಮಾಡಬೇಕು ಹುಜೂರ್."

"ಇದೇ ಅಡಿಗೆ ಗಿಡಿಗೆ ಮಾಡೋದು, ಪಾತ್ರೆ ತೊಳೆಯೋದು, ಬಟ್ಟೆ ಒಗೆಯೋದು, ಒಣಗಿ ಹಾಕೋದು... ಇವೆಲ್ಲಾ ಮಾಡೋದಾದ್ರೆ ಕೆಲಸ ಶುರು ಮಾಡಿಬಿಡು." ಇಷ್ಟು ಸುಲಭವಾಗಿ ಹು[illegible]ಕ್ಕೋದಾದ್ರೆ ಏಕೆ ಬಿಡಬೇಕು. ಕಪ್ತಾನ

ತಿರುಗಣೆಯು ಮುಂದೆ ಕುಳಿತಿದ್ದ. ಈಯಾದ್ ಆಲಿಗೆ ಕಣ್ಣು ಮಿಟುಕಿಸಿದ. ಕೊನೆಯು ಪಕ್ಷ ಹುಕ್ಕವನ್ನಾದರೂ ಸಿದ್ಧಪಡಿಸಬಲ್ಲ. ಸಮಯ ಬಿದ್ದರೆ ಕೈ ಕಾಲು ಒತ್ತಬಲ್ಲ.

ಈಯಾದ್ ಆಲಿ ನುಡಿದ "ಸಂಬಳ ಏನೂ ಸಿಕ್ಕಲ್ಲ."

"ಆಗ್ಲಿ ಹುಜೂರ್... ನನಗೆ ಹಣದ ಅಗತ್ಯವಿಲ್ಲ."

ಹಡಗಿನಲ್ಲಿ ಜಾಗ ಸಿಕ್ಕಿತು. ಇದು ಆತನ ನಿರೀಕ್ಷೆಯನ್ನು ಮೀರಿತ್ತು. ತಂದೆಯಲ್ಲ, ಚಿಕ್ಕಪ್ಪನಲ್ಲ, ಸುಮ್ಮಸುಮ್ಮನೆ ಯಾರಿಂದಲೋ ಏಟು ತಿನ್ನುವುದು ತಪ್ಪಿತಲ್ಲ. ಅದೇ ಆತನ ಪಾಲಿಗೆ ಮಹತ್ವದ್ದೆನಿಸಿತ್ತು. ಆತ ಯೋಚಿಸಿದ. ಯಾವುದೋ ಸೆಳೆತಕ್ಕೆ ಸಿಕ್ಕಿ ಗೊತ್ತಿಲ್ಲದ ಕಡೆ ಹೋಗುತ್ತಿದ್ದೇನೆ. ಸದ್ಯಕ್ಕೆ ಇದಕ್ಕಿಂತ ಸುಖ ಮತ್ತೆಲ್ಲಿದೆ ? ಕಪ್ತಾನ ತನ್ನ ಬಿಳಿ ಗಡ್ಡದ ಮೇಲೆ ಕೈ ಆಡಿಸುತ್ತಾ ನುಡಿದ "ಚೆನ್ನಾಗಿ ಕೆಲಸ ಮಾಡಬೇಕು. ಇದೇ ಹಡಗಿನಲ್ಲಿ ಖಾಯಂ ಕೆಲಸ ಕೊಡ್ತೀನಿ. ಇಂದಿನ ಬಿಟ್ಟಿ ಆಳು ಒಂದು ದಿನ ಈ ಹಡಗಿನ ಮುಖ್ಯಸ್ಥನಾಗಬಹುದು."

ಆದರೆ ಮೊದಲನೆ ದಿನವೇ ನಾಸಿಮ್ ಕಪ್ತಾನನ ಹೊಡೆತದ ರುಚಿ ನೋಡಬೇಕಾಯಿತು. ಆದರೆ ಇದರಲ್ಲಿ ಆಶ್ಚರ್ಯಪಡುವಂತಹುದು ಏನೂ ಇರಲಿಲ್ಲ. ಇದೇ ಅಲ್ಲಿನ ರೀತಿನೀತಿಯಾಗಿತ್ತು. ಕಪ್ತಾನನ ಕೈಯಿಂದ ಎಲ್ಲರೂ ಹೊಡೆತ ತಿನ್ನಬೇಕಾಗಿತ್ತು. ಏಣಿ ಸಾಗಿಸುವವರು, ಲಂಗರ್ ಇಳಿಸುವ ಜನ, ಹಗ್ಗ ಕಟ್ಟುವ ಜನ, ರಾತ್ರಿ ವಿದ್ಯುತ್ ಯಂತ್ರ ತಿರುಗಿಸುವ ಜನ ಇವರುಗಳಿಂದ ಕೊಂಚ ಏನಾದರೂ ತಪ್ಪಾದರೆ ಹೊಡೆತ ತಪ್ಪುತ್ತಿರಲಿಲ್ಲ. ಕೆಳಗಡೆ ಮಿಸ್ತ್ರಿಗಳ ಇಲಾಖೆ ಇತ್ತು. ಇದರ ಬದಿಯಲ್ಲಿ ಇದ್ದಲಿನವರು, ಎಂಜಿನ್ ಒಲೆಯುವರು ಕೆಲಸ ಮಾಡುತ್ತಿದ್ದರು. ಆದರೆ ಇವರೆಲ್ಲರ ಮೇಲಿನ ಅಧಿಕಾರ ಕಪ್ತಾನನಿಗೆ ಮಾತ್ರ ಇತ್ತು. ಯಾರಾದರೂ ತಪ್ಪಾಗಿ ಒಂದು ಯಂತ್ರ ತಿರುಗಿಸುವ ಬದಲು ಮತ್ತೊಂದು ತಿರುಗಿಸಿದರೆ, ಒಂದು ದಂಡ ಎಳೆಯುವ ಬದಲು ಮತ್ತೊಂದು ಎಳೆದರೆ ಸುರಕ್ಷಿತವಾಗಿರಲು ಸಾಧ್ಯವಿರುತ್ತಿರಲಿಲ್ಲ. ಕಪ್ತಾನನಿಂದ ಒದೆ ಬೀಳುತ್ತಿತ್ತು. ಕುಲ ಜಾತಿ ಹೀಯಾಳಿಸುತ್ತಿದ್ದ. ಚಪ್ಪಲಿಯಿಂದಲೂ ಕೆಲಬಾರಿ ಏಟು ಬೀಳುತ್ತಿತ್ತು. ಇದರಿಂದಲೂ ಆತನಿಗೆ ತೃಪ್ತಿ ಆಗದಿದ್ದರೆ ಕೆಲಸದಿಂದಲೇ ಹೊರ ಹಾಕುತ್ತಿದ್ದ.

ಇಷ್ಟೆಲ್ಲಾ ಮಾಡದೆ ಏಕೆ ಬಿಟ್ಟಾನು ? ಹಡಗಿನ ಕಂಪನಿ ಅವನೊಬ್ಬನನ್ನು ತಾನೇ ಅರಿತಿರುವುದು. ಹಡಗಿನಲ್ಲಿ ಆತ ಜಿಲ್ಲಾ ಮ್ಯಾಜಿಸ್ಟ್ರೇಟ್. ಹಡಗಿನ ಸಮಸ್ತ ಜವಾಬ್ದಾರಿ ಆತನದೇ. ನದಿಯಲ್ಲಿ ಸಾಗುವಾಗ ಈತನ ಹಡಗು ಬೇರೆ ಯಾವುದಾದರೂ ದೋಣಿಗೆ ತಗುಲಿ ನಷ್ಟವಾದರೆ ಅದನ್ನು ಭರಿಸಬೇಕಾದವನು ಈ ಕಪ್ತಾನನೇ. ಬಿರುಗಾಳಿಯಿಂದ ಹಡಗು ಮುಳುಗಿ ಹೋದರೆ ಅದರ ಜವಾಬ್ದಾರಿ ಈತನದೇ. ಕಂಪನಿಯ ಸಾಹೇಬರದಲ್ಲ. ಚಲಿಸುವ ಹಡಗಿನ ಸಮಸ್ತ ಉಸ್ತುವಾರಿ ಜವಾಬ್ದಾರಿ ಈತನಿಗೆ ಸೇರಿದ್ದು. ಬಿರುಗಾಳಿ, ಸುಂಟರಗಾಳಿಯಲ್ಲಿ ಹಡಗನ್ನು ಉಳಿಸಿಕೊಂಡು ದಡ ಸೇರಿಸಿದರೆ ಆಗ ಲಭಿಸುವ ಬಹುಮಾನವೂ ಈ ಕಪ್ತಾನನಿಗೆ. ಹಡಗಿನಲ್ಲಿ ಮೆಕ್ಯಾನಿಕ್ ಮತ್ತು ಕೂಲಿಗಾರರು ಎಷ್ಟೇ ಕಷ್ಟಪಟ್ಟು ಕೆಲಸ ಮಾಡಿದರೂ

ಒಂದು ಕಾಸಿನ ಲಾಭ ಅವರಿಗೆ ಆಗುತ್ತಿರಲಿಲ್ಲ. ಆದರೆ ಎಲ್ಲಾ ಪ್ರಶಸ್ತಿ ಪದಕಗಳೂ ಕಪ್ತಾನನಿಗೆ ಮಾತ್ರ ಲಭಿಸುತ್ತಿದ್ದವು.

ಇದ್ದಕ್ಕಿದ್ದಂತೆಯೇ ಆದುದಾದರೂ ಏನು?

ಹಡಗು ಮರಳಿನಲ್ಲಿ ಸಿಕ್ಕಿ ಹಾಕಿಕೊಂಡಿತ್ತು. ಸುತ್ತಲಿನ ಇಬ್ಬನಿಯಲ್ಲಿ ದಾರಿ ಸರಿಯಾಗಿ ಕಾಣಿಸಿರಲಿಲ್ಲ. ಹಡಗಿನ ಗಾಲಿ ಮಣ್ಣಿನಲ್ಲಿ ಹೂತು ಹೋಗಿತ್ತು. ಬೇಗ ಮೇಲಕ್ಕೆ ಎತ್ತುವ ಸಂಭವ ಇರಲಿಲ್ಲ. ಆದ್ದರಿಂದ ಬಂದರಿಗೆ ಈ ಸಮಾಚಾರ ತಿಳಿಸುವ ಅಗತ್ಯ ಕಂಡಿತು. ಕೊನೆಪಕ್ಷ 7–8 ಗಂಟೆ ತಡವಾಗುವ ಸಂಭವವಿತ್ತು. ಹಡಗು ಆಗ ಈಗ ಹೊರಡಬಹುದೆಂದು ನಿರೀಕ್ಷಿಸುತ್ತಿರುವ ಯಾತ್ರಿಕರು ರಾತ್ರಿಯೆಲ್ಲಾ ಹಡಗಿನಿಂದ ಏಳುತ್ತಿರುವ ಹೊಗೆಯನ್ನು ನೋಡುತ್ತಾರೆ. ಶಿಳ್ಳೆಯನ್ನು ಕೇಳುತ್ತಾರೆ. ದೋಷ ಯಾರದು? ತಪ್ಪು ಸುಖಾನಿಯದಾಗಿತ್ತು. ದೋಷ ಸೆಕೆಂಡ್‌ಮೇಟ್‌ನದಾಗಿತ್ತು. ದಷ್ಟಪುಷ್ಟ ಯುವಕರನ್ನು ಹೊಡೆಯುವುದರಲ್ಲಿ ಏನು ಸುಖ ಸಿಗುತ್ತದೆ? ಹೊಡೆಯುವ ಕಪ್ತಾನನ ಕೈ ನೋಯುತ್ತದೆ. ಆದರೆ ಈ ಜನ ಇಲ್ಲಿಂದ ತಪ್ಪಿಸಿಕೊಂಡು ಎಲ್ಲಿ ಹೋಗಲು ಸಾಧ್ಯ? ಈತ ಅವರಿಗೆ ಸಂಬಳವನ್ನೇ ಕೊಡುವುದಿಲ್ಲ. ಅವರು ತಮ್ಮ ಊಟವನ್ನು ತಮ್ಮ ಹಣ ಕೊಟ್ಟು ತಾವೇ ಕೊಂಡುಕೊಳ್ಳಬೇಕಾಗುತ್ತಿತ್ತು.

ಏನಾದರೂ ಕಪ್ತಾನನೇ ಹಡಗಿನ ಮುಖ್ಯಸ್ಥ. ಎಲ್ಲ ತರಹ ಖರ್ಚು ಚಕ್ರದ ಕೀಲಿ ಕೈಯಿಂದ ಮೊದಲ್ಗೊಂಡು ದೊಡ್ಡ ರಿಪೇರಿ ತನಕ ಹಡಗಿನ ಕೆಲಸಗಾರರ ಸಂಬಳ ಎಲ್ಲಕ್ಕೂ ಕಂಪನಿಯು ಕಪ್ತಾನನ ಕೈಗೆ ಹಣ ನೀಡುತ್ತಿದ್ದುದು. ಅನಂತರ ಹಣವನ್ನು ಖರ್ಚು ಮಾಡುವ ಕೆಲಸ ಕಪ್ತಾನನದು. ಅವನಿಗೆ ಮನಸ್ಸು ಬಂದರೆ ಕೆಲವರಿಗೆ ಪೂರ್ತಿ ಸಂಬಳವನ್ನು ಕೊಡಬಹುದಿತ್ತು. ಕೆಲವರಿಗೆ ಸಂಬಳದಲ್ಲಿ ಊಟದ ಹಣವನ್ನು ಹಿಡಿಯುತ್ತಿದ್ದ. ಕೆಲವರಿಗೆ ಜುಲ್ಮಾನೆ ವಿಧಿಸುತ್ತಿದ್ದ. ಮತ್ತೆ ಕೆಲವರನ್ನು ಕೆಲಸದಿಂದಲೇ ತೆಗೆದುಹಾಕುತ್ತಿದ್ದ. ಅವನ ವಿರುದ್ಧ ಯಾರೂ ದೂರು ನೀಡುತ್ತಿರಲಿಲ್ಲ ಹಾಗೂ ಅವನ ತೀರ್ಮಾನದ ವಿರುದ್ಧ ಉಸಿರೆತ್ತುತ್ತಿರಲಿಲ್ಲ. ಹಡಗಿನ ಒಳಗಿನ ಕಾನೂನಿನ ಬಗ್ಗೆ ಕಂಪನಿಯವರು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ಕಂಪನಿಯು ನೋಡುತ್ತಿದ್ದುದು ಅವರ ಹಡಗು ಒಂದು ಘಾಟಿನಿಂದ ಇನ್ನೊಂದು ಘಾಟಿಗೆ ಸರಕು ಮತ್ತು ಜನರನ್ನು ಸರಿಯಾಗಿ ಸಾಗಿಸುತ್ತಿದೆಯೇ ಹಾಗೂ ಎಷ್ಟು ಲಾಭ ಗಳಿಸುತ್ತಿದೆ ಎಂಬುದನ್ನು ಮಾತ್ರ.

ಆದುದರಿಂದಲೇ ಹಡಗು ಕಪ್ತಾನನ ಇಚ್ಛಾನುಸಾರವೇ ಚಲಿಸುತ್ತಿತ್ತು. ಹಡಗಿನ ಸಮಸ್ತ ಜನರು ಅವನ ಹಿಂಬಾಲಕರಾಗಿದ್ದರು. ಹಡಗಿನ ಕಪ್ತಾನ ಎಲ್ಲರ ಮೇಲೂ ಆಜ್ಞೆ ಚಲಾಯಿಸುವ ಪಾಳೆಯಗಾರನಾಗಿದ್ದ.

"ಅಳುವುದರಿಂದ ಏನೂ ಪ್ರಯೋಜನವಿಲ್ಲ" ಬದಿಯಲ್ಲಿ ಮಕಬೂಲ್ ನುಡಿದ, "ಇಂತಹ ಹೊಡೆತ ಬಹಳ ಸಾರಿ ತಿನ್ನಬೇಕಾಗುತ್ತೆ. ಒದೆ ತಿಂದು ತಿಂದೇ ಕೆಲಸದಲ್ಲಿ ಉನ್ನತಿ ಸಾಧಿಸೋದು."

ಮಕಬೂಲ್ ಸಹ ಪ್ರಾರಂಭದಲ್ಲಿ ಕೂಲಿಯಾಗೇ ಹಡಗಿನಲ್ಲಿ ನುಸುಳಿ

ಬಂದಿದ್ದುದು. ಅಡಿಗೆಯುವನಾಗಿ ಅಲ್ಲ. ಅಗಸ ಮೋಚಿಯಾಗಿ ಮೂರು ವರ್ಷಗಳ ನಂತರ ಆತನಿಗೆ ಏಣಿ ಸಿಕ್ಕಿತ್ತು. ಇದಾದ ನಂತರ ಹಡಗಿನ ಮಧ್ಯದಲ್ಲಿ ರೇಷ್ಮೆ ಬಟ್ಟೆ ಹಾಕುವ ಕೆಲಸ ಲಭಿಸಿತ್ತು. ನಂತರ ಹಗ್ಗ ಎಳೆಯುವ ಕೆಲಸ. ಹಡಗಿನಲ್ಲಿ ಯಾರೂ ಒದೆ ತಿನ್ನದೇ ಉನ್ನತಿ ಗಳಿಸಿದುದಿಲ್ಲ.

ಕಪ್ತಾನ್ ಸಾಹೇಬರ ಕೃಪಾದೃಷ್ಟಿ ಬೀಳದೆ ಹಡಗಿನಲ್ಲಿ ಏನೂ ಆಗಲು ಸಾಧ್ಯವಿಲ್ಲ. ಹತ್ತು ವರ್ಷಗಳ ನಂತರ ಕಪ್ತಾನನಿಗೆ ದಯೆ ಬಂದರೆ ಸರ್ಟಿಫಿಕೇಟ್ ನೀಡುತ್ತಿದ್ದ. ಈ ಸರ್ಟಿಫಿಕೇಟ್ ಬಂದ ಮೇಲೆ ಆತ ಬೇರೆ ಹಡಗಿನ ಪರೀಕ್ಷೆಗೆ ಕೂಡಬಹುದಿತ್ತು. ಹಡಗಿನ ಮೂರನೇ ಅಧಿಕಾರಿ ಅಫಸರ್ ಉದ್ದೀನ್ ಈ ಮಾತುಗಳನ್ನು ನುಡಿದಿದ್ದ "ಅಸಲಿ ಸರ್ಟಿಫಿಕೇಟ್ ಸಿಗದೆ ಇದ್ದರೆ ಎಲ್ಲವೂ ವ್ಯರ್ಥ. ಆದ್ದರಿಂದ ಎಲ್ಲಾ ಶ್ರಮವಹಿಸಿ ಕಪ್ತಾನನ ಕಾಲಿಗೆ ಎಣ್ಣೆ ಹಚ್ಚಿರಿ, ಅನಂತರ ಒಮ್ಮೆ ಉತ್ತೀರ್ಣನಾಗಿ ಹೊರಬಂದು ಕಪ್ತಾನನಾದ ಮೇಲೆ ಮತ್ತೆ ಯಾರಿಗೂ ಹೆದರಬೇಕಾಗಿರುವುದಿಲ್ಲ. ಆಗ ನೀನು ಜಮೀನ್‌ದಾರ್ ಮತ್ತು ತಹಸೀಲ್ದಾರನಿಗೆ ಸಮನಾಗಿರುತ್ತಿ."

"ಇಲ್ಲ, ಇಲ್ಲ, ಇದಲ್ಲ. ಇದರಲ್ಲಿ ರಹಸ್ಯವಿದೆ. ಚಟಗಾವ್‌ನ ಜನರಲ್ಲಿ ಕಪ್ತಾನನಿಗೆ ಹೆಚ್ಚು ಮಮತೆ ಇದೆ."

ಬಾಯ್ಲರ್ ಕೆಲಸ ಮಾಡುವ ವಿಲಾಯತ್ ಅಲಿ ಮೆಲುದನಿಯಲ್ಲಿ ನುಡಿದ. ಕಪ್ತಾನನ ಸ್ವಂತ ಊರು ಚಟಗಾವ್ ತಾನೆ? ಚಟಗಾವ್ ಬಿಟ್ಟು ಮತ್ತೆಲ್ಲಿಂದ ಇಂತಹ ಕಪ್ತಾನನು ಸಿಗಲು ಸಾಧ್ಯ? ಕಪ್ತಾನ, ಒಣಗಿದ ಮೀನು, ಮಸೀದಿ ಇವು ಮೂರು ಉಳ್ಳದ್ದೇ ಚಟಗಾವ್ ಎಂಬ ಲೋಕೋಕ್ತಿ ಇದೆ.

ಕಪ್ತಾನನ ಕೆಲಸ ಕಳ್ಳನು ಮಾಡುವ ಕೆಲಸವಲ್ಲ.

"ಏ ಹುಡುಗ ನಿನ್ನ ಮನೆ ಎಲ್ಲಿದೆ?" ಎಲ್ಲರೂ ಒಟ್ಟಿಗೆ ಪ್ರಶ್ನಿಸಿದರು. ನಾಸಿಮನು ಉದಾಸದಿಂದಲೇ ನುಡಿದ. ಈ ದೇಶದಲ್ಲೇ ಇದೆ. ಈ ಮಾತು ಕೇಳಿ ಎಲ್ಲರ ಮುಖದಲ್ಲೂ ಉದಾಸೀನತೆ ಮೂಡಿಬಂತು.

ಮಾರನೇ ದಿನ ಅಬ್ದುಲನಿಗೆ ಬಹಳಷ್ಟು ಏಟುಗಳು ಬಿದ್ದವು. ನೀರಿನ ಮಟ್ಟ ನೋಡುವಾಗ ಲೋಹದ ಅಳತೆಕಡ್ಡಿಯನ್ನು ಕಳೆದುಬಿಟ್ಟಿದ್ದನು. ಕಪ್ತಾನನು ಯಾರನ್ನಾದರೂ ಹೊಡೆಯುವಾಗ ಅವನನ್ನು ಬಿಡಿಸಿಕೊಳ್ಳಲು ಯಾರೂ ಮುಂದೆ ಬರುತ್ತಿರಲಿಲ್ಲ. ಅದು ದಿನನಿತ್ಯದ ನಿಯಮವಾಗಿತ್ತು. ಎಲ್ಲರಿಗೂ ಒಂದು ತರಹದ ಅಭ್ಯಾಸವಾಗಿ ಹೋಗಿತ್ತು. ಆದರೂ ಬಹಳಷ್ಟು ಜನಗಳ ಕಣ್ಣಿನಲ್ಲಿ ನೀರು ತುಂಬಿ ಬರುತ್ತಿತ್ತು. ನದಿಯ ನೀರಿನಿಂದ ಕಣ್ಣನ್ನು ತೊಳೆಯುತ್ತಾ ಅಬ್ದುಲ್ಲ ನುಡಿದ "ಸಂಬಳದಲ್ಲಿ ಛಡಿಯ ಬೆಲೆಯನ್ನು ಬಡ್ಡಿ ಸಹಿತ ಕಳೆದುಕೊಳ್ಳುತ್ತಾನೆ. ಅದರ ಮೇಲೆ ಗಾಯ ಬೀಳುವಷ್ಟು ಹೊಡೆತ ಬೇರೆ."

ಇವೆಲ್ಲಾ ವಿಷಯಗಳನ್ನು ಕಂಡೂ ಇದರ ವಿರುದ್ಧ ಉಸಿರೆತ್ತರು. ಯಾರೂ ವಿದ್ರೋಹ ಮಾಡರು. ಅವನನ್ನು ಬಿಡಿಸಲು ಯಾರೂ ಎರಡು ಮಾತು ಹೇಳುತ್ತಿರಲಿಲ್ಲ. ಈ ಹೊಡೆತದಿಂದಾಗಿ ಯಾರ ಶರೀರವೂ ಸದೃಢವಾಗಲು ಸಾಧ್ಯವಾಗುತ್ತಿರಲಿಲ್ಲ. ನಸೀಮನು ಯೋಚಿಸುತ್ತಾನೆ. ಈ ಜನಗಳೆಲ್ಲಾ ಬಹುಶಃ

ತನ್ನಂತೆಯೇ ಸತ್ತ ತಂದೆತಾಯಿಗಳ ನಿಸ್ಸತ್ವ ಮಕ್ಕಳಿರಬೇಕು. ಆದರೆ ವಿಷಯ ಬೇರೆಯದೇ ಆಗಿತ್ತು. ಎಲ್ಲರೂ ಈ ಏಣಿಯ ಮೆಟ್ಟಲು ಹತ್ತಿ ಕಪ್ತಾನನಾಗಲು ಆಶಿಸುತ್ತಿದ್ದರು. ಎಲ್ಲರಿಗೂ ಕಪ್ತಾನನ ಸರ್ಟಿಫಿಕೇಟ್ ಬೇಕಿತ್ತು. ಒದೆಯನ್ನು ತಿನ್ನದಿದ್ದರೆ ಸರ್ಟಿಫಿಕೇಟ್ ಕೊಡಲು ಕಪ್ತಾನ ಏಕೆ ಲೇಖನಿ ಹಿಡಿಯಬೇಕು.

ಆದ್ದರಿಂದಲೇ ಮಕಬೂಲ್ ಜೊತೆಯಲ್ಲಿ ಖುಷಿಯಾಗಿ ನಾಸಿಮ್ ಮಾತನಾಡುತ್ತಿದ್ದಾಗ ಕೈಯಿಂದ ಜಾರಿ ಬಾಟಲು ಒಡೆದಾಗ, ಅದಕ್ಕಾಗಿ ಕಪ್ತಾನನಿಂದ ಒದೆ ತಿನ್ನುವಾಗ ಆತನಿಗೆ ನಾಚಿಕೆ ಆಗಲಿಲ್ಲ. ಅಪಮಾನವಾಯಿತೆಂಬ ಕ್ರೋಧವೂ ಬರಲಿಲ್ಲ. ಅಂದು ಆತನಿಗೆ ಮಕಬೂಲ್ ಜೊತೆಯಲ್ಲಿ ಇತರ ಕೆಲಸಗಾರರೊಂದಿಗೆ ಜೊತೆಗೂಡಿದ ಅನುಭವವಾಗಿತ್ತು: ಮಕಬೂಲ್ ಅಳುತ್ತಾ ನುಡಿದಿದ್ದ "ನಿಂಗೇನು ಸಂಬಳ ಇಲ್ಲ ಏನೂ ಇಲ್ಲ. ಏಟು ತಿಂದು ಸುಮ್ಮನಾದೆ. ಆದರೆ ನನ್ನ ಪೂರ್ತಿ ಸಂಬಳಾನ ಬಾಟಲಿಗಾಗಿ ಹಿಡಿದುಕೊಳ್ಳುತ್ತಾನೆ. ಆರು ತಿಂಗಳಾದ ನಂತರ ಹೇಳ್ತಾನೆ ಸಂಬಳ ಬೇಕಾದರೆ ಅಡ್ವಾನ್ಸ್ ತಗೋ ಅಂತಾ. ರೂಪಾಯಿಗೆ ಎರಡು ಆಣೆ ಬಡ್ಡಿ ತೆರಬೇಕಾಗುತ್ತೆ. ಹಡಗಿನಲ್ಲಿ ಕೂತ್ಕೊಂಡು ಈ ಕಪ್ತಾನ ಮಹಾರಾಜ ಜಬರದಸ್ತು ನಡಿಸ್ತಾರೆ. ನಮ್ಮನ್ನು ಇಷ್ಟಪಡೋನು ಈ ಹಡಗಿನಲ್ಲಿ ಒಬ್ಬನೂ ಇಲ್ಲ." ಇಷ್ಟು ಹೇಳಿ ದೇವರು ಇವರ ಮೊರೆ ಕೇಳುತ್ತಿದ್ದಾನೊ ಎಂಬಂತೆ ಮಕಬೂಲ್ ಮೇಲೆ ನೋಡತೊಡಗಿದ.

ನಾಸಿಮ್ ಪ್ರಶ್ನಿಸಿದ "ನೀನೇಕೆ ಬೇರೆ ಹಡಗಿಗೆ ಹೋಗಬಾರದು ?"

"ನೀನು ಯಾವ ಲೋಕದಲ್ಲಿ ಇದ್ದಿ? ಒಂದು ಹಡಗಿಗೆ ಬಿಟ್ಟು ಇನ್ನೊಂದಕ್ಕೆ ಹೋದರೆ ಅಷ್ಟು ಸುಲಭವಾಗಿ ಕೆಲಸ ಸಿಕ್ಕಿಬಿಡುತ್ತಾ? ಎಲ್ಲ ಹಡಗಿನೋರು ಒಂದೇ. ಅವರ ಮಧ್ಯೆ ಒಳ್ಳೆಯ ಮೈತ್ರಿ ಇರುತ್ತೆ. ಅದಕ್ಕೆ ಏಟು ತಿಂದೂ ಬಾಯಿ ಮುಚ್ಕೊಂಡು ಇರ್ತೀನಿ. ಒಮ್ಮೆ ಇಲ್ಲಿಂದ ಓಡಿಸಿದ್ರೆ ನಾನು ಹಾಳಾದಂತೆಯೇ, ನೀರು ಬಿಟ್ಟು ನೇಗಿಲು ಹಿಡಕೊಳ್ಳಬೇಕಾಗುತ್ತೆ."

ಸನಿಹದಲ್ಲಿದ್ದ ಈ ಯಾದ್ ಅಲಿ ನುಡಿದ "ಬೇರೆ ಇನ್ಯಾರ ಹಡಗಿಗೆ ಹೋಗ್ತಿ. ಎಲ್ಲಾ ಹಡಗಿನಲ್ಲೂ ಇದೇ ರೀತಿನೀತಿ."

"ಹಾಗಾದ್ರೆ ಯಾರೂ ಓಡಿ ಹೋಗೋಕೆ ಸಾಧ್ಯವಿಲ್ಲ?" ನಾಸಿಮ್ ಪ್ರಶ್ನಿಸಿದ. ಎಲ್ಲರೂ ಗಹಗಹಿಸಿದರು.

ಏಣಿಯಿಂದ ಕಂಬ ಏರುವ ಕೆಲಸಕ್ಕೆ ಹಡಗಿನಲ್ಲಿ ನಿಯುಕ್ತರಾಗಿದ್ದ ಕೂಲಿಗಳಿಗಂತೂ ಈ ಮಾತುಗಳು ಆಧಾರರಹಿತವಾಗಿದ್ದವು.

"ಓಡಿ ಹೋಗೋದು ಅಷ್ಟೇನೂ ಸುಲಭವಾದ ಕೆಲಸ ಅಲ್ಲ ನಾಸಿಮ್" ಸೆಕೆಂಡ್ ಮೇಟ್ ಗಂಭೀರ ಮುಖ ಮಾಡಿ ನುಡಿದ "ನಿನ್ನ ಹೆಸರು ವಿಳಾಸ ಕಪ್ತಾನನ ನೋಟ್ ಬುಕ್‌ನಲ್ಲಿದೆ. ನೀನು ಓಡಿ ಹೋದೆ ಎಂದ್ರೆ ತಕ್ಷಣ ಪೊಲೀಸ್‌ಗೆ ದೂರು ಹೋಗುತ್ತೆ. ಯಾರದೊ ಜೇಬು ಕತ್ತರಿಸಿದ್ದಾನೆ, ಚೀಲ ಕದ್ದಿದ್ದಾನೆ, ಗಡಿಯಾರ ಅಪಹರಿಸಿಕೊಂಡು ಓಡಿಹೋಗಿದ್ದಾನೆ ಅಂತಾ ಕಪ್ತಾನನ ಪರವಾಗಿ ಕಂಪನಿಯವರು ಕೇಸ್ ನಡಿಸ್ತಾರೆ. ಹಡಗಿನಲ್ಲಿದ್ದೋನು ಜೈಲಿನಲ್ಲಿ ಇರಬೇಕಾಗುತ್ತೆ ಅಷ್ಟೆ."

ಹಾಗಾದರೆ ನಾಸಿಮ್‌ನ ಸಂಪೂರ್ಣ ಜೀವನ ಹೀಗೆ ಸಾಗಬೇಕೆ? ದಿನವೂ ನೀರಿನ ಒಂದೇ ಸ್ವರವನ್ನು ಕೇಳಿ ಕೇಳಿ? ಸಂಬಳ ಇಲ್ಲ, ಇರಲು ಮಲಗಲು ಕೊಠಡಿ ಇಲ್ಲ. ದಿನರಾತ್ರಿ ಹೀಗೆ ನೀರಿನ ಜೊತೆ ತಾನೂ ಸಾಗಬೇಕು.

"ಸಾಹೇಬನನ್ನು ಸಂತೋಷವಾಗಿಡಲು ಪ್ರಯತ್ನಿಸು. ಇದು ಬಿಟ್ಟು ನಿಂಗೆ ಬೇರೆ ದಾರಿ ಇಲ್ಲ. ನೋಡು ಒಂದು ಬಾರಿ ಏಣಿ ಹಿಡಿಯುವಂತಾಗು."

ಕಪ್ತಾನನನ್ನು ಹೇಗೆ ಸಂತೋಷಪಡಿಸುವುದು ನಾಸಿಮ್‌ಗೆ ಅರ್ಥವಾಗಿರಲಿಲ್ಲ. ತನ್ನ ಪಾಲಿನ ಕೆಲಸವನ್ನು ತಾನು ಮಾಡುತ್ತಿದ್ದ. ಇದಲ್ಲದೆ ಕಪ್ತಾನನ ಕಾಲು, ಕೈ ಒತ್ತುತ್ತಿದ್ದ. ಸ್ನಾನಕ್ಕೆ ಹೋಗುವ ಮುಂಚೆ ಆತನ ಮೈಗೆ ಎಣ್ಣೆ ತಿಕ್ಕುತ್ತಿದ್ದ. ಕೂದಲನ್ನು ಬಾಚುತ್ತಿದ್ದ, ಅಡಿಗೆಯವನಿಗೂ ಈತ ಆಗಾಗ್ಗೆ ಸಹಾಯ ಮಾಡುತ್ತಿದ್ದ. ಆದ್ದರಿಂದಲೇ ಈತನ ಶರೀರದ ಮೂಳೆ ಮಾಂಸಗಳು ಸರಿ ಇದ್ದವು. ಇಷ್ಟಾದರೂ ಆತನ ಮನಸ್ಸಿಗೆ ಸಮಾಧಾನವಿರಲಿಲ್ಲ, ಸಂಬಳವೇ ಇಲ್ಲ. ಆದರೆ ಈತನ ಸಂಬಳದಲ್ಲಿ ಕೊಂಚ ಹಣವನ್ನು ಹಿಡಿಯಲಾರೆನಲ್ಲಾ ಎಂದು ಕಪ್ತಾನನಿಗೆ ಕೊರಗು. ಆದ್ದರಿಂದಲೇ ನಾಸಿಮನಿಗೆ ಹಲವು ದಿನ ಉಪವಾಸ ಮಾಡಬೇಕಾಗುತ್ತಿತ್ತು. ಆ ದಿನಗಳಲ್ಲಿ ಕಪ್ತಾನ ಇವನ ಪಾಲಿನ ಉಪ್ಪು ಮೆಣಸು, ಈರುಳ್ಳಿ ಮುಂತಾದವುಗಳನ್ನು ಉಳಿಸುತ್ತಿದ್ದ. ಕಪ್ತಾನ ಹಡಗಿನ ಇತರ ಕೆಲಸಗಾರರಿಗೆ ಸಂಬಳದಲ್ಲಿ ಅವರ ಪಾಲಿನ ಅಕ್ಕಿ, ಬೇಳೆ, ಉಪ್ಪು, ಈರುಳ್ಳಿ, ಮೆಣಸು ಮುಂತಾದವುಗಳ ಖರ್ಚನ್ನು ಹಿಡಿದುಕೊಳ್ಳುತ್ತಿದ್ದ. ಇದೆಲ್ಲವೂ ಆತನ ಇಚ್ಛಾನುಸಾರವೇ ನಡೆಯುತ್ತಿದ್ದವು.

"ನೀನು ಒಂದು ಕೆಲಸ ಮಾಡು. ಕಪ್ತಾನನ ಬಳಿ ಕಳ್ಳತನ ಮಾಡು." ಯಾರೋ ಪುಸಲಾಯಿಸಿದರು.

ಹಡಗಿನ ಮಧ್ಯದ ಕಂಬಕ್ಕೆ ಕಟ್ಟಿದ ಒಂದು ದೊಡ್ಡ ಚೀಲದಲ್ಲಿ ಅಕ್ಕಿ ಉಪ್ಪು ಮೆಣಸು ಮುಂತಾದವುಗಳು ಇದ್ದವು. ಅದರ ಜೊತೆಯಲ್ಲಿ ಕಾವಲುಗಾರರೂ ಇರುತ್ತಿದ್ದರು.

ಈ ಸಲಹೆ ನಾಸಿಮನಿಗೆ ಹಿಡಿಸಲಿಲ್ಲ. ಈ ಕೆಲಸ ಮಾಡುವ ಧೈರ್ಯವೂ ಇರಲಿಲ್ಲ. ಒಂದು ದಿನ ಬಿಟ್ಟು ಪ್ರತಿ ಎರಡನೆ ದಿನ ಹಡಗು ಒಂದೇ ದಾರಿಯಲ್ಲಿ ಸಾಗುತ್ತಿತ್ತು. ಸಾಯಂಕಾಲ ತಲುಪಬೇಕಾದ ಸ್ಥಳಕ್ಕೆ ಅರ್ಧರಾತ್ರಿಗೆ ತಲುಪುತ್ತಿತ್ತು. ಎಷ್ಟೋ ಬಾರಿ ಮಾರನೆದಿನ ಬೆಳಿಗ್ಗೆ. ಅಂತೂ ಹೀಗೆ ಸಾಗಿತ್ತು ಅದರ ವೇಳಾಪಟ್ಟಿ. ಇಷ್ಟನ್ನು ಬಿಟ್ಟರೆ ಒಂದೇ ಸ್ವರದಲ್ಲಿ ಹಾಡುವ ನೀರು, ಪ್ರಯಾಣಿಕರ ಗದ್ದಲ, ಲಂಗರು ಮತ್ತು ಹಡಗಿನ ಮಧ್ಯದ ಕಂಬ ಎತ್ತುವಾಗಿನ ಗಡಗಡ ಶಬ್ದ, ಏಣಿ ಹಾಗೂ ಹಗ್ಗ ಎಳೆಯುವಾಗಿನ ಕೂಗಾಟ. ನಸೀಮನಿಗೆ ಕೊಂಚವೂ ಇಷ್ಟವಾಗುತ್ತಿರಲಿಲ್ಲ. ಹಲವು ದಿನಗಳ ನಂತರ ಹೀಗೆ ಸುತ್ತುತ್ತಿದ್ದ ಈ ಹಡಗು ಒಂದು ದಿನ 'ಕನಕದಿಯ'ಕ್ಕೆ ಹಿಂತಿರುಗಿತು. ನದಿಯಲ್ಲಿ ನೀರು ಕಡಿಮೆ ಇದ್ದು, ಹರಿಯುವಿಕೆ ಎಷ್ಟು ನಿಧಾನವಾಗಿತ್ತೆಂದರೆ ನಸೀಮನಿಗೆ ಇದನ್ನು ಯೋಚಿಸುವುದು ದುಸ್ಸಾಧ್ಯವಾಗಿತ್ತು. ಈ ನದಿ ಹರಿದು ಯಾವ ಸಮುದ್ರ ಸೇರುತ್ತದೋ? ನಮ್ಮ ದೇಶದಲ್ಲೋ, ಬೇರೆ ದೇಶದಲ್ಲೋ? ಇದು ಆತನಿಗೆ ಈ ಹಿಂದೆ ಅರ್ಥವೇ ಆಗಿರಲಿಲ್ಲ.

ನಾಸಿಮ್‌ನು ಕತ್ತಲೆಯಲ್ಲಿ ನದಿಯ ಕಡೆಗೆ ಮುಖ ಮಾಡಿ ಏಕಾಂತದಲ್ಲಿ ಕುಳಿತಿದ್ದನು. ಕಪ್ಪು ನೀರಿನಲ್ಲಿ ನಕ್ಷತ್ರಗಳು ಮಿನುಗುತ್ತಿದ್ದವು. ಅಂದು ಸಮರಾತ್ರಿಯಲ್ಲಿ ಹಡಗು ಕನಕದಿಯಾ ತಲುಪಿತ್ತು. ನಾಸಿಮ್‌ನಿಗೆ ತನ್ನ ಮನೆಯ ಜ್ಞಾಪಕ ಬಂತು. ಅದನ್ನು ಯೋಚಿಸತೊಡಗಿದ. ಮನೆಯ ಆ ಪ್ರೀತಿ, ವಿಶ್ವಾಸ ಎಲ್ಲಿ? ಆದರೆ ಆತನಿಗೆ ಸ್ವಂತ ಮನೆ ಇರಲಿಲ್ಲ. ವಾಸವಿದ್ದ ಮನೆ ಈಗ ಭೂತಗಳ ಬಿಡಾರವಾಗಿದೆ. ಅವನಿಗೆ ಒಂದೊಂದಾಗಿ ನೆನಪುಗಳು ಮರುಕಳಿಸತೊಡಗಿದ್ದವು. ತಾಯಿಯ ನೆನಪು ಬರುತ್ತಿತ್ತು. ಆದರೆ ಇಂದು ತಾಯಿ ಇಲ್ಲ, ಎಂದೋ ಆಕೆ ಸತ್ತುಹೋಗಿದ್ದಳು, ಸತ್ತ ತಾಯಿಯ ಮುಖದಂತೆ ಕಪ್ಪು ನೀರಿನಲ್ಲಿ ಬೆಳದಿಂಗಳು ಕಾಣುತ್ತಿತ್ತು.

ಅವನು ದೊಡ್ಡ ಕಳ್ಳತನ ಮಾಡಲು ಅಸಮರ್ಥನಾಗಿದ್ದರೂ ಸಣ್ಣಪುಟ್ಟ ಕಳ್ಳತನ ಮಾಡಬಹುದಾಗಿತ್ತು. ನಾಸಿಮ್ ಎದುರಿಗೆ ನೋಡಿದ. ಹಳ್ಳಿಯ ಹುಡುಗನೊಬ್ಬ ಕೈಯಲ್ಲಿ ಮಚ್ಚನ್ನು ಹಿಡಿದು ಎಳೆನೀರನ್ನು ಮಾರುತ್ತಿದ್ದ. ನಾಸಿಮ್ 10 ಕಾಸಿನಂತೆ 2 ಎಳೆನೀರನ್ನು ಕಪ್ತಾನನಿಗಾಗಿ ಕೊಂಡ. ಹಡಗನ್ನು ತಲುಪಿದ ಮೇಲೆ ಏಣಿ ಸರಿಸಲ್ಪಟ್ಟಿತು. ನಾಸಿಮ್‌ನು ಕಪ್ತಾನನಿಂದ ಒಂದಾಣೆಯನ್ನು ಪಡೆದು ಹುಡುಗನತ್ತ ಎಸೆದ. ಮತ್ತೆ ಆರು ಕಾಸನ್ನು ಎಸೆದ.

ನಾಸಿಮನು ನಾಲಿಗೆ ಹೊರಚಾಚಿ ಆತನನ್ನು ಗೇಲಿ ಮಾಡಿದ. ಎಳನೀರು ಮಾರುವ ಹುಡುಗ ಕೆಸರನ್ನೆತ್ತಿ ಹುಡುಗನತ್ತ ಎಸೆದ. ಆದರೆ ಅಷ್ಟು ಹೊತ್ತಿಗೆ ಹಡಗು ದಡ ಬಿಟ್ಟಿತ್ತು. ಕೆಸರು ಹನಿ ನಾಸಿಮ್‌ನ ಮೇಲೆ ಬೀಳಲಿಲ್ಲ. ಕಪ್ತಾನ ಹಾಗೂ ನಾಸಿಮ್ ಇಬ್ಬರೂ ಗಹಗಹಿಸಿ ಹತ್ತಿದರು.

ಇದೇ ರೀತಿ ಒಮ್ಮೆ ಮೀನು ಮಾರುವವ ಬಂದ. ನಾಸಿಮ್ ಬುದ್ಧಿವಂತಿಕೆಯಿಂದ ಕೆಲ ಮೀನುಗಳನ್ನು ಎತ್ತಿಟ್ಟುಕೊಂಡ. ಹಾಲು ಮಾರುವವನು ಮಡಿಕೆ ತುಂಬಾ ಹಾಲು ತಂದಿದ್ದ. "ಬಾಸ್‌ನ ಗ್ಲಾಸ್‌ನಲ್ಲಿ ಅಳೆದುಕೊಂಡು ಹಾಲು ತೆಗೆದುಕೊಳ್ಳುತ್ತೇನೆ. ಹಡಗಿಗೆ ಹೋಗಿ ಹಣ ಕೊಡುತ್ತೇನೆ" ಎಂದು ಹಾಲಿನವನಿಗೆ ಹೇಳಿದ. ಹೀಗೆ ಹಾಲಿನಲ್ಲೂ ಕೊಂಚ ತಾನು ಉಳಿಸಿಕೊಂಡ. ಎಲ್ಲರಿಗೂ ಆತ ಒಂದೇ ಮಾತು ಹೇಳುತ್ತಿದ್ದ. "ಏನೂ ಯೋಚಿಸಬೇಡಿ ನಿಮ್ಮ ಹಣ ಎಲ್ಲೂ ಹೋಗಲ್ಲ. ನಾನು ಕಪ್ತಾನನ ನೌಕರ." ಹೀಗೆ ನಾಸಿಮ್ ಕೆಲಸ ಮಾಡಲು ಪ್ರಾರಂಭಿಸಿದ. ಇಷ್ಟು ದಿನಗಳ ನಂತರ ನಾಸಿಮ್‌ನಿಗೆ ಒಂದು ಬನೀನು ಮತ್ತು ಟವಲು ದೊರೆತಿತ್ತು. ಲುಂಗಿ ಯಾವಾಗ ದೊರೆಯುವುದೋ? ಒಂದು ದಿನ ನಾಸಿಮ್ ಕಪ್ತಾನನಲ್ಲಿ ನಾಲ್ಕು ಕಾಸು ಸಾಲ ಕೇಳಿದ. ಇಷ್ಟು ನಿರ್ಭಯವಾಧ ಮಾತನ್ನು ಕಪ್ತಾನ ಕೇಳಿದುದು ಇದೇ ಮೊದಲನೆಯದಾಗಿತ್ತು. ಹುಬ್ಬು ಗಂಟು ಹಾಕಿಕೊಂಡು ಆತ ಪ್ರಶ್ನಿಸಿದ "ಏನು ಕೇಳಿದೆ? ಹಣಾನ?"

ಏನು ಅಂತಹ ಕೇಳಬಾರದ ಮಾತನ್ನು ನಾಸಿಮ್ ಕೇಳಿದ್ದುದು? ಹೆದರಿದ ದೃಷ್ಟಿಯನ್ನು ಕಪ್ತಾನನತ್ತ ಹರಿಸಿದ.

"ಏನು ಮಾಡುತ್ತಿ ಹಣ ತೆಗೆದುಕೊಂಡು?"

"ಒಂದು ಲೋಟ ಟೀ ಕುಡಿಯುತ್ತೇನೆ."

ನಾಸಿಮ್ ಇಷ್ಟು ನುಡಿದದ್ದೇ ತಡ ಆತನ ಕೆನ್ನೆಗೆ ಒಂದು ಜೋರಾದ ಏಟು ಬಿತ್ತು. ಕಿಟಾರನೆ ಕಿರುಚಿ ದೂರದಲ್ಲಿ ಹೋಗಿಬಿದ್ದ. ಕಪ್ತಾನ ಗರ್ಜಿಸಿದ.

"ಏ ಪೆದ್ದೇ ನನ್ನನ್ನೇ ಬೀಡಿಯನ್ನು ಕೇಳುತ್ತೀಯಾ ?

ಇಂದು ಬೀಡಿಯನ್ನು ಕೇಳುತ್ತೇನೆ ಅನ್ನುತ್ತಿ. ನಾಳೆ ಹೆಂಡವನ್ನೇ ಕೇಳುತ್ತಿ. ನೀನೇನಾದರೂ ಹೆಚ್ಚಿಗೆ ತಲೆಹರಟೆ ಮಾಡಿದರೆ ನಿನ್ನನ್ನು ನದಿಯ ಆಳವಾದ ನೀರಿನಲ್ಲಿ ಮುಳುಗಿಸಿಬಿಡುತ್ತೇನೆ."

ಕಣ್ಣಲ್ಲಿ ನೀರು ತುಂಬಿದ ನಾಸಿಮ್‌ನಿಗೆ ಪುನಃ ತಾಯಿಯ ನೆನಪು ಬಂತು. ಸತ್ತ ತಾಯಿಯ ಮುಖ ಹೇಗಿದ್ದಿರಬಹುದು ? ಕತ್ತಲಲ್ಲಿ ನೀರಿನತ್ತ ನೋಡುತ್ತಿದ್ದ ನಾಸಿಮ್ ಯೋಚಿಸತೊಡಗಿದ್ದ. ಸತ್ತ ತಾಯಿಯ ಮುಖವನ್ನು ಕಲ್ಪಿಸಿ ಆ ಬಗ್ಗೆ ಯೋಚಿಸುತ್ತಿದ್ದಂತೆ ಧೈರ್ಯ ಮನಸ್ಸಿನಲ್ಲಿ ತುಂಬತೊಡಗಿತ್ತು. ಅಷ್ಟು ಬಾರಿ ಕಪ್ತಾನನ ಕೈ ಹೊಡೆತವನ್ನು ಸಹಿಸಿಕೊಳ್ಳಲು ಶಕ್ತನಾಗಿದ್ದ. "ಅಮ್ಮಾ" ಎಂದು ಕೂಗಲು ಅಸಮರ್ಥನಾಗಿದ್ದ. ಅವನು ಸುಮ್ಮನೆ ಹೊಡೆತವನ್ನು ಸಹಿಸುವುದಲ್ಲದೆ ಮತ್ತೇನನ್ನು ಮಾಡಲು ಶಕ್ಯವಿತ್ತು ?

ಇಷ್ಟು ಅತ್ಯಾಚಾರ ನಡೆಯುತ್ತಿದ್ದರೂ ಯಾರೂ ಅಲ್ಲಿಂದ ಮುಕ್ತಿಯನ್ನು ಪಡೆಯಲು ಸಾಧ್ಯವಿರಲಿಲ್ಲ. ದೇವರೊಬ್ಬನನ್ನು ಬಿಟ್ಟು ಯಾರೂ ಮತ್ಯಾರನ್ನೂ ದೂಷಿಸುತ್ತಿರಲಿಲ್ಲ. ಹಡಗಿನ ಆ ದೋಣಿಯಿಂದ ಕೂಡ ಮುಕ್ತಿ ಇರಲಿಲ್ಲ. ಯಾವಾಗ ಏಣಿ ಸಿಗುತ್ತವೆ, ಯಾವಾಗ ನೌಕಾಪಟ, ಹಗ್ಗ, ಲಂಗರ್, ವಿದ್ಯುತ್ ಅಥವಾ ಮೇಸ್ತ್ರಿಯ ಇಲಾಖೆ ದೊರೆಯುತ್ತದೆ ಎಂಬ ಆಶೆಯಿಂದಲೇ ದಿನವನ್ನು ಎಣಿಸುತ್ತಿದ್ದರು. ಯಾರು ಯಾವ ರೀತಿ ಕಪ್ತಾನನ ಮನಸ್ಸನ್ನು ತಮ್ಮತ್ತ ತಿರುಗಿಸಿಕೊಳ್ಳಬಹುದು ? ಬುದ್ಧಿ ತೆತ್ತೆ ? ಲಂಚ ನೀಡಿಯೆ ? ಕಪ್ತಾನನಿಗಾಗಿ ಕಳ್ಳತನ ಮಾಡಿ ಅಥವಾ ಒದೆ ತಿಂದೇ ? ಎಲ್ಲರೂ ಈ ಬಗ್ಗೆಯೇ ಯೋಚಿಸುತ್ತಿದ್ದರು. ಏನಾದರೂ ಹಡಗಿನಲ್ಲಿ ಕಪ್ತಾನನದೇ ಸರ್ಕಾರ ನಡೆಯುತ್ತಿತ್ತು.

ಅಂದು ರಾತ್ರಿ ನಾಸಿಮ್‌ನು ಯಾತ್ರಿಕನೊಬ್ಬನ ಒಂದು ಜೊತೆ ಚಪ್ಪಲಿಯನ್ನು ಕದ್ದುಬಿಟ್ಟನು. ಕಪ್ತಾನನು ಆ ಚಪ್ಪಲಿಗಳನ್ನು ನೀರಿಗೆ ಎಸೆದುಬಿಟ್ಟು ನುಡಿದನು "ನಿನ್ನ ಕೆಟ್ಟಬುದ್ಧಿಗೆ ನಾನು ಬಲಿಯಾಗಲೆ ? ನಾನು ಆ ಚಪ್ಪಲಿಗಳನ್ನು ಮೆಟ್ಟಿಕೊಂಡು ಗರ್ವದಿಂದ ನಡೆಯುತ್ತೇನೆ ಪೊಲೀಸರು ಹಿಡಿಯುತ್ತಾರೆ."

ಇದಾದ ಎರಡನೆ ದಿವಸ ನಾಸಿಮನು ಟಿನ್ನಿನ ಒಂದು ಪೆಟ್ಟಿಗೆಯನ್ನು ಕದ್ದನು. ಅದನ್ನು ಕೂಡ ಕಪ್ತಾನನು ನೀರಿಗೆ ಎಸೆದನು. ಆ ಪೆಟ್ಟಿಗೆಯಲ್ಲಿ ಮೊಕದ್ದಮೆಗೆ ಬೇಕಾದ ಕಾಗದಪತ್ರಗಳು, ಪ್ರಶ್ನೆಪತ್ರಿಕೆ, ಸಾಕ್ಷಿಪತ್ರಗಳು ಇನ್ನು ಹಲವು ಕಾಗದದ ಪ್ರತಿಗಳು ಇದ್ದವು.

ಹೀಗೆ ಏನೇನು ಮಾಡಿದರೂ ಕಪ್ತಾನನ ಮನಸ್ಸನ್ನು ಗೆಲ್ಲಲಾಗಲಿಲ್ಲ. ಆದರೂ ಕಪ್ತಾನನ ದೃಷ್ಟಿ ನಾಸಿಮ್‌ನ ಮೇಲೆ ಬಿದ್ದು ಬಹುಶಃ ಅದು ಪಿಸುಗುಟ್ಟುತ್ತಿತ್ತು. "ನೀನು ಮಾಡಬಲ್ಲೆ. ನೀನು ಮನಸ್ಸನ್ನು ಗೆಲ್ಲಬಲ್ಲೆ." ಆತನ ನಿರುಪಯುಕ್ತ ಕೆಲಸ

ಕಂಡು ಕಪ್ತಾನನಿಗೆ ಸಿಟ್ಟು ಬರುತ್ತಿದ್ದರೂ ಈ ದಿನಗಳಲ್ಲಿ ಅವನನ್ನು ಹೊಡೆಯುವುದನ್ನು ನಿಲ್ಲಿಸಿದ್ದಾನೆ. ಇದರಿಂದಲೇ ನಾಸಿಮನಿಗೆ ಆಸೆ ಚಿಗುರಿದವು.

ಹಡಗಿನಲ್ಲಿ ಬೆಳಕು ತೀಕ್ಷ್ಣವಾಗಿರಲಿಲ್ಲ. ಮಳೆಯ ನೀರನ್ನು ತಡೆಯಲು ಟಾರ್ಪಾಲಿನ್ ಸಹ ಇರಲಿಲ್ಲ. ಆದರೂ ಎಲ್ಲರ ಕಣ್ಣಿನಲ್ಲೂ ನಿದ್ದೆ ತುಂಬಿತ್ತು. ಅಲ್ಲಿ ಯಾವ ಯಾತ್ರಿಯೂ ಇಸ್ಪೀಟು ಆಡಲು ಶಕ್ತನಿರಲಿಲ್ಲ. ನಕ್ಕು ನಲಿದು, ಹರಟೆ ಹೊಡೆಯಲು ಕೂಡ ಆಸಕ್ತರಿರಲಿಲ್ಲ. ಹಡಗಿನಲ್ಲಿ ರೈತರು ಮತ್ತು ಕಾರ್ಮಿಕರ ಪ್ರತ್ಯೇಕ ವಿಭಾಗವಿತ್ತು. ಚುರುಕಾಗಿ ಕೆಲಸ ಮಾಡುವ ಜನ ರಾತ್ರಿ ಮಾಂಸಪಿಂಡದಂತೆ ನಿಶ್ಚೇಷ್ಟಿತರಾಗುತ್ತಿದ್ದರು.

ನಿದ್ದೆ ಇಲ್ಲದೆ ಅಸಮಾಧಾನಗೊಂಡಿದ್ದ ಆ ಜನರಲ್ಲಿ ಒಬ್ಬನ ಸೊಂಟದಲ್ಲಿದ್ದ ಹಣದ ಚೀಲ ಹೊರಗೆ ಬಂದಿತ್ತು. ನಾಸಿಮನು ತನ್ನ ಕೈ ಚಳಕ ತೋರಿಸಿ ಆ ಹಣದ ಚೀಲವನ್ನು ಎಗರಿಸಿಬಿಟ್ಟನು. ಅದನ್ನು ಬಿಚ್ಚಿ ಅದರಲ್ಲಿ ಇರುವ ಹಣವನ್ನು ಎಣಿಸುವ ಆಸೆಯಾಯಿತು. ಇನ್ನೊಮ್ಮೆ ಆತನಿಗೆ ಮುಂದಿನ ನಿಲ್ದಾಣದಲ್ಲಿ ಇಳಿದು ಹೋಗಿಬಿಡುವ ಆಸೆಯಾಯಿತು. ಆದರೆ ಯಾವುದೋ ಮಂತ್ರಶಕ್ತಿಯಿಂದ ಎಳೆಯಲ್ಪಟ್ಟವನಂತೆ ಹುಲಿಯ ಬಾಯಿಗೆ ಬೀಳುವ ಕುರಿಯಂತೆ, ಅವನು ಪುನಃ ಕಪ್ತಾನನ ಹತ್ತಿರಕ್ಕೆ ಸೆಳೆಯಲ್ಪಟ್ಟವನಂತೆ ಬಂದು ಸೇರಿದ. ಹೊಡೆಯುವುದನ್ನು ಮಾತ್ರ ಕಲಿತಿರುವ, ನಗುತ್ತಾ ಎರಡು ಮಾತನ್ನೂ ಆಡಲಾರದ, ನ್ಯಾಯವಾಗಿ ಕೊಡಬೇಕಾದ ಕೂಲಿಯನ್ನು ಕೊಡದ ವ್ಯಕ್ತಿಯನ್ನು ನಾಸಿಮ್ ಸಂತೋಷಪಡಿಸಲು ಉತ್ಸುಕನಾಗಿದ್ದಾನೆ. ಮತ್ತೇನು ? ಯಾರು ಯಾವಾಗಲೂ ಇನ್ನೊಬ್ಬರ ಬಗ್ಗೆ ದೂರು ಕೇಳುತ್ತಾ ಇರುತ್ತಾನೋ, ಯಾರು ಒಬ್ಬರಿಂದ ಇನ್ನೊಬ್ಬರನ್ನು ಬೇರ್ಪಡಿಸಿ ಇಡುತ್ತಿದ್ದನೋ ಅಂಥವನ ಮನಸ್ಸನ್ನು ಜಯಿಸಲು ಪ್ರಯತ್ನ ನಡೆದಿದೆ. ಯಾರು ಯಾರ ರೆಕ್ಕೆ ಮುರಿಯುತ್ತಾರೋ ಅವರ ಕೈಯೇ ಮುಂದಾಗುತ್ತದೆ.

ಮಕಬೂಲ್ ನುಡಿದ "ಕೇವಲ ಏಳು ರೂಪಾಯಿ ಒಂಬತ್ತೂವರೆ ಆಣೆ. ಇದರಿಂದ ಏನಾಗುತ್ತದೆ ? ಎರಡು ಇಪ್ಪತ್ತು ಮತ್ತು ಏಳು ಆಣೆ ಸಿಗದೆ ಹೋದರೆ ಆಟವೇ ಮುಗಿಯುವುದಿಲ್ಲ. ಇದನ್ನೇ ನನ್ನ ಸಾಹೇಬರಿಗೆ ಹೇಳಬೇಕಾಗಿದೆ."

"ಹರಕು ಬಟ್ಟೆ ಹಾಳು ಮೂಳಿಗಿಂತ ನಗದು ಹಣ ಎಷ್ಟೋ ಮೇಲು. ಒಡವೆ, ಚಿನ್ನ, ಬೆಳ್ಳಿ ಸಿಕ್ಕಿದರೆ ಚೆನ್ನಾಗಿರುತ್ತಿತ್ತು. ಅದಕ್ಕಾದರೆ ಬೆಲೆಯುಂಟು. ಕಾಗದದ ರೂಪಾಯಿಗಳು ಅವುಗಳ ಮುಂದೆ ಕೆಲಸಕ್ಕೆ ಬಾರದ್ದು."

ಇಷ್ಟು ದಿನಗಳ ನಂತರ ನಾಸಿಮನಿಗೆ ಒಂದು ಲುಂಗಿ ದೊರೆತಿತ್ತು. ಜೊತೆಯಲ್ಲಿ ಒಂದು ನೆಟ್ ಬನೀನ್. ರೈತರ ಹೆಂಗಸರ ಬಳಿ ಒಡವೆ ಎಲ್ಲಿಂದ ಬರಬೇಕು. ಬಹಳವೆಂದರೆ ಮೂಗಿನಲ್ಲಿ ನತ್ತು, ಬೆರಳಲ್ಲಿ ಒಂದು ಉಂಗುರ, ಕಾಲಿನಲ್ಲಿ ಕಾಲಂದಿಗೆ, ಕೈಗಳಲ್ಲಿ ಗಾಜಿನ ಬಳೆ. ಚಿನ್ನ ಎಲ್ಲಿಂದ ಬರಬೇಕು ? ಆದರೆ ಇಲ್ಲಿ ಹಾಗಿಲ್ಲ. ಅವೆಲ್ಲಾ ಇವೆ. ನವ ವಧು ಅತ್ತೆಯ ಮನೆಗೆ ಹೋಗುತ್ತಿದ್ದಾಳೆ. ಕತ್ತಿನಲ್ಲಿ ಚಿನ್ನದ ಸರ, ಕೈಗಳಲ್ಲಿ ಬಳೆ, ಕಾಲುಗಳಲ್ಲಿ ಬೆಳ್ಳಿಯ ಚೈನು, ಬೆರಳುಗಳಲ್ಲಿ ಕಾಲುಂಗುರ, ಕುಂಕುಮ ಬಣ್ಣದ ಸೀರೆ ಉಟ್ಟು ಮುಖದ ಮೇಲೆ ಸೆರಗು ಹೊದ್ದು

ಮೂಲೆಯಲ್ಲಿ ಮಲಗಿದ್ದಳು. ಬಾರಾತ್ ಬಂದಿದ್ದ. ಜನ ಅಲ್ಲಿ ಇಲ್ಲಿ ಚದುರಿದ್ದರು. ಯಾರು ಎಲ್ಲಿ ಹೋಗಿದ್ದರು ಎಂದು ಗುರುತಿಸುವುದು ಕಷ್ಟವಾಗಿತ್ತು. ಹಡಗಿನಲ್ಲಿ ಇಂದು ಭಾರಿ ಜನಸಂದಣಿ ಇತ್ತು. ಆದರೆ ನಾಸಿಮ್ ಇಂತಹದೇ ಭಾರಿ ಜನಸಂದಣಿಯನ್ನು ಕಾಯುತ್ತಿದ್ದ.

ಅಂತೂ ಕೊನೆಗೆ ನಾಸಿಮ್ ಮದುವೆ ಹೆಣ್ಣಿನ ಕತ್ತಿಗೆ ಕೈ ಹಾಕುವಲ್ಲಿ ಸಫಲನಾದ. ಆ ಸ್ಪರ್ಶ ಬಹು ಮೃದುವಾಗಿತ್ತು. ನಾಸಿಮ್‌ನ ಬೆರಳುಗಳು ಕಂಪಿಸುತ್ತಿದ್ದವು. ಅವನು ಸರವನ್ನು ಬಲವಾಗಿ ಎಳೆದ.

"ಚೋರ್... ಚೋರ್...."

ಗುಂಪಿನಲ್ಲಿ ತಪ್ಪಿಸಿಕೊಂಡು ಓಡಿಹೋಗಲು ನಾಸಿಮ್ ಪ್ರಯತ್ನಿಸಿದ. ಆದರೆ ಸಿಕ್ಕಿಹಾಕಿಕೊಂಡುಬಿಟ್ಟ. ಎಲ್ಲರೂ ಸೇರಿ ಅವನನ್ನು ಥಳಿಸಿದರು. ಬಹಳ ಏಟು ಬಿತ್ತು. ಏನಾಯಿತೆಂದು ಬಂದು ಕೇಳುವವರೆಲ್ಲಾ ಹೊಡೆಯಲಾರಂಭಿಸಿದರು. ಕಳ್ಳನಿಗೆ ಮಾಲನ್ನು ಸಾಗಿಸಲು ಸಾಧ್ಯವಾಗಿರಲಿಲ್ಲ. ಕಳ್ಳಮಾಲನ್ನು ಹಾಸಿಗೆಯ ಬದಿಯಲ್ಲೇ ಎಸೆದು ಓಡಿದ. ಆದರೆ ತಾನೇ ಏನು? ಹೆಂಗಸಿನ ಮೈ ಮೇಲಂತೂ ಕೈ ಇರಿಸಿದ್ದನಲ್ಲಾ. ಹಾರವನ್ನು ಕೊರಳಿಂದಂತೂ ಕಳಚಿದ. "ಹೊಡೆಯಿರಿ, ಹೊಡೆಯಿರಿ, ಹಣ್ಣಾಗಿ ನೀರ್ಗಾಯಿ ಮಾಡಿ."

"ಬಾಬೂಜಿ" ನಾಸಿಮ್ ಕಿರುಚಿದ.

ನಿಲುವಂಗಿ ತೊಟ್ಟು, ತಲೆಯ ಮೇಲೆ ಟೋಪಿ ಧರಿಸಿ, ಚಪ್ಪಲ್‌ನಿಂದ ಪಟ್ ಪಟ್ ಶಬ್ದ ಮಾಡುತ್ತಾ ಕಪ್ತಾನ ಅಲ್ಲಿಗೆ ಆಗಮಿಸಿದ. ಪ್ರಶ್ನಿಸಿದ "ಏನು ಸಮಾಚಾರ? ಏಕೆ ಹೊಡೆಯುತ್ತಿದ್ದೀರಿ ನನ್ನ ಹುಡುಗನನ್ನು"

"ನನ್ನ ಹುಡುಗ" ಎಲ್ಲರೂ ಚಕಿತಗೊಂಡರು! "ಆತ ಕಪ್ತಾನ್ ಸಾಹೇಬರ ಮಗನೇ!" ಯಾರೋ ನುಡಿದರು "ನಮಗೆ ಗೊತ್ತಿರಲಿಲ್ಲ. ನಾವು ಅವನು ತಮ್ಮ ನೌಕರ ಅಂತ ತಿಳಿದುಕೊಂಡಿದ್ದೆವು."

"ನೌಕರ ಸುಳ್ಳು. ಅವನು ನನ್ನ ಹೆಂಡತಿಯ ಮನೆಯ ಹುಡುಗ. ನನ್ನ ತಾಯಿಯ ಕಳೆದು ಹೋಗಿದ್ದ ಹುಡುಗ, ಅವನನ್ನು ಹೊಡೆದದ್ದು ಯಾರು?"

"ಆತನು ನವವಧುವಿನ ಒಡವೆ ಕದ್ದಿದ್ದಾನೆ. ಕತ್ತಿನಿಂದ ಹಾರ ತೆಗೆದಿದ್ದಾನೆ."

"ಸುಳ್ಳು, ಇದು ಅಸಾಧ್ಯ ನಡೆಯಿರಿ, ನಾನೇ ಸ್ವತಃ ಬಂದು ಆ ಹುಡುಗಿಯನ್ನು ಪ್ರಶ್ನಿಸ್ತೀನಿ." ಕಪ್ತಾನ ಆ ಮದುವೆ ಹುಡುಗಿಯ ಬಳಿ ಹೋಗಿ ನಿಂತು ಪ್ರಶ್ನಿಸಿದ "ನಿನ್ನ ಕತ್ತಿನಿಂದ ಯಾರಾದರೂ ಸರ ಕಳಚಿದ್ರೆ?"

ಸೆರಗಿನಲ್ಲಿ ಮುಖವನ್ನು ಹುದುಗಿಸಿ ಮೆಲುದನಿಯಲ್ಲಿ ಆಕೆ ನುಡಿದಳು "ಇಲ್ಲ ನಿದ್ದೆಯಲ್ಲಿ ಸರ ಕಳಚಿ ಹಾಸಿಗೆಯ ಮೇಲೆ ಬಿದ್ದಿತ್ತು."

ಲತಾಬಾರಿ ನಿಲ್ದಾಣ ಎದುರಿಗೇ ಕಾಣುತ್ತಿತ್ತು. ಮದುವೆಯ ಗುಂಪಿನವರು ಅಲ್ಲೇ ಇಳಿಯಬೇಕಿತ್ತು. ಹಡಗಿನ ವೇಗ ಕಡಿಮೆ ಆಗಹತ್ತಿತ್ತು. ಲಂಗರ್ ದಢದಢ ಶಬ್ದ ಮಾಡುತ್ತಾ ಕೆಳಗಿಳಿಯಿತು. ಮರಕ್ಕೆ ಹಡಗಿನ ಹಗ್ಗವನ್ನು ಎಳೆದು ಬಂಧಿಸಿದ್ದಾಯಿತು.

"ಮೆಟ್ಟಿಲು ಇಳಿಸಿ ಮೆಟ್ಟಲು ಇಳಿಸಿ." ಕಪ್ತಾನ ಹಡಗಿನ ಮೇಲಿನಿಂದಲೇ ಕೂಗಿದ

"ನಾಸಿವಮ್ ಎಲ್ಲಿ? ನಾಸಿಮುನನ್ನು ಕರೆಯಿರಿ. ಇವತ್ತು ಅವನೇ ಮೆಟ್ಟಲು ಹಿಡಿಯಲಿ."

ಕೆಲಸಗಾರರ ಮಧ್ಯೆ ಕೋಲಾಹಲ ಪ್ರಾರಂಭವಾಯಿತು. ಇಷ್ಟು ಬೇಗ ನಾಸಿವ್‌ಗೆ ಅದೃಷ್ಟ ಖುಲಾಯಿಸಿತು. ಕಳ್ಳತನ ಮಾಡುವಾಗ ಸಿಕ್ಕಿಬಿದ್ದಿದ್ದಕ್ಕೆ ಆತನ ಅದೃಷ್ಟ ತೆರೆಯಿತು. ಯಾರು ಸಿಕ್ಕಿಬೀಳಲಿಲ್ಲವೋ ಅವರೆಲ್ಲಾ ಇನ್ನೂ ಗೋತಾ ಹೊಡೆಯುತ್ತಿದ್ದಾರೆ. ಮೆಟ್ಟಲಿನಿಂದ ಹಾಯಿಪರದೆ ಇನ್ನು ಕೆಲವರಿಗೆ ಸಿಕ್ಕಿರಲಿಲ್ಲ. ಇಂದು ಅವನಿಗೆ ಮೆಟ್ಟಲು, ನಾಳೆ ಹಾಯಿ ಪರದೆ ಅನಂತರ ನೇರವಾಗಿ ಕಪ್ತಾನ! ಹಡಗಿನ ದೇವರು.

"ಹಿಡ್ಕೊಳ್ಳಿ... ಹಿಡ್ಕೊಳ್ಳಿ. ಅವನು ಇನ್ನೂ ಹುಡುಗ. ಒಬ್ಬನೇ ಹೇಗೆ ಹಿಡ್ಕೊಳ್ಳೋಕೆ ಸಾಧ್ಯ? ನೀವೆಲ್ಲಾ ಸೇರಿ ಅವನಿಗೆ ಸಹಾಯ ಮಾಡಿ." ಕಪ್ತಾನ ಜೋರಾಗಿ ಕೂಗಿ ಆಜ್ಞೆ ನೀಡುತ್ತಿದ್ದ.

ತೀಕ್ಷ್ಣ ವಿದ್ಯುತ್ ಬೆಳಕಿನಲ್ಲಿ ನಾಸಿಮುನ ಒದ್ದೆ ಕಣ್ಣು ಪ್ರಜ್ವಲಿಸಿದವು. ಹೊಸವಧು ಲತಾಭಾಡಿಯಲ್ಲಿ ಇಳಿದು ಹೋಗುತ್ತಾಳೆ. ಕಾಲಿನ ಚೈನು ಶಬ್ದ ಮಾಡುತ್ತಾ ಅವಳಾಗಲೇ ಇಳಿಯಲಾರಂಭಿಸಿದ್ದಳು.

ಬೆಳಕು ಸುತ್ತಲೂ ಬಹಳ ದೂರ ಹರಡಿತ್ತು. ಮರಗಿಡಗಳ ಎಲೆಗಳ ಮೇಲೂ ಬೆಳಕು ನಲಿದಿತ್ತು. ಮೆಟ್ಟಲು ಇಳಿಸಿ ನಾಸಿಮು ಈಗ ಗಳ ಹಿಡಿದು ನಿಂತಿದ್ದ. ವಧುವಿಗೆ ಹೇಳುತ್ತಿದ್ದ "ನೋಡ್ಕೊಂಡು ನಡಿ. ಇಲ್ದೆ ಇದ್ರೆ ಬಿದ್ದು ಹೋಗ್ತೀಯಾ ಗಳ ಹಿಡ್ಕೊ."

ಹೊಸ ವಧು ಗಳ ಹಿಡಿದುಕೊಳ್ಳದೆಯೇ ಆರಾಮವಾಗಿ ನಡೆದಿದ್ದಳು. ಆಗಲೇ ನಾಸಿಮುನಿಗೆ ಹಿಂದಿನಿಂದ ಯಾರೋ ಡಿಕ್ಕಿ ಹೊಡೆದರು. ಕಂಪಿಸಿ ಆತ ತಿರುಗಿ ನೋಡಿದ. ಆ ಮನುಷ್ಯ ಅವನೇ. ಅವನೇ ಹಿಂದೊಮ್ಮೆ ಇವನನ್ನು ಹೆಚ್ಚಿಗೆ ಹೊಡೆದಿದ್ದುದು. ಬೆಳಕಿನಲ್ಲಿ ಆತನ ಗುರುತು ಹತ್ತಿತ್ತು. ಆತ ಗಹರ್ ಅಲಿ ಆಗಿದ್ದ.

ಗೋಲ್‌ಬಾನು ಬೆಳಕಿನಲ್ಲಿ ಮುಖ ಮುಚ್ಚಿಕೊಂಡಿದ್ದಳು. ಮುಖದ ಸೆರಗನ್ನು ಕೆಳಗೆ ಎಳೆದುಕೊಂಡಿದ್ದಳು. ದುಪಟಿಯನ್ನು ಬುರ್ಕಾದಂತೆ ಮೈ ತುಂಬಾ ಸುತ್ತಿಕೊಂಡಿದ್ದಳು.

ಇತರರೊಡನೆ ಸೇರಿಕೊಂಡು ನಾಸಿವ್ ಒಂದೊಂದಾಗಿ ಮೆಟ್ಟಲು ತೆಗೆಯ ಹತ್ತಿದ. ಬದಿಯ ಗಡಿಗೆಯ ಹಳೆಯ ನೀರಿನಲ್ಲಿ ತನ್ನ ಸತ್ತ ತಾಯಿಯ ನೆರಳನ್ನು ಕಂಡಂತಾಯಿತು. ಮೇಲೆ ನಿಂತಿದ್ದ ಕಪ್ತಾನ ಇವನನ್ನು ಬಾಯಿ ತುಂಬಾ ಹೊಗಳುತ್ತಿದ್ದ. ಆತನ ಬಿಳಿಯ ನಿಲುವಂಗಿ ಹಾಗೂ ಗಡ್ಡ ಗಾಳಿಯಲ್ಲಿ ಹಾರಾಡುತ್ತಿದ್ದವು. ದಿನ ರಾತ್ರಿಯನ್ನು ಉಂಟು ಮಾಡುವ ಸೂರ್ಯನಂತೆ ಕಪ್ತಾನ ಇಂದು ಕಾಣುತ್ತಿದ್ದ.

# ರಾಣಿ ಪಸಂದ್

*ಅನ್ನದಾಶಂಕರ್ ರಾಯ್*

ಬಹಳ ದಿನ ಕಾಯ್ದನಂತರ ಅಂತೂ ಹಡಗು ಬಂತು. ಪ್ರಯಾಣದ ಹಲವು ಸಿದ್ಧತೆಗಳು ಇನ್ನು ಆಗಬೇಕಿದ್ದವು. ಏಳು ಗಂಟೆಯೊಳಗೆ ಇನ್ಸ್‌ಪೆಕ್ಷನ್ ಕೆಲಸ ಮುಗಿಯಲೇಬೇಕು. ನದಿಯ ಎರಡು ದಡಗಳು ಕಾಣಬರುತ್ತಿವೆ. ಎದುರಿಗೆ ಜೋಗಿಯಾ ಇಲಾಖೆಗೆ ಸೇರಿದ ಬೆಟ್ಟದ ಸಾಲು, ಕರ್ಣಪುಲಿ ನದಿಯ ಮೇಲೆ ಹಡಗಿನಲ್ಲಿ ಸಾಗುವುದೆಂದರೆ ಎಷ್ಟು ಹರ್ಷದ ವಿಷಯ. ನಾನು ಜೊತೆಯಲ್ಲಿ ಲೇಖನಿ ಹಾಗೂ ಕಾಗದ ಸಹ ಇರಿಸಿಕೊಂಡಿದ್ದೆ. ಬಹಳ ವರ್ಷಗಳ ನಂತರ ಕವಿತೆ ರಚಿಸಲಿದ್ದೇನೆ. ನನ್ನ ಸಹ ಯಾತ್ರಿಗೆ ಅದು ಕೇವಲ ಹಡಗು ಆಗಿತ್ತು. ಆತನ ಹೆಸರು ಖಾರಂಗ್. ಇವರ ಜೊತೆಯಲ್ಲಿ ಸುಖಾನಿ, ಆತನ ಸ್ನೇಹಿತ, ಮತ್ತೆ ನನ್ನ ಸೇವಕ ಇದ್ದರು. ನನ್ನ ಸೇವಕ ಅಡಿಗೆ ಕೆಲಸ ಸಹ ಮಾಡುತ್ತಿದ್ದನು. ಇವರಲ್ಲಿ ಯಾರೂ ನನ್ನ ಬಳಿ ಬರಬಾರದೆಂದು ಅವರಿಗೆಲ್ಲಾ ತಿಳಿಸಿದ್ದೆ.

ಡೆಕ್ ಮೇಲಿದ್ದ ಕುರ್ಚಿಯಲ್ಲಿ ಕುಳಿತು ಲಂಗರ್ ಇಳಿಸುತ್ತಿದ್ದುದನ್ನು ನೋಡುತ್ತಿದ್ದೆ. ಪೋಲೀಸ್ ಠಾಣೆಯ ಅಧಿಕಾರಿ ಏದುಬ್ಬಸಪಡುತ್ತಾ ಓಡುತ್ತಾ ನನ್ನ ಬಳಿ ಬಂದು ನಿಂತ. ಕೈಯಲ್ಲಿ ಒಂದು ಕಾಗದವಿತ್ತು. "ವಿಷಯ ಏನಿರಬಹುದು ?" ಎಲ್ಲಿ ಏನು ಅನಾಹುತ ಆಗಿರಬಹುದು ? ಈ ಜನ ನಾನು ಎಲ್ಲೂ ಹೋಗಲು ಬಿಡುವುದಿಲ್ಲ. ಕಾಗದ ಇಸಿದುಕೊಂಡು ನೋಡಿದೆ. ಅಂತಹುದೇನು ವಿಶೇಷವಿರಲಿಲ್ಲ. ಕಲ್ಕತ್ತೆಯಿಂದ ಒಬ್ಬ ಉನ್ನತ ಅಧಿಕಾರಿ ಆಗಮಿಸಿದ್ದ. ಆತನೂ ಸಹ ರಾವುಜಾನ್‌ಗೆ ಹೋಗುವುದಿತ್ತು. ನನ್ನ ಜೊತೆಯಲ್ಲಿ ಅವರೂ ಪಯಣಿಸಿದರೆ ನನಗೇನಾದರೂ ತೊಂದರೆ ಆಗುತ್ತದೆಯೇ ಎಂದು ಮಾತ್ರ ಆ ಪತ್ರದಲ್ಲಿತ್ತು. ಅವರು ಅಂದು ಪಯಣಿಸದಿದ್ದರೆ ಸುಮ್ಮನೆ ಒಂದು ದಿನ ಚಟಗಾವ್‌ನಲ್ಲಿ ಕಳೆಯಬೇಕಾಗುತ್ತಿತ್ತು.

ನನಗೇನೋ ಕೊಂಚ ತೊಂದರೆ ಆಗುತ್ತಿತ್ತು. ಆದರೆ ಇದನ್ನು ಹೇಳುವಂತಿರಲಿಲ್ಲ. ಸರಿ ನಾನು ಕವಿತೆ ರಚಿಸಿದಂತೇ ಆಯಿತು. ನಾನು ಮನಸ್ಸಿನಲ್ಲೇ ಆತನಿಗೆ ಬೈಗುಳ ಹಾಕಿದೆ. ಆದರೆ ಹಲ್ಲು ಆಗಲಿಸಿ, ಹುಸಿನಗು ಅರಳಿಸಿ, ನುಡಿದೆ "ಅದು ನನ್ನ ಸೌಭಾಗ್ಯ."

ಠಾಣೆಯ ಅಧಿಕಾರಿ ಶಿಸ್ತಿನಿಂದ ನಿಂತು ಸೆಲ್ಯೂಟ್ ಹೊಡೆದು ಹೊರಟು ಹೋದ.

ನಾನು ಕುಳಿತು ಯೋಚಿಸತೊಡಗಿದ್ದೆ. ಒಂದು ವೇಳೆ ನಾನು ನಿರಾಕರಿಸಿದ್ದರೆ ಅಸಭ್ಯ ವರ್ತನೆಯಾಗುತ್ತಿತ್ತು. ಒಂದು ದಿನ ನಿಂತು ಹೊರಡುವುದರಿಂದ ಹಡಗಿಗೆ ತುಂಬಲಾರದಂತಹ ಏನು ಹಾನಿಯಾಗುತ್ತಿತ್ತು? ಅಂತಹ ತುರ್ತು ಕೆಲಸವಾದರೂ ಏನು ಇದೆ?

ಶಿಷ್ಟಾಚಾರದಲ್ಲಿ ಖಾನ್ ಬಹಾದೂರ್‌ಗೆ ಸರಿ ಸಮಾನರು ಯಾರೂ ಇರಲಾರರು. ಕೃತಜ್ಞತೆ ಅರ್ಪಿಸಲು ಬಾಂಗ್ಲಾ ಭಾಷೆಯಲ್ಲಿ ಮಾತುಗಳು ಸಿಗದೆ ಇಂಗ್ಲಿಷ್ ಹಾಗೂ ಉರ್ದುವಿನ ಸಹಾಯ ಪಡೆದರು. ಖಾನ್ ಬಹಾದೂರ್ ಒಬ್ಬ ಪಂಜಾಬಿ ಮುಸಲ್ಮಾನ. ವಯಸ್ಸಿನಲ್ಲೂ ಹಿರಿಯರು; ಗಡ್ಡಮೀಸೆಯನ್ನು ಇಟ್ಟುಕೊಂಡಿರಲಿಲ್ಲ. ಆದರೆ ಕಡಿಮೆ ವಯಸ್ಸಿನವರಂತೆ ಕಾಣಿಸುತ್ತಿದ್ದರು. ಸಂತೋಷ ಚಿತ್ತರು ಹಾಗೂ ಉದಾರಿಗಳು. ಇಷ್ಟು ಅಲ್ಪ ಕಾಲದಲ್ಲಿ ಅವರು ನಾನು ಸಾಹಿತಿ ಎಂಬುದನ್ನು ಅರಿತುಬಿಟ್ಟಿದ್ದರು. 'ತಮ್ಮ ಪರಿಚಯ ಮಾಡಿಕೊಳ್ಳುವ ಆಸೆ ನನಗೆ ಬಹಳ ದಿನಗಳಿಂದ ಇತ್ತು. ಈ ರೀತಿ ನಿಮ್ಮ ಪರಿಚಯ ಆಗುತ್ತದೆ ಎಂದು ನಾನು ತಿಳಿದಿರಲಿಲ್ಲ. ಸತ್ಯವಾಗಿ ನನಗೆ ತಮ್ಮ ಏಕಾಂತದಲ್ಲಿ ತೊಂದರೆ ಕೊಡಲು ಇಷ್ಟವಿರಲಿಲ್ಲ. ನಾನೇನೋ ಇನ್ನೊಂದು ದಿನ ಇಲ್ಲೇ ಇರಲು ಇಚ್ಛಿಸಿದ್ದೆ. ಆದರೆ ಎಸ್.ಪಿ. ಸಾಹೇಬರು ತಮ್ಮ ಜೊತೆಯಲ್ಲಿ ನನ್ನನ್ನು ಕಳುಹಿಸಲು ಬಲವಂತಪಡಿಸಿದರು. ಸರಿ, ಆಯಿತು. ತಾವು ಹೇಳಿ ತಮಗೆ ಆ ಸಮಾಚಾರ ತಿಳಿದಿದೆಯೇ?'

ನಾನು ಆಶ್ಚರ್ಯಚಕಿತಗೊಂಡು ನುಡಿದೆ, "ಗೊತ್ತಿಲ್ವಲ್ಲಾ...! ಏನು ಸಮಾಚಾರ?" "ಸಮಾಚಾರವೇನೋ ಬಹಳ ಕೆಟ್ಟದ್ದೇ" ಅವರು ನನ್ನ ಕಿವಿಯ ಹತ್ತಿರ ಮುಖ ತಂದು ನುಡಿದರು "ಅಷ್ಟು ಅಲ್ದೆ ಇದ್ರೆ, ಸಾಹೇಬ್ರೆ ನಾನ್ಯಾಕೆ ಕಲ್ಕತ್ತದಿಂದ ಓಡಿ ಬರ್ಬೇಕಾಗಿತ್ತು. ಛಿ.... ಛಿ... ಶೇಮ್ ಫುಲ್... ಆತ ನಿರ್ಲಜ್ಜ."

ನಾನು ಪೂರ್ಣ ಉತ್ಸುಕಗೊಂಡೆ. ನನಗೆ ಗೊತ್ತಿತ್ತು ಖಾನ್ ಬಹಾದುರ್ ತಾವೇ ವಿಷಯವನ್ನು ಹೇಳೇ ಹೇಳುತ್ತಾರೆ. ಇನ್ನೊಬ್ಬರ ಬಗ್ಗೆ ಕೆಟ್ಟ ವಿಷಯವನ್ನು ಕೇಳಲು ನನಗೆ ಆಸಕ್ತಿಯಿಲ್ಲವೆಂದು ತೋರಿಸಿಕೊಂಡೆ.

"ಎಷ್ಟಾದರೂ ತಾವು ಸಾಹಿತಿಗಳು, ಮಾತು ಮಾತಿಗೆ ತಾವು ಹೇಳುತ್ತಿರುತ್ತೀರಿ ಸತ್ಯಮ್, ಶಿವಮ್, ಸುಂದರಂ. ನನ್ನ ನಲವತ್ತೈದು ವರ್ಷಗಳ ಅನುಭವದಲ್ಲಿ ನಾನು ಹೇಳುವುದು, ಯಾವುದು ಸತ್ಯವೊ ಅದು ಸುಂದರವಲ್ಲ. ಯಾವುದು ಸುಂದರವೊ ಅದು ಶಿವ ಅಲ್ಲ. ಒಂದು ವೇಳೆ ನಾನೇನಾದರೂ ಪುಸ್ತಕ ಬರೆದರೆ ಏನು ಬರೆಯುತ್ತೇನೆ ಗೊತ್ತೆ? ಸುಂದರ ಹುಡುಗಿಯರು ಸಾಮಾನ್ಯವಾಗಿ ಕೆಟ್ಟವರಾಗಿರುತ್ತಾರೆ." ಇಷ್ಟು ಹೇಳಿ ಖಾನ್ ಬಹಾದೂರ್ ಗಹಿಗಹಿಸಿ ನಗಹತ್ತಿದರು. ನಾನೂ ನಕ್ಕೆ. ಅನಂತರ ಕೂಡಲೇ ನುಡಿದೆ, "ನಮ್ಮ ಬಂಗಾಳದ ವಿಷಯದಲ್ಲಿ ನೀವು ಹೀಗೆ ಹೇಳಲು ಆಗುವುದಿಲ್ಲ."

ಆ ಸಜ್ಜನರು ವ್ಯಂಗ್ಯವಾಗಿ ನುಡಿದರು "ಇಲ್ಲ.... ಬಂಗಾಳದಲ್ಲಿ ಇಲ್ಲ.... ಈ

ಬಂಗಾಳದಲ್ಲಿ ಕೆಲಸ ಮಾಡಿಯೇ ನನ್ನ ಕೂದಲು ಬೆಳ್ಳಗಾಗಿವೆ. ಈಗ ನಾನು ರಾವುಜಾನ್‌ಗೆ ಹೋಗುತ್ತಾ ಇದ್ದೀನಿ.''

''ರಾವುಜಾನ್'' ?

''ಹೌದು ರಾವುಜಾನ್‌ಗೆ ಹೋಗುತ್ತಾ ಇದ್ದೇನೆ. ಏನು ರಾವುಜಾನ್ ಬಂಗಾಳದಿಂದ ಹೊರಗಡೆಯೇ ?''.... ನಿಧಾನವಾಗಿ ನಮ್ಮ ಮಾತುಕತೆ ಆತ್ಮೀಯವಾಗಹತ್ತಿತ್ತು. ನಾನು ನನ್ನ ನೌಕರನನ್ನು ಕರೆದೆ. ''ಬೇಡಿ..... ಬೇಡಿ ತಾವು ನನ್ನ ಅತಿಥಿ'' ಅವರು ನುಡಿದರು.

ನಾನು ಹೇಗೆ ಅವರ ಅತಿಥಿಯಾದೆ ? ಒಂದು ವಿಧದಲ್ಲಿ ಹಡಗೇ ನನ್ನದು. ಆದರೆ ನನ್ನ ಮಾತನ್ನು ಕೇಳುವವರಾರು ? ಸಂಜೆಯ ಟೀ ತರಲು ಅವರೇ ಆಜ್ಞಾಪಿಸಿದರು. ಅಷ್ಟು ಹೊತ್ತಿಗೆ ಹಡಗು ಸುಂದರಘಾಟ್ ಬಿಟ್ಟಿತ್ತು.

ಹತ್ತಿರದ ಕುರ್ಚಿಗಳಲ್ಲಿ ಬೆಟ್ಟದತ್ತ ಮುಖಮಾಡಿ ನಾವಿಬ್ಬರೂ ಆರಾಮವಾಗಿ ಕುಳಿತುಬಿಟ್ಟೆವು. ಖಾನ್ ಬಹಾದುರ್ ಹೇಳಲು ಪ್ರಾರಂಭಿಸಿದರು ''ನೋಡು ಅವನು ಅಂತಿಂಥಾ ಮನುಷ್ಯನಲ್ಲ, ಒಂದು ಪೂರ್ಣ ಸರ್ಕಲ್ಲಿನ ಇನ್ಸ್‌ಪೆಕ್ಟರ್. ಒಮ್ಮೆ ನಾನು ಅವರ ಕೈಕೆಳಗೆ ಎಸ್.ಪಿ. ಆಗಿದ್ದೆ. ಅವರ ಕೆಲಸವನ್ನು ನಾನು ಹೊಗಳುತ್ತಲೂ ಇದ್ದೆ. ಬುದ್ಧಿ ಏನೂ ಕೆಟ್ಟಿರಲಿಲ್ಲ. ಕವಿಯೂ ಆಗಿರಲಿಲ್ಲ. ಕ್ಷಮಿಸಿ ನನ್ನ ಅವಿನಯವನ್ನು. ಅವನು ಒಳ್ಳೆಯ ಮನುಷ್ಯ, ಸಚ್ಚರಿತ್ರ, ಒಳ್ಳೆಯ ಹೆಸರೂ ಇತ್ತು. ಅಂತಹ ಮನುಷ್ಯ; ನೌಕರಿಯ ವ್ಯಾಮೋಹವೂ ಇಲ್ಲದೆ, ಮಗ, ಮಗಳನ್ನು ಬಿಟ್ಟು, ಪಾಪ ಹೆಂಡತಿ ಇರಲಿಲ್ಲ, ಇದ್ದಿದ್ದರೆ ಇನ್ನೊಂದು ದುಃಖಕರ ವಿಷಯವಾಗುತ್ತಿತ್ತು, ಒಂದು ದಿನ ಇದ್ದಕ್ಕಿದ್ದಂತೆ ಮಾಯವಾಗಿಬಿಟ್ಟ.''

''ಮಾಯವಾಗಿ ಬಿಟ್ಟ !'' ನಾನು ಬೆಚ್ಚಿಬಿದ್ದೆ. ''ನಾನು ಏನು ಹೇಳುತ್ತಾ ಇದ್ದೆ ಅಂದ್ರೆ'' ಖಾನ್ ಬಹಾದುರ್ ರೇಷ್ಮೆ ಕರವಸ್ತ್ರದಿಂದ ಮುಖ ಮತ್ತು ಕಣ್ಣನ್ನು ಒರೆಸಿಕೊಂಡರು ಮತ್ತು ನುಡಿದರು ''ಕೊಲೆ ವಿಷಯದಲ್ಲಿ ವಿಚಾರಣೆ ನಡೆಸಲು ಹೋಗಿದ್ದರು. ಆದರೆ ಯಾರಿಗೆ ಗೊತ್ತಿತ್ತು ಹೇಳಿ ಆ ಹೆಂಗಸು ! ಅಷ್ಟು ಕೆಟ್ಟವಳು ಅಂತಾ ! ರಂಗೂನ್‌ನಿಂದ ಮದುವೆ ಆಗಿ ಈಕೆನ ಕರೆತಂದಿದ್ದ. ಯಾರ ಕೊಲೆ ಆಯಿತೋ ಅವರ ವಿಷಯ ನಾನು ಹೇಳುತ್ತಿದ್ದೇನೆ. ನಾನು ಕೇಳಿರೋ ರೀತ್ಯ, ಆಕೆಯಷ್ಟು ಸುಂದರಿ ಪೂರ್ಣ ಬರ್ಮಾದಲ್ಲೇ ಮತ್ತಾರೂ ಇರ್ಲಿಲ್ಲ. ಆಕೆಗೊಬ್ಬಳು ಸವತಿ ಇದ್ದಳು. ಈ ವಿಷಯ ಗೊತ್ತಾದೊಡನೆ ಆಕೆ, ಸವತಿಯ ಕುತ್ತಿಗೆಯನ್ನು ಇರಿದುಬಿಟ್ಟಳು.''

ನಾನು ಆಶ್ಚರ್ಯಚಕಿತನಾಗಿ ಕೇಳುತ್ತಿದ್ದೆ. ಇಂತಹ ವಿಷಯವನು ನಾನು ಕೇಳೇ ಇರಲಿಲ್ಲ.

''ಹಾ ! ನಾನು ಏನು ಹೇಳುತ್ತಿದ್ದೆ ಅಂದ್ರೆ... ಆ ಇನ್ಸ್‌ಪೆಕ್ಟರ್, ಕೊಲೆ ವಿಷಯ ವಿಚಾರಣೆ ಮಾಡಲು ಹೋಗಿದ್ರು. ಆದರೆ ಠಾಣೆದಾರ ಆಗಾಗ್ಲೇ ವಿಚಾರಣೆ ಕಾರ್ಯ ಮುಗಿಸಿದ್ದ. ಆದರೆ ಆ ಹುಡುಗಿಗೆ ಬಂಗಾಳಿ ಬರ್ತಾ ಇರ್ಲಿಲ್ಲ. ಅದಕ್ಕೆ ಈ ಇನ್ಸ್‌ಪೆಕ್ಟರ್ ಹೋಗ್ಬೇಕಾಗಿ ಬಂದಿತ್ತು. ಆದರೆ ಈ ವಿಷಯವೇ ಆತನಿಗೆ

ಕಾಲರೂಪವಾಗಿ ಪರಿಣಮಿಸಿತು. ಒಂದೊಂದಾಗಿ ದಿನಗಳು ಕಳೆದುಹೋದವು. ಆದರೆ ಈ ಕೇಸಿನ ವಿಚಾರಣೆ ಮುಗಿದಿರಲಿಲ್ಲ. ಕೊನೆಯ ಅಧ್ಯಾಯಕ್ಕೆ ಬಂದಾಗ ಗೊತ್ತಾದದ್ದು ಅಪರಾಧಿಯೂ ಇಲ್ಲ, ವಿಚಾರಣಾಧಿಕಾರಿಯೂ ಇಲ್ಲ. ಇಬ್ಬರೂ ಮಾಯ ಅಹಹ....!" "ಇದು ನಗೊ ಮಾತಲ್ಲ ಸ್ತ್ರೀ ಹರಣದ ವಿಷಯದಲ್ಲಿ ನಾನು ಯಾರನ್ನೂ ಕ್ಷಮಿಸಿಲ್ಲ." ನಾನು ಸ್ವಲ್ಪ ಬಿಸಿಯಾಗೆ ನುಡಿದೆ.

"ಇಷ್ಟು ದಿನ ನೀವುಗಳು ಏನು ಮಾಡ್ತಾ ಇದ್ರಿ? ಅವನನ್ನು ಏಕೆ ಕೈ ಸೆರೆ ಹಿಡಿಯಲಿಲ್ಲ? ಇದು ನಿಮ್ಮ ಡಿಪಾರ್ಟ್‌ಮೆಂಟಿನ ವಿಷಯ ಮಾತ್ರ ಅಲ್ಲ, ನಿಮ್ಮ ದಿನನಿತ್ಯದ ಕೆಲಸ."

ಖಾನ್ ಬಹಾದುರ್ ಸ್ವಲ್ಪ ಬಿರುಸಾಗಿಯೇ ನುಡಿದರು. "ಇದು ಮಾಮೂಲಿ ಠಾಣೆಯ ಕೆಲಸ ಹೌದೋ ಅಲ್ವೋ, ಇದು ಮುಖ್ಯವಲ್ಲ. ಹುಡುಗಿ ವಿಧವೆ. ಆದ್ದರಿಂದಲೇ ಪುಸಲಾವಣೆಗೆ ಒಳಗಾದ್ಳು ಅನ್ನೋ ವಾದ ಸರಿಯಾಗಿಲ್ಲ. ಹುಡುಗಿ ಪ್ರೌಢೆ. ಆದಕ್ಕೇ ಅವಳನ್ನು ಅಪಹರಿಸಿದರು ಅನ್ನೋ ದೂರೂ ನಿಲ್ಲಲ್ಲ. ನೀವೇ ಹೇಳಿ, ಸ್ವಲ್ಪ ಕೇಳೋಣ, ಅವನನ್ನು ಯಾವ ಅಪರಾಧದ ಮೇಲೆ ಸೆರೆ ಹಿಡೀತೀರಾ?"

ನಾನು ನಿರುತ್ತರನಾಗಿದ್ದೆ. ಖಾನ್ ಬಹಾದೂರ್ ಒಂದು ಕೊಂಕನಗೆ ಹರಿಸಿ ನುಡಿದರು "ಒಂದು ವೇಳೆ ಅವರು ಮದುವೆ ಮಾಡಿಕೊಂಡಿದ್ರೆ? ಆದ್ರೆ ಇದು ಅಷ್ಟು ಸುಲಭವಲ್ಲ. ನೀವು ಅವರನ್ನು ಕೆಲಸದಿಂದ ತೆಗೆದು ಹಾಕುತಾ ಇದ್ರಿ, ಕಲ್ಕತ್ತಾ ಪೊಲೀಸ್ ಠಾಣೆ ಮೂಲಕ. ಈ ಕೆಲಸ ಸುಲಭವಾಗಿ ಆಗ್ತಾ ಇತ್ತು. ಆದ್ರೆ ಸತ್ತವರ ಬಗ್ಗೆ ಹೋರಾಡ್ಬೇಕಾದ್ರೆ ಕಾನೂನು ಚೆನ್ನಾಗಿ ಓದ್ಲೆಬೇಕು."

ನಿಜವಾಗಿ ಈ ಮಾತು ಸತ್ಯ. ದೊಡ್ಡ ಮೀನು ಕೈಯಿಂದ ತಟ್ಟನೆ ತಪ್ಪಿಸಿಕೊಂಡರೆ ಆಗುವ ಕಷ್ಟ, ನೋವು ನನಗುಂಟಾಗಿತ್ತು. ಆದರೆ ಖಾನ್ ಬಹಾದೂರ್‌ಗೆ ಇದು ಕೆಟ್ಟದಾಗಿ ಕಾಣಿಸಿರಲಿಲ್ಲ. ಅವರು ನುಡಿದರು "ನಾನು ಕೇಳಿರುವ ರೀತ್ಯಾ ಅವರು ಜಲಗಾವ್‌ನ ಯಾತ್ರದಿಂದ ಬೆಟ್ಟ ಪ್ರದೇಶದಲ್ಲಿ ಅಡಗಿಕೊಂಡಿದ್ದಾರೆ. ಅವರು ಅಲ್ಲಿನ ಕಾಲುದಾರಿ ಹಿಡಿದು ಸೀದಾ ಬರ್ಮಾಕ್ಕೆ ಹೊರಟುಹೋಗುತ್ತಾರೆ. ಅನಂತರ ಆ ಸುಂದರಿಯ ಕೃಪಾದೃಷ್ಟಿ ಎಲ್ಲಿಯವರೆಗೆ ಅವರ ಮೇಲಿರುವುದೋ ಅದನ್ನು ಹೇಳಬಲ್ಲವರು ಯಾರು? ಆದ್ದರಿಂದಲೇ ಸುಂದರ ಮುಖ ಕಂಡರೇನೆ ನಾನು ದೂರದಿಂದಲೇ ನಮಸ್ಕರಿಸುತ್ತೇನೆ.

ಕಾನೂನಿನ ಪುಸ್ತಕ ಆಗ ನನ್ನ ಬಳಿ ಇರಲಿಲ್ಲ. ಆ ಪರಿಸರ ತಪ್ಪಿಸಿಕೊಂಡು ಓಡಿ ಹೋಗಲು ಸಹಾಯ ಮಾಡಿದವರಿಗೆ ಕಾನೂನು ರೀತ್ಯಾ ಏನು ಶಿಕ್ಷೆ ವಿಧಿಸಬೇಕು ಎಂಬುದನ್ನು ನಿಶ್ಚಯವಾಗಿ ಹೇಳಲು ಅಸಮರ್ಥನಾಗಿದ್ದೆ.

ನನ್ನ ಮನಸ್ಸು ಭಾರವಾಗತೊಡಗಿತ್ತು. ಇದನ್ನು ಅರಿತು ಖಾನ್ ಬಹಾದೂರ್ ನುಡಿದರು "ತಾವು ಈಗ ಯೋಚಿಸುತ್ತಾ ಇರಬಹುದು, ಪೋಲೀಸ್ ಅಧಿಕಾರಿ ಆದ್ದರಿಂದ ಇನ್ನೊಬ್ಬ ಪೋಲೀಸ್ ಅಧಿಕಾರಿ ಮೇಲೆ ಅನುಕಂಪ ಇದೆ ಅಂತಾ. ಆದರೆ ನಿಜವಾಗಿ ಹಾಗಿಲ್ಲ. ನಾನು ಮನುಷ್ಯನಾದ್ದರಿಂದ ಇನ್ನೊಬ್ಬ ಮನುಷ್ಯನ ಮೇಲೆ

ಅನುಕಂಪ ಇದೆ. ನಿಜವಾಗಿ ಹೇಳೋದಾದ್ರೆ ಆ ಹುಡುಗಿಯೇ ಅವನ ಅಪಹರಣ ಮಾಡಿದ್ದಾಳೆ.''

ಈ ಮಾತು ಕೇಳಿ ನನ್ನ ಅಂತರ್ಯದಲ್ಲಿದ್ದ ಹೆಣ್ಣಿನ ಬಗ್ಗೆ ಸಹಾನುಭೂತಿ ಈ ಬಗ್ಗೆ ಆಕ್ಷೇಪ ಎತ್ತಿತು. ಅದು ಹೇಳಿತು – ಯಾವ ಶಿಷ್ಟಾಚಾರಿ ಗಂಡಸು ಹೆಂಗಸನ್ನು ಈ ರೀತಿ ದೋಷಿ ಎಂದು ನಿರೂಪಿಸಲಾರ. ಸಾಮಾನ್ಯವಾಗಿ ಮನುಷ್ಯನೇ ದೋಷಿಯಾಗಿರುತ್ತಾನೆ. ಎಲ್ಲಾ ವ್ಯವಹಾರಗಳಲ್ಲೂ ದೋಷ ಅದೃಷ್ಟವನ್ನು ಅವಲಂಬಿಸಿರುತ್ತದೆ.

''ಹೌದು..... ಹೌದು ಈ ಮಾತು ನಿಜ. ದೋಷ ಅದೃಷ್ಟವನ್ನು ಅವಲಂಬಿಸಿರುತ್ತದೆ.'' ಖಾನ್ ಬಹಾದುರ್ ಸಂತೋಷದಿಂದ ನುಡಿದರು ''ನಿಜ ಇದರಂತಹ ಅದೃಷ್ಟದ ಆಟವನ್ನು ನಾನು ನನ್ನ ಯೌವ್ವನದಲ್ಲಿ ಒಮ್ಮೆ ಕಂಡಿದ್ದೆ. ಈ ಘಟನೆ ನನ್ನ ಸ್ನೇಹಿತನ ಜೀವನದಲ್ಲಿ ನಡೆದಿತ್ತು. ಆ ಸ್ನೇಹಿತ ಹಿಂದೂ. ಇದೇನು ಮಾತೆಂದು ತಾವು ಆಶ್ಚರ್ಯಪಡಬಹುದು ಹಿಂದು ಮುಸಲ್ಮಾನ್‌ನ ಸ್ನೇಹಿತ ಎಂದಿನಿಂದ ? ಇಂದಿಗೆ ಇಪ್ಪತ್ತು ವರ್ಷಗಳ ಹಿಂದೆ. ಇಂದಿನಂತೆ ಅಂದು ಕೆಟ್ಟ ಗಾಳಿ ಹರಡಿರಲಿಲ್ಲ. ಮಹಾಯುದ್ಧದ ನಂತರ ನಾವಿಬ್ಬರು ಸ್ನೇಹಿತರು ಸೈನ್ಯ ಬಿಟ್ಟು ಪೋಲೀಸ್ ಕೆಲಸಕ್ಕೆ ಸೇರಿದ್ದೆವು. ಆಗ ಯಾರು ಹಿಂದು, ಯಾರು ಮುಸಲ್ಮಾನ ? ಎರಡೂ ಒಂದೇ. ಅಂತಹ ಸುದಿನ ಮತ್ತೆ ಬಾರದು.''

ಅವರ ಮಾತಿನಲ್ಲಿ ತನ್ಮಯತೆ ಇತ್ತು. ಇಪ್ಪತ್ತು ವರ್ಷಗಳಷ್ಟು ಹಿಂದಿನ ನೆನಪಿನ ಮೆಟ್ಟಿಲುಗಳನ್ನು ಇಳಿಯತೊಡಗಿದ್ದರು. ಅಲ್ಲಿ ಸಂಗ್ರಹಿಸಿದ ಮಧುವಿತ್ತು. ನೆನಪಿನ ಗುಂಗಿನಲ್ಲಿ ಮುಳುಗಿ ಅವರು ಹೇಳಿದರು ''ಈ ಘಟನೆ ಎಷ್ಟು ಹಳೆಯದೆಂದರೆ ಪೂರ್ಣ ರೀತಿಯಲ್ಲಿ ನನಗೂ ನೆನಪಿಲ್ಲ, ಆದರೆ ಇದ್ದಕ್ಕಿದ್ದಂತೆ ನೆನಪು ಮರುಕಳಿಸುತ್ತಿದೆ. ಈಗ ಎಲ್ಲವೂ ನಿಚ್ಚಲವಾಗಿದೆ. ಎದುರು ಎಲ್ಲಾ ದೃಶ್ಯಗಳೂ ಕಾಣಿಸುತ್ತಿರುವಂತಿದೆ.''

ನಾನು ಅವರತ್ತ ತಿರುಗಿದೆ. ಇವರೇ ಏನು ಆ ಖಾನ್ ಬಹಾದೂರ್ ? ಅರ್ಧ ನಿದ್ದೆಯಿಂದ ಇದೇ ತಾನೆ ಎಚ್ಚೆತ್ತಂತಿರುವ ನವ ಯುವಕನಂತೆ ಕಾಣಿಸುತ್ತಿದ್ದರು. ಲಘುವಾಗಿ ಗಾಳಿ ಸರಿಗಮ ಹಾಡುತ್ತಾ ಚಲಿಸಿತ್ತು. ಈ ಗಾಳಿಯನ್ನು ತಳ್ಳುತ್ತಾ ನೀರನ್ನು ಎರಡು ಹೋಳಾಗಿ ಸೀಳುತ್ತಾ ನೌಕೆ ಚಲಿಸುತ್ತಿತ್ತು. ಖಾನ್ ಬಹಾದೂರ್ ಹೇಳಲು ಪ್ರಾರಂಭಿಸಿದರು.

ಮೆಹರ್ ಬಾನ್ ಸಿಂಹ ರಜಪೂತ ವಂಶಸ್ಥ, ನನ್ನ ಪೂರ್ವಜರೂ ರಜಪೂತರು. ಯಾರು ಏನೇ ಹೇಳಿದರೂ ರಕ್ತದ ಸೆಳೆತ ಒಂದು ವಿಧಾನವಾದದ್ದು. ರಜಪೂತರ ಮಧ್ಯೆ ನನಗೆ ಎಷ್ಟರಮಟ್ಟಿಗೆ ಅವರು ತನ್ನವರೇ ಎನ್ನುವ ಭಾವ ಅನುಭವವಾಗುತ್ತಿತ್ತೋ, ಅಷ್ಟು ಮುಸಲ್ಮಾನರ ಮಧ್ಯೆ ಆಗುತ್ತಿರಲಿಲ್ಲ. ಆದರೆ ಹಿಂದೂ ಧರ್ಮದಲ್ಲಿ ನನಗೆ ಯಾವ ವಿಶ್ವಾಸವೂ ಇರಲಿಲ್ಲ. ಧರ್ಮದ ವಿಷಯದಲ್ಲಂತೂ ನಾನು ನಿಷ್ಠಾವಂತ ಮುಸಲ್ಮಾನ. ಆ ದಿನಗಳಲ್ಲಿ ನೌಕರ,

ಆಡಿಗೆಯುವನು ಎಲ್ಲರೂ ನನ್ನವರೆ ಇದ್ದರು. ಮೆಹರ್ ಬಾನ್ ಸಿಂಹ ನನ್ನ ಆತ್ಮೀಯ ಮಿತ್ರ.

ಆ ದಿನಗಳಲ್ಲಿ ಅವರಂತಹ ಮಿತ್ರ ನನಗೆ ಇನ್ನೊಬ್ಬರಿರಲಿಲ್ಲ. ಪ್ರತಿದಿನವೂ ನಾವು ಭೇಟಿಯಾಗುತ್ತಿದ್ದೆವು. ಪ್ರತಿದಿನವೂ ಆ ಭೇಟಿ ಮಧುರತೆ ಹಾಗೂ ಹಗಲುಗನಸು ಕಾಣುವುದರಲ್ಲೇ ಕಳೆದುಹೋಗುತ್ತಿತ್ತು. ಆಟವಾಡುವುದರಲ್ಲಿ ಇಬ್ಬರಿಗೂ ಅಮಿತ ಆಸಕ್ತಿ. ಶಿಕಾರಿಯಲ್ಲೂ ಆಸಕ್ತಿ ಇತ್ತು. ಆ ದಿನಗಳಲ್ಲಿ ಇಂದಿನಂತೆ ಸಿನಿಮಾಗಳ ಆಕರ್ಷಣೆ ಇರಲಿಲ್ಲ, ನಾವು ಕೆಲಸ ಮಾಡುತ್ತಿದ್ದೆಡೆ ಆಗಾಗ ಸಿನಿಮಾ ಬಂದು ಹೋಗುತ್ತಿತ್ತು. ಆಗ ನಾವಿಬ್ಬರೂ ಸಿನಿಮಾ ನೋಡುತ್ತಿದ್ದೆವು. 'ತಮಾಷಾ' ಸಹ ನೋಡಲು ಹೋಗುತ್ತಿದ್ದೆವು. ಆದರೆ ಇತರೆ ಅಧಿಕಾರಿಗಳಂತೆ ನಾವು ಸಂಗೀತ ಕೇಳಲು ಕೋಠಿಗಳಿಗೆ ಹೋಗುತ್ತಿರಲಿಲ್ಲ. ನಾವಿಬ್ಬರೂ ಕೊಂಚ ಧಾರ್ಮಿಕ ಪ್ರವೃತ್ತಿಯವರು. ಅವರ ಮದುವೆಯ ಮಾತುಕತೆಗಳು ನಡೆಯುತ್ತಿದ್ದವು. ನನ್ನ ಪತ್ನಿ ತೌರುಮನೆಗೆ ಹೋಗಿದ್ದಳು. ನನ್ನ ಸ್ನೇಹಿತನಿಗೆ ಓದು ಬರಹ ಬಲ್ಲ ಹುಡುಗಿ ಬೇಕಿತ್ತು. ಆದರೆ ಆ ದಿನಗಳಲ್ಲಿ ಹುಡುಗಿಯರು ಅಷ್ಟಾಗಿ ವಿದ್ಯಾಭ್ಯಾಸ ಮಾಡುತ್ತಿರಲಿಲ್ಲ.

ಪಂಜಾಬಿನ ಆ ಶಹರಿಗೆ ಸೇರಿದಂತೆ ಒಂದು ಜಮೀನ್ದಾರಿ ಇತ್ತು. ಅಲ್ಲಿ ಒಬ್ಬ ಜಮೀನ್ದಾರನಿದ್ದ. ಲಕ್ಷಾಂತರ ಬೆಲೆಬಾಳುವ ಜಮೀನು ಅವರದು. ನಾವು ಆ ಊರಿಗೆ ಹೋದಾಗ ಅವರ ಮರಣ ಸಂಭವಿಸಿತ್ತು. ಅವರ ಆಸ್ತಿಯಲ್ಲಿ ಅರ್ಧಭಾಗ ಮೊದಲ ಹೆಂಡತಿಯ ಪಾಲಿಗೂ, ಉಳಿದರ್ಧ ಭಾಗ ಚಿಕ್ಕ ಹೆಂಡತಿಯ ಪಾಲಿಗೂ ಬಂದಿತ್ತು. ದೊಡ್ಡ ಹೆಂಡತಿ, ದೇವರ ಪೂಜೆ ಪುನಸ್ಕಾರದಲ್ಲಿ ದಿನಗಳೆಯುತ್ತಿದ್ದರೆ, ಚಿಕ್ಕ ಹೆಂಡತಿ ಕ್ರೀಡೆ ಹಾಗೂ ಸುಖಭೋಗದಲ್ಲಿ ಕಾಲ ಕಳೆಯುತ್ತಿದ್ದಳು. ಇಬ್ಬರಿಗೂ ಸಂತಾನವಿರಲಿಲ್ಲ. ಇಬ್ಬರೂ ತಮ್ಮ ತಮ್ಮ ಮನೆಗಳಲ್ಲಿ ಇರುತ್ತಿದ್ದರು. ಇಬ್ಬರಿಗೂ ತಮ್ಮದೇ ಆದ ನೌಕರರಿದ್ದರು. ಓಡಾಡಲು ವಾಹನಗಳಿದ್ದವು. ಹೀಗೆ ಇಬ್ಬರಿಗೂ ಪ್ರತ್ಯೇಕ ವ್ಯವಸ್ಥೆಗಳಿದ್ದವು. ಇವರ ಪತಿಗೆ ರಾಜನ ಮರ್ಯಾದೆ ಇದ್ದುದರಿಂದ ಇವರ ಹಿರಿಯ ಪತ್ನಿಯನ್ನು ದೊಡ್ಡ ರಾಣಿಯೆಂದು, ಚಿಕ್ಕವಳನ್ನು ಚಿಕ್ಕ ರಾಣಿ ಎಂದೂ ಜನ ಸಂಬೋಧಿಸುತ್ತಿದ್ದರು.

ನಾವು ಅಲ್ಲಿಗೆ ಹೋದಾಗ ಕೇಳಿ ಬಂದ ಮಾತಿನ ರೀತ್ಯ ಸೂರಜ್‌ಭಾನ್‌ಳಷ್ಟು ಸುಂದರ ಹೆಣ್ಣನ್ನು ಯಾರೂ ನೋಡಿದ್ದಿಲ್ಲ. ಸುಂದರಳಾಗಿದ್ದರೆ ಏನು ? ಅವಳ ನಡತೆ ಒಳ್ಳೆಯದಿರಲಿಲ್ಲ. ಅವಳು ಮುಖ ಪರದೆಯನ್ನು ಒಪ್ಪುತ್ತಿರಲಿಲ್ಲ. ಕ್ಲಬ್‌ಗೆ ಹೋಗುತ್ತಿದ್ದಳು. ಅಧಿಕಾರಿಗಳ ಜೊತೆ ನರ್ತಿಸುತ್ತಿದ್ದಳು. ಆ ನಗರದಲ್ಲಿದ್ದ ಪ್ರತಿಷ್ಠಿತ ಅಧಿಕಾರಿಗಳನ್ನೆಲ್ಲಾ ಆಹ್ವಾನಿಸಿ ಪಾರ್ಟಿ ಕೊಡುತ್ತಿದ್ದಳು. ಆಕೆ ಒಂದು ಸೀರೆಯನ್ನು ಎರಡನೆ ಬಾರಿ ಉಟ್ಟಿದ್ದನ್ನು ಯಾರೂ ಕಂಡಿರಲಿಲ್ಲ. ಇನ್ನೂರೈವತ್ತಕ್ಕೂ ಹೆಚ್ಚು ಜೊತೆ ಪಾದರಕ್ಷೆಗಳು ಆಕೆಯ ಬಳಿ ಇದ್ದವು. ಅವಳು ಶರೀರಕ್ಕೆ ಕೆನೆ ಹಚ್ಚುತ್ತಿದ್ದಳು. ಹಾಲಿನಿಂದ ತುಂಬಿದ ತೊಟ್ಟಿಯಲ್ಲಿ ಸ್ನಾನ ಮಾಡುತ್ತಿದ್ದಳು. ಅನಂತರ ಅದೇ ಹಾಲು ಪೇಟೆಯಲ್ಲಿ ಮಾರಲಿಕ್ಕೆ ಸಿಗುತ್ತಿತ್ತು. ನಗರದಲ್ಲೆಲ್ಲಾ ಚರ್ಚೆ ನಡೆದಿತ್ತು. ಅವಳ ದೃಷ್ಟಿ ಯಾರ ಮೇಲಾದರೂ ಬಿದ್ದರೆ ಸಾಕು, ಆತನ ಅದೃಷ್ಟ ಖುಲಾಯಿಸಿದಂತೇ. ಆತ

ಯಾರೇ ಆಗಿರಲಿ, ಆ ಬಗ್ಗೆ ಚಿಂತಿಸಬೇಕಾಗಿಲ್ಲ. ಅವಳಿಗೆ ಹಣ ಬೇಕಿರಲಿಲ್ಲ, ಉಡುಗೊರೆಯ ನಿರೀಕ್ಷೆ ಇರಲಿಲ್ಲ. ಅವಳಿಗೆ ಆತ ಒಪ್ಪಿಗೆ ಆಗಬೇಕು ಅಷ್ಟೇ. ಆದರೆ ಅವಳಿಗೆ ಇಷ್ಟವಾಗುವುದೇನು ಸುಲಭದ ಮಾತಾಗಿರಲಿಲ್ಲ.

ಕೆಲಸಕ್ಕೆ ಸೇರಿದ ಮೇಲೆ ಸೂರಜ್‌ಭಾನ್‌ಳಿಂದ ನನಗೂ ಆಮಂತ್ರಣ ಬಂತು. ಮೆಹರ್‌ಬಾನ್ ಪ್ರಶ್ನಿಸಿದಾಗ ಆತನ ಹೆಸರಿಗೆ ಆಮಂತ್ರಣ ಪತ್ರ ಬಂದಿರುವುದಾಗಿ ತಿಳಿದುಬಂತು. ಅದೊಂದು ಗಾರ್ಡನ್ ಪಾರ್ಟಿ. ಆದರೆ ಇದಕ್ಕೆ ಹೋಗುವುದಿಲ್ಲವೆಂದು ಮೆಹರ್‌ಬಾನ್ ತಿಳಿಸಿದ. ಪ್ರಶ್ನಿಸಿದಾಗ ಅಂತಹ ಹೆಂಗಸಿನೊಡನೆ ಸಂಬಂಧ ಬೆಳೆಸಿಕೊಳ್ಳಲು ಇಷ್ಟವಿಲ್ಲವೆಂದು ತಿಳಿಸಿದ. ನಾನು ಹಾಸ್ಯ ಮಾಡುತ್ತಾ ನುಡಿದೆ "ಒಂದು ತರಹ ಮಾವಿದೆ ಅದರ ಹೆಸರು..... ಹಾಗಾದರೆ ನಿಂಗೆ ಆಗುವುದು ಇಷ್ಟವಿಲ್ಲ."

"ನಾನೇನು ಮಾವಿನ ಹಣ್ಣಲ್ಲವಲ್ಲ? ನನಗೂ ಆತ್ಮಾಭಿಮಾನವಿದೆ. ಯುಗಯುಗಗಳಿಂದ ಪುರುಷನೇ ತನ್ನ ಆಯ್ಕೆಯನ್ನು ತಿಳಿಸಿದ್ದಾನೆ. ಈ ಆಯ್ಕೆಯ ಅಧಿಕಾರ ಗಂಡಿಗೇ ಇರುವುದು. ಇಲ್ಲಾದರೆ ಎಲ್ಲವೂ ತಿರುಗುಮುರುಗು. ಸೂರಜ್‌ಭಾನ್ ತನ್ನ ಕಣ್ಣುಗಳಿಂದ ನನ್ನನ್ನು ಪರೀಕ್ಷಿಸುವಳು. ಬಡವನೆನಿಸಿದರೆ ನನ್ನನ್ನು ನಿರಾಕರಿಸುವಳು. ಹೇಳುತ್ತಾ ಹೇಳುತ್ತಾ ಮೆಹರ್‌ಬಾನ್‌ನ ರಕ್ತ ಬಿಸಿಯಾಯಿತು.

"ಏನಾಯ್ತು?" ನಾನು ಪ್ರಶ್ನಿಸಿದೆ. "ಸ್ವಯಂವರ ಪದ್ಧತಿ ಆವರಲ್ಲಿ ಇದೆಯಲ್ಲಾ."
"ಹಾಂ! ಸ್ವಯಂವರದಲ್ಲಿ ಯಾರನ್ನು ವರಿಸಲು ಸಾಧ್ಯವಿಲ್ಲವೋ ಅವರನ್ನು ಯುದ್ಧ ಮಾಡಿ ಗೆದ್ದು ಹೊತ್ತುಕೊಂಡು ಹೋಗುತ್ತಿದ್ದರು. ಆದರೆ ತಾವು ಯಾರನ್ನು ಯಾರೊಡನೆ ಹೋಲಿಸುತ್ತಿದ್ದೀರಿ.... ಅಂತಹ ರಾಜಕುಮಾರಿಯ ಸ್ವಯಂವರ ಎಲ್ಲಿ? ಈ ವಿಲಾಸಿನಿಯ ಲಾಲಸೆಯ ಬೆಲೆ ಎಲ್ಲಿ?"

ಈ ಮಾತನ್ನೇ ಮುಖ್ಯವಾಗಿರಿಸಿಕೊಂಡು ಮೆಹರ್‌ಬಾನ್‌ನನ್ನು ಹೆಚ್ಚಿಗೆ ವ್ಯಾಕುಲಗೊಳಿಸಲು ಇಚ್ಛಿಸಲಿಲ್ಲ. ನಾನೊಬ್ಬನೇ ಪಾರ್ಟಿಗೆ ಹೊರಟುಹೋದೆ.

ಹಾ! ನಾನು ಒಪ್ಪಿಕೊಂಡೆ, ಸೂರಜ್‌ಭೊನ್ ಸುಂದರಿಯಾಗಿದ್ದಳು. ಅವಳ ವರ್ಣನೆಯನ್ನು ಹೇಗೆ ಮಾಡಲಿ? ನಾನು ತಮ್ಮಂತೆ ಕವಿಯಲ್ಲ. ಅಂಧಕಾರ ತುಂಬಿದ ರಾತ್ರಿಯಲ್ಲಿ ಬಾಣ ಬಿರುಸುಗಳನ್ನು ಸಿಡಿಸಿದಾಗ ಆಕಾಶ ಜಗ್ಗನೆ ಬೆಳಗುತ್ತದೆ ಹಲವು ಬಣ್ಣಗಳನ್ನು ಸುತ್ತಲೂ ಹರಡುತ್ತದೆ. ಇದನ್ನೆಲ್ಲ ಆನಂದಿಸುವ ಮನುಷ್ಯ ಇವೆಲ್ಲಾ ಗಂಧಕ ಮತ್ತು ಮದ್ದಿನ ಆಟವೆಂದು ತಿಳಿಯುವುದಿಲ್ಲ. ಇದೇ ರೀತಿ ಉತ್ಸವದಲ್ಲಿ ಜನಸಂದಣಿಯಲ್ಲಿ ಸೂರಜ್‌ಭಾನುವಿನ ಆಗಮನವೂ ಪ್ರಭಾವ ಬೀರಿತ್ತು. ಆಕೆ ಬಂದೊಡನೆ ಎಲ್ಲರೂ ಪ್ರಭಾವಿತಗೊಂಡರು. ಅಲ್ಲೇನಾದರೂ ಕನ್ನಡಿ ಇದ್ದಿದ್ದರೆ ಎಲ್ಲರೂ ತಮ್ಮ ತಮ್ಮ ಮುಖಗಳನ್ನು ಅದರಲ್ಲಿ ನೋಡಬಯಸುತ್ತಿದ್ದರು. ಏತಕ್ಕೆಂದರೆ ಅದೇ ಮುಖ ರಾಣಿಗೆ ಇಷ್ಟವಾಗಬಹುದು.

ಅಂದಿನ ನಂತರ ಆಹ್ವಾನ ಲಭಿಸಿದಾಗಲೆಲ್ಲಾ ಪಾರ್ಟಿಗಳಿಗೆ ಹಾಜರಾಗುತ್ತಿದ್ದೆ. ರಾಣಿಗೆ ಇಷ್ಟವಾಗಬೇಕೆಂಬ ಒಂದೇ ಅಭಿಲಾಷೆಯಿಂದಲ್ಲ. ಅಲ್ಲಿನ ಬಾಣ ಬಿರುಸಿನ

ಆಟವನ್ನು ನೋಡಲು ಧಾವಿಸುತ್ತಿದ್ದೆ. ಮೆಹರ್‌ಬಾನ್ ಜೊತೆಗಿರುತ್ತಿದ್ದರೆ ತೊಂದರೆಯೇ ಆಗುತ್ತಿತ್ತು.

ಆತನಿಗೆ ಅಲ್ಲಿಗೆ ಹೋಗಲೂ ಸಾಧ್ಯವಾಗುತ್ತಿರಲಿಲ್ಲ. ಹೋಗದೆಯೂ ಆತ ಇರದಾಗಿದ್ದ. ಬೇರೆ ಕಡೆ ವರ್ಗ ಮಾಡಿಸಿಕೊಂಡು ಓಡಿಹೋಗಲೂ ಅಶಕ್ತನಾಗಿದ್ದ. ಆತನ ಸ್ವಾಭಿಮಾನ ಇದನ್ನು ಒಪ್ಪದಾಗಿತ್ತು. ಅವನ ಕುತೂಹಲ ಅವನನ್ನು ಹೀಗೆ ಜೀವಿಸಲು ಬಿಡುತ್ತಿರಲಿಲ್ಲ, ಕರ್ತವ್ಯ ಆತ ಓಡಿ ಹೋಗಲು ಒಪ್ಪದಾಗಿತ್ತು. ಆತ ಸುಮ್ಮನೆ ತಳಮಳಿಸುತ್ತಿದ್ದಾನೆ ಎಂದು ನಾನು ಭಾವಿಸಿದ್ದೆ. ನಾನು ಅವನಿಗೆ ಹೇಳಿದೆ "ನೀನು ರಜಾ ಪಡೆದು ಮನೆಗೆ ಹೋಗು. ಮದುವೆ ಮಾಡಿಕೊ." ಆತ ಸುಮ್ಮನೆ ಕೇಳುತ್ತಾ ಇದ್ದು, ಏನೂ ಉತ್ತರಿಸಲಿಲ್ಲ.

ಒಂದು ದಿನ ಸೂರಜ್ ಭಾನು ನನ್ನನ್ನು ಪ್ರಶ್ನಿಸಿದಳು. "ಸರಿ, ಮೆಹರ್‌ಬಾನ್ ಸಿಂಹ ತಮ್ಮ ಸ್ನೇಹಿತ ತಾನೇ? ಈ ನಡುವೆ ಅವರು ಯಾಕೆ ಬರುತ್ತಲೇ ಇಲ್ಲ. ಒಮ್ಮೆ ಕರೆದುಕೊಂಡು ಬರಲಾರಿರಾ?"

ನಾನು ಹೇಗೋ ಆ ವಿಷಯವನ್ನು ತಳ್ಳಿ ಹಾಕಿದೆ. ನಿಜಸಂಗತಿಯನ್ನು ಹೇಗೆ ಹೇಳಲು ಸಾಧ್ಯವಿತ್ತು? ಎಂದೂ ನಿಜವನ್ನೇ ಹೇಳಬೇಕೆಂಬುದು ಪಠ್ಯಪುಸ್ತಕಗಳಿಗೆ ಮಾತ್ರ ಶೋಭಿಸುತ್ತದೆ. ಅಲ್ಲಿಂದ ಹಿಂತಿರುಗಿದ ಮೇಲೆ ಮೆಹರ್‌ಬಾನ್ ಸಿಂಹನಿಗೆ ಎಲ್ಲಾ ವಿಷಯವನ್ನು ವಿವರಿಸಿ ಹೇಳಿದೆ. ಎಲ್ಲಾ ವಿಷಯವನ್ನು ಕೇಳಿ ಮೆಹರ್‌ಬಾನ್ ಕೊಂಚ ಅಸ್ಥಿರಗೊಂಡ. ಅದು ಸಂತೋಷವೇ ಅಥವಾ ಕೋಪವೇ ಅರ್ಥವಾಗದು. ನನ್ನನ್ನು ಒಬ್ಬನೇ ಬಿಟ್ಟು ಎಲ್ಲೋ ತಿರುಗಾಡಲು ಹೊರಟು ಹೋದ. ಮುಂದೆ ಸೂರಜ್‌ಭಾನ್ ನೀಡಿದ ಔತಣ ಕೂಟದಲ್ಲಿ ಮೆಹರ್‌ಬಾನ್ ಉಪಸ್ಥಿತನಿದ್ದ.

ನಾನು ಸೂರಜ್‌ಬಾನ್‌ಗೆ ಆತನ ಪರಿಚಯ ಮಾಡಿಸಿದೆ. ಆಗ ಅಲ್ಲೊಂದು ಕನ್ನಡಿ ಇದ್ದಿದ್ದರೆ ಚೆನ್ನಿತ್ತು. ಆದರೆ ಅದನ್ನು ತರುವುದೆಲ್ಲಿ? ಆದರೆ ಅದರ ಅಗತ್ಯವೂ ಕಂಡುಬರಲಿಲ್ಲ. ಸೂರಜ್‌ಭಾನ್‌ಳ ಕಣ್ಣೇ ಕನ್ನಡಿಯಾಗಿತ್ತು. ಲಜ್ಜಿತ ಮೆಹರ್‌ಬಾನ್‌ನ ಮುಖದಲ್ಲಿ ಸುಂದರ ಕಪ್ಪು ಕಣ್ಣುಗಳು ಅರಳಿದ್ದವು. ಮುಂದಿನ ಒಂದೆರಡು ಭೇಟಿಯಲ್ಲಿ ನಡೆದ ಘಟನೆಗಳು ನನ್ನ ಬಿಟ್ಟು ಉಳಿದವರಿಗೆ ಏನೂ ತಿಳಿಯದು.

ಮೆಹರ್‌ಬಾನ್‌ನನ್ನು ರೇಗಿಸಲು ಬಯಸಿದ್ದೆ. ಆದರೆ ಧೈರ್ಯ ಬರಲಿಲ್ಲ. ಆತನ ಮುಖ ನೋಡಿ ಹೆದರಿದೆ. ಆತ ಯಂತ್ರದಂತೆ ಕಾರ್ಯ ನಿರ್ವಹಿಸುತ್ತಿದ್ದ. ತನ್ನ ಕೆಲಸದಲ್ಲಿ ಆತನಿಗೆ ಬಹು ಅಭಿಮಾನ. ನನ್ನ ಬಗ್ಗೆ ಸ್ನೇಹಾಭಿಮಾನ ಕಡಿಮೆ ಆಗಿಲ್ಲದೆ ಇದ್ದರೂ ಒಳಗೇ ಆತ ಬಹು ಬದಲಾಯಿಸತೊಡಗಿದ್ದ. ನಾನು ನಿರ್ಧರಿಸಿದ್ದೆ. ಆತ ಏನು ಹೇಳಿದರೂ ನಾನು ಕೇಳುತ್ತೇನೆ. ಆದರೆ ನಾನಾಗಿ ಏನನ್ನೂ ಹೇಳುವುದಿಲ್ಲ.

ಆತನ ಮನಸ್ಸು ಯಾರಿಗಾಗಿಯೋ ಬಹಳ ಪರಿತಪಿಸುತ್ತಿದೆ ಎಂದು ಭಾವಿಸಿದ್ದೆ. ಆದರೆ ಇದನ್ನು ನಾನು ಹೇಳಿದರೆ ಆತ ಖಂಡಿತ ಒಪ್ಪುವುದಿಲ್ಲ. ಈ ಬಗ್ಗೆ ಮತ್ತೇನನ್ನೋ ಹೇಳುತ್ತಾನೆ. ನನಗೆ ಆಕೆಯ ಬಗ್ಗೆ ತಿರಸ್ಕಾರವಿದೆ. ಆಕೆಯ ಶರೀರ ದೂಷಿತವಾದದ್ದು. ಅವಳು ವೇಶ್ಯೆಯಲ್ಲದೆ ಮತ್ತೇನು? ಹಣ

ತೆಗೆದುಕೊಳ್ಳುವುದಿಲ್ಲ, ಅದೊಂದು ವ್ಯತ್ಯಾಸ. ನನಗೆ ಆಸೆಯಾದರೆ ಸೀದಾ ಕೋಠಿಗೆ ಹೋಗಿಬರುತ್ತೇನೆ. ಅಲ್ಲಿ ನಾನು ಬಯಸಿದ್ದು ಲಭ್ಯವಿದೆ. ಬೆಲೆ ತೆತ್ತು ಸುಖ ಪಡೆಯುತ್ತೇನೆ. ಸೂರಜ್‌ಭಾನ್ ಮನೆ ಬಾಗಿಲಿಗೆ ಹೋಗುವಂತಹ ಯಾವ ದುಃಖವಿದೆ ನನಗೆ? ಹಾಗೆ ಮಾಡುವುದರಿಂದ ನನಗೇನಾದರೂ ಸುಖ ಲಭಿಸುವುದೇ. ಅವಳು ನನ್ನನ್ನು ಭೋಗಿಸುತ್ತಾಳೆ ಅಷ್ಟೆ. ನಾನು ರಾಣಿಪಸಂದೇ?

ಇದೇ ತರಹ ಭಾಷಣಗಳನ್ನು ನಾನು ಆತನಿಂದ ದಿನನಿತ್ಯ ಕೇಳುತ್ತಿದ್ದೆ. ಆತನ ಮನಸ್ಸಿನಲ್ಲಿ ದ್ವಂದ್ವ ನಡೆದಿತ್ತು. ಇದರಿಂದಾಗಿ ಶಾಂತಿ ಲಭಿಸದಾಗಿತ್ತು. ಆದರೆ ತಾನು ಆಕೆಯುತ್ತ ಆಕರ್ಷಿತನಾಗಿದ್ದೇನೆ ಎಂಬುದನ್ನು ನನ್ನ ಮುಂದೆ ಒಪ್ಪದಾಗಿದ್ದ. ನನಗೆ ಇದೆಲ್ಲಾ ಅರ್ಥವಾಗಿದ್ದರೂ ಆತನ ಮುಂದೆ ಈ ಬಗ್ಗೆ ಚಕಾರ ಎತ್ತಲಿಲ್ಲ. ನಾನು ಹೇಳುತ್ತಲೇ ಇದ್ದೆ, ಅಲ್ಲಿಗೆ ಬರಲು ಯಾರೂ ನಿನ್ನನ್ನು ಬಲವಂತ ಮಾಡುತ್ತಿಲ್ಲ. ನೀನು ಅಲ್ಲಿಗೆ ಬಾರದೆ ಹೋದರೆ ಯಾರೂ ತಪ್ಪು ತಿಳಿಯುವುದಿಲ್ಲ. ಸೂರಜ್‌ಭಾನ್ ಎಲ್ಲರನ್ನೂ ಕರೆದಂತೆ ನಿನ್ನನ್ನೂ ಕರೆಯುತ್ತಾಳೆ. ಅವಳಿಗೆ ಯಾರು ಇಷ್ಟ ಯಾರು ಇಲ್ಲ, ಈ ಬಗ್ಗೆ ಪ್ರಕಟಣೆಯನ್ನೇನೂ ಆಕೆ ಕೊಡುವುದಿಲ್ಲ. ಅದೆಲ್ಲವೂ ಅವಳ ಕಣ್ನೋಟ ನಿರ್ಧರಿಸುತ್ತದೆ. ಅರ್ಧ ರಾತ್ರಿ ಯಾರದೋ ಮನೆಯ ಮುಂದೆ ಆಕೆಯ ಕಾರು ಬಂದು ನಿಲ್ಲುತ್ತದೆ. ಯಾರನ್ನೋ ಹೊತ್ತುಕೊಂಡು ವಾಹನ ಮಾಯವಾಗುತ್ತದೆ ಮತ್ತು ಆತನನ್ನು ಇನ್ನೆಲ್ಲೋ ಬಿಟ್ಟು ಬಿಡಲಾಗುತ್ತದೆ. ಈ ಬಗ್ಗೆ ಯಾರ ಗಮನವೂ ಹರಿಯುವುದೇ ಇಲ್ಲ.

"ಆಕೆಯೊಬ್ಬಳು ದುಷ್ಟ, ಕೆಟ್ಟ ಹೆಂಗಸು." ಮೆಹರ್‌ಬಾನ್ ಮುಖ ಕೆಂಪು ಮಾಡಿಕೊಂಡು ಬೈಯಲು ಪ್ರಾರಂಭಿಸಿದ. "ಕಳ್ಳ ಕೊರಮ ಹೆಂಗಸು! ಕ್ರೂರ ಹೆಂಗಸು!" ಇದೇ ರೀತಿ ಹಲವಾರು ಬೈಗಳ ಮಳೆ ಸುರಿಸಿದ.

ನಾನು ಇದನ್ನು ಖಂಡಿಸಿದೆ. "ನಿನಗಂತೂ ಆಕೆ ಏನೂ ನಷ್ಟವನ್ನುಂಟು ಮಾಡಿಲ್ಲ. ಅವಳನ್ನು ಕೆಟ್ಟದಾಗಿ ಸುಮ್ಮನೆ ಏಕೆ ಬೈಯುತ್ತಿ? ಇದೆಂತಹ ಸಭ್ಯತೆ?"

ಕೆಲದಿನಗಳ ನಂತರ ಮೆಹರ್‌ಬಾನ್ ನುಡಿದ. "ನೀನು ಅಂದು ಹೇಳ್ತಾ ಇದ್ದೆಯಲ್ಲಾ, ಕ್ರಮೇಣ ಎಲ್ಲಾ ಸ್ಥಳಗಳೂ ಸರಿ ಹೋಗುತ್ತೆ ಅಂತಾ, ಬಜಾರಿನಲ್ಲಿ ಒಂದು ಸಣ್ಣ ಪುಸ್ತಕ ದೊರೆಯುತ್ತೆ ಅದರಲ್ಲಿ ಪ್ರೇಮ ಸಮಾಗಮದ ಬಗ್ಗೆ ಬಹಳ ವಿಷಯವಿದೆ."

ನಾನು ನುಡಿದೆ "ನಿನಗೇನು ಅದರ ಅಗತ್ಯ? ನೀನೇನು ಹೋಗುತ್ತಿಲ್ಲವಲ್ಲ? ಹೋಗುವೆ ಏನು?"

ನನ್ನ ಮಾತು ಆತನಿಗೆ ಹಿಡಿಸಲಿಲ್ಲ. ಆದರೆ ಮೆಹರ್‌ಬಾನ್‌ನ ಮೇಲೆ ಆಕೆ ಜಾದೂ ಮಾಡಿದ್ದಳು. ವಶೀಕರಣ ಎಂಬುದೊಂದು ವಿದ್ಯೆ. ಈ ಬಗ್ಗೆ ನನಗೆ ಹಿಂದೆ ನಂಬಿಕೆ ಇರಲಿಲ್ಲ. ಆನಂತರ ಇದರಲ್ಲಿ ನನಗೆ ವಿಶ್ವಾಸ ಮೂಡಿತು. ಮೆಹರ್‌ಬಾನ್ ನನ್ನ ಪಕ್ಕದ ಮನೆಯಲ್ಲಿ ವಾಸವಾಗಿದ್ದ. ಆತನ ಚಲನ ವಲನದ ಮೇಲೆ ಕಣ್ಣಿರಿಸಿದ್ದೆ. ರಾತ್ರಿ ಹತ್ತರ ಹೊತ್ತಿಗೆ ಆತ ಹೊರಗೆ ಹೋಗುತ್ತಿದ್ದ. ಮಧ್ಯರಾತ್ರಿ ಕಳೆದನಂತರ ಕಳೆಗುಂದಿದ ಮುಖ ಮಾಡಿಕೊಂಡು ಹುಚ್ಚನಂತಹ ದೃಷ್ಟಿ ಬೀರುತ್ತಾ

ಹಿಂತಿರುಗುತ್ತಿದ್ದ. ಈ ನಡುವೆ ಆತನ ಮಾತುಕತೆಗಳಲ್ಲಿ ತಾರತಮ್ಯವೇ ಇರುತ್ತಿರಲಿಲ್ಲ. ತಲೆಬುಡವಿಲ್ಲದೆ ಮಾತು ಆಡುತ್ತಿದ್ದ. ಆತನ ಮಾತುಗಳಲ್ಲಿ ಅಶ್ಲೀಲ ಶಬ್ದಗಳೂ ನುಸುಳಹತ್ತಿದ್ದವು. ಬುಟ್ಟಿ ತುಂಬಾ ಕೆಟ್ಟ ಬೈಗುಳ ನೀಡುತ್ತಿದ್ದ. ದಿನಂಪ್ರತಿ ಇವುಗಳ ಸಂಖ್ಯೆ ಹೆಚ್ಚುತ್ತಾ ನಡೆದಿದ್ದವು.

ಆತನ ಮನೆಗೆ ಸಮಾಚಾರ ಕಳುಹಿಸಿ ಯಾವುದಾದರೂ ಮುದುಕ ಮುದುಕಿಯನ್ನು ಕರೆತರಲು ಮನಸ್ಸು ಸೂಚಿಸುತ್ತಿತ್ತು. ಇನ್ನೂ ಪರಿಸ್ಥಿತಿ ಕೈಮೀರಿ ಹೋಗಿರಲಿಲ್ಲ. ಆಗಬಾರದ ಘಟನೆ ಇನ್ನೂ ಘಟಿಸಿರಲಿಲ್ಲ. ಯಾವುದಾದರೂ ಸುಂದರ ಹುಡುಗಿಯೊಡನೆ ಆತನ ವಿವಾಹವಾದರೆ ಆತನ ಕೆಟ್ಟ ವಿಚಾರಗಳೆಲ್ಲಾ ಒಂದು ದಿನದಲ್ಲಿ ನಾಶವಾಗಲು ಸಾಧ್ಯವಿತ್ತು. ಅಲ್ಲದೆ ಆತನನ್ನು ಸಯಾಲ್ ಕೋಟ್‌ನಿಂದ ಲಾಹೋರ್ ಅಥವಾ ಅಮೃತಸರಕ್ಕೆ ವರ್ಗ ಮಾಡಿದರೆ ಸೂರಜ್‌ಭಾನ್‌ಳ ನೆನಪು ಬಾಣ ಬಿರುಸಿನ ಬೆಳಕಿನಂತೆ ನಂದಿ ಹೋಗುತ್ತಿತ್ತು. ಆದರೆ ಮೆಹರ್‌ಬಾನ್‌ನ ಹಿರಿಯರಿಗೆ ಈ ಬಗ್ಗೆ ತಿಳಿಸುವ ಧೈರ್ಯ ಮಾತ್ರ ನನಗಿರಲಿಲ್ಲ. ಇದರಿಂದ ಆತ ಕೋಪಗೊಳ್ಳುವುದರಲ್ಲಿ ಸಂದೇಹವಿರಲಿಲ್ಲ. ಆತ ಸಾಮಾನ್ಯವಾಗಿ ತಣ್ಣನೆಯ ಪ್ರವೃತ್ತಿಯ ಮನುಷ್ಯ. ಆದರೆ ಕೋಪ ಬಂದಾಗ ತನ್ನನ್ನು ತಾನೇ ನಿಯಂತ್ರಿಸಿಕೊಳ್ಳಲಾಗುತ್ತಿರಲಿಲ್ಲ.

ಇದಾದ ನಂತರ ಸೂರಜ್‌ಭಾನ್‌ಳ ಮಹಲಿನಲ್ಲಿ ಎರಡು ಪಾರ್ಟಿಗಳು ನಡೆದವು. ನಾನು ಹೋಗಿದ್ದೆ. ಮೆಹರ್ ಬಾನ್ ಬಂದಿದ್ದ. ಈ ದಿನಗಳಲ್ಲೇ ಅವರ ಭೇಟಿ ನಿಶ್ಚಯವಾಯಿತು.

ಕೆಲವು ದಿನಗಳ ನಂತರ ಒಂದು ದಿನ ಪೆರೇಡ್‌ಗಾಗಿ ಬಟ್ಟೆ ಬದಲಾಯಿಸುತ್ತಿದ್ದೆ. ಮೆಹರ್‌ಬಾನ್ ಸಿಂಹ ಬಂದು ಅಡ್ಡಿ ಪಡಿಸಿದ. ಆತನ ಕಣ್ಣುಗಳಲ್ಲಿ, ಮುಖದಲ್ಲಿ ವಿಜಯದ ಕಳೆ ಇತ್ತು. ಆದರೂ ಉದಾಸೀನನಾಗಿರುವಂತೆ ನಟಿಸುತ್ತಾ ಹೇಳಿದ "ಲೋ, ನಾನು ಸತ್ತೆ ಕಣೋ."

ಇದರರ್ಥವೇನು ಎಂಬುದು ನನಗೆ ಕೂಡಲೇ ತಿಳಿಯಿತು. ಆದರೂ ಒಮ್ಮೆಗೇ ಈ ಮಾತು ಕೇಳಿ ಹೆದರಿದೆ. "ಏನು..... ಏನಾಯ್ತು" ಪ್ರಶ್ನಿಸಿದೆ.

ಮೆಹರ್‌ಖಾನ್ ಉದಾಸೀನತೆಯಿಂದಲೇ ನುಡಿದ "ನಾನು ರಾಣಿಪಸಂದ್ ಆಗಿ ಹೋಗಿದ್ದೇನೆ."

ನಾನು ಗಂಭೀರವಾಗಿಯೇ ನುಡಿದೆ "ಒಳ್ಳೆದು. ಆದರೆ ಇದು ಸರಿಯಲ್ಲ. ನೀನು ಪೆರೇಡ್‌ಗೆ ತಪ್ಪಿಸಿಕೊಳ್ಳಲು ಪ್ರಾರಂಭಿಸಿದಾಗಲೇ ನನಗೆ ಅರ್ಥವಾಗಿತ್ತು. ಹೀಗೆ ಮಾಡೋದ್ರಿಂದ ನೀನು ನೌಕರಿಯನ್ನು ಉಳಿಸಿಕೊಳ್ಳಲಾರೆ."

ಆತ ದೀರ್ಘ ಉಸಿರನ್ನು ಬಿಟ್ಟ. "ನಾನು ಅಸಹಾಯಕ. ನನ್ನ ಅದೃಷ್ಟ ನನ್ನನ್ನು ಎಲ್ಲಿ ಕೊಂಡೊಯ್ಯುತ್ತಿದೆ, ನನಗೇ ಅರ್ಥವಾಗುತ್ತಿಲ್ಲ. ನೀನು ನನ್ನ ಸ್ನೇಹಿತ. ಈ ಬಗ್ಗೆ ಏನಾದ್ರೂ ಸಲಹೆ ಕೊಡ ಬಲ್ಲೆಯಾ ?"

ಎಂತಹ ಸಲಹೆ ? ಆತನ ಬಗ್ಗೆ ಸಹಾನುಭೂತಿ ನನ್ನ ಅಂತರ್ಯ ತುಂಬಿತ್ತು.

ನಡುಗುತ್ತಾ ನುಡಿದ "ನಾನು ಅದರ ಬೆಲೆ ಕೊಡಲು ಸಿದ್ಧ ಮಿತ್ರಾ, ಅದನ್ನು ಕೊಡ್ದೆ ಹೋದ್ರೆ ನಾನು ಆಳಾಗಿ ಹೋಗ್ತಿನಿ. ನನ್ನ ಗೌರವವೇ ಹೊರಟುಹೋಗುತ್ತೆ."

ನಾನು ಯೋಚಿಸಿ ನುಡಿದೆ "ಅವಳಿಗೆ ಏತರಲ್ಲಿ ಕಡಿಮೆ ಇದೆ. ನಿನ್ನಿಂದ ಹಣ ಬಯಸುತ್ತಾಳೆಯೆ ? ನೀನು ಐವತ್ತು ರೂಪಾಯಿಯ ಉಡುಗೊರೆ ಕೊಟ್ಟರೆ ಅವಳು ಐದು ಸಾವಿರದನ್ನು ಹಿಂತಿರುಗಿಸುತ್ತಾಳೆ."

"ನಾನು ಒಂದು ಲಕ್ಷದ ಉಡುಗೊರೆ ಕೊಡುತ್ತೇನೆ." ಅವನು ಉತ್ತೇಜಿತನಾಗಿ ತಕ್ಷಣ ನುಡಿದ. "ಆದರೆ ಒಂದು ಲಕ್ಷ ಎಲ್ಲಿಂದ ತರಲಿ ? ಯಾವ ಖಜಾನೆಗೆ ಕನ್ನ ಹಾಕಲಿ ? ಆಫೀಸ್‌ನ ಖಜಾನೆ ಲೂಟಿ ಮಾಡುವುದು ಸರಿಯೇ ?"

ಆತನ ಮಾತನ್ನು ಕೇಳಿ ನನಗೆ ಯೋಚನೆಯಾಯಿತು. ಅಂದರೆ ಆತನ ಮನೆಯವರಿಗೆ ಈ ವಿಷಯವನ್ನು ಸೂಕ್ಷ್ಮವಾಗಿ ತಿಳಿಸಿ ಕಾಗದ ಬರೆದೆ. ಆತ ಏನಾದರೂ ಕಳ್ಳತನ ಗಿಳ್ಳತನ ಮಾಡಿಯಾನೆಂದು ಆತನ ಮೇಲೆ ಕಣ್ಣಿರಿಸಿದೆ. ಪೆರೇಡ್‌ನಲ್ಲಿ ಗೈರು ಹಾಜರಾಗಲು ಸರ್ಟಿಫಿಕೇಟ್‌ಗಾಗಿ ಡಾಕ್ಟರ್ ಹತ್ತಿರ ಹೋಗಿದ್ದೆ. ಡಾಕ್ಟರ್ ಬಳಿಗೆ ಹೋಗಿ "ಅವನನ್ನು ಆಸ್ಪತ್ರೆಗೆ ಸೇರಿಸಿ" ಎಂದು ನುಡಿದೆ. ಇದನ್ನು ನುಡಿಯುವಾಗ ನಾನು ಹಿಂದೆಮುಂದೆ ಯೋಚಿಸಿರಲಿಲ್ಲ.

ಮೆಹರ್‌ಬಾನ್‌ನ ಅಣ್ಣ ಅವನನ್ನು ಕರೆದೊಯ್ಯಲು ಬಂದ. ರಜಾ ಮಂಜೂರಾದರೆ ತಾನೇ ಆತ ಹೋಗಲು ಸಾಧ್ಯ. ಆತನೂ ರಜಾಚೀಟಿಯನ್ನು ಬರೆದುಕೊಟ್ಟಿದ್ದ. ರಜಾಮಂಜೂರಿಗಾಗಿ ಕೆಲದಿನ ಕಾಯಬೇಕಾಯಿತು. ಇದರ ಮಧ್ಯೆ ಒಂದು ವಿಚಿತ್ರ ಘಟನೆ ಘಟಿಸಿತು.

ಒಂದು ದಿನ ಬೆಳಗ್ಗೆ ಎದ್ದೊಡನೆ ಒಂದು ಸುದ್ದಿ ಕೇಳಿ ಬಂತು. ಮೆಹರ್‌ಬಾನ್ ಸಿಂಹ ಓಡಿಹೋಗಿದ್ದಾನೆ. ಪತ್ತೆ ಕೆಲಸ ಮಾಡಿದಾಗ ಸೂರಜ್‌ಭಾನ್ ನಾಪತ್ತೆಯಾಗಿರುವುದು ತಿಳಿದುಬಂತು.

ಆದರೆ ನಗರದಲ್ಲಿ ಈ ಬಗ್ಗೆ ಗುಲ್ಲೆದ್ದಿತು. ಸೂರಜ್‌ಭಾನ್‌ಳ ಭಕ್ತರು ಹೇಳತೊಡಗಿದರು. "ಹಾಯ್ ! ಹಾಯ್ ! ಮೋಹಪಾಶದಲ್ಲಿ ಸಿಕ್ಕಿಬಿದ್ದ ಮೆಹರ್‌ಬಾನ್ ತನ್ನ ಬಾಳನ್ನೇ ಹಾಳು ಮಾಡಿಕೊಂಡ."

ಕೆಲವು ಜನ ಇದರಲ್ಲೇ ಸುಖಾನುಭವ ಪಡೆಯುತ್ತಾ ನುಡಿದರು – "ಸುಂದರಿ ರಾಜಕನ್ಯೆ ಹಾಗೂ ಅರ್ಧರಾಜ್ಯ ದೊರೆಯುವುದಾದರೆ ನಾವೂ ಓಡಿಹೋಗಲು ಸಿದ್ಧರಿದ್ದೆವು. ಸೂರಜ್‌ಭಾನ್‌ಳೇನು ಕಮ್ಮಿ ಬುದ್ಧಿವಂತಳಲ್ಲ. ಎಷ್ಟಾದರೂ ರಾಜಮನೆತನ ತಾನೆ ?"

ಇದನ್ನೆಲ್ಲಾ ಕೇಳಿ ನನ್ನ ಮನಸ್ಸು ಬಹಳ ದುಃಖಗೊಂಡಿತು. ಮೆಹರ್‌ಬಾನ್‌ನ ಅಣ್ಣ ಅಳುತ್ತಾ ಅಳುತ್ತಲೇ ಹಿಂತಿರುಗಿದ. ಸ್ವಲ್ಪದೂರ ನಾನೂ ಅವರನ್ನು ಹಿಂಬಾಲಿಸಿದೆ. ಅವರು ನುಡಿದರು "ಭಾಗ್ಯವೇ ಸರ್ವಸ್ವ."

ನಾನು ನುಡಿದೆ "ಇದೆಲ್ಲಾ ಅದೃಷ್ಟದ ಆಟ. ನಮ್ಮ ಹಣೆಯಲ್ಲಿ ಏನು ಬರೆದಿದೆಯೋ ಅದು ಆಗೇ ತೀರುತ್ತದೆ."

ತಿಂಗಳುಗಳು ಗತಿಸತೊಡಗಿದವು. ಮೆಹರ್‌ಬಾನ್‌ನ ಸಮಾಚಾರವೇ ತಿಳಿಯದು.

ಇತ್ತ ಸೂರಜ್‌ಭಾನ್‌ಳ ಮನೆಯಲ್ಲೂ ಈ ಬಗ್ಗೆ ಅಂಧಕಾರ ಕವಿದಿತ್ತು. ಅವರ ಮನೆ ಯಜಮಾನ ಈ ಬಗ್ಗೆ ಬಾಯಿ ಬಿಡುತ್ತಿರಲಿಲ್ಲ. ನಾನು ನನ್ನ ಕೆಲಸ ಕಾರ್ಯಗಳಲ್ಲಿ ಮಗ್ನನಾದೆ.

ಒಂದು ವರ್ಷದ ನಂತರ ಮೆಹರ್‌ಬಾನ್‌ನ ಪತ್ತೆ ಹತ್ತಿತು. ಆ ದಿನಗಳಲ್ಲಿ ಆತ ಅಜಮೇಲ್‌ನಲ್ಲಿ ವಾಸಿಸುತ್ತಿದ್ದ. ಆತ ನನ್ನನ್ನು ಅಜಮೇಲ್‌ಗೆ ಪ್ರವಾಸ ಬರಲು ಆಹ್ವಾನಿಸಿದ್ದ.

ಆತನಿಗೆ ನನ್ನ ಸಲಹೆ ಬೇಕಾಗಿದೆ ಎಂಬುದು ನನಗೆ ಅರ್ಥವಾಯಿತು. ನಾನು ರಜಾ ಹಾಕಿ ಅಜಮೇಲ್‌ಗೆ ಹೋದೆ. ಅಲ್ಲಿಗೆ ತಲುಪುತ್ತಲೇ ಮೆಹರ್‌ಬಾನ್ ನನ್ನನ್ನು ತನ್ನ ಬಂಗಲೆಗೆ ಕರೆದೊಯ್ದ.

ಅಲ್ಲಿ ಅವರಿಬ್ಬರೂ ಚೆನ್ನಾಗಿರುವುದನ್ನು ಕಂಡೆ. ಪತ್ನಿಯಾಗಿದ್ದ ಸೂರಜ್‌ಭಾನ್ ಬಹಳ ನಾಚಿ ಕುಳಿತಿದ್ದಳು. ನನ್ನ ಮುಂದೂ ಆಕೆ ಸ್ವಲ್ಪವೇ ಮುಖಪರದೆ ಸರಿಸಿದ್ದಳು. ಮೆಹರ್‌ಬಾನ್‌ನಿಂದ ಆಗ ನಾನು ಕೇಳಿದೆ, ಅದನ್ನೇ ತಮಗೆ ಹೇಳುತ್ತಿದ್ದೇನೆ.

ಸ್ಯಾಲ್‌ಕೋಟ್ ಬಿಟ್ಟು ಹೊರಟ ಅವರು ಹಲವು ಸ್ಥಳಗಳಿಗೆ ಹೋದರು. ಇವರಿಬ್ಬರ ಸಂಬಂಧ ಏನು ? ಹೋದೆಡೆಯಲ್ಲೆಲ್ಲಾ, ಈ ಪ್ರಶ್ನೆ ಎದುರಾಗುತ್ತಿತ್ತು. ಪತಿ–ಪತ್ನಿ ಈ ಬಗ್ಗೆ ಸೂರಜ್‌ಭಾನ್ ಹೌದು ಎನ್ನುತ್ತಿದ್ದಳು. ಆದರೆ ಈ ಬಗ್ಗೆ ಮೆಹರ್‌ಬಾನ್ ತುಟಿಯನ್ನೇ ಬಿಚ್ಚುತ್ತಿರಲಿಲ್ಲ. ನಾಲಿಗೆಯಿಂದ ಈ ಮಾತು ಹೊರಡುತ್ತಲೇ ಇರಲಿಲ್ಲ, ಇದು ಸುಳ್ಳು ಮಾತ್ರವಲ್ಲ. ಅಪ್ರಿಯವೂ ಆಗಿತ್ತು. ಆದರೆ ಹೀಗೆ ಪರಿಚಯ ನೀಡಿದ ಹೊರತು ಅವರಿಗೆ ಮನೆ ಸಿಕ್ಕುವ ಸಂಭವ ಇರಲಿಲ್ಲ. ಆಳುಕಾಳುಗಳೇನೋ ಸಿಗುತ್ತಿದ್ದರು. ಸಹಾಯ ದೊರೆಯುತ್ತಿರಲಿಲ್ಲ. ಸಮಾಜ ಸನ್ಮಾನಿಸುತ್ತಿರಲಿಲ್ಲ. ಈ ಸಂದರ್ಭದಲ್ಲಿ ಅವರಿಗೆ ಪೇಟೆಯಲ್ಲಿ ಒಂದು ಕೊಠಡಿ ಮಾತ್ರ ದೊರಕುವ ಸಂಭವವಿತ್ತು. ಇಂತಹ ಮಾತು ಕೇಳಿ ಸೂರಜ್‌ಭಾನ್ ಬೆಂಕಿ ಆಗುತ್ತಿದ್ದಳು. ಅವಳ ಗರ್ವವೇನು ಕಡಿಮೆಯುದಲ್ಲ. ಅವಳೇನು ಬಜಾರಿನ ವೇಶ್ಯೆಯೇ ?

ಅವರು ಎಲ್ಲಿಗೇ ಹೋಗಲಿ, ಕೆಲವೇ ದಿನಗಳಲ್ಲಿ ಇವರುಗಳು ವಿವಾಹಿತರಲ್ಲ ಎಂಬುದು ಜನರಿಗೆ ಅರ್ಥವಾಗಿ ಹೋಗುತ್ತಿತ್ತು. ಕೆಲವು ಯುವಕರಂತೂ ಪಾಲುದಾರರಾಗಲು ಮುಂದೆ ಬಂದರು. ಸೌಂದರ್ಯ ಎಂಬುದೊಂದು ಅಲೌಕಿಕ ವಸ್ತು. ಇದನ್ನು ಹಂಚದೆ ಆಸ್ವಾದಿಸಬಯಸಿದರೆ ಇನ್ನೊಬ್ಬರು ಸಹಿಸರು. ಸಗಣಿ ಎಸೆದು ಅಲ್ಲಿಂದ ಓಡಿಸುತ್ತಾರೆ. ಪೋಲೀಸ್‌ಗೆ ದೂರಿತ್ತರೆ ಅವರು ವಿವಾಹದ ಸರ್ಟಿಫಿಕೇಟ್ ಕೇಳುತ್ತಾರೆ ಅಥವಾ ಹೇರಳ ಹಣ. ಯಾವುದೇ ವಸ್ತುವನ್ನು ಸ್ವಂತಕ್ಕೆ ಉಪಯೋಗಿಸಿಕೊಳ್ಳಬೇಕಾದರೂ ಅದಕ್ಕೆ ಅಧಿಕಾರ ಅಗತ್ಯ ಎಂಬುದು ಮೆಹರ್‌ಬಾನ್‌ಗೆ ಈಗ ಅರ್ಥವಾಗಿತ್ತು. ಸೂರಜ್‌ಭಾನ್‌ಳನ್ನು ವಿವಾಹಿತ ಪತ್ನಿಯಾಗಿ ಸಮರ್ಥಿಸಿಕೊಳ್ಳಲು ಸಾಕ್ಷಿಗಳನ್ನು ಕೊಡುವ ಅಗತ್ಯವಿತ್ತು.

ಅವನು ರಜಪೂತ್ ಹುಡುಗ ! ಅವಳು ವ್ಯಾಪಾರಿಯೊಬ್ಬನ ವಿಧವೆ. ಅವಳು ಸತಿ–ಸಾವಿತ್ರಿಯೇನೂ ಅಲ್ಲ. ಹಾಗಿದ್ದಿದ್ದರೆ ಮಾತೇ ಬೇರೆಯಾಗುತ್ತಿತ್ತು. ಹೃದಯ

ಸೀಳಿಕೊಂಡು ದುಃಖ ಉಮ್ಮಳಿಸಿ ಬರುತ್ತಿತ್ತು. ಈಗಾಗಲೇ ಮುಖ ತಗ್ಗಿಸುವಂತಾಗಿತ್ತು. ಮತ್ತೇನು ಭೂಮಿಯೊಳಗೆ ಹುದುಗಿ ಕೂಡಲು ಸಾಧ್ಯವೇ ? ಓಡಿ ಹೋಗುವುದಂತೂ ದುಸ್ಸಾಧ್ಯ ಎಂದು ಮೆಹರ್‌ಬಾನ್‌ಗೆ ಅರ್ಥವಾಗಿತ್ತು. ನೌಕರಿಯಂತೂ ಸಿಕ್ಕುವುದಿಲ್ಲ. ಹಳ್ಳಿಗೆ ಹೋಗಿ ಬೇಸಾಯ ಮಾಡಬೇಕೆಂದರೆ ಹಿರಿಯರ ಮೂದಲಿಕೆಯನ್ನು ಸಹಿಸಬೇಕಾಗುತ್ತದೆ. ಇಷ್ಟಲ್ಲದೆ ಈ ಎಲ್ಲಾ ವಿಷಯ ಅರಿತೂ ಯಾರು ಹೆಣ್ಣು ಕೊಡಲು ಮುಂದೆ ಬರುತ್ತಾರೆ. ಮದುವೆ ಆಗದೆ ಪತ್ನಿಯ ಸಹವಾಸ ದೊರಕುವ ಸಾಧ್ಯತೆಯೂ ಇರಲಿಲ್ಲ. ಅಂದರೆ ಜೀವನ ಪರ್ಯಂತ ಆತ ಸನ್ಯಾಸಿಯಾಗಿರಲು ಸಾಧ್ಯವೇ ? ಆತ ಓಡಿಹೋಗದೆ ಇದ್ದಿದ್ದರೆ ಆತನ ಮುಂದಿದ್ದುದು ಎರಡೇ ದಾರಿ. ಒಂದು ಮದುವೆ ಆಗುವುದು, ಇನ್ನೊಂದು ಆಸ್ತಿಯನ್ನು ವಿಭಾಗಿಸುವುದು. ಮೆಹರಬಾನ್‌ಗೆ ಇವರೆಡರಲ್ಲೂ ಆಸೆಯಿರಲಿಲ್ಲ. ಇವೆರಡನ್ನೂ ಸೂರಜ್‌ಭಾನ್ ಸಮಾನ ದೃಷ್ಟಿಯಿಂದ ಸ್ವೀಕರಿಸುತ್ತಾಳೆ ಎಂಬ ನಂಬಿಕೆಯಿತ್ತು ಮೆಹರ್‌ಬಾನ್‌ನಿಗೆ.

ಬದುಕಿರುವವರೆಗೆ ಆತ ಆಸ್ತಿಯ ವಿಭಾಗವನ್ನು ಮಾಡಲು ಸಿದ್ಧನಿರಲಿಲ್ಲ. ಇದರ ಬದಲು ಸಾಯುವುದೇ ಮೇಲು ಎಂಬುದು ಆತನ ಅನಿಸಿಕೆ. ಎರಡನೆ ಉಪಾಯ ಆಕೆಯೊಡನೆ ವಿವಾಹವಾಗುವುದು. ಆದರೆ ವಿವಾಹದ ಮಾತೆಂದರೆ ಆತನ ಕಣ್ಣು ಕೆಂಪಾಗುತ್ತಿತ್ತು. ಹೃದಯ ಹಾಹಾಕಾರ ಮಾಡತೊಡಗಿತ್ತು. ಆತನ ಜಾತಿ, ಕುಲಗೌರವ, ಹೆಮ್ಮೆಯ ಪುರುಷತ್ವ, ಜೀವನದಲ್ಲಿನ ನೀತಿ ಇವೆಲ್ಲಾ ಒಟ್ಟಿಗೇ ಆತನ ಬುದ್ಧಿಯ ಮೇಲೆ ಯುದ್ಧ ಹೂಡಿ, ಬಡಿದು, ಹಣ್ಣುಗಾಯಿ ನೀರುಗಾಯಿ ಮಾಡುತ್ತಿದ್ದವು.

ಅಗತ್ಯ ಬೀಳದೆ ಇದ್ದಿದ್ದರೆ ಆತ ಖಂಡಿತಾ ಹೀಗೆ ಮಾಡುತ್ತಿರಲಿಲ್ಲ. ವಿವಾಹ ! ಅದೂ ಆ ಸೂಳೆಯೊಡನೆ ? ವ್ಯಾಪಾರಿಯ ವಿಧವೆಯೊಡನೆ ? ಅಪವಿತ್ರ ಹೆಂಗಸಿನೊಡನೆ ? ಆದರೆ ಆತನಿಗೆ ಬೇರೆ ಗತ್ಯಂತರವೇ ಇರಲಿಲ್ಲ. ಆಸ್ತಿಯ ಮೇಲೆ ಹಿಸ್ಸೇದಾರರ ಹಕ್ಕನ್ನು ಕೊನೆಗಾಣಿಸಲು, ಅವಿಭಾಜ್ಯ ಆಸ್ತಿಯನ್ನು ನಿಶ್ಚಿಂತೆಯಿಂದ ಅನುಭವಿಸಲು, ಹಾಗೂ ಅಧಿಕೃತ ವಾರಸುದಾರನಾಗಲು ಅವನಿಗೆ ಮದುವೆ ಆಗುವುದು ಅನಿವಾರ್ಯವಾಗಿತ್ತು. ಮದುವೆ ಆದೊಡನೆ ಆತ ಘೋಷಿಸಿದ "ಮದುವೆ ಆದ ತಕ್ಷಣದಿಂದಲೇ ಸೂರಜಭಾನ್ ಮುಖ ಪರದೆಯನ್ನು ಧರಿಸಬೇಕು."

ಸೂರಜಭಾನ್ ಇದನ್ನು ನಿರೀಕ್ಷಿಸಿರಲಿಲ್ಲ. ಆದರೆ ತನ್ನನ್ನು ಮದುವೆ ಆದುದಕ್ಕಾಗಿ ಆತನಿಗೆ ಇವಳು ಬಹಳ ಕೃತಜ್ಞಳಾಗಿದ್ದಳು. ಯಾರಾದರೂ ರಾಜಕುಮಾರನನ್ನು ಮದುವೆ ಆಗಬೇಕೆಂಬುದು ಅವಳ ಬಾಲ್ಯದ ಸ್ವಪ್ನವಾಗಿತ್ತು. ಇಂತಹ ಅಲೌಕಿಕ ಘಟನೆ ಸಂಭವಿಸಿದಾಗ ಕೊಂಚ ಕಷ್ಟವನ್ನು ಸಹಿಸಲೇಬೇಕಾಗುತ್ತದೆ.

ಪತ್ನಿಗೆ ಮುಖ ಪರದೆ ಹೊದಿಸಿ ಮೆಹರ್‌ಬಾನ್‌ಗೆ ಕೊಂಚ ನಿಶ್ಚಿಂತೆಯಾಯಿತು. ಆನಂತರ ಜೀವನ ನಡೆಸಲು ಮಾರ್ಗ ಹುಡುಕುವ ಅಗತ್ಯ ಕಂಡು ಬಂತು. ಪಂಜಾಬಿನಿಂದ ಹೊರಗೆ ಹೋದರೆ ಈ ಕದ್ದು ಜೀವಿಸುವ ಪ್ರಮೇಯ

ಬರಲಾರದೆಂದು ಅದನ್ನು ನಿಶ್ಚಯಿಸಿದ. ಸುತ್ತುತ್ತಾ ಆತ ಅಜ್ಮೀರ ತಲುಪಿದ. ಯುದ್ಧದ ದಾಖಲೆಪತ್ರಗಳನ್ನು ತೋರಿಸಿ ರೈಲ್ವೆಯಲ್ಲಿ ಕೆಲಸ ದೊರಕಿಸಿಕೊಂಡ. ಸಂಬಳ ಹೆಚ್ಚಿಗೆ ಇಲ್ಲದಿದ್ದರೂ ರೊಟ್ಟಿಗೆ ಕಷ್ಟವಿರಲಿಲ್ಲ.

ಅಲ್ಲಿಗೆ ಬಂದ ಮೇಲೆ ಮತ್ತೊಂದು ಸಮಸ್ಯೆ ಎದುರಾಯಿತು. ರೈಲ್ವೆ ಕೆಲಸದಲ್ಲಿ ತಿಂಗಳಿಗೆ ಕೊನೆ ಪಕ್ಷ ಇಪ್ಪತ್ತು ದಿನಗಳು ಪ್ರವಾಸ ಮಾಡಬೇಕಾಗುತ್ತಿತ್ತು. ತನ್ನ ಪತ್ನಿಯನ್ನು ಸದಾ ಜೊತೆಯಲ್ಲಿ ಕರೆದುಕೊಂಡು ಹೋಗುವುದು ಕಷ್ಟವಾಗಿತ್ತು. ಆದರೆ ಬಿಟ್ಟು ಹೋಗುವಾಗ ಇಲ್ಲದ ಭಾವನೆಗಳು ಮನಸ್ಸನ್ನು ಮುತ್ತುತ್ತಿದ್ದವು. ಏಳು ರಾಜರ ಧನ ಬಹು ಅಮೂಲ್ಯ ರತ್ನ ಮಾಣಿಕ್ಯಗಳು ಮನೆಯಲ್ಲಿ ಇದ್ದು, ಮನೆಯ ಯಜಮಾನ ಮನೆಯಲ್ಲಿ ಇಲ್ಲದಾಗ ಕನ್ನ ಕೊರೆದು ಮನೆಗೆ ಯಾರಾದರೂ ನುಗ್ಗಿದರೆ ಪೋಲೀಸ್ ಠಾಣೆಯಲ್ಲಿ ದೂರು ನೀಡಬೇಕಾಗುತ್ತದೆ. ರಿಪೋರ್ಟ್‌ನಲ್ಲಿ ನಿಜವಾಗಿ ಕಳುವಾದ ವಸ್ತುವನ್ನು ಹೆಸರಿಸುವುದು ಸರಿಯಲ್ಲ. ಏತಕ್ಕೆಂದರೆ ಯಾರ ವಸ್ತು ಕಳುವಾಗಿದೆಯೋ ಅವರು ಪ್ರವಾಸದಲ್ಲಿರಬಹುದು.

ಆಗ ಮೆಹರ್‌ಭಾನ್ ಏನು ಮಾಡಲು ಸಾಧ್ಯ ? ಮನೆಯನ್ನು ಸಂಬಾಳಿಸುವುದೆ ? ಅಥವಾ ಹೊರಗಿರುವುದೆ ? ಪತ್ನಿಯನ್ನು ಉಳಿಸಿಕೊಳ್ಳುವುದೆ ? ಅಥವಾ ನೌಕರಿಯನ್ನೇ ? ಆದರೆ ಸೂರಜ್‌ಭಾನ್‌ನ ಮನದಲ್ಲಿ ಯಾವ ಸಮಸ್ಯೆಯೂ ಇರಲಿಲ್ಲ. ಅವಳು ನಿಶ್ಚಿಂತೆಯಿಂದಿರುವುದನ್ನು ಯಾರು ಬೇಕಾದರೂ ಗುರ್ತಿಸಬಹುದಿತ್ತು. ರಾಜಕುಮಾರನ ಸ್ವಪ್ನವನ್ನು ನೋಡುತ್ತಿದ್ದ ಆಕೆಗೆ ಈಗ ರಾಜಕುಮಾರ ಲಭಿಸಿದ್ದ. ಆದರೆ ಮೆಹರ್‌ಬಾನ್ ಇವನ್ನೆಲ್ಲಾ ಬಯಸಿದ್ದನೆ ? ಇಂಥಹ ಸ್ವಪ್ನವನ್ನು ಆತನು ಕಂಡಿದ್ದನೆ ?

ಅದೇ ಸಮಯದಲ್ಲಿ ವಿಚಾರ ವಿನಿಮಯ ಮಾಡಿಕೊಳ್ಳಲು ನನಗೆ ಬರಲು ಆಹ್ವಾನ ಬಂದಿತ್ತು.

ಆದ್ದರಿಂದಲೇ ಅವನ ಮದುವೆಯಾಗಿದೆಯೆಂದು ಅರಿತು ನನಗೆ ಸಂತೋಷವಾಗಿತ್ತು. ನಾನು ಮುಸಲ್ಮಾನ. ನನ್ನ ಸಂಸಾರದ ವಿಷಯದಲ್ಲಿ ಅಂತಹ ವಿಶೇಷವೇನೂ ಇರಲಿಲ್ಲ. ಮೆಹರ್‌ಬಾನ್ ಸಿಟ್ಟುಗೊಳ್ಳುವಂಥಹ ಯಾವ ಸಲಹೆಯನ್ನೂ ನಾನು ನೀಡಲಿಲ್ಲ. ನನ್ನ ಸಲಹೆ ಇಲ್ಲದೆ ಅವನು ಏನು ಕೆಲಸವನ್ನು ಮಾಡಿದ್ದನೋ ಅದು ಸರಿಯಾಗೇ ಇತ್ತು. ಆದರೆ ಈಗ ಇಷ್ಟೊಂದು ಹೊಟ್ಟೆಕಿಚ್ಚು ? ಇದಕ್ಕೆ ಕಾರಣ ನನಗೆ ಹೊಳೆಯುತ್ತಿರಲಿಲ್ಲ. ಯಾರ ಜೊತೆಯಲ್ಲಿ ಜೀವನವನ್ನೆಲ್ಲಾ ಸಾಗಿಸಬೇಕೋ ಅವರ ಮೇಲೆ ಅವಿಶ್ವಾಸ ಪಡುವುದು ಸಾಧುವೆ ? ಇಷ್ಟೊಂದು ಸಂದೇಹವೆ ? ಇದಕ್ಕೆ ಉತ್ತರವಾಗಿ ಮೆಹರ್‌ಬಾನನು ನುಡಿದ "ನಾನೇನು ಮಾಡಲಿ ? ಅವಳು ಅಷ್ಟು ಪರಮ ಸುಂದರಿ. ಅವಳು ಅಷ್ಟು ಸುಂದರಿ ಅಲ್ಲದಿದ್ದರೆ ಶಂಕಿಸುತ್ತಿರಲಿಲ್ಲ. ಕುರೂಪಿಯಾಗಿದ್ದಿದ್ದರೆ ಆಕೆಯ ಮೇಲೆ ವಿಶ್ವಾಸವಿರಿಸುವುದು ಸುಲಭವಾಗುತ್ತಿತ್ತು." ಅವನು ಹೆದರುತ್ತಿರುವುದು ಅವಳ ಸೌಂದರ್ಯದ ಬಗ್ಗೆ ಎಂದು ಅರ್ಥವಾಯಿತು. ಆ ಹೆದರಿಕೆ ಅವನ ಮನಸ್ಸಿನಿಂದ ಹೋಗುವುದಾದರೂ ಹೇಗೆ ? ಬಹುಶಃ ಎಂಟು ಒಂಬತ್ತು ಮಕ್ಕಳಾದ ನಂತರ, ಯಾವುದಾದರೂ ಕೆಟ್ಟ

ಕಾಯಿಲೆಯಾದ ನಂತರ ಅಥವಾ ಯೌವ್ವನ ಕಳೆದ ನಂತರ. ಆದರೆ ಇದೆಲ್ಲಾ ಆಗಬೇಕಾದರೆ ಬಹಳ ವರ್ಷಗಳೇ ಕಾಯಬೇಕಾಗುತ್ತಿತ್ತು. ಸೂರಜ್‌ಬಾನ್ ನಮ್ಮ ವಯಸ್ಸಿನವಳೆ. ಸಮಯಕ್ಕೆ ಮುಂಚೆಯೇ ಅಚೇತನಗೊಳ್ಳಲು ಅವಳಿಗೇನೂ ಅವಸರವಿರಲಿಲ್ಲ.

ನಾನು ಹೇಳಿದೆ "ಸಹೋದರನೆ, ನೀನು ಏನೇ ಹೇಳು, ಹೆಂಡತಿ ಕುರೂಪಿಯಾಗಲಿ ಎಂದು ಮಾತ್ರ ಹೇಳಬೇಡ. ಯಾವುದಾದರೂ ದೇವತೆ ನಿನ್ನ ಮಾತು ಕೇಳಿ 'ಅಸ್ತು' ಎಂದರೆ ಪರಿತಪಿಸಬೇಕಾದವನು ನೀನೇ."

ಅವನಿಗೆ ತಲೆತಿರುಗಿದೆ ಎಂದು ನನಗೆ ಅರ್ಥವಾಯಿತು. ಹೆಂಡತಿಯನ್ನು ದ್ರಾವಣದಲ್ಲಿ ಅದ್ದಿ ಕುರೂಪಿಗೊಳಿಸಲು ಸಾಧ್ಯವೇ ಎಂಬ ಬಗ್ಗೆ ಆತ ಮನದಲ್ಲೆ ತರ್ಕಿಸುತ್ತಿದ್ದ. ಇದೆಲ್ಲವೂ ಆಕಸ್ಮಿಕ ಎನ್ನುವ ರೀತಿಯಲ್ಲಿ ಈ ಕೆಲಸವನ್ನು ನೆರವೇರಿಸುತ್ತೇನೆ ಎಂದು ತಿಳಿಸಿದ. ನಾನು ಗಡುಸಿನ ಸ್ವರದಲ್ಲಿ ಆತನನ್ನು ಹೆದರಿಸಿದೆ. ಆದರೆ ನಾನು ಮನದಲ್ಲಿ ನಡುಗಿದ್ದೆ. ನಾನು ನುಡಿದೆ "ಪರಿಸ್ಥಿತಿ ಹೀಗಿದ್ದರೆ ನೀನೇಕೆ ವಿವಾಹವಿಚ್ಛೇದನ ಪಡೆಯಬಾರದು. ಇಲ್ಲದಿದ್ದರೆ ಬೇರೆ ಬೇರೆ ಇರಬಹುದು."

ಅವನು ನನ್ನ ಮಾತನ್ನು ಕೇಳುವ ಸ್ಥಿತಿಯಲ್ಲಿರಲಿಲ್ಲ. ನುಡಿದ "ಪೊಲೀಸ್ ಕೆಲಸದಲ್ಲೇ ಇದ್ದಿದ್ದರೆ ಸಂಬಳ, ಪೆನ್ಶನ್ ಅಲ್ಲದೆ ಮೇಲಿನ ಗಿಂಬಳ ಸೇರಿ ಹಲವು ಲಕ್ಷ ಸಂಪಾದಿಸುತ್ತಿದ್ದೆ. ಎಲ್ಲಾ ಖರ್ಚು ಕಳೆದು ಒಂದಾದರೂ ಲಕ್ಷ ಉಳಿದಿರುತ್ತಿತ್ತು. ಪೊಲೀಸ್ ಕೆಲಸ ತ್ಯಜಿಸಿ ಆ ಒಂದು ಲಕ್ಷ ರೂಪಾಯನ್ನು ಅವಳಿಗೆ ಕನ್ಯಾ ಶುಲ್ಕವೆಂದು ನೀಡಿದ್ದೀನಿ ಎಂದು ತಿಳಿದುಕೊ. ಅವಳನ್ನೇನು ನಾನು ಬಿಟ್ಟಿ ಸಂಪಾದಿಸಿಲ್ಲ. ಹಾಗಿದ್ದಲ್ಲಿ ನಾನೇಕೆ ಅವಳಿಗೆ ವಿವಾಹವಿಚ್ಛೇದನ ನೀಡಲಿ ? ಅವಳನ್ನು ಬಿಡೋಗಿಡೋ ಪ್ರಶ್ನೆಯೇ ಇಲ್ಲ. ವಿಧಿಯೇ ನಮ್ಮಿಬ್ಬರನ್ನೂ ಒಂದೇ ದಾರದಲ್ಲಿ ಪೋಣಿಸಿದೆ."

ಇದ್ದಕ್ಕಿದ್ದಂತೆಯೇ ನನಗೆ ಏನೋ ಹೊಳೆಯಿತು. ನಾನು ನುಡಿದೆ "ಸರಿ ಒಂದು ಮಾತು ಸೂರಜ್‌ಬಾನ್. ನಿನಗೆ ಒಂದು ಲಕ್ಷ ರೂಪಾಯಿ ಹಿಂತಿರುಗಿಸಿದರೆ ನೀನು ಅವಳನ್ನು ಬಿಟ್ಟು ಬಿಡುವೆಯಾ ?"

ಮೆಹರ್‌ಬಾನ್ ಬೆರಗಾಗಿ ನಿಂತ, ನಿಶ್ಯಬ್ದ ದೃಷ್ಟಿಯನ್ನು ನನ್ನತ್ತ ಬೀರಿದ. ಆತನ ಮನಸ್ಸಿನಲ್ಲಿ ಏನು ನಡೆಯುತ್ತಿತ್ತೊ ಅದು ಅವನಿಗೇ ಗೊತ್ತು, ನುಡಿದ "ನೀನೇನು ಹಾಸ್ಯ ಮಾಡುತ್ತಿಲ್ಲ ತಾನೆ."

"ಇಲ್ಲ ಹಾಸ್ಯವಲ್ಲ" ನಾನು ಬಿರುಸಾಗಿಯೇ ನುಡಿದೆ. "ನಿನ್ನ ಸಮಸ್ಯೆಗೆ ಇದೇ ಸರಿಯಾದ ಪರಿಹಾರ."

ಮೆಹರ್‌ಬಾನ್ ಆರ್ತಸ್ವರದಲ್ಲಿ ನುಡಿದ "ನೀನೇನಾದರೂ ಆಕೆಗೆ ಈ ಮಾತನ್ನು ಹೇಳಿದರೆ ಆಕೆ ಒಂದು ಲಕ್ಷ ರೂಪಾಯಿಯನ್ನು ನನ್ನ ಮುಖದ ಮೇಲೆ ಎಸೆದಾಳು. ಆಗ ಆಕೆ ನನ್ನನ್ನು ಕೊಂಡಂತೆಯೇ ಆಗುತ್ತದೆ. ರಾಣಿಪಸಂದ್ ಆಗುತ್ತೇನೆ."

ಸೂರಜ್‌ಭಾನ್ ಮಾಲಕಿನ್ ಆಗುವುದು ಮೆಹರ್‌ಬಾನ್‌ಗೆ ಸುತರಾಂ ಇಷ್ಟವಿರಲಿಲ್ಲ. ಆತನನ್ನೇ ಸೂರಜ್‌ಭಾನ್‌ಳ ಯಜಮಾನ ಎಂದು ಕರೆಸಿಕೊಳ್ಳುವ

ಆಸೆ ಇತ್ತು. ಇವರಿಂದಾಗಿ ಅವಳು ಸುಂದರಿ ನಾಯಕಿ ಆಗುವುದು ತಪ್ಪುತ್ತದೆ. ಆಗ ಅವಳು ಕೆಟ್ಟ ಮುಖದ ಹೆಂಡತಿಯಾಗಿ ಇರಬೇಕಾಗುತ್ತದೆ. ಆಗಲೇ ಮೆಹರ್‌ಬಾನ್ ನಿಶ್ಚಿಂತೆಯಿಂದ ಆರಾಮವಾಗಿ ಜೀವಿಸಲು ಸಾಧ್ಯ. ಆದರೆ ಈ ಮಾತುಗಳನ್ನು ಸೂರಜ್‌ಭಾನ್‌ಗೆ ಹೇಳಲು ಸಾಧ್ಯವಾಗುವುದಿಲ್ಲವಲ್ಲ!

ಖ್ವಾಜಾ ಸಾಹೇಬರ ಮಸೀದಿಯಲ್ಲಿ ಕಾಣಿಕೆ ಸಲ್ಲಿಸಿ ನಾನು ಅಜ್ಮೀರದಿಂದ ಹೊರಬಂದೆ. ಇದಾದ ಕೆಲ ದಿನಗಳ ನಂತರ ಇದ್ದಕ್ಕಿದ್ದಂತೆಯೇ ಸೂರಜ್‌ಭಾನ್‌ಳ ಮಹಲ್ ವಿದ್ಯುತ್ ದೀಪದಿಂದ ಝಗಝಗಿಸುತ್ತಿರುವುದನ್ನು ಕಂಡೆ. ಇದ್ದಕ್ಕಿದ್ದಂತೆಯೇ ಇದೇನು? ಏನಾಗಿದೆ? ಏನಾಗಿರಬಹುದು? ರಾಣಿ ಹಿಂತಿರುಗಿರುವಳೆ? ಜೊತೆಯಲ್ಲಿ ಇನ್ಯಾರಾದರೂ ಬಂದಿರಬಹುದೇ ಇಲ್ಲವೇ? ಅವಳ ಜೊತೆಯಲ್ಲಿ ಯಾರೂ ಇದ್ದಂತಿರಲಿಲ್ಲ.

ಖಾನ್ ಬಹಾದುರ್ ಹೇಳಲು ಪ್ರಾರಂಭಿಸಿದ "ಇದಾದ ನಂತರ ಮೆಹರ್‌ಬಾನ್ ಜೊತೆ ನನ್ನ ಭೇಟಿ ಪುನಃ ಆಗಲಿಲ್ಲ. ಪತ್ರಗಳು ಇಲ್ಲ. ನಾನು ಪಂಜಾಬಿನಿಂದ ವರ್ಗಮಾಡಿಸಿಕೊಂಡು ಬಂಗಾಳಕ್ಕೆ ಬಂದು ಸೇರಿದೆ. ಇದೇ ವಿಭಾಗದಲ್ಲಿ ನಾನು ನಿಯುಕ್ತಗೊಂಡಿದ್ದೆ. ಅಲ್ಲಿಂದ ಮುಂದೆ ಇಲ್ಲಿಯತನಕ ಇಲ್ಲೇ ಸಿಕ್ಕಿಹಾಕಿಕೊಂಡಿದ್ದೇನೆ. ಮೆಹರ್‌ಬಾನ್‌ನ ಕಥೆ ಇಲ್ಲಿಗೇ ಮುಗಿದು ಹೋಗುತ್ತದೆ ಎಂಬುದೂ ನನಗೆ ಗೊತ್ತಿದೆ.

"ಇಲ್ಲಿಗೇ ಅದು ಕೊನೆಯಾಗುವುದೇ?" ನನ್ನ ಕುತೂಹಲ ಕೊನೆಗೊಳ್ಳಲಿಲ್ಲ. ನಾನು ಕೇಳಿದೆ "ಏನು ಸಾಹೇಬರೇ, ಹೇಳಿ ಅನಂತರ ಏನಾಯಿತು. ಸೂರಜ್‌ಭಾನು ಏನಾದಳು? ಮೆಹರ್‌ಬಾನ್ ಏನಾದ?"

ಜಹಜು ನೀರನ್ನು ಸೀಳಿಕೊಂಡು ಮುಂದೆ ಹೋಗುತ್ತಿತ್ತು. ನೀರಿನ ಹನಿಗಳು ನಮ್ಮ ಮೇಲೆ ಬೀಳುತ್ತಿದ್ದವು. ಯಾವಾಗ ನಾವು ಚಾ ಸೇವಿಸಿದೆವೊ ತಿಳಿಯದು. ರಾತ್ರಿ ಊಟದ ಬಗ್ಗೆ ತಿಳಿಸಿ ಆಗಿತ್ತು. ಖಾನ್ ಬಹಾದೂರ್ ಹೇಗಾದರೂ ನನ್ನ ಅತಿಥಿಯಾಗಿದ್ದರು.

ಖಾನ್ ಬಹಾದೂರ್ ಹೇಳಿದರು "ಮಿತ್ರಾ, ಇದನ್ನು ಹೇಳುವುದರಲ್ಲಿ ಮನುಷ್ಯ ಮುದುಕನಾಗಿರುತ್ತಾನೆ. ಆದರೆ ಇದರ ಅರಿವು ಆತನಿಗೆ ಇರುವುದಿಲ್ಲ. ಆದ್ದರಿಂದಲೇ ನಾನು ಆಶ್ಚರ್ಯ ಚಕಿತಗೊಂಡಿದ್ದೆ."

"......ಏಕೆ....ಏಕೆ" ನಾನು ಕುತೂಹಲವನ್ನು ಹತ್ತಿಕ್ಕದಾದೆ. ಆ ವ್ಯಕ್ತಿ ನಿಜವಾಗಿ ತನ್ನ ಪತ್ನಿಯ ಮುಖದ ಮೇಲೆ ದ್ರಾವಕವನ್ನು ಎಸೆಯಲು ಪ್ರಯತ್ನಿಸಿದ್ದ. ಒಂದು ತೊಟ್ಟು ಅವಳ ಕೆನ್ನೆ ಅಥವಾ ಕತ್ತಿನ ಮೇಲೆ ಸಿಡಿದಿತ್ತು. ಅದಕ್ಕೇ ಈ ನಡುವೆ ಸೂರಜ್‌ಭಾನ್ ಸಂತೋಷ ಕೂಟಗಳನ್ನು ಏರ್ಪಡಿಸುತ್ತಿಲ್ಲ. ಮನೆಯಿಂದ ಹೊರಗೂ ಹೊರಡುತ್ತಿಲ್ಲ. ಸಧ್ಯ, ಆ ಘಟನೆಯಿಂದ ಅವಳಿಗೇನೂ ಹಾನಿ ತಟ್ಟಿರಲಿಲ್ಲ. ಸೂರಜ್‌ಭಾನ್ ಬಳಿಯಲ್ಲಿ ಹಲವಾರು ಲಕ್ಷ ಹಣ ಇತ್ತು. ಆ ಹಣವನ್ನು ಮೆಹರ್‌ಬಾನ್‌ನ ಕೈಯಲ್ಲಿ ಹೊರಿಸಿಕೊಂಡು ಅವಳು ಸೀದಾ ರೈಲ್ವೆ ಸ್ಟೇಷನ್‌ಗೆ ಹೋಗಿ ಸಿಯಾಲ್ ಕೋಟ್‌ಗೆ ಬಂದಳು.

ತಿರಸ್ಕಾರದಿಂದ ನಾನು ಎರಡು ಕಿವಿಗಳನ್ನು ಮುಚ್ಚಿಕೊಂಡಿದ್ದೆ. ಮತ್ತಷ್ಟು ವಿಷಯ ಕೇಳುವ ಆಸಕ್ತಿಯೇ ಇರಲಿಲ್ಲ.

ಮೆಹರ್‌ಬಾನ್ ರೂಪಾಯಿ ಹಾಗೂ ಒಡವೆಗಳ ರಕ್ಷಣೆಯಲ್ಲಿ ನಿರತನಾದ. ಅವಳನ್ನು ಹಿಂಬಾಲಿಸುತ್ತಿದ್ದನು. ಓಡಿ ಹೋಗಲು ಹೇಗೆ ಸಾಧ್ಯ ? ಯಾವ ವಸ್ತು ಹೆಚ್ಚು ಪ್ರಿಯ ? ರೂಪಾಯಿ, ಒಡವೆ ಅಥವಾ ಹೆಂಗಸು ? ರೂಪಾಯಿಯೇ ಹೆಚ್ಚು ಪ್ರಿಯ ಎಂದು ಮುಂದೆ ಕಾಲವೇ ನಿರ್ಣಯಿಸಿತು.

ಖಾನ್ ಬಹಾದುರ್ ಖೇದ ವ್ಯಕ್ತಪಡಿಸಿದ. ಅವನ ಸಹಾನುಭೂತಿ ಹೆಂಗಸಂತಿದೆ ಎಂದು ಅನಿಸಿತ್ತು. ಕಿವಿಯ ಮೇಲಿದ್ದ ಕೈಗಳನ್ನು ಸಡಿಲಿಸಿದೆ. ಅದು ನಾನು ಮಾಡಿದ ತಪ್ಪಾಗಿತ್ತು.

ಕತ್ತಲು ಹೆಚ್ಚಾಗುತ್ತಿತ್ತು. ನಮ್ಮ ನಿಲ್ದಾಣ ತಲುಪುವುದಕ್ಕೆ ಇನ್ನೂ ಸಮಯವಿತ್ತು. ಕಥೆ ಇಲ್ಲಿಗೇ ಅಂತ್ಯಗೊಂಡರೆ ಮುಂದಿನ ಕಾಲ ಕಳೆಯುವುದು ಹೇಗೆ ? ನಾನು ಕಿವಿಯಿಂದ ಕೈಗಳನ್ನು ಪೂರಾ ತೆಗೆದೆ.

ಖಾನ್ ಬಹಾದುರ್ ಹೇಳಲು ಪ್ರಾರಂಭಿಸಿದ "ಆದದ್ದೆಲ್ಲವೂ ಒಳ್ಳೆಯದೇ ಆಯಿತು. ಮೆಹರ್‌ಬಾನ್ ಒಂದಲ್ಲ ಒಂದು ದಿನ ಅವಳ ಕೊಲೆಯನ್ನೂ ಮಾಡಿ ಬಿಡುತ್ತಿದ್ದ. ಸುಂದರಿ ಯಾವಾಗಲೂ ಚಂಚಲವಾಗಿರುತ್ತಾಳೆ. ಯಾವಾಗಲಾದರೂ ಸ್ವಲ್ಪ ಬಳುಕಾಡಿದರೂ ಸಾಕು ಪ್ರಾಣಕ್ಕೆ ಸಂಚಕಾರ. ಅಂತೂ ಅವಳು ಬದುಕುಳಿದಳು, ಅದೇ ಹೆಚ್ಚು ದ್ರಾವಕದಿಂದ ಕೊಂಚ ತೊಂದರೆ ಆಗಿದ್ದರೆ ಅದು ಪಾಪಕ್ಕೆ ಸಂದ ಸಜೆ ಎನ್ನಬೇಕು ಅಷ್ಟೇ."

ನಾನು ಉತ್ತರಿಸಲಿಲ್ಲ. ಪಾಪ ತತ್ವದಲ್ಲಿ ನನಗೆ ನಂಬಿಕೆ ಇರಲಿಲ್ಲ. ಪಾಪಿಗೆ ಸಜಾ ಪಾಪಿಯಿಂದಲೇ. ಇದು ಅಸಹನೀಯವಾಗಿತ್ತು. ಮೆಹರ್‌ಬಾನ್ ಏನು ಕಡಿಮೆ ಪಾಪಿಯೇ ?

ಖಾನ್ ಬಹಾದೂರ್ ಪ್ರಾರಂಭಿಸಿದರು "ನೋಡಿ, ಹೆಂಗಸು ಕೊನೆಗೆ ಏನು ನಷ್ಟ ಅನುಭವಿಸಿದಳು ? ಆದ ಹಾನಿಯೆಲ್ಲಾ ಪುರುಷನಿಗೇ, ಹಣದಿಂದಲೇ ಆತನ ಆಸೆಗಳೆಲ್ಲಾ ಪೂರ್ಣವಾಗುವುದಿಲ್ಲ. ಆಸೆಗಳಿಗೆ ಕೊನೆ ಎಂಬುದೇ ಇಲ್ಲ. ಆತ ನೌಕರಿಯಲ್ಲೇ ಮುಂದುವರಿದಿದ್ದರೆ ಇಷ್ಟು ಹೊತ್ತಿಗೆ ಐ.ಜಿ. ಕೊನೆಯ ಪಕ್ಷ ಡಿ.ಐ.ಜಿ. ಆದರೂ ಆಗುತ್ತಿದ್ದ ಎಂತಹ ಅದೃಷ್ಟ ! ಹಣೆಯಲ್ಲಿ ಬರೆದುದೇ ಘಟಿಸುತ್ತದೆ. ರೈಲ್ವೆ ಕೆಲಸ ಅದೂ ಉಳಿಯಲಿಲ್ಲ. ಲಕ್ಷ ರೂಪಾಯಿಗಳನ್ನು ನೋಡಿದೊಡನೆ ಅವನ ಬುದ್ಧಿಯೇ ಕೆಟ್ಟುಹೋಯಿತು. ಅದೇ ಹಣವನ್ನು ಕನ್ಯಾಶುಲ್ಕವಾಗಿ ನೀಡಿ ಆತ ಮತ್ತೆ ಮದುವೆ ಆದ. ಹುಡುಗಿ ಸಭ್ಯ ಸರದಾರ ವಂಶದವಳು. ಆ ಜನಗಳು ಮೆಹರ್‌ಬಾನ್ ಇಂಗ್ಲೀಷರ ಸರ್ಕಾರದಲ್ಲಿ ಕೆಲಸ ಮಾಡಲು ಇಷ್ಟಪಡಲಿಲ್ಲ. ಸ್ವದೇಶದ ರಾಜನೊಬ್ಬನ ಸೈನ್ಯದಲ್ಲಿ ಅಧಿಕಾರಿಯಾಗಿ ಸೇರಿಸಿದರು. ಇದರಲ್ಲಿ ಸ್ಥಾನದ ಗೌರವ ಬಿಟ್ಟು ಮತ್ತೇನಿದೆ ? ನೀವೇ ಹೇಳಿ."

ನಾನು ಸ್ತಂಭಿತನಾಗಿ ಕುಳಿತೆ. ಏನು ಹೇಳಲಿ ? ಎಷ್ಟು ಯೋಚಿಸಿದರೂ ಉತ್ತರ ದೊರೆಯದಾಗಿತ್ತು.

"ಈಗ ನಮ್ಮ ಇನ್ಸ್‌ಪೆಕ್ಟರ್ ಜೀವನ ಏನಾಗುತ್ತದೆ ನೋಡಬೇಕಾಗಿದೆ. ಅವರೂ ಕೂಡ ಒಬ್ಬ ರಾಣಿಪಸಂದ್. ಹುಡುಗಿ ಅತ್ಯಂತ ಸುಂದರಿ ಎಂದು ಕೇಳಿದ್ದೇನೆ. ಸುಂದರಿ ಆಗಿದ್ದರೆ ಕೆಟ್ಟವಳೇ ಇರಬೇಕು. ಇದರಲ್ಲಿ ಆಶ್ಚರ್ಯಪಡುವುದೇನೂ ಇಲ್ಲ. ಯಾರು ಎಷ್ಟು ಕೆಟ್ಟವರಾಗಿರುತ್ತಾರೋ ಅವರು ಅಷ್ಟೇ ಸುಂದರಿಯಾಗಿರುತ್ತಾರೆ" ಎಂದು ನುಡಿದು ಖಾನ್ ಬಹಾದುರ್ ನೀಳ ಉಸಿರನ್ನು ಬಿಟ್ಟರು.

# ಓಡಿ ಹೋದವನು

**ಪ್ರೇಮೇಂದ್ರ ಮಿತ್ರ**

ಇಂದು ಬಹು ಕೆಟ್ಟದಿನ. ಚಳಿಗಾಲದ ದಿನಗಳಲ್ಲಿ ಆಕಾಶದಲ್ಲಿ ಮುಗಿಲು ಮುಸುಕಿದರೆ ಇದಕ್ಕಿಂಥ ವಿಚಿತ್ರ ಮತ್ತೇನಿರಲು ಸಾಧ್ಯ ? ಮಳೆ ಸರಿಯಾಗಿ ಬೀಳುತ್ತಿರಲಿಲ್ಲ. ಆಕಾಶದಲ್ಲಿ ಮೋಡ ತುಂಬಿತ್ತು. ಆದರೆ ಒಣಗಿದ ಭೂಮಿ ಹೆಣದಂತೆ ನಿರ್ಜೀವ ಮಲಗಿತ್ತು. ಸೋಮೇಶ್ ಇದ್ದಕ್ಕಿದ್ದಂತೆಯೇ ಇಂದು ಬರದಿದ್ದರೆ, ನಾನು ಹೊತ್ತು ಹೇಗೆ ಕಳೆಯುತ್ತಿದ್ದೆನೋ, ತಿಳಿಯದು. ಸೋಮೇಶ್ ಇಂದೇಕೆ ಹಾಗೆ ಕಾಣುತ್ತಿದ್ದ ?

ವೃತ್ತ ಪತ್ರಿಕೆಯ ಪುಟಗಳನ್ನು ತಿರುವಿ ಹಾಕಿ ಅದನ್ನು ಸೋಮೇಶನತ್ತ ಸರಿಸುತ್ತಾ ನಾನು ನುಡಿದೆ "ಒಂದು ವಿಚಿತ್ರ ಸಮಾಚಾರ ಗಮನಿಸಿದ್ಯಾ ನೀನು ?"

"....ಏನು ?"

"...ಇಂದು ವೃತ್ತಪತ್ರಿಕೆಯಲ್ಲಿ ಒಂದೇ ಕಡೆ ಏಳು ಜನ ಕಾಣೆಯಾದವರ ಬಗ್ಗೆ ವಿಜ್ಞಾಪನೆ ಇದೆ..."

ಸೋಮೇಶನೇನೂ ಆಶ್ಚರ್ಯ ವ್ಯಕ್ತಪಡಿಸಲಿಲ್ಲ. ಹೇಗೆ ಕುಳಿತಿದ್ದನೋ ಹಾಗೇ ಸಿಗರೇಟನ್ನು ಸೇದಿ ಹೊಗೆಯನ್ನು ಹೊರಚೆಲ್ಲುತ್ತಿದ್ದ. ನಿಶ್ಯಬ್ದ ಕೊಠಡಿಯಲ್ಲಿ ಸಿಗರೇಟಿನ ಹೊಗೆಯ ಸುರಳಿಗಳು ಗುಂಡಾಗಿ ಸುತ್ತಿ ಮೇಲೇರುತ್ತಿದ್ದುವು. ಮತ್ತೆಲ್ಲವೂ ಸ್ತಬ್ಧ. ಹೊರಗಿನ ನಿರ್ಜೀವತೆ ಮನಸ್ಸನ್ನು ಆವರಿಸಿತ್ತು.

ವಿಚಿತ್ರ ರೀತಿಯಲ್ಲಿದ್ದ ನಿಶ್ಯಬ್ದತೆಯನ್ನು ಮುರಿಯುತ್ತ ನಾನು ಗರ್ಜಿಸಿದೆ. "ಕಾಣೆಯಾದವರ ಬಗ್ಗೆ ಬರುವ ಅರಿಕೆಗಳನ್ನು ಕಂಡಾಗ ನನಗೆ ನಗು ಬರುತ್ತದೆ. ಬಹಳಷ್ಟು ವಿಷಯಗಳಲ್ಲಿ ಏನಾಗುತ್ತದೆ ನನಗೆ ಗೊತ್ತು. ನಾಟಕಗೀಟಕಗಳನ್ನು ನೋಡಿಕೊಂಡು ಮಗ ಮನೆಗೆ ಹೊತ್ತಾಗಿ ಬರುತ್ತಾನೆ. ಆ ವಯಸ್ಸಿನಲ್ಲಿ ಎಲ್ಲರೂ ಮಾಡುವುದು ಅದೇ. ರಾತ್ರಿ ಊಟ ಮಾಡುವಾಗ ತಂದೆ ಮಗನ ಬಗ್ಗೆ ವಿಚಾರಿಸಿದ್ದಿರಬಹುದು. ಎಲ್ಲಿ ? ನಿನ್ನ ಮಗಧೀರ, ಕಾಣ್ಸೋದೇ ಇಲ್ವಲ್ಲಾ ? ಎಲ್ಲೋ ಹೋದ್ದಾಗಿದೆ ?"

ಅನಂತರ ಹೆಂಡತಿಯನ್ನು ಗದರಿಸುತ್ತಾ ಆತನು ಹೇಳಿರಬಹುದು "ಸುಮ್ಮ ಸುಮ್ನೆ

ಅಳೋದು ಗಿಳೋದು ಬಿಟ್ಟುಬಿಡು. ಅಂಥಾ ಮಗಾ ಎಲ್ಲಾದ್ರೂ ಹೊರಟುಹೋಗೋದೇ ಮೇಲು.''

ಆಗ ತಾಯಿಯ ದುಃಖ ಉಮ್ಮಳಿಸಿರಬಹುದು.

ಪುನಃ ಹಲ್ಲು ಕಡಿದು, ಅದುಮಿಟ್ಟಿದ್ದ ಮಾತನ್ನು ಹೇಳಿರಬಹುದು. ''ಹಾಳಾಗಿ ಹೋಗಿದ್ರೆ ಎಷ್ಟೋ ಸಮಾಧಾನ ಆಗ್ತಾ ಇತ್ತು, ನೋಡ್ತಾ ಇರು ನಿನ್ನ ಮಗ ಸಾಯಂಕಾಲದ ಹೊತ್ಗೆ ಖಂಡಿತಾ ಹಿಂತಿರುಗಿ ಬರ್ತಾನೆ. ಕಾಸು ಖರ್ಚಿಲ್ಲದಂಥಾ ಹೋಟೇಲ್ ಅವನಿಗೆ ಇನ್ನೆಲ್ಲಿ ಸಿಕ್ಕುತ್ತೆ?''

ಅಳುತ್ತಾ ತಾಯಿ ನುಡಿದಿರಬಹುದು ''ಇಷ್ಟೊಂದು ಛಳಿ'' ! ಪಾಪ, ಈ ರಾತ್ರೀಲಿ ಎಲ್ಲಿ ಬಿದ್ಕೊಂಡಿದ್ದಾನೋ ಏನೋ ? ಏನಾದ್ರೂ ಮಾಡ್ಕೊಂಡ್ಬಿಟ್ರೆ.... ಹೆದ್ರಿಕೆ ಆಗ್ತಾ ಇದೆ.''

''ಹೂಂ.... ಹೆದ್ರಿಕೆ ?'' ತಂದೆ ಹುಸಿನಗುತ್ತಾ ಮಾತನ್ನು ಅಷ್ಟಕ್ಕೇ ಮೊಟಕುಗೊಳಿಸಿರಬೇಕು. ''ನಿನ್ಮಗ ಏನೂ ಮಾಡ್ಕೊಂಡಿರಲ್ಲಾ...ಏನೂ ಮಾಡಲ್ಲ.. ಯಾರೋ ಸ್ನೇಹಿತ್ರ ಮನೇಲಿ ಮಜ್ವಾಗಿ ಇರ್ತಾನೆ. ಅಲ್ಲಿ ಸ್ವಲ್ಪ ತೊಂದ್ರೆ ಆಯ್ತು ಅಂದ್ರೆ ಸಾಹೇಬ್ರು ಮನ್ಗೆ ದಯಮಾಡಿಸ್ತಾರೆ.'' ಹೀಗೆ ಆತ ನುಡಿದಿರಬೇಕು.

ಇನ್ನು ತಾಯಿ ಅಳುತ್ತಲೇ ಇದ್ದಿರಬಹುದು. ದುಃಖವನ್ನು ಹತ್ತಿಕ್ಕಲಾರದೆ ಮತ್ತೆ ನುಡಿದಿರಬೇಕು ''ನಿಮ್ಗೇ ಗೊತ್ತಿದೆ, ಆತ ಎಷ್ಟು ಸ್ವಾಭಿಮಾನಿ ಅಂತಾ ?''

ಮುಂದಿನ ಕಥೆ ಹೀಗೆ ಮುಂದುವರಿಯುತ್ತದೆ.

ಹುಡುಗ ನಿಜವಾಗಿ ಹಿಂತಿರುಗಲಿಲ್ಲ. ತಂದೆ ಕೋಪಗೊಂಡು ಮನೆ ಬಿಟ್ಟು ಹೊರಹೊರಟರು. ಸಂಜೆ ಆಫೀಸಿನಿಂದ ಹಿಂತಿರುಗಿದಾಗ ವಿಷಯ ಗಂಭೀರವಾಗಿರುವುದು ವೇದ್ಯವಾಯಿತು. ಅಂದು ರಾತ್ರಿಯಾದರೂ ಮಗ ಹಿಂತಿರುಗಿರಲಿಲ್ಲ. ತಾಯಿ ಹಾಸಿಗೆ ಹಿಡಿದು ಮಲಗಿ ಬಿಟ್ಟಿದ್ದಳು.

''ಓಹ್ ! ಬೇಜಾರಾಗ್ಹೋಗಿದೆ. ವನವಾಸ ಇದಕ್ಕಿಂತ ಒಳ್ಳೇದಾಗಿತ್ತು.'' ಹೇಳುತ್ತಾ ತಂದೆ ಒಂದು ವೃತ್ತ ಪತ್ರಿಕೆಯ ಕಛೇರಿ ತಲುಪಿದ.

ಪತ್ರಿಕಾಲಯದ ವಿಷಯ ಬಹಳ ಗೊಂದಲಮಯ. ಎಲ್ಲಿ ಹೋಗಬೇಕು ? ಏನು ಮಾಡಬೇಕು ಒಂದೂ ಗೊತ್ತಾಗುವುದೇ ಇಲ್ಲ. ಸ್ವಲ್ಪ ಹೊತ್ತು ದಿಙ್ಮೂಢನಾಗಿ ಅಲ್ಲಿ ಇಲ್ಲಿ ತಿರುಗಿ ಆಫೀಸಿನ ಒಂದು ಕೊನೆಯಲ್ಲಿನ ಒಂದು ಕೊಠಡಿ ಹೊಕ್ಕ. ನಿರ್ವಿಕಾರ ಮುಖದ ಒಬ್ಬ ಸಜ್ಜನನ ಮುಂದೆ ಹೋಗಿ ಧೈರ್ಯ ತಂದುಕೊಂಡು ನುಡಿದ. ತಮ್ಮ ಪತ್ರಿಕೆಯಲ್ಲಿ ಒಂದು ಸಮಾಚಾರ ಮುದ್ರಿಸುವುದಿದೆ...

ನಿರ್ವಿಕಾರ ಮುಖದ ಸಜ್ಜನ ಒಮ್ಮೆಗೇ ತಲೆ ಎತ್ತಿ ನೋಡಿದ, ವ್ಯಂಗ್ಯದಿಂದ ನುಡಿದ ''ಸಮಾಚಾರ ! ನಾವು ಮುದ್ರಿಸುತ್ತಿರೊ ಸಮಾಚಾರ ತಮಗೆ ಹಿಡಿಸಲಿಲ್ಲವೇ ? ಇದುವರೆಗೆ ನಾವೇನು ಶ್ರೀರಾಮನ ವನವಾಸದ ಸಮಾಚಾರ ಮುದ್ರಿಸ್ತಾ ಇದ್ದೀವೇನು ?''

ಹುಡುಗ ಹಲವು ಬಾರಿ ಅನುನಯ ವಿನಯದಿಂದ ಪೀಡಿಸಿದಾಗ ತಾಯಿ ತಾನು ಕೂಡಿಟ್ಟುಕೊಂಡಿದ್ದ ಹಣದಲ್ಲಿ ಕೆಲ ರೂಪಾಯಿಗಳನ್ನು ತೆಗೆದು ಆತನಿಗೆ ನೀಡಿದ್ದಳು.

ತಿಳಿದು ತಿಳಿದು ಈ ಸುಳ್ಳನ್ನು ಹೇಳಲು ಅವಳಿಗೆ ಕಷ್ಟವಾಗುತ್ತಿತ್ತು. ಆದಕ್ಕೇ ಅವಳು ಸುಮ್ಮನಿದ್ದಳು.

ತಂದೆ ಹೀಗೆ ನುಡಿಯುತ್ತಾ ಹೊರಟುಹೋಗಿದ್ದರು "ರಾತ್ರಿ ಇಷ್ಟು ಹೊತ್ತಾಗಿದೆ. ರಾಜಕುಮಾರನಿಗೆ ಇನ್ನೂ ಮನೆಗೆ ಬರಲು ಹೊತ್ತು ಸಾಲದು? ಹಿಂದಿನ ಸಾರಿ ಫೇಲಾಗಿ ನನ್ನ ಗೌರವವನ್ನೇ ಹಾಳು ಮಾಡಿದ್ದ. ಈ ಸಾರಿ ಹೇಗೆ ನನ್ನನ್ನು ಕೃತಾರ್ಥನನ್ನಾಗಿ ಮಾಡ್ತಾನೆ, ನಾನು ನೋಡ್ತೀನಿ. ನನ್ನ ಸಂಪಾದನೆ ಬಿಟ್ಟಿ ಬಂದದ್ದಲ್ಲ, ನವಾಬನ ಮಗನ್ಹಾಗೆ ಅವನು ಮೋಜು ಮಾಡೋಕೆ, ಓಡಿಸ್ತೇನೆ ಈ ಸಾರಿ ಖಂಡಿತ ಹೊರಗೆ ಅಟ್ತೀನಿ."

ಈ ವಿಷಯ ಬಹುಶಃ ಬಾಯಿ ಮಾತಿನಲ್ಲೆ ಮುಕ್ತಾಯಗೊಳ್ಳುತ್ತಿತ್ತು. ಆದರೆ ಅದೇ ಸಮಯಕ್ಕೆ ಈ ಗುಣವಂತ ಮಗ ಆಗಮಿಸಿದ. ತಂದೆ ಆವೇಶದಲ್ಲಿದ್ದುದರಿಂದ ತನ್ನ ಗೌರವ ಉಳಿಸಿಕೊಳ್ಳಲು ಏನಾದರೂ ಹೇಳುವುದು ಅಗತ್ಯವಿತ್ತು. ಆದ್ದರಿಂದ ಮತ್ತೆ ನುಡಿದರು "ನಂಗೆ ಇಂಥಾ ಮಗನ ಅಗತ್ಯವಿಲ್ಲ, ಹೊರಟುಹೋಗು."

ಮತ್ತೇನು ಮಾಡಲು ಸಾಧ್ಯವಿಲ್ಲದ ಆ ಸ್ವಾಭಿಮಾನಿ ಮಗ ತಂದೆಯ ಆದೇಶವನ್ನು ಪಾಲಿಸಲು ತಕ್ಷಣ ಸಿದ್ಧನಾದ.

ಆ ಅಸಹಾಯಕ ತಾಯಿ ಏನು ಮಾಡಲೂ ಅರಿಯದೆ ಕಾತರದಿಂದ ನುಡಿದಳು. "ಓಹ್ ಊಟ ಮಾಡೋ ಹೊತ್ನಲ್ಲಿ ಇವೆಲ್ಲಾ ಹೇಳೋ ಅವಶ್ಯಕತೆ ಏನಿತ್ತು. ಆಮೇಲೂ ಹೇಳ್ಬಹುದಾಗಿತ್ತು."

ತಂದೆ ಹೆಂಡತಿಯನ್ನು ದಬಾಯಿಸುತ್ತಾ ನುಡಿದ "ನೀನೇ ಅವನಿಗೆ ಬೇಡದ ಪ್ರೋತ್ಸಾಹ ಕೊಟ್ಟು ಕೆಲ್ಸಕ್ಕೆ ಬರ್ದೋೀನ ಹಾಗೆ ಮಾಡ್ಬಿಟ್ಟಿದ್ದಿಯೇ, ನಿನ್ನ ಪ್ರೀತಿವಿಶ್ವಾಸ ಅವನ್ನ ಆಕಾಶಕ್ಕೆ ಏರಿಸಿಬಿಟ್ಟಿದೆ."

ತಾಯಿ ಸೆರಗಿನಿಂದ ಕಣ್ಣೀರನ್ನು ಒರೆಸಿಕೊಂಡಳು. ಮಗ ವಿಶಾಲ ಜಗತ್ತಿನಲ್ಲಿ ನಿರುದ್ದೇಶದ ಯಾತ್ರೆಯನ್ನು ಪ್ರಾರಂಭಿಸಿದ್ದ.

ಮಾರನೆ ದಿನ ವಿಷಯ ಗಂಭೀರ ರೂಪ ತಾಳಿತು. ಅಂದಿನ ರಾತ್ರಿಯಿಂದ ತಾಯಿ ರೊಟ್ಟಿಯ ಒಂದು ಚೂರನ್ನೂ ತಿನ್ನುವುದನ್ನು ನಿಲ್ಲಿಸಿದಳು. ಇಂದಾದರೂ ಹಾಸಿಗೆಯಿಂದ ಏಳಬಹುದೆನಿಸಲಿಲ್ಲ. ಬಹುಶಃ ತಂದೆ ಸಹ ರಾತ್ರಿಯೆಲ್ಲಾ ಮಲಗಿರಲಾರರು. ಈಗ ಆತ ಏನನ್ನು ತಾನೆ ಹೇಳಲು ಸಾಧ್ಯ?

ದಿಙ್ಮೂಢಗೊಂಡಿದ್ದ ತಂದೆ ಅಸಹಾಯ ದೃಷ್ಟಿಯನ್ನೇ ಸುತ್ತಲೂ ಹರಿಸಿದ್ದ. ಬದಿಯಲ್ಲಿ ಕುಳಿತಿದ್ದ ಮನುಷ್ಯರನ್ನು ನೋಡಿದಾಗ ಆತ ಬಹಳ ಕಠೋರ ಪ್ರಕೃತಿಯವನೆಂದು ತೋರಿತ್ತು. ಆತನೇ ಬಹಳ ಸಹಾನೂಭೂತಿಯ ಸ್ವರದಲ್ಲಿ ಪ್ರಶ್ನಿಸಿದ "ಏನು ಮಾಡ್ತಾ ಇದ್ದೀರಿ? ಆ ಸಜ್ಜನ ಏನು ಹೇಳ್ತಾರೆ ಅದನ್ನು ಸ್ವಲ್ಪ ಕೇಳಿ.... ತಾವು ಕುಳಿತುಕೊಳ್ಳಿ."

ತಂದೆ ಒಂದು ಕುರ್ಚಿಯ ಮೇಲೆ ಬಹಳ ಜುಗುಪ್ಸೆಯಿಂದಲೆ ಕುಳಿತರು. ಆಗ ಎದುರಿನ ಸಜ್ಜನ ಪ್ರಶ್ನಿಸಿದ "ತಾವು ಯಾವ ಸಮಾಚಾರದ ಬಗ್ಗೆ ಹೇಳಬಯಸುತ್ತೀರಿ?"

"ಸಾರ್..... ಅದು ಸಮಾಚಾರವಲ್ಲ. ಅದೊಂದು ಪ್ರಕಟಣೆ, ಪತ್ರಿಕೆಗೆ ಕೊಡಬೇಕೆಂದಿದ್ದೆ."

"ಪ್ರಕಟಣೆ! ಯಾತರದ ಬಗ್ಗೆ ಪ್ರಕಟಣೆ? ತಮಗೆ ಎಷ್ಟು ಜಾಗ ಬೇಕು? ಪ್ರಕಟಣೆ ಕಾಪಿ ತಂದಿದ್ದೀರಾ?"

ತಂದೆ ಮತ್ತಷ್ಟು ಗಾಬರಿಯಾದರು. "ಅದನ್ನು ಪ್ರಕಟಣೆ ಅಂತಾನೂ ಹೇಳೋಕೆ ಆಗೊಲ್ಲ. ವಿಷಯ ಏನು ಅಂದ್ರೆ – ನಮ್ಮ ಹುಡ್ಗ ಮನೆಯಿಂದ ಓಡಿಹೋಗಿದ್ದಾನೆ."

ಆತ ಮಾತು ಇನ್ನೂ ಪೂರೈಸಿರಲಿಲ್ಲ. ಅಷ್ಟರಲ್ಲೇ ಟೇಬಲ್ಲಿನ ಇನ್ನೊಂದು ಮೂಲೆಯಲ್ಲಿ ಕುಳಿತಿದ್ದ ಸಜ್ಜನ ನುಡಿದ "ಸರಿ ಸರಿ ಅರ್ಥವಾಯ್ತು. ತಾವು ಪ್ರಕಟಣೆಯಲ್ಲಿ ಏನು ಬರೀಬೇಕು ಅಂತಿದ್ದೀರಿ? ಮುಖವರ್ಣನೆ ಅಥವಾ ಮನೆಗೆ ಹಿಂತಿರುಗಲು ವಿನಂತಿ?"

ತಂದೆಗೆ ಈ ಮಾತಿನಿಂದ ದಡ ಸಿಕ್ಕಿದಂತಾಯಿತು. ತಕ್ಷಣ ನುಡಿದ "ಹೌದು... ಹೌದು ಮಗ ಹಿಂತಿರುಗಿ ಬರಲು ವಿನಂತಿ.... ಅವನ ತಾಯಿ ಬಹಳ ಅಳ್ತಾ ಇದ್ದಾಳೆ."

ಸರಿ ಗೊತ್ತಾಯ್ತು.... ಕೋಪಗೊಂಡು ಮನೆ ಬಿಟ್ಟು ಹೊರಟುಹೋಗಿದ್ದಾನೆ ಅಲ್ವೆ?" ಅನಂತರ ಅವರು ಒಂದು ಕಾಗದದ ಚೂರನ್ನೆ ಅವರತ್ತ ಸರಿಸಿ ನುಡಿದರು "ತಗೊಳ್ಳಿ.. ಏನು ಬರೀಬೇಕೋ ಅದನ್ನು ಬರ್ದು ಕೊಡಿ."

"ಬರ್ದುಕೊಡ್ಬೇಕೆ....!" ಯಾವುದೋ ಒಂದು ಭಾರಿ ಆಪತ್ತು ಬಂದಂತೆ ಅವರ ಮುಖದಲ್ಲಿ ಚಿಂತೆ ಮೂಡಿತ್ತು.

ಪತ್ರಿಕೆಯ ಸಜ್ಜನರಿಗೆ ಇವರ ಸ್ಥಿತಿನೋಡಿ ಕರುಣೆ ಮೂಡಿತು. "ಒಳ್ಳೇದು, ನಾವೇ ಬರ್ಕೊಂತೀವಿ.. ತಾವು ಹೆಸರು, ವಿಳಾಸ, ಮುಂತಾದನ್ನು ಮಾತ್ರ ಬರೆದುಕೊಡಿ..."

ಹೆಸರು ವಿಳಾಸ ಹಾಗೂ ಹುಡುಗನ ವಿವರ ನೀಡಿದ ಬಳಿಕ ತಂದೆ ನುಡಿದರು. "ದಯವಿಟ್ಟು ಸ್ವಲ್ಪ ಚೆನ್ನಾಗಿ ಬರೀರಿ. ಅವನ ತಾಯಿ ನಿನ್ನೆ ಇಂದ ಒಂದು ಲೋಟ ನೀರು ಸಹ ಕುಡ್ದಿಲ್ಲ."

"ನೀವು ಇದೆಲ್ಲಾ ಹೇಳೋ ಅಗತ್ಯವೇ ಇಲ್ಲ. ನಾನು ಬರ್ದಿದ್ದು ನೋಡಿ, ನಿಮ್ಮ ಹುಡ್ಗ ಅತ್ತು ಬಿಡ್ತಾನೆ. ನೀವು ನಿಶ್ಚಿಂತೆಯಿಂದಿರಿ."

ಅವರ ಮಾತನ್ನು ನಂಬಿ ತಂದೆ ಮನೆಗೆ ಹಿಂತಿರುಗಿದರೂ ಕಣ್ಣೀರಿನಿಂದ ತೊಯ್ದ ಆ ಪ್ರಕಟಣೆ ಇನ್ನು ವೃತ್ತ ಪತ್ರಿಕೆಯಲ್ಲಿ ಹೊರಬಂದಿರಲೇ ಇಲ್ಲ. ಅಷ್ಟರಲ್ಲಿ ಮಗನೇ ಹಿಂತಿರುಗಿದ. ಪಶ್ಚಾತ್ತಾಪಗೊಂಡು ಮನೆಗೆ ಹಿಂತಿರುಗಿದ್ದಾನೆ ಎಂದು ಯೋಚಿಸಬೇಕಾಗಿರಲಿಲ್ಲ. ಆತ ಮನೆಯಲ್ಲಿ ನಿಲ್ಲಲು ಬಂದಿರಲಿಲ್ಲ. ಮನೆಬಿಟ್ಟು ಹೋಗುವ ಮುನ್ನ ತನ್ನ ಕೆಲವು ಪುಸ್ತಕಗಳನ್ನು ತೆಗೆದುಕೊಂಡು ಹೋಗಲು ಮಾತ್ರ ಆತ ಆಗಮಿಸಿದ್ದ.

ಈ ಸಾರಿ ತಾಯಿ ನಿಜವಾಗಿ ಸಿಟ್ಟುಗೊಂಡಳು, ನುಡಿದಳು "ಹೂಂ, ಹೋಗ್ದೆ ಇನ್ನೇನು ಮಾಡ್ತಿ, ವಂಶಕ್ಕೇ ಕೊಳ್ಳಿ ಇಡ್ಬೇಕಾದೋನು ನೀನೇ ತಾನೆ? ಈ ಪ್ರಪಂಚದಲ್ಲಿ ಮಕ್ಕಳನ್ನು ಯಾರೂ ದಂಡಿಸೋದೇ ಇಲ್ಲಾ ಅಲ್ವೆ? ನೀನೊಬ್ಬ

ದೊಡ್ಡ ಪೈಗಂಬರ್. ನಿನ್ನೆ ರಾತ್ರಿಯೆಲ್ಲಾ ಅವರು ಒಂದು ಕ್ಷಣ ನಿದ್ರಿಸಲಿಲ್ಲ. ಅವರ ಮುಖ ನೀನೇ ನೋಡು, ಹ್ಯಾಗಾಗಿದ್ದಾರೆ. ಇಷ್ಟೆಲ್ಲಾ ಆಗಿದ್ರೂ ಪುನಃ ಹೊರಟುಹೋಗೋ ಬೆದ್ರಿಕೆ ಬೇರೆ ಹಾಕ್ತಾ ಇದ್ದೀ.''

ತಂದೆ ಕೊಠಡಿಯೊಳಗೆ ಬರುತ್ತಾ ಗಂಭೀರಮುಖ ಭಾವದಿಂದಲೇ ನುಡಿದರು ''ಹೋಗ್ಲಿ ಬಿಡು ಸುಮ್ನೆ ಏಕೆ ದಂಡಿಸ್ತೀಯಾ ?''

ತಾಯಿ ತಕ್ಷಣ ಕೋಪಗೊಂಡು ನುಡಿದಳು. ''ನೀವು ಸುಮ್ನಿರೀ ಅಂದ್ರೆ. ಹೆಚ್ಚಿಗೆ ಪ್ರೀತಿ ತೋರ್ಸೋದೂ ಒಳ್ಳೆದಲ್ಲ. ಸ್ವಲ್ಪ ಬೈದದ್ದಕ್ಕೆಲ್ಲಾ ಹೊರ್ಗೆ ಹೋಗೋ ಬೆದ್ರಿಕೆ ಹಾಕ್ತಾ ಇದ್ದಾನೆ! ಎಷ್ಟು ಧೈರ್ಯ ಅವನಿಗೆ!''

ಪ್ರಕಟಣೆಯಲ್ಲಿ ಬರುವ ಓಡಿಹೋದ ಬಹಳಷ್ಟು ಜನರ ವಿಷಯ ಇದೇ ಆಗಿರುತ್ತದೆ.

ಸೋಮೇಶನ ಸಿಗರೇಟು ಮುಗಿದಿತ್ತು. ನಾನು ಹೇಳಿದ ಯಾವೊಂದು ಮಾತೂ ಆತನ ಕಿವಿಯ ಮೇಲೆ ಬಿದ್ದಂತಿರಲಿಲ್ಲ. ಅವನು ನಿಶ್ಚಲವಾಗಿ, ನಿಶ್ಚಿಂತೆಯಿಂದ ಕುಳಿತಿದ್ದ.

ನಾನು ಕೊಂಚ ಕೋಪಗೊಂಡೇ ನುಡಿದೆ ''ನಿಂಗೆ ಏನಾಗಿದೆ.... ಹೇಳು.... ನಾನು ಕೆಲ್ಸಕ್ಕೆ ಬಾರ್ದ್ದೆ ಬೊಗಳ್ತಾ ಇದ್ದೀನಿ.''

ನನ್ನ ಮಾತಿಗೆ ಉತ್ತರ ಕೊಡದೆ ಸೋಮೇಶ್ ಕಾಲನ್ನು ಮಡಿಸಿಕೊಂಡು ಕುಳಿತುಕೊಂಡ. ಉಳಿದಿದ್ದ ಸಿಗರೇಟಿನ ತುಂಡನ್ನು ಎಸೆದು ನುಡಿದ ''ಬಹುಶಃ ನಿಂಗೆ ಗೊತ್ತಿಲ್ಲ. ಈ ತರಹ ಪ್ರಕಟಣೆಯ ಹಿಂದೆ ಹಲವೊಮ್ಮೆ ಎಂತಹ ದುರಂತ ಇರುತ್ತೆ ಅನ್ನೋದು ನಿಂಗೆ ಗೊತ್ತಿಲ್ಲ ?''

''ಇರಬಹ್ದು, ನಾನು ಹೇಳ್ತಾ ಇದ್ದೀನಿ ಎಷ್ಟೋ ಸಾರಿ ಒಮ್ಮೆ ಮನೆ ಬಿಟ್ಟು ಹೋದವನು ಹಿಂತಿರುಗಿ ಬರೋದೇ ಇಲ್ಲಾ.''

ಸೋಮೇಶ್ ನಗುತ್ತಾ ನುಡಿದ ''ಇಲ್ಲ. ನನ್ನ ಮಾತಿನ ಅರ್ಥ ಇದಲ್ಲ. ಮನೆಗೆ ಹಿಂತಿರುಗಿದ ಬಗ್ಗೆ ನಡೆದ ಒಂದು ಮಹಾ ಟ್ರಾಜಿಡಿ ನನಗೆ ನೆನಪಿಗೆ ಬರುತ್ತಿದೆ.''

ನಾನು ತಕ್ಷಣ ಪ್ರಶ್ನಿಸಿದೆ ''ಅಂದ್ರೆ, ಏನರ್ಥ ?''

''ಕೇಳು ಹೇಳುತ್ತೇನೆ.''

ಹೊರಗಡೆ ಅಷ್ಟು ಹೊತ್ತಿಗೆ ಮಳೆ ಪ್ರಾರಂಭವಾಗಿತ್ತು. ಕಿಟಕಿಯ ಗಾಜಿನಲ್ಲಿ ಅಸ್ಪಷ್ಟವಾಗಿ ಕಾಣುತ್ತಿದ್ದ ರಸ್ತೆ ಅಸ್ವಾಭಾವಿಕವಾಗಿ ತೋರುತ್ತಿತ್ತು. ನಾವಿಬ್ಬರು ಪ್ರಪಂಚದಿಂದ ಬೇರೆಯಾಗಿದ್ದಂತೆ ಭಾಸವಾಗುತ್ತಿತ್ತು.

''ಹಿಂದಿನ ವೃತ್ತಪತ್ರಿಕೆಯ ಪುಟಗಳನ್ನು ತಿರುವಿ ಹಾಕಿದರೆ ಕೆಲವರ್ಷಗಳ ಹಿಂದೆ ಪ್ರತಿದಿನ ಪ್ರಕಟವಾಗುತ್ತಿದ್ದ ಒಂದು ಪ್ರಕಟಣೆ ಕಣ್ಣಿಗೆ ಬೀಳುತ್ತದೆ. ಅದು ಕೇವಲ ಪ್ರಕಟಣೆಯಲ್ಲ. ಒಂದು ಚರಿತ್ರೆಯೇ ಆಗಿತ್ತು. ಅದನ್ನು ಪ್ರತಿದಿನ ಧಾರಾವಾಹಿಯಂತೆ ಓದಿದಾಗಲೇ ಆ ಕಥೆ ಅರ್ಥವಾಗುತ್ತಿದ್ದುದು. ಮುದ್ರಿತ ಅಕ್ಷರಗಳ ಮೇಲೆ ಕಿವಿ ಇರಿಸಿದರೆ ಒಂದು ಕರುಣಾರ್ದ್ರ ಆರ್ತನಾದ ಕೇಳಿ ಬರುತ್ತಿತ್ತು.

ಪ್ರಕಟಣೆಯಂತೂ ಕಾಣೆಯಾದ ವ್ಯಕ್ತಿಯ ಬಗ್ಗೆ ಇತ್ತು. ಮೊದಮೊದಲು

ಪ್ರಕಟಣೆಯಲ್ಲಿ ಮಗನನ್ನು ಬೇಗ ಹಿಂತಿರುಗಿ ಬಾ ಎನ್ನುವ ತಾಯಿಯ ಕಾತರದ ವಿನಂತಿ ಇರುತ್ತಿತ್ತು. ಅಸ್ಪಷ್ಟ ಆ ನುಡಿ ಕಂಪನದಲ್ಲಿ ಮಿಡಿಯುತ್ತಿದ್ದ ವ್ಯಾಕುಲತೆ ಆ ಪ್ರಕಟಣೆಯ ಪಂಕ್ತಿಗಳನ್ನು ಓದಿದಲ್ಲದೆ ಅರ್ಥವಾಗುತ್ತಿರಲಿಲ್ಲ. ಕ್ರಮೇಣ ತಾಯಿಯ ಕಾತರದ ಪ್ರಾರ್ಥನೆ ನೀಳ ಉಸಿರಾಗಿ ವೃತ್ತಪತ್ರಿಕೆಯ ಪುಟದಲ್ಲಿ ವಿಲೀನಗೊಂಡಿತು. ಆನಂತರ ತಂದೆಯ ಗಂಭೀರ ದನಿ ಕೇಳಿ ಬಂತು. ಅದು ಸ್ವಲ್ಪ ಕಂಪಿಸುತ್ತಿತ್ತು. ಆದರೆ ಗಂಭೀರವಾಗಿತ್ತು. ಶಾಂತವಾಗಿತ್ತು. "ಶೋಭನ್ ಹಿಂತಿರುಗಿ ಬಾ, ನಿನ್ನ ತಾಯಿ ಹಾಸಿಗೆ ಹಿಡಿದು ಮಲಗಿದ್ದಾಳೆ. ನಿನಗೆ ನಿನ್ನ ಕರ್ತವ್ಯ ಕಾಣುತ್ತಿಲ್ಲವೇ ?"

ಇಷ್ಟರ ನಂತರವೂ ಪ್ರಕಟಣೆ ನಿಲ್ಲಲಿಲ್ಲ. ತಂದೆಯ ದುಃಖ ತುಂಬಿದ ಮಾತುಗಳು ಭಾರವಾಗತೊಡಗಿದ್ದವು: "ಶೋಭನ್ ಈಗಲೂ ನೀನು ಹಿಂತಿರುಗದಿದ್ದರೆ ನಿನ್ನ ತಾಯಿಯನ್ನು ನೀನು ನೋಡಲಾರೆ."

ಶೋಭನ್‌ನ ಹೃದಯ ಇದರಿಂದಲೂ ಕರಗಲಿಲ್ಲ. ಹಿಂದಿನ ರೀತಿಯಲ್ಲೇ ಪ್ರಕಟಣೆ ಪ್ರಕಟಗೊಳ್ಳುತ್ತಿದ್ದುದರಲ್ಲಿ ಒಂದು ವಿಷಯ ಸ್ಪಷ್ಟವಾಗಿ ಓದುಗರಿಗೆ ಅರ್ಥವಾಗುತ್ತಿತ್ತು – ತಂದೆ, ದಿನ ದಿನಕ್ಕೆ ಸಂಯಮವನ್ನು ಕಳೆದುಕೊಳ್ಳುತ್ತಿದ್ದಾರೆ. ಇಂದಿನ ಮಾತುಗಳಲ್ಲಿ ಕಾತರತೆ ಎದ್ದು ಕಾಣುತ್ತಿತ್ತು. ಕಾತರತೆ ಮಾತ್ರವಲ್ಲ, ಅಸಹಾಯಕತೆ ಕೂಡ "ಶೋಭನ್, ನಾವು ಹೇಗೆ ದಿನ ತಳ್ಳುತ್ತಿದ್ದೇವೆ ನಿನಗೆ ಅರ್ಥವಾಗುತ್ತಿಲ್ಲವೆ ? ಹಿಂತಿರುಗಿ ಬಾ ಮಗನೇ, ನಮಗೆ ಮತ್ತಷ್ಟು ದುಃಖ ಕೊಡಬೇಡ."

ಕ್ರಮೇಣ ಪ್ರಕಟಣೆ ನಿರಾಶೆಯಿಂದ ಗೋಳಾಟಕ್ಕೆ ತಿರುಗಿತು. ಅನಂತರ ಬದಲಾಯಿತು. ಈ ನಡುವೆ ಶೋಭನ್‌ನನ್ನು ಕುರಿತು ಯಾವ ಪ್ರಕಟಣೆಯೂ ಹೊರಡುತ್ತಿರಲಿಲ್ಲ, ಸಾಧಾರಣ ರೀತಿಯ ಒಂದು ವಿಜ್ಞಾಪನೆ ಮಾತ್ರ ಹೊರಡುತ್ತಿತ್ತು. "ಈ ತರಹ ಇರುವ, ಈ ಮುಖಚರ್ಯೆಯ ಈ ವಯಸ್ಸಿನ, ಒಬ್ಬ ಯುವಕ ಒಂದು ವರ್ಷದಿಂದ ಕಾಣೆಯಾಗಿದ್ದಾನೆ. ಈ ಬಗ್ಗೆ ವಿಷಯ ತಿಳಿಸುವವರಿಗೆ ಬಹುಮಾನ ನೀಡಲಾಗುವುದು." ಅನಂತರ ಈ ಬಹುಮಾನದ ಮೌಲ್ಯ ದಿನಂಪ್ರತಿ ಪತ್ರಿಕೆಯಲ್ಲಿ ವೃದ್ಧಿಸಹತ್ತಿತ್ತು. "ಸಣ್ಣ ಪ್ರಕೃತಿಯ ಹದಿನಾರು ವರ್ಷದ ಯುವಕ, ಕತ್ತಿನ ಮೇಲೆ ಬಲಕಿವಿಯ ಬಳಿ ಒಂದು ಮಚ್ಚೆ ಇದೆ. ಆತನನ್ನು ಸಜೀವ ಅಥವಾ ಮೃತನಾಗಿ...." ಇಷ್ಟು ಸಮಾಚಾರ ತಿಳಿಸುವವರಿಗೂ ಬಹುಮಾನ ನೀಡಲಾಗುವುದು.

ಇಷ್ಟು ಹೇಳಿ ಸೋಮೇಶ್ ಕೆಲಕ್ಷಣ ಮೌನಿಯಾದ. ಮಳೆಯ ಹನಿಯಿಂದ ಕಿಟಕಿಯ ಗಾಜು ಮಂಜಾಗಿತ್ತು. ಕೊಠಡಿಯ ಒಳಗೂ ಚಳಿ ತುಂಬಿತ್ತು. ಕಂಬಳಿ ಹೊದ್ದರೆ ಒಳ್ಳೆಯದೆಂದೆನಿಸುತ್ತಿತ್ತು.

ನಾನು ಪ್ರಶ್ನಿಸಿದೆ, "ಇದೇನೊ ಪ್ರಕಟಣೆಯ ವಿಷಯ. ಆ ವಿಷಯದ ಬಗ್ಗೆ ನಿಮಗೆ ಮತ್ತೇನು ಗೊತ್ತು ?"

"ಗೊತ್ತಿದೆ. ನನಗೆ ಶೋಭನ್ ಚೆನ್ನಾಗಿ ಗೊತ್ತು. ಸ್ವಾಭಿಮಾನದ ಆವೇಶದಲ್ಲಿ ಮನೆ ಬಿಟ್ಟು ಹೊರಟುಹೋಗಿದ್ದಾನೆ ಎಂದು ತಪ್ಪಾಗಿ ಭಾವಿಸಬೇಡ. ಆಗ ಆತನಿಗೆ ಮನೆ ಬಿಟ್ಟು ಓಡಿಹೋಗುವುದೇ ಉಳಿದಿದ್ದ ದಾರಿ. ಅದಕ್ಕೆ ಏನಾದರೂ ಒಂದು

ಕಾರಣ ಬೇಕಿತ್ತು. ಈ ಪ್ರಪಂಚದಲ್ಲಿ ಎಲ್ಲೋ ಒಂದಿಬ್ಬರು ಮಾತ್ರ ನಿರ್ಲಿಪ್ತ ವ್ಯಕ್ತಿಗಳು ಜನ್ಮ ತಳೆಯುತ್ತಾರೆ. ಅವರುಗಳು ಗಟ್ಟಿ ಹೃದಯುದವರಲ್ಲ, ಅವರ ಮನಸ್ಸು ಬಹಳ ಚಂಚಲ. ಚಂಚಲ ಪ್ರವೃತ್ತಿಯವರಾದುದರಿಂದಲೇ ಅವರು ಯಾರ ಹಿಡಿತಕ್ಕೂ ಸಿಕ್ಕುವುದಿಲ್ಲ. ಅವರ ಮನಸ್ಸಿನ ಮೇಲೆ ಯಾರ ಮಾತೂ ಪರಿಣಾಮ ಬೀರುವುದಿಲ್ಲ. ಈ ಮಾತು ಕೇಳಿ ನಿಮಗೆ ಆಶ್ಚರ್ಯವಾಗಬಹುದು. ವೃತ್ತ ಪತ್ರಿಕೆಯಲ್ಲಿ ಪ್ರಕಟಗೊಂಡ ಪ್ರಕಟಣೆಯನ್ನು ಓದಿದ ನಂತರವೂ ಅದರಂತೆ ನಡೆಯಲು ಆತ ಪ್ರವೃತ್ತನಾಗಲೇ ಇಲ್ಲ. ಯಾವಾಗಲೊ ಅದನ್ನು ಓದಿ ಮರೆತಿರಬಹುದು, ಮನೆಯ ಹೊರಗಿದ್ದಾಗ ಎದುರಾಗುವ ಸಮಸ್ಯೆ ಹಾಗೂ ಕಷ್ಟಗಳನ್ನು ಅನುಭವಿಸುತ್ತಿರುವಾಗ ಒಂದು ವಿಧವಾದ ಭಯವಾಗುತ್ತಿತ್ತು. ಆದರೆ ಅದರಲ್ಲೆ ಒಂದು ತರಹ ಮುಕ್ತನಾದಂತಹ ಸ್ವಾದ ಲಭಿಸುತ್ತಿತ್ತು. ಯಾರು ಏನೇ ಯೋಚಿಸಲಿ, ಆದರೆ ಶೋಭನ್ ತನ್ನನ್ನು ಕುಟುಂಬದ ಒಬ್ಬ ಪ್ರೀತಿಯ ಹುಡುಗನೆಂದು ತಿಳಿಯಲಿಲ್ಲ. ಪ್ರಕಟಣೆ ಬರುವುದು ನಿಂತಾಗ ಆತನ ಉದಾಸೀನ ಮನಸ್ಸು ವಿಚಲಿತಗೊಂಡಿತು. ಪ್ರಕಟಣೆ ಸಹ ಒಂದು ಅಸಾಧಾರಣ ರೀತಿಯಲ್ಲಿ ಒಮ್ಮೆಗೇ ನಿಂತು ಹೋಗಿತ್ತು. ನಡೆದು ನಡೆದು ಸುಸ್ತಾಗಿ ನಿಂತಿರಲಿಲ್ಲ. ಒಮ್ಮೆಗೇ ಜರುಗಿದ ಒಂದು ಅಸಾಧಾರಣ ದುರ್ಘಟನೆಯಾದಂತೆ ವೃತ್ತಪತ್ರಿಕೆಯ ಪ್ರಕಟಣೆಯ ಪುಟ ಮೌನ ತಾಳಿತ್ತು. ಶೋಭನ್‌ನ ಮುಖ ವರ್ಣನೆಯ ಬದಲು ಒಂದು ದಿನ ಈ ಪ್ರಕಟಣೆ ಹೊರ ಬಂತು.

"ಶೋಭನ್, ನಿನ್ನ ತಾಯಿಯ ಭೇಟಿ ನಿನಗೆ ಇನ್ನು ಆಗದು. ಆಕೆ ಕೇವಲ ನಿನ್ನನ್ನು ನೆನೆಯುತ್ತಾಳೆ."

ಇದಾದ ನಂತರ ಯಾವ ಪ್ರಕಟಣೆಯೂ ಹೊರಬರಲಿಲ್ಲ. ಇದಾದ ನಂತರ ಎರಡು ವರ್ಷಗಳು ಕಳೆದುಹೋದುವು. ಶೋಭನ್ ಇದ್ದಕ್ಕಿದ್ದಂತೆಯೇ ತನ್ನ ಊರಿನ ಮನೆಗೆ ಹಿಂತಿರುಗಿದ. ಇದೊಂದೇ ಮಾತಿನಿಂದ ನಿನಗೆ ಶೋಭನ್‌ನ ಸ್ವಭಾವದ ಕೊಂಚ ಪರಿಚಯವಾಗುತ್ತದೆ. ನಾನು ಮೊದಲೇ ನಿನಗೆ ಹೇಳಿರಲಿಲ್ಲ, ಶೋಭನ್ ಯಾವುದೋ ಸಾಧಾರಣ ಮಧ್ಯಮ ವರ್ಗದ ಪರಿವಾರಕ್ಕೆ ಸೇರಿದ ಹುಡುಗನಾಗಿರಲಿಲ್ಲ. ಆ ಪರಿವಾರವನ್ನು ಸಂಪತ್ ಭರಿತ ಎಂದು ಹೇಳುವುದು ಸರಿ ಕಾಣದು. ಆದರೂ ಈ ಜಮೀನ್ದಾರಿ ಕೆಟ್ಟ ದಿನಗಳಲ್ಲಿ ಕಾಲಿರಿಸಿದ್ದರೂ, ಇನ್ನೂ ಸುಸ್ಥಿತಿಯಲ್ಲಿತ್ತು. ಇಂತಹ ಪರಿವಾರದ ಏಕಮಾತ್ರ ವಾರಸುದಾರ ಈ ಶೋಭನ್.

ಸೋಮೇಶ್ ಕೊಂಚ ನಕ್ಕು ಮತ್ತೆ ಮಾತು ಪ್ರಾರಂಭಿಸಿದ. "ಎರಡು ವರ್ಷಗಳ ಸ್ವತಂತ್ರ ಜೀವನ ನಡೆಸಿಯೂ ಅದರ ಕಷ್ಟವನ್ನು ಅಂಗೀಕರಿಸದ ಆತನ ಮುಖದ ಮೇಲೆ ಅದರ ಸ್ಪಷ್ಟ ಮುದ್ರೆ ಮೂಡಿತ್ತು. ಎರಡು ವರ್ಷಗಳಲ್ಲಿ ಆತ ಬಹಳಷ್ಟು ಬದಲಾಯಿಸಿಬಿಟ್ಟಿದ್ದ. ಆದರೂ ತನ್ನ ಮನೆಯ ಕೆಲಸದವರು ಆತನನ್ನೇ ಗುರ್ತಿಸದೆ ಹೋಗಬಹುದು ಎಂಬ ಆ ಶಂಕೆ ಆತನಿಗೆ ಇರಲಿಲ್ಲ."

ತನ್ನ ಹಳ್ಳಿ ಸೇರಿ ನೇರವಾಗಿ ತನ್ನ ಮನೆಯನ್ನು ತಲುಪಿದ. ಆದರೆ ಬಾಗಿಲಿನಿಂದ ಒಳಗೆ ಹೋಗುತ್ತಲೇ ಹಳೆಯ ಗುಮಾಸ್ತ ಇವನನ್ನು ತಡೆದು ಪ್ರಶ್ನಿಸಿದ "ಯಾರು

ಬೇಕು ?'' ಶೋಭನ್ ನಗುತ್ತಾ ನುಡಿದ ''ಯಾರೂ ಬೇಕಿಲ್ಲ, ಮನೆಯ ಒಳಗೆ ಹೋಗ್ಬೇಕು ಅಷ್ಟೆ.''

ಗುಮಾಸ್ತನು ಆತನತ್ತ ತೀಕ್ಷ್ಣ ದೃಷ್ಟಿ ಹರಿಸಿ ಮುಗಳ್ನಗುತ್ತ ನುಡಿದ ''ಓಹೋ ! ಹಾಗೋ ವಿಷಯ, ಒಳ್ಳೇದು. ಅದ್ಯಾಕೆ ಅಷ್ಟು ಅವಸರ. ಬನ್ನಿ, ಹೊರಗಡೆ ವರಾಂಡದಲ್ಲಿ ಕೂತ್ಕೋ ಬನ್ನಿ.'' ಶೋಭನ್ ಆಶ್ಚರ್ಯ ಚಕಿತಗೊಂಡು ನುಡಿದ ''ಏನು ಹೇಳ್ತಾ ಇದ್ದೀರಿ ಮುನೀಮ್‌ಜೀ ? ಏನು ಸಮಾಚಾರ ?'' ಇಲ್ಲ, ಇಲ್ಲ. ಏನೂ ಸಮಾಚಾರ ಇಲ್ಲ.''

''ಅಮ್ಮ ಆರೋಗ್ಯವಾಗಿದ್ದಾಳೆ ತಾನೇ ?'' ಶೋಭನ್ ಮಾತಿನಲ್ಲಿ ವ್ಯಾಕುಲತೆ ತುಂಬಿತ್ತು. ಮುನೀಮ್‌ಜಿ ಹಿಂದಿನಂತೆಯೇ ರಹಸ್ಯ ಪೂರ್ಣವಾಗೇ ನಗುತ್ತಾ ನುಡಿದ. ''ಚೆನ್ನಾಗಿದ್ದಾರೆ ಬನ್ನಿ, ಬನ್ನಿ ನನ್ನ ಜೊತೆ.''

ಶೋಭನ್ ಮತ್ತೆ ನುಡಿದ ''ನಾನು ಒಳಗೆ ಹೋಗೋದೇ ಒಳ್ಳೇದು. ''ಮುನೀಮ್‌ಜೀ ಕಠಿನವಾಗೇ ನುಡಿದ ''ಇಲ್ಲ – ನೀವು ಒಳಗೆ ಹೋಗೋದು ಸರಿ ಇಲ್ಲ. ನನ್ನ ಜೊತೇಲಿ ಬನ್ನಿ.''

ಶೋಭನ್ ದಿಙ್ಮೂಢನಾಗಿ ಮುನೀಮ್‌ಜೀಯನ್ನು ಹಿಂಬಾಲಿಸಿ ಹೊರಗಿನ ವರಾಂಡದಲ್ಲಿ ಹೋಗಿ ಕುಳಿತ. ಈ ಎರಡು ವರ್ಷಗಳಲ್ಲಿ ಎಲ್ಲೆಲ್ಲೂ ಕೊಂಚ ಬದಲಾವಣೆಗಳು ಕಂಡುಬಂದವು. ದೊಡ್ಡ ಪುಸ್ತಕ ಬರೆಯುವ ಹಳೆಯ ಗುಮಾಸ್ತ ಇಂದು ಕಾಣಿಸುತ್ತಿರಲಿಲ್ಲ. ಅದೇ ಸ್ಥಳದಲ್ಲಿ ಇಬ್ಬರು ಕುಳಿತು ಅದೇ ದಪ್ಪ ಪುಸ್ತಕದಲ್ಲಿ ಏನೋ ಬರೆಯುತ್ತಿದ್ದರು. ಹಿಂದಿನ ಖಜಾಂಚಿಯನ್ನು ಕಂಡು ಈತನಿಗೆ ಸ್ವಲ್ಪ ಸಮಾಧಾನವಾಯಿತು. ಮುನೀಮ್‌ಜೀ, ಶೋಭನ್‌ನನ್ನು ಒಂದು ಕುರ್ಚಿಯ ಮೇಲೆ ಕೂಡಿಸಿ ಖಜಾಂಚಿಯೊಡನೆ ನುಡಿದ ''ಇವರು ಒಳಗೆ ಹೋಗಬಯಸುತ್ತಾರೆ.'' ಮುನೀಮ್‌ಜೀಯ ಸ್ವರ ಶೋಭನ್‌ಗೆ ಅಸ್ವಾಭಾವಿಕವಾಗಿ ತೋರಿತು. ಖಜಾಂಚಿ ಮೂಗಿನ ಮೇಲಿನ ಕನ್ನಡಕವನ್ನು ಮೇಲೆ ಸರಿಸುತ್ತಾ ಶೋಭನ್ ಕಡೆ ದೃಷ್ಟಿ ಬೀರುತ್ತಾ ನುಡಿದ. ''ಓಹ್ ! ಇಂದೂ ಈ ಮನುಷ್ಯನೇ ಬಂದಿದ್ದಾನಾ ?'' ''ಹೌದು ಈಗ್ತಾನೆ ಬಂದಿದ್ದಾರೆ.''

ಶೋಭನ್‌ನ ಧೈರ್ಯ ಅಳಿದು ಹೋಯಿತು. ಅಧೀರನಾಗಿ ನುಡಿದ ''ತಾವು ಏನ್ಹೇಳ್ಬೇಕು ಅಂತಿದ್ದೀರಿ ಹೇಳಿಬಿಡಿ. ತಾಯಿಗೆ ಏನಾಗಿದೆ, ತಂದೆ ಹೇಗಿದ್ದಾರೆ ?'' ನಾಲ್ಕು ಕಡೆಯಿಂದ ಜನರ ದೃಷ್ಟಿ ಆತನತ್ತ ಹರಿದಿತ್ತು. ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನಿದ್ದರು. ಅನಂತರ ಮುನೀಮ್‌ಜೀ ನುಡಿದರು. ''ಅವರೆಲ್ಲಾ ಚೆನ್ನಾಗೇ ಇದ್ದಾರೆ. ಆದರೆ ತಾವು ಅವರನ್ನು ಈಗ ನೋಡಲಾರರಿ.''

ಶೋಭನ್‌ಗೆ ಸಿಟ್ಟು ನೆತ್ತಿಗೇರಿತು. ''ಏಕೆ ನೋಡಬಾರ್ದು ? ನಿಮ್ಮ ತಲೆ ಕೆಟ್ಟಿದೆ ಏನು ? ನಾನು ಒಳಗೆ ಹೋರ್ತೆ'' ಶೋಭನ್ ಎದ್ದು ನಿಂತ. ಮುನೀಮ್‌ಜೀ ಬಾಗಿಲ ಬಳಿ ನಿಂತು ಶಾಂತ ಸ್ವರದಿಂದಲೇ ನುಡಿದರು ''ನೋಡಿ ಸುಮ್ಮಸುಮ್ಮನೆ ತಾವು ಗಲಾಟೆ ಮಾಡ್ಬೇಡಿ. ಇದ್ರಿಂದ ಏನೂ ಪ್ರಯೋಜನವಿಲ್ಲ.''

ಇದ್ದಕ್ಕಿದ್ದಂತೆಯೇ ಶೋಭನ್‌ಗೆ ಸ್ಪಷ್ಟವಾಗಿ ಸಧ್ಯದ ಪರಿಸ್ಥಿತಿಯ ಚಿತ್ರಣ

ಮೂಡಿತು. ಆತ ವಿಸ್ಮಯಗೊಂಡ. ಕಳವಳದ ಸ್ವರದಲ್ಲಿ ನುಡಿದ "ನೀವ್ಯಾರೂ ನನ್ನ ಗುರ್ತಿಸಿಯೇ ಇಲ್ಲ ಅಂತಾ ಕಾಣುತ್ತೆ." ಎಲ್ಲರೂ ಸುಮ್ಮನಿದ್ದರು. "ನಾನು ಶೋಭನ್, ತಮಗೆ ನಾನು ಶೋಭನ್ ಎಂದು ಗುರ್ತು ಹತ್ತಿಲ್ಲವೆ?" ಮುನೀಮ್‌ಜೀ ಮತ್ತೆ ನುಡಿದರು "ತಾವು ಒಂದು ನಿಮಿಷ ನಡೆಯಿರಿ. ನಾನು ಇದೇ ತಾನೆ ಬರ್ತಾ ಇದ್ದೀನಿ". ಇಷ್ಟು ಹೇಳಿ ಅವರು ಬರಿಯ ಕೊಠಡಿಯೊಳಗೆ ಹೋಗಿ ಒಂದು ವಸ್ತುವನ್ನು ಹೊರತಂದರು. ಅದನ್ನು ಶೋಭನ್‌ನ ಕೈಯಲ್ಲಿರಿಸಿದರು. ಅದು ಶೋಭನದೇ ಹಳೆಯ ಒಂದು ಸಾಧಾರಣ ಫೋಟೋ. ಆತನಿಗೆ ಮಂಜು ಮುಸುಕಿದಂತಾಯಿತು.

ಮುನೀಮ್‌ಜೀ ನುಡಿದರು "ತಾವು ಇದನ್ನು ಗುರುತಿಸುವಿರಾ?" ಶೋಭನ್ ವಿಸ್ಮಯಗೊಂಡ. "ಇದು ನಂದೇ ಫೋಟೋ, ನೀವೇ ಇದನ್ನು ಹೋಲಿಸಿ ನೋಡಿ. ಓಹ್! ಇಷ್ಟೊಂದು ಅಸಹನೀಯ!" ಎಂದು ನುಡಿದು ತಲೆಯ ಕೂದಲು ಕೈಯಲ್ಲಿ ಹಿಡಿದು ಕುಳಿತ.

ಮುನೀಮ್‌ಜೀ ಆತನ ಬದಿಯಲ್ಲಿ ಬಂದು ಕುಳಿತು ಹೇಳಿದರು, "ನೋಡಿ ತಪ್ಪು ತಿಳೀಬೇಡಿ, ನಿಮ್ಮ ಮುಖದಲ್ಲಿ ಅಲ್ಪಸ್ವಲ್ಪ ಹೋಲಿಕೆ ಇದೆ, ಆದರೆ ಇದಕ್ಕೆ ಮುಂಚೆ ಇಬ್ಬರು ಆಗ್ಲೇ ಬಂದು ಹೋಗಿದ್ದಾರೆ. ಅವರ ಮುಖದಲ್ಲೂ ತುಂಬಾ ಹೋಲಿಕೆ ಇತ್ತು. ಮಚ್ಚೆ ಕೂಡ ಇತ್ತು. ಈ ವಿಷಯದಲ್ಲಿ ಗೊಂದಲ ಎಬ್ಬಿಸ್ಬಾರ್ದು ಅಂತಾ ನಮಗೆ ಕಟ್ಟಪ್ಪಣೆ ಇದೆ. ಈ ಬಗ್ಗೆ ವಾದವಿವಾದಕ್ಕೆ ನಾವು ಸಿದ್ಧರಿಲ್ಲ, ಇನ್ನು ನೀವು ಹೋಗ್ಬಹುದ್ದು."

ಶೋಭನ್ ಗಾಬರಿಗೊಂಡು ದೃಷ್ಟಿಯನ್ನು ಸುತ್ತಲೂ ಹರಿಸಿದ. ಎಲ್ಲರ ದೃಷ್ಟಿಯಲ್ಲೂ ಅವಿಶ್ವಾಸ ಇಣಕಿತ್ತು. ಶೋಭನ್ ಕಾತರಗೊಂಡು ನುಡಿದ "ಒಂದೇ ಒಂದು ಸಾರಿ ನಾನು ನನ್ನ ಅಪ್ಪಾ ಅಮ್ಮನ್ನ ನೋಡ್ತೀನಿ. ನೀವೇನೋ ನಿಶ್ಚಯ ಮಾಡ್ಕೊಂಡಿರಬಹ್ದು. ಆದ್ರೆ ಒಮ್ಮೆ ಭೇಟಿ ಮಾಡಲು ನನ್ನ ಬಿಡಿ." ಮುನೀಮ್‌ಜೀ ಕೈಯನ್ನು ಅಲ್ಲಾಡಿಸುತ್ತಾ ನಿರಾಶೆಯನ್ನು ಮುಖದಲ್ಲಿ ಮೂಡಿಸಿ ನುಡಿದರು. ಶೋಭನ್ ಸತ್ತು ಏಳು ದಿನವಾಗಿದೆ, ಆತನ ಮರಣ ವಾರ್ತೆ ನಮಗೆ ತಲುಪಿದೆ." ಇದನ್ನು ಕೇಳಿ ಶೋಭನ್ ಗಹಗಹಿಸಿದ "ಹೇಗಾಯ್ತು ಆತನ ಮೃತ್ಯು?" "ಶೋಭನ್‌ನತ್ತ ದೃಷ್ಟಿಯನ್ನು ಹರಿಸದೆಯೇ ಮುನೀಮ್‌ಜೀ ನುಡಿದರು "ರಸ್ತೇಲಿ ವಾಹನವೊಂದರ ಕೆಳಗೆ ಸಿಕ್ಕಿ ಶೋಭನ್ ಸತ್ತು ಹೋದ. ಆದ್ರೆ ಆತನ ವಿಳಾಸ, ಹೆಸರು ಒಂದೂ ಸಿಕ್ಕಿಲ್ಲ. ದುರ್ಘಟನೆ ನಡೆದ ಸ್ಥಳದಲ್ಲಿದ್ದ ಕೆಲವರು ಪತ್ರಿಕೆಯಲ್ಲಿನ ಪ್ರಕಟಣೆ ಓದಿ ಈ ದುರ್ಘಟನೆ ಬಗ್ಗೆ ಪೂರ್ಣ ವಿವರ ನೀಡಿದ್ದಾರೆ. ಆಸ್ಪತ್ರೆ, ಡಾಕ್ಟರನ್ನು ವಿಚಾರಿಸಿದೆವು. ಅವರು ಕೊಟ್ಟ ವರ್ಣನೆಯಿಂದ ನಮ್ಮ ಸಂಶಯ ನಿವಾರಣೆ ಆಯ್ತು."

ಇದಾದ ನಂತರ ಶೋಭನ್ ಏನು ಮಾಡುತ್ತಿದ್ದನೋ, ಅದೇ ಸಮಯದಲ್ಲಿ ತಂದೆ ಮನೆಯಿಂದ ಹೊರ ಹೋಗುತ್ತಿದ್ದರು. ಬಿರುಗಾಳಿಗೆ ಸಿಲುಕಿ ಬುಡ ಸಹಿತ ಬಿದ್ದು ಹೋದ ವೃಕ್ಷದಂತೆ ಮನುಷ್ಯ ಕಾಣುತ್ತಾನೆ ಎಂಬ ಉಪಮೆ ಶೋಭನ್‌ಗೆ

ತನ್ನ ಬಗ್ಗೆ ಬರುತ್ತಿದ್ದ ಪ್ರಕಟಣೆಗಳನ್ನು ಓದಿದಾಗ ಮನದಲ್ಲಿ ಸುಳಿದಿರಲೇ ಇಲ್ಲ. ತಂದೆಯ ಚಲನೆಯನ್ನು ಗಮನಿಸಿದರೆ ಅವರೊಂದು ಭಯಂಕರ ಆಘಾತಕ್ಕೆ ಸಿಲುಕಿರುವಂತೆ ಭಾಸವಾಗುತ್ತಿತ್ತು.

ಯಾರೂ ಈತನ ಬಗ್ಗೆ ಯೋಚಿಸುವ ಮುಂಚೆಯೇ ಶೋಭನ್ ಕೊಠಡಿಯಿಂದ ಹೊರ ಓಡಿದ್ದ. ಮುನೀಮ್‌ಜೀ ಹಾಗೂ ಉಳಿದ ಕೆಲಸಗಾರರು ಆತನ ಹಿಂದೆ ಓಡಿದರು. ಶೋಭನ್ ತಂದೆಯ ಬಳಿ ಹೋಗಿ ಕೂಗಿದ "ಪಿತಾಜೀ". ವೃದ್ಧರು ಚಕಿತಗೊಂಡು ನಿಂತರು. ಅವರ ಮುಖದಲ್ಲಿ ಮುದ್ರಿತಗೊಂಡಿದ್ದ ಆಳವಾದ ವೇದನೆಯನ್ನು ಕಂಡು ಶೋಭನ್‌ನ ಹೃದಯದಲ್ಲಿ ಚೂರಿಯನ್ನು ತಿವಿದಂತಾಗಿತ್ತು. ಶೋಭನ್ ನುಡಿದ "ಪಿತಾಜೀ ನನ್ನ ಗುರ್ತು ಹತ್ತಿತು ತಾನೆ ?" ವೃದ್ಧರು ಒಂದು ಹೆಜ್ಜೆ ಮುಂದೆ ಇಡಲು ತತ್ತರಿಸಿ ಬೆದರಿ ನಿಂತರು. ತೀವ್ರ ಭಾವಾವೇಷದಿಂದ ವೃದ್ಧರ ಮುಖಾಕೃತಿ ಕಂಗೆಟ್ಟಿತು. ಇಷ್ಟು ಹೊತ್ತಿಗೆ ಮುನೀಮ್‌ಜೀ ಹಾಗೂ ಉಳಿದ ಕೆಲಸಗಾರರು ಬಂದು ತಲುಪಿದ್ದರು.

ವೃದ್ಧರು ಕಂಪಿಸುವ ಬಾಹುಗಳನ್ನು ಎತ್ತಿ ಕಂಪಿಸುವ ಸ್ವರದಲ್ಲಿ ಪ್ರಶ್ನಿಸಿದರು, "ಯಾರು ?" ಮುನೀಮ್‌ಜೀ ಶೋಭನ್‌ನ ಭುಜದ ಮೇಲೆ ಬಲವಾದ ಹಸ್ತ ಊರಿ ನುಡಿದರು. "ಯಾರೂ ಇಲ್ಲ, ಯಾರೂ ಇಲ್ಲ. ಹಿಂದಿನ ಸಾರಿಯಂತೆಯೇ ಇದು ಮೂರನೆ ಸಾರಿ...."

ಇನ್ನೊಬ್ಬ ಕೆಲಸಗಾರ ನುಡಿದ "ನಾವು ಇವನನ್ನ ತಡೆದೇ ಹಿಡ್ಕೊಂಡಿದ್ವು. ಯಾವ್ದೊ ಕ್ಷಣದಲ್ಲಿ ಬಿಡಿಸ್ಕೊಂಡು..." ವೃದ್ಧ ಆತನನ್ನು ತಡೆಯುತ್ತಾ ನುಡಿದರು "ಅವನಿಗೆ ಏನೂ ಹೇಳ್ಬೇಡಿ ಹೋಗ್ಲಿ ಬಿಟ್ಟು ಬಿಡಿ" ಪುನಃ ಕಾತರ ದೃಷ್ಟಿಯನ್ನು ಶೋಭನ್‌ನತ್ತ ಹರಿಸುತ್ತಾ ಒಳಗೆ ಹೊರಟುಹೋದರು.

ಶೋಭನ್ ದಿಙ್ಮೂಢನಾಗಿ ನಿಂತ. ಮುನೀಮ್‌ಜೀ ಏನೋ ಹೇಳುತ್ತಾ ಇದ್ದರು, ಆದರೆ ಅದೊಂದೂ ಆತನಿಗೆ ಕೇಳಿಸುತ್ತಿರಲಿಲ್ಲ. ಅಷ್ಟು ಹೊತ್ತಿಗೆ ಅವನಿಗೆ ಅರಿವಿಲ್ಲದೆಯೇ ಆತ ಹೊರಗಿನ ವರಾಂಡದಲ್ಲಿ ಬಂದು ಕುಳಿತುಕೊಂಡು ಬಿಟ್ಟಿದ್ದ.

ಸ್ವಲ್ಪ ಹೊತ್ತಿನಲ್ಲೇ ಮಂತ್ರಮುಗ್ಧನಂತೆ ಕುಳಿತಿದ್ದವನು ಎಚ್ಚರಗೊಂಡ. ಮನೆಯ ಒಳಗಿನಿಂದ ಬಂದ ವ್ಯಕ್ತಿಯೊಬ್ಬ ಮುನೀಮ್‌ಜೀಗೆ ಏನೋ ಹೇಳಿದ. ಮಾತು ಸರಿಯಾಗಿ ಕೇಳಿಸದೇ ಇದ್ದರೂ ಶೋಭನ್ ನೋಡಿದ. ಮುನೀಮ್‌ಜೀ ಕೈಯಲ್ಲಿ ನೋಟಿನ ಒಂದು ಕಂತೆಯೇ ಇತ್ತು. ಆತ ವಿನಮ್ರನಾಗಿ ಶೋಭನ್‌ನನ್ನು ಕುರಿತು ಹೇಳಿದ "ನೀವು ಒಂದು ಕೆಲಸವನ್ನು ಮಾಡಿ ಕೊಡಬೇಕು. ಮನೆಯ ಯಜಮಾನಿಯ ಆರೋಗ್ಯ ಬಹಳ ಕೆಟ್ಟಿದೆ. ಮಗ ಸತ್ತ ಸುದ್ದಿಯೂ ಆಕೆಗೆ ಇನ್ನು ತಿಳಿದಿಲ್ಲ. ಯಾರೂ ಹೇಳಿಯೂ ಇಲ್ಲ. ಕಣ್ಣಲ್ಲಿ ಹನಿದುಂಬಿ ಮಗನನ್ನು ಕಾಣಲು ಕಾತರಳಾಗಿ ಕುಳಿತಿದ್ದಾಳೆ. ಇದಕ್ಕೇ ಆಕೆ ಸತ್ತೂ ಸಾಯದವಳಾಗಿದ್ದಾಳೆ. ಆಕೆಗೆ ಶಾಂತಿ ಲಭಿಸುತ್ತಿಲ್ಲ. ತಾವು ಅವರ ಓಡಿ ಹೋದ ಮಗನಾಗಿ ಆಕೆಯನ್ನು ಒಮ್ಮೆ ಭೇಟಿ ಮಾಡಬೇಕಾಗಿದೆ. ಆಕೆಯ ದೃಷ್ಟಿ ಕಂದಿದ ಕಣ್ಣಿಗೆ ವ್ಯತ್ಯಾಸ ಕಂಡುಬರುವುದಿಲ್ಲ. ಹೇಗೂ ಕಾಣೆಯಾಗಿರುವ ಹುಡುಗನೊಡನೆ ತಮ್ಮ ಹೋಲಿಕೆ ಬಹಳವಿದೆ.

ಸಾಯುತ್ತಿರುವ ಆಕೆಗೆ ಇದರಿಂದಲಾದರೂ ಕೊಂಚ ಸಮಾಧಾನ ಲಭಿಸಿದರೆ ಸಾಕು. ಇದಕ್ಕಾಗಿ ಜಮೀನ್ದಾರರೇ ಸ್ವತಃ ಪ್ರಾರ್ಥನೆ ಕಳುಹಿಸಿದ್ದಾರೆ. ಇದರಿಂದ ತಮಗೇನೂ ತೊಂದರೆ ಆಗದು."

ಇಷ್ಟು ಹೇಳಿ ಮುನೀಮ್‌ಜೀ ನೋಟುಗಳ ಕಟ್ಟನ್ನು ಶೋಭನ್ ಕೈಗೆ ತುರುಕಿದ. ಸೋಮೇಶ್ ಕೆಲಕ್ಷಣ ಮೌನಿಯಾಗಿ ಕುಳಿತ. ಹೊರಗಡೆ ಮಳೆಯ ಶಬ್ದ ಬಿಟ್ಟು ಮತ್ತೇನು ಕೇಳಿಸುತ್ತಿರಲಿಲ್ಲ. ಕೊನೆಗೆ ನಾನು ನುಡಿದೆ "ಸೋಮೇಶ್ ನಿನ್ನ ಕಿವಿಯ ಬಳಿ ಒಂದು ಕಲೆ ಇದೆ."

ಸೋಮೇಶ್ ನಗುತ್ತಾ ನುಡಿದ "ಹೌದು. ಇದಕ್ಕೆ ಈ ಕಥೆಯನ್ನು ಹೇಳಲು ನನಗೆ ಸುಲಭವಾದದ್ದು."

ಏತಕ್ಕೋ, ನನಗೆ ತಿಳಿಯದು. ನಡುಕ ಹುಟ್ಟಿಸುವ ಕೆಟ್ಟ ಅಂಧಕಾರ ತುಂಬಿದ ಆ ರಾತ್ರಿಯಲ್ಲಿ ಸೋಮೇಶ್‌ನ ಆ ನಗುವಿನಲ್ಲಿ ವಿಶ್ವಾಸ ಮೂಡಿಸಲು ನನ್ನ ಮನಸ್ಸು ಒಪ್ಪದಾಗಿತ್ತು.

# ಕೆಸರು

*ಸತೀನಾಥ ಭಾದುಡಿ*

ಬಲವಂತವಾಗಿ ಎದೆಯಿಂದ ಅದನ್ನು ಕಿತ್ತುಕೊಂಡು ಪರಸಾದಿ ನದಿಯಲ್ಲಿ ಎಸೆಯಲು ಹೊರಟಿದ್ದ. ಈ ರೀತಿ ಸಾಯುವವರನ್ನು ನೆಲದಲ್ಲಿ ಹೂಣಲು ಸಾಧ್ಯವಿಲ್ಲ. ಆದ್ದರಿಂದ ಅದನ್ನು ನದಿಯಲ್ಲಿ ಹರಿಯಬಿಡಬೇಕಾಗಿತ್ತು.

ಅದು ಮನೆಯಲ್ಲಿದ್ದಷ್ಟು ಕಾಲ ಪರಸಾದಿ ರೋದಿಸಿರಲಿಲ್ಲ. ಕಣ್ಣಲ್ಲಿ ನೀರು ತುಂಬಿದಾಗ ಹೆಂಡತಿ ಮನಚನಿಯಾ ನೋಡದಿರಲೆಂದು ಮುಖವನ್ನು ಪಕ್ಕಕ್ಕೆ ತಿರುಗಿಸಿಕೊಂಡು ಬಿಡುತ್ತಿದ್ದ. ಬಹಳ ಹೊತ್ತಿನಿಂದ ಆತ ಮನಚನಿಯಾಳತ್ತ ದೃಷ್ಟಿ ಹರಿಸಿದ್ದೇ ಇಲ್ಲ.

ನಾಲ್ಕು ಕಣ್ಣುಗಳು ಒಂದುಗೂಡಿದಾಗ ನಾಚಿಕೆಯಾಗುವುದು ಸಹಜ. ಅಂತಹ ಸಮಯದಲ್ಲಿ ಯಾರನ್ನಾದರೂ ನೋಡಲು ಸಾಧ್ಯವೇ ? ಮನಚನಿಯಾ ನಾಚಿಕೆ ಹಾಗೂ ಶೋಕದಿಂದ ಹುದುಗಿ ಹೋಗಿದ್ದಳು. ಇಂತಹ ಸಮಯದಲ್ಲಿ ಈ ದುಃಖ ಸಹಿಸುವುದು ಕಷ್ಟವೇ ಸರಿ. ಇದಕ್ಕಾಗಿಯೇ ಪರಸಾದಿ ಹಲವು ಬಾರಿ ಮನೆಯ ಹೊರಗೆ ಹೋಗಿ ಅತ್ತದ್ದುಂಟು.

ಇಷ್ಟು ದಿನ ಜನಗಳು ಆತನ ಹೆಂಡತಿಗೆ ಮಕ್ಕಳು ಆಗಲು ಸಾಧ್ಯವಿಲ್ಲವೆಂಬ ವಿಷಯ ಮಾತ್ರ ತಿಳಿದಿದ್ದರು. ಆತ ಅವಳಿಗೆ ಎಷ್ಟೋ ಯಂತ್ರಗಳನ್ನು ಕಟ್ಟಿಸಿದ್ದ, ಮಂತ್ರ ಹಾಕಿಸಿದ್ದ, ಔಷಧ ಕುಡಿಸಿದ್ದ. ಸತ್ತ ನಂತರ ನೀರು ಬಿಡುವವರಾದರೂ ಯಾರಾದರೂ ಇರಬೇಡವೆ ? ಈ ಆಸೆ ಯಾರಿಗೆ ಇರುವುದಿಲ್ಲ. ಈಶ್ವರನ ಕೃಪೆ ತನ್ನ ಮೇಲಿದೆ ಎಂಬ ವಿಷಯ ಆತನಿಗೆ ಅರಿವಾದೊಡನೆ ಅಂದಿನಿಂದ ಕಾತರದಿಂದ ದಿನ ಎಣಿಸತೊಡಗಿದ್ದ. ಮನಚನಿಯಾಳಿಗಾಗಿ ತಾನೇನು ಈಗ ಮಾಡಬೇಕು ಎಂಬುದೇ ಆತನಿಗೆ ಅರ್ಥವಾಗುತ್ತಿರಲಿಲ್ಲ. ಆಕೆಯನ್ನು ಕೇಳುತ್ತಿದ್ದ "ಈಗ ಉಣ್ಣಲು ನಿನಗೇನು ಬೇಕು ? ನಮಗಾಗುವ ಮಗು ಹೆಣ್ಣೋ ಗಂಡೋ ? ಮಗು ಯಾರನ್ನು ಹೋಲಬಹುದು ? ಮಗು ಅಲುಗಾಡುತ್ತಿದೆಯೆ ? ಒಣ ಮಣ್ಣನ್ನು ತಿನ್ನಲು ಬಯಕೆಯಾಗುತ್ತಿದೆಯೇ ?" ಇದೇ ತರಹ ಏನೇನೋ ಕಲ್ಪನೆಗಳನ್ನು ಹೆಣೆಯುತ್ತಿದ್ದ. ದಾದಿಯನ್ನು ಪುಸಲಾಯಿಸಿ ಏನೇನೋ ಪ್ರಶ್ನಿಸುತ್ತಿದ್ದ. ಮೊಹಲ್ಲಾದ ಜನ ಈತನ ಈ ಹುಚ್ಚುತನವನ್ನು ನೆನೆದು ತಮ್ಮಲ್ಲೇ ನಗುತ್ತಿದ್ದರು.

ಇದಾದ ನಂತರ ದಿನಗಳು ಕಳೆದವು. ಬುಧದಿಂದ ಬುಧದ ತನಕ ಹದಿನಾಲ್ಕು ದಿನಗಳು. ಅನಂತರ ಗುರುವಾರ, ಶುಕ್ರ ಮತ್ತು ಶನಿ. ಈ ಹದಿನೇಳು ದಿನಗಳಲ್ಲಿ ಈತನಿಗೆ ಸ್ವರ್ಗವೇ ಸಿಲುಕಿದಂತೆನಿಸಿತ್ತು. ಆದರೆ ಹದಿನೇಳು ದಿನಗಳ ನಂತರ ಆ ವಸ್ತು ಯಾರದಾಗಿತ್ತೋ ಅವರ ಬಳಿ ಸೇರಿ ಹೋಯಿತು. ಮನುಷ್ಯ ಏನನ್ನು ತಾನೇ ಮಾಡಲು ಸಾಧ್ಯ ?.... ಯಾರು ಹೋಗುವುದಿಲ್ಲ, ಎಲ್ಲರೂ ಹೋಗುವವರೆ. ಏನು ಏನೋ ಕಾರಣಗಳಿಂದಾಗಿ ಎಷ್ಟು ಮಕ್ಕಳು ಸಾಯುತ್ತಿಲ್ಲ ? ಬೆಲ್ಲದ ಕೊಪ್ಪರಿಗೆಯಲ್ಲಿ ಮಕ್ಕಳು ಬಿದ್ದು ಸತ್ತಿದ್ದನ್ನು ಕೇಳಿದ್ದೇನೆ. ಬಿಸಿ ಹಾಲಿನ ಕಡಾಯಿಯಲ್ಲಿ ಬಿದ್ದು ಸತ್ತದ್ದನ್ನು ಕೇಳಿದ್ದೇನೆ. ಆದರೆ ಈ ತರಹ ಸಾವು. ಓಹೋ.... ಇನ್ನೂ ಪುಟ್ಟ ಮಗು. ? ಸಂಪೂರ್ಣವಾಗಿ ನೀಲಿಯಾಗಿಬಿಟ್ಟಿತ್ತು. ಉಸಿರು ತೆಗೆದುಕೊಳ್ಳುವ ಪ್ರಯತ್ನದಲ್ಲಿ ಆ ಮಗುವಿನ ಅಗಲಕಣ್ಣುಗಳು ಹೊರಗೆ ಹಾಯ್ದು ಬರಲು ತವಕಿಸುತ್ತವೆಯೋ ಎಂಬಂತಿದ್ದವು. ಓಹ್. !

ಚೀಪುತ್ತಿತ್ತೆ ?.... ಹೆದರಿಕೆಯ ಅನುಭವವಾಗುವ ಮೊದಲು, ವಿಪತ್ತು ಅಂದರೆ ಏನು ಎಂಬುದು ಅರ್ಥವಾಗುವ ಮುನ್ನವೇ ಅದು ತಾಯಿಯ ಎದೆಯ ಮೇಲಿಂದ ಇದ್ದಕ್ಕಿದ್ದಂತೆಯೇ ಕುಸಿಯಿತು. ಬೆಣ್ಣೆಯಂತೆ ಮೃದುವಾದ ಎದೆಯ ಹಾಲಿನ ಕೆಳಗೆ ತೀಕ್ಷ್ಣವಾದ ಅಂಧಕಾರ. ಈ ಅಂಧಕಾರದಲ್ಲಿ ಪಾಪ ಕೂಸು ಕೊನೆಯ ಅಳುವನ್ನು ಅಳದಾಗಿತ್ತು.

ಮನಚನಿಯಾಗೆ ಬಹಳ ಹೊತ್ತಾದ ನಂತರ ವಿಷಯ ಅರಿವಾಯಿತು. ಎಷ್ಟು ಹೊತ್ತಾಯಿತು ? ಇದು ಸರಿಯಾಗಿ ಅರಿವಿರಲಿಲ್ಲ. ಅವಳಿಗೇನೋ ಒಂದು ವಿಧದ ಚಳಿಯ ಅನುಭವವಾಗುತ್ತಿತ್ತು. ಆದರೆ ಇದೇಕೆ ಹೀಗೆ ? ಆಗಾಗ್ಯೆ ಈಕೆಗೆ ಹೀಗೆ ಚಳಿಯ ಅನುಭವವಾಗುತ್ತಿತ್ತು. ನಿದ್ದೆಯಲ್ಲಿ ಕಂಬಳಿಯನ್ನು ಹೊದ್ದುಕೊಳ್ಳುವಾಗಲೂ ಅವಳಿಗೆ ಮತ್ತೊಂದು ಜೀವಿಯ ನೆನಪು ಬರಲಿಲ್ಲ. ನಿದ್ದೆ ಅವಳ ದುರ್ಬಲತೆಯಾಗಿತ್ತು. ಆದರೂ ಇಷ್ಟೊಂದು ತಣ್ಣಗಾಗಲು ಕಾರಣವೇನು ? 'ಕಾಲಿಸ್ಥಾನ' ದಲ್ಲಿ ಗಂಟೆ ಶಬ್ದ ಮಾಡುತ್ತಿದೆ. ಅಂದರೆ ಬೆಳಕು ಮೂಡುವ ಸಮಯ ಹತ್ತಿರ ಬಂದಿದೆ. ಆಕೆ ದಡಬಡಿಸಿ ಎದ್ದು ಕುಳಿತಳು. ಕೂಸಿನ ಹಾಸಿಗೆ ನೆಂದಾಗಲೂ ಕಂಬಳಿಯ ಕೆಳಗೆ ಇಷ್ಟೊಂದು ಥಂಡಿ ಆಗಲು ಸಾಧ್ಯವಿಲ್ಲ. ಈ ಥಂಡಿ ಏಕೋ ವಿಚಿತ್ರವಾಗಿ ಕಾಣಿಸುತ್ತಿದೆ. ಇದ್ದಕ್ಕಿದ್ದಂತೆಯೇ ಆಕೆಯ ಹೃದಯ ಕಂಪಿಸಿತು. ಲಾಟೀನು ಹಚ್ಚಲು ಅವಳು ನಾಲ್ಕು ಬೆಂಕಿಕಡ್ಡಿ ಹಾಳು ಮಾಡಿದಳು. ಲಾಟೀನಿನ ಬತ್ತಿಯನ್ನು ದೊಡ್ಡದು ಮಾಡಿ ಹಾಸಿಗೆಯತ್ತ ದೃಷ್ಟಿ ಹರಿಸುವಲ್ಲಿ ಅವಳ ಮನದಲ್ಲಿನ ಕ್ಷೀಣ ಆಸೆಯೂ ನಂದಿಹೋಯಿತು. ಆಕೆಯ ರೋದನ ಕೇಳಿ ಪರಸಾದಿ ಎಚ್ಚರಗೊಂಡ. ಆದರೇನು ಆ ಮಗುವಿನ ಪುಟ್ಟ ಎದೆಯಲ್ಲಿ ಬಿಸಿಯನ್ನು ಹುಟ್ಟಿಸಲು ಸಾಧ್ಯವಿತ್ತೆ ? ಏನು ಮಾಡಲೂ ಆತ ಶಕ್ತನಾಗಲಿಲ್ಲ. ಹದಿನೇಳು ದಿನಗಳ ಆ ಮಾಂಸದ ತುಂಡನ್ನು ಮತ್ತೆ ಎದೆಗವಚಿಗೊಳ್ಳುವಲ್ಲಿ ಅವಳಿಗೆ ಹೆದರಿಕೆ ಆಗಲಿಲ್ಲ. ಆದರೆ ಕಣ್ಣೀರು ಅವಳ ಎದೆಯನ್ನು ತೋಯಿಸ್ತಿತ್ತು.

ಮನಚನಿಯಾಳ ಮುದಿನಾಯಿ ಪರಸಾದಿಯ ಹಿಂದೆ ಹಿಂದೆ ಸ್ವಲ್ಪ ದೂರ

ಹೋಗಿತ್ತು. ಹಿಂತಿರುಗಿ ಬಂದು ಆ ನಾಯಿ ಮನಚನಿಯಾಳ ಬಳಿ ಬಂದು ಕುಳಿತಿತು. ಬಣ್ಣದಲ್ಲಿ ಆ ನಾಯಿ ಕರಿಯದು. ಅದಕ್ಕೆ ಅದರ ಹೆಸರು 'ಕಾರಿಯಾ'. ಕಾರಿಯಾ ಹಸಿದುಂಬಿದ ಮನಚನಿಯಾಳ ಕಣ್ಣುಗಳನ್ನೇ ನೋಡುತ್ತಿತ್ತು. ಅವಳ ಕೆದರಿದ ಕೂದಲನ್ನೇ ದಿಟ್ಟಿಸುತ್ತಿತ್ತು. ಆ ಮುದಿ ನಾಯಿ ಬಹಳ ವರ್ಷಗಳಿಂದ ಆ ಮನೆಯಲ್ಲಿ ವಾಸಿಸುತ್ತಿದೆ. ಅದು ಮನುಷ್ಯರಂತೆ ಆ ಮನೆಯ ಸಮಸ್ತ ವಿಷಯಗಳನ್ನು ಅರ್ಥ ಮಾಡಿಕೊಳ್ಳುತ್ತಿತ್ತು.

ತಂದೆ ಮನೆಯಿಂದ ಶೋಭನದ ನಂತರ ಮನಚನಿಯಾ ಗಂಡನ ಮನೆಗೆ ಪ್ರಥಮ ಬಾರಿ ಬಂದಾಗ ಈ ನಾಯನ್ನು ಕರೆತಂದಿದ್ದಳು. ಅವಳೇನು ಕರೆತರುವುದು. ಅದೇ ಅವಳ ಹಿಂದೆ ಓಡಿ ಬಂದಿತ್ತು. ಇದು ಇತ್ತೀಚಿನ ವಿಷಯವಲ್ಲ, ಬಹಳ ಹಿಂದಿನದು. ಮನಚನಿಯಾಳ ಮದುವೆ ಆದಾಗ ಅವಳಿಗೆ ಕೇವಲ ನಾಲ್ಕು ವರ್ಷ. ಮದುವೆ ಆದ ಹದಿನೈದು ವರ್ಷಗಳ ನಂತರ ಅವಳಿಗೆ ಶೋಭನ ನಡೆದಿತ್ತು. ಪರಸಾದಿ ಶೋಭನದ ಹಣವನ್ನು ಸಂಗ್ರಹಿಸಿ ಅನೇಕ ಬಾರಿ ಈ ಸಮಾಚಾರ ಮಾವನ ಮನೆಗೆ ಕಳುಹಿಸಿದ. ಆದರೆ ಮಾವ ಸುಮ್ಮನೆ ಇದ್ದ. ದಿನಗಳು ಕಳೆದುಹೋದವು. ಜನಗಳು ಹತ್ತಾರು ವಿಧದ ಮಾತುಗಳನ್ನು ಆಡಲು ಪ್ರಾರಂಭಿಸಿದ್ದರು. ಆ ದಿನಗಳಲ್ಲಿ ಮನಚನಿಯಾ ಅವಳ ಊರಿನ ತಹಸೀಲ್ದಾರರ ಮನೆಯಲ್ಲಿ ಮಗುವನ್ನು ನೋಡಿಕೊಳ್ಳುವ ಆಯಾಳ ಕೆಲಸ ಮಾಡುತ್ತಿದ್ದಳು. ಮನಚನಿಯಾಳ ತಂದೆ ಮಗಳ ಸಂಪಾದನೆಯಿಂದಲೇ ಜೀವಿಸುತ್ತಿದ್ದಾನೆ. ಮನಚನಿಯಾಳ ಕೆಲಸ ಕೇವಲ ಆಯಾಳ ಕೆಲಸ ಮಾತ್ರ ಅಲ್ಲ ಎಂದು ಏನೇನೋ ಜನಗಳು ಮಾತನಾಡಿಕೊಳ್ಳುತ್ತಿದ್ದರು. ಇದನ್ನೆಲ್ಲಾ ಕೇಳಿ ಪರಸಾದಿಯ ರಕ್ತ ಕುದಿಯುತ್ತಿತ್ತು. ಇದರ ಜೊತೆಗೆ ಹಣದ ಕೊರತೆ ಒಂದು ಕಡೆಯಾದರೆ ಇನ್ನೊಂದು ಕಡೆ ಯೌವ್ವನದ ಬಿಸಿ. ಒಂದು ದಿನ ಆತ ಚೆನ್ನಾಗಿ ಎಣ್ಣೆ ಕುಡಿದು ದೊಣ್ಣೆ ಹಿಡಿದುಕೊಂಡು ಮಾವನ ಮನೆಗೆ ಹೋದ. ಅಲ್ಲಿ ಜಗಳವಾಡಿ ದೊಣ್ಣೆಯ ಬಲದ ಮೇಲೆ ಪತ್ನಿಯ ಮೇಲಿನ ತನ್ನ ಹಕ್ಕು ಸ್ಥಾಪಿಸಿ ಅವಳನ್ನು ಕರೆತಂದ. ಹಳ್ಳಿಗೆ ಹಿಂತಿರುಗಿ ತನ್ನ ಹೊಲದ ಬಳಿ ಬಂದಾಗ ಕರಿಯ ನಾಯಿಯೂ ಜೊತೆಗೆ ಬಂದಿದ್ದುದು ಅರಿವಾಯಿತು.

"ಏ.... ಇದ್ಯಾರ್ದು ನಾಯಿಮರಿ ?"

ಇದೇ ಪರಸಾದಿಯು ತನ್ನ ಪತ್ನಿಯೊಡನೆ ಆಡಿದ ಮೊದಲ ಮಾತು.

"ನಂದು" ಹೆದರಿಕೊಂಡೇ ಮನಚನಿಯಾ ನುಡಿದಿದ್ದಳು.

"ನಿಂದಾ ?"

ಮನಚನಿಯಾಳ ಅಗಲ ಮುಖ ಹೊಳಪಾಗಿತ್ತು. ಆದರೆ ಇದರಿಂದೇನು ? ಅವಳು ಹೆದರಿಬಿಟ್ಟಳು. ಗಂಡ ಬಹು ಕಟು ಪ್ರವೃತ್ತಿಯ ಮನುಷ್ಯ. ಜಗಳ ಕಾದು ಅವಳನ್ನು ಕರೆತಂದಿದ್ದ. ಸ್ವಲ್ಪ ಹೊತ್ತು ಸುಮ್ಮನಿದ್ದು ಆಕೆಯೇ ಪ್ರಶ್ನಿಸಿದ್ದಳು.

"ಏನು ಎತ್ತಿಕೊಳ್ಳಲೇ"

"ಇರಬಲ್ಲದಾ ?"

"ಇರಬಲ್ಲದು."

ಚಲಿಸುತ್ತಿದ್ದ ಗಾಡಿಯಿಂದಲೇ ಆ ನಾಯಿಮರಿಯನ್ನು ಎತ್ತಿಕೊಳ್ಳಲು ಪ್ರಯತ್ನಿಸುತ್ತಿದ್ದ ಹೆಂಡತಿಯನ್ನು ಗಮನಿಸಿ ಪತಿ ನುಡಿದ "ಏನು ಮಾಡ್ತಾ ಇದ್ದಿ? ಅಷ್ಟು ಗೊತ್ತಾಗಲ್ವೆ? ಸ್ವಲ್ಪ ಹಿಂದೆ ಸರಿದು ಕುಳಿತುಕೋ."

ಶರೀರದ ಬಟ್ಟೆಯನ್ನು ಸಂಭಾಳಿಸಿಕೊಂಡು ಅವಳು ನಾಯಿಮರಿಯನ್ನು ಮೇಲೆತ್ತಿಕೊಂಡಳು. ಅವಳು ಸ್ವಲ್ಪ ದಪ್ಪಗಿದ್ದರೂ ಕೆಲಸ ಕಾರ್ಯಗಳಲ್ಲಿ ಜಾಣಳು ಅನಿಸಿತು. ಅವಳ ಮುಖ ನೋಡಿ ಯಾರಾದರೂ ಏನಾದರೂ ಹೇಳಿದರೆ ಅವನಿಗೆ ಸಿಟ್ಟು ಬರುತ್ತಿತ್ತು. ತನ್ನ ಶರೀರದ ಸದೃಢತೆಯನ್ನು ಮುಚ್ಚಿಡಲು ತಕ್ಷಣ ಬಟ್ಟೆಯನ್ನು ಸರಿಪಡಿಸಿಕೊಳ್ಳುತ್ತಿದ್ದಳು. ಮೊದಲನೆ ದಿನವೇ ಈ ವಿಷಯವನ್ನು ಪರಸಾದಿಯ ಕಣ್ಣುಗಳಿಂದ ತಪ್ಪಿಸಲು ಸಾಧ್ಯವಾಗಲಿಲ್ಲ.

"ನೀನು ತಲೆಯ ಮೇಲೆ ಎಷ್ಟು ಭಾರ ಹೊರಬಲ್ಲೆ?"

"ಒಂದು ಮಣ ಹೊರಬಲ್ಲೆ."

ತಕ್ಷಣವೇ ಒಂದು ಮಣ ಭಾರದ ಬುಟ್ಟಿಯನ್ನು ಆಕೆಯ ತಲೆಯ ಮೇಲಿರಿಸಿ ಇದನ್ನು ಹೊರಬಲ್ಲೆಯಾ? ಎಂದು ಪ್ರಶ್ನಿಸಬೇಕೆನಿಸಿತು. ಅವಳ ನಾಚಿಕೆಗೊಂಡ ಕಣ್ಣುಗಳನ್ನು ನೋಡಿ ಪರಸಾದಿ ತನ್ನ ಮಾತಿನಲ್ಲಿ ಸ್ವಲ್ಪ ಸಂಯಮವನ್ನು ತಂದುಕೊಂಡು ನುಡಿದ "ಹರದಾಹಾಟ್ ಇಲ್ಲಿಂದ ಮೂರು ಕೋಸ್ ದೂರದಲ್ಲಿದೆ. ಅಲ್ಲಿಂದ ತರಕಾರಿಯನ್ನು ಸಗಟು ದರದಲ್ಲಿ ಖರೀದಿಸಿ ನಗರಕ್ಕೆ ತೆಗೆದುಕೊಂಡು ಹೋಗಿ ಮಾರುತ್ತೇನೆ."

ಪತಿಯೊಡನೆ ಮನಚನಿಯಾಳ ಮಾತುಕತೆ ಅದೇ ಮೊದಲನೆಯದಾಗಿತ್ತು. ಅವಳ ನಾಯಿಮರಿ ಮತ್ತು ಅವಳ ದಪ್ಪ ಶರೀರ ಕುರಿತೇ ಮಾತುಕತೆ ನಡೆದಿತ್ತು. ಇದಾದ ನಂತರ ಪೇಟೆಯ ಬಗ್ಗೆ, ತರಕಾರಿ ಬಗ್ಗೆ ಎಷ್ಟೋ ಮಾತುಕತೆಗಳಾದರೂ ಮನಚನಿಯಾ ಪತಿಯ ಮಾತಿನ ಹಿಂದಿನ ಇಂಗಿತವನ್ನು ಚೆನ್ನಾಗಿ ಅರಿತುಕೊಳ್ಳಲು ಸಮರ್ಥಳಾದಳು.

ಮಾತು ಅಲ್ಲಿಗೇ ಮುಗಿಯಲಿಲ್ಲ. ಇವರುಗಳು ಅಲ್ಲಿಂದ ಸ್ವಲ್ಪ ಮುಂಚೆ ಹೋದಾಗ ತಹಶೀಲ್ದಾರರು ಇಟ್ಟಿದ್ದ ಸಿಪಾಯಿಗಳು ಭೇಟಿಯಾದರು. ಅವರಿಬ್ಬರೂ ಪರಸಾದಿಗೋಸ್ಕರವೇ ಕಾಯುತ್ತಿದ್ದರು. ಬಹುಶಃ ಈತನನ್ನು ಚೆನ್ನಾಗಿ ಹೊಡೆಯಲು ಅವರು ಆಜ್ಞಾಪಿತರಾಗಿದ್ದರು. ಆದರೆ ಅವರು ಸ್ವಲ್ಪದರಲ್ಲಿಯೇ ಇವನನ್ನು ಬಿಟ್ಟುಬಿಟ್ಟರು. ಯಜಮಾನನಿಗೆ ಕೆಟ್ಟ ಹೆಸರು ತಂದದ್ದಕ್ಕಾಗಿ ಇವನನ್ನು ಬೈದು ಕೊನೆಯಲ್ಲಿ ಹಾಸ್ಯ ರೂಪದಲ್ಲಿ ನುಡಿದರು "ಎರಡೆರಡು ಕರಿ ನಾಯಿಗಳನ್ನು ತೆಗೆದುಕೊಂಡು ಹೋಗುತ್ತಿದ್ದಾನೆ. ನಮ್ಮ ಹಳ್ಳಿ ಖಾಲಿಯಾಗುತ್ತದೆ – ತೆಳು ನಾಯಿಗಿಂತ ದಪ್ಪ ನಾಯಿಯೇ ಹೆಚ್ಚಿಗೆ ತಿನ್ನುತ್ತದೆ ನೋಡುತ್ತಿರಿ."

ತಮ್ಮ ಮಾತಿನ ರಸಸ್ವಾದನೆಯನ್ನು ತಾವೇ ಮಾಡುತ್ತಾ ಸಿಪಾಯಿಗಳು ನಗುತ್ತಾ ಕುಣಿದಾಡಿದರು. ಈ ಘಟನೆ ನಡೆದು ಆಗಲೇ ಹತ್ತು ವರ್ಷಗಳಾಗಿವೆ. ಅಂದಿನಿಂದ ಆ ನಾಯಿ ಇವರ ಬಳಿಯೇ ಉಳಿದಿದೆ. ಅಲ್ಲಿನ ಜನರಿಗೆ ಮನಚನಿಯಾ ನೆನಪು ಬಂದಾಗಲೆಲ್ಲಾ ಈ ನಾಯಿಯ ನೆನಪು ಬರುತ್ತದೆ. ಭಾವಿ, 'ಹರದಾಹಾಟ್' ಅಥವಾ

ಯಾವುದೇ ಮನೆಗೆ ಮನಚನಿಯಾ ಹೋಗಲಿ ಹಿಂದೆ ಈ ನಾಯಿಯೂ ಇರುತಿತ್ತು. ಬಡಕಲು, ಸೀದುಹೋದ ನಾಯಿ ಮತ್ತು ಈ ದಪ್ಪ ಯಜಮಾನಿ ಬಗ್ಗೆ ಮಕ್ಕಳೂ ಮಾತನಾಡಿಕೊಂಡು ನಗುತ್ತಿದ್ದರು.

ಅದೇತಕ್ಕೆ ಮಕ್ಕಳು ನಿಷ್ಠುರರಾಗುತ್ತಾರೋ ತಿಳಿಯದು. ಬೆವರಿನಿಂದ ತೊಯ್ದು ಮನಚನಿಯಾ ತರಕಾರಿಯ ಬುಟ್ಟಿ ಹೊತ್ತು ರಸ್ತೆಗೆ ಬಂದರೆ ಗೋಲಿ ಆಡುವ ಮಕ್ಕಳು ಆಟ ನಿಲ್ಲಿಸಿ ಕಣ್ಣಿನಿಂದಲೇ ಏನೇನೋ ಸನ್ನೆ ಮಾಡಿಕೊಳ್ಳುತ್ತಿದ್ದರು. ಕೆಲವರಂತೂ ಕೆಟ್ಟದನಿಯಲ್ಲಿ ಮನ್.ಚ.ನಿ.ಯಾ' ಎಂದು ಕಿರುಚುತ್ತಿದ್ದರು. ಮತ್ತೊಬ್ಬರು ಇದಕ್ಕೆ ದನಿಗೂಡಿಸುತ್ತಿದ್ದರು. 'ಲ.ದ.ಬ.ದಿ.ಯಾ'' ಮನಚನಿಯಾ ಲದಬದಿಯಾ ಮನಚನಿಯಾ, ಲದಬದಿಯಾ. ನಾಯಿಯೂ ಬಾಲವನ್ನು ಮುದುಡಿಕೊಳ್ಳುತ್ತಿತ್ತು. ಮನಚನಿಯಾ ಆಡುವ ಈ ಹುಡುಗರ ಹತ್ತಿರ ಬಂದಾಗ ಬೀದಿಯ ದುಷ್ಟ ಮಕ್ಕಳು ರಸ್ತೆಯ ಇಕ್ಕೆಡೆಗಳಲ್ಲಿ ನಿಲ್ಲುತ್ತಿದ್ದರು. ಒಬ್ಬ ಮನಚನಿಯಾಳ ಒಂದು ಪಕ್ಕ, ಇನ್ನೊಬ್ಬ ಇನ್ನೊಂದು ಪಕ್ಕ. ಅನಂತರ ಇವಳ ನಡಿಗೆಯನ್ನು ಅನುಕರಿಸಿ ಅವರೂ ನಡೆಯ ಹತ್ತುವವರು ಹಾಗೂ ಲಯಬದ್ಧವಾದ ಸ್ವರದಲ್ಲಿ ಹೇಳತೊಡಗುವರು 'ಲದರ್, ಬದರ್, ಲದರ್ ಬದರ್, ಲದರ್ ಬದರ್...'

ಮನಚನಿಯಾ ಒಳಗೊಳಗೇ ಕೊರಗುವಳು. ಅವಳ ನಾಲಿಗೆಯ ಹರಿತವೇನೂ ಕಡಿಮೆಯಾಗಿರಲಿಲ್ಲ. ಇನ್ನೇನು ವಿಷಯವಾಗಿದ್ದರೂ ಮನಚನಿಯಾ ಹಿಂತಿರುಗಿ ದಬಾಯಿಸಿಬಿಡುತ್ತಿದ್ದಳು. ಬೈಗುಳಗಳ ಸುರಿಮಳೆ ಸುರಿಸಿ, ಕೂಗಿ ಎಷ್ಟು ಗಲಾಟೆ ಎಬ್ಬಿಸುತ್ತಿದ್ದಳೆಂದರೆ ಹುಡುಗರು ಓಡಿಹೋಗುತ್ತಿದ್ದರು. ಹುಡುಗರ ಮಾತು ಅವಳ ಯದ್ವಾತದ್ವಾ ಬೆಳೆದಿದ್ದ ಶರೀರಕ್ಕೆ ಸಂಬಂಧಿಸಿದ್ದೇ ಆಗಿರುತ್ತಿತ್ತು. ಆದ್ದರಿಂದ ಅವಳ ಮುಖದಲ್ಲಿ ಒಂದು ತರಹ ವಿಚಿತ್ರ ನಗು, ಅರಳುತ್ತಿತ್ತು. ಆಗ ಅವಳು ತನ್ನೆರಡು ಕೈಗಳೂ ಬುಟ್ಟಿಯನ್ನು ಹಿಡಿದಿರುತ್ತಿದ್ದುದರಿಂದ ಶರೀರದ ಮೇಲಿನ ಬಟ್ಟೆ ಹಾರಾಡುವುದನ್ನು ನಿಯಂತ್ರಿಸಲು ಅಸಮರ್ಥಳಾಗುತ್ತಿದ್ದಳು. ಹುಡುಗರಿಂದ ತಪ್ಪಿಸಿಕೊಂಡು ಸ್ವಲ್ಪ ದೂರ ಹೋದ ನಂತರ ಕಾರಿಯಾಳ ಮುದುಡಿದ ಬಾಲ ಎದ್ದು ನಿಲ್ಲುತ್ತಿತ್ತು. ಹುಡುಗರ ಕಡೆ ತಿರುಗಿ ಅದು ನಾಲ್ಕಾರು ಬಾರಿ ಬೌ....ಬೌ ಎಂದು ಬೊಗಳುತ್ತಿತ್ತು. ಆದರೆ ಇದು ಎರಡು ಬಾರಿ ಮಾತ್ರ. ಆನಂತರ ಯಾವುದೋ ಇಷ್ಟವಾದ ಸುಗಂಧವನ್ನು ಆಘ್ರಾಣಿಸುವಂತೆ ಅದು ಅಲ್ಲಿ ಇಲ್ಲಿ ಮೂಸಿ ನೋಡುತ್ತಾ ಮುಂದೆ ನಡೆಯತೊಡಗುತ್ತಿತ್ತು.

ಇತ್ತೀಚೆಗೆ ಕೆಲತಿಂಗಳುಗಳಿಂದ ಮನಚನಿಯಾಳ ಕುಂಠಿತ ಭಾವನೆ ಕಡಿಮೆ ಆಗ ಹತ್ತಿತ್ತು. ಹೊಸ ಪ್ರಭಾವದಿಂದ ಪ್ರಪಂಚದ ಬಣ್ಣ ಬದಲಾಗುತ್ತಿರುವುದು ಗೋಚರಿಸಿದಂತೆ ಮನಸ್ಸಿನ ಭಾರವೂ ಹಗುರವಾದಂತೆನಿಸುತ್ತದೆ. ಅಶುಭ ವಸ್ತುಗಳೂ ಶುಭ ವಸ್ತುಗಳಾಗುತ್ತವೆ, ಆತ್ಮಬಲವೂ ವೃದ್ಧಿಸುತ್ತದೆ. ಈಗ ಅವಳಿಗೆ ತನ್ನ ಸೌಂದರ್ಯರಹಿತ ಅಂಗಸೌಷ್ಟವದಲ್ಲೂ ಒಂದು ಅರ್ಥ ಗೋಚರಿಸತೊಡಗಿತ್ತು. ಆದರೆ ಈ ಸುಖವೂ ಎಷ್ಟು ದಿನಗಳು ಇರಲು ಸಾಧ್ಯ ?

ಮನಚನಿಯಾಳ ಹದಿನೇಳು ದಿನಗಳ ಈ ಸಾಮ್ರಾಜ್ಯ ಹಾಳಾಯಿತು. ಯಾವ ಶರೀರದ ಬಗ್ಗೆ ಜೀವನಪರ್ಯಂತ ಅವಳಿಗೆ ಚಿಂತೆಯಾಗಿತ್ತೋ, ಯಾವುದೊ ಶಾಪದ ಇರಿತದಿಂದಾಗಿ ಜನಗಳ ಮುಂದೆ ಮುಖ ತೋರಿಸಲು ಅಸಾಧ್ಯವಾಗಿತ್ತೋ, ಅದೇ ಶರೀರ ಅವಳಿಗೆ ವೈರಿಯಾಯಿತು. ವೈರಿ ಪರಮ ವೈರಿ.

ಮನೆಯ ಮುಂದಿನ ವರಾಂಡದಲ್ಲಿ ಮನಚನಿಯಾ ಕಾಲು ಚಾಚಿ ಕುಳಿತಿದ್ದಳು. ಮುದಿ ನಾಯಿ ಅವಳ ಕಾಲನ್ನು ನೆಕ್ಕುತ್ತಾ ಕುಳಿತಿತ್ತು. ಕಾರಿಯಾಳ ಕಣ್ಣುಗಳಲ್ಲಿ ಹಸಿ ತುಂಬಿತ್ತೋ ಅಥವಾ ಕಸ ಬಿದ್ದಿತ್ತೋ ತಿಳಿಯದು. ಅವಳಿಗೆ ಅರಿವಿಲ್ಲದೆ ಆಕೆಯ ಕೈ ನಾಯಿಯ ಮೇಲೆ ಸರಿಯಿತು. ಅದರ ಮೈಯನ್ನು ಸವರತೊಡಗಿದಳು. ಕಾರಿಯಾಳ ಬೆನ್ನಿನ ಕೂದಲಲ್ಲಿ ಕೈ ಬೆರಳುಗಳು ಹುದುಗಿಕೊಂಡವು. ಎದೆಯ ಕೂದಲು ಬೆನ್ನಿನ ಕೂದಲುಗಳಿಗಿಂತ ಮೃದುವಾಗಿರುವುದು ಅರಿವಾಯಿತು. ಪಕ್ಕೆಲುಬುಗಳು ಅವಳ ಕೈ ಬೆರಳುಗಳಿಗೆ ಚುಚ್ಚುತ್ತಿದ್ದವು. ಅವಳ ಕೈ ಬೆರಳುಗಳು ಕಾರಿಯಾಳ ಬತ್ತಿದ ಸ್ತನವನ್ನು ಸ್ಪರ್ಶಿಸಿದಾಗ ಮನಚನಿಯಾಳ ದೃಷ್ಟಿ ಈಗ ಅತ್ತ ಹರಿಯಿತು. ಸ್ತನಗಳು ಕೂದಲುಗಳ ಮಧ್ಯೆ ಗೋಚರಿಸುತ್ತಲೇ ಇರಲಿಲ್ಲ. ಕಾರಿಯಾಳ ಕಿವಿಯ ಮೇಲಿದ್ದ ಕೀಟಗಳಿಗಿಂತ ಸ್ತನದ ತೊಟ್ಟು ಚಿಕ್ಕದಾಗಿತ್ತು. ವಯಸ್ಸಾಗಿದ್ದುದರಿಂದ ಮಕ್ಕಳಾಗುವುದು ನಿಂತು ಹೋಗಿತ್ತು. ಇದೂ ಒಂದು ತರಹ ಒಳ್ಳೆಯದೇ. ನಿಜವಾಗಿ ಸಾವಿರ ಪಾಲು ಒಳ್ಳೆಯದೇ ಆಗಿತ್ತು.

ಕಾರಿಯಾ ದುರುಗುಟ್ಟಿಕೊಂಡು ಒಂದು ಬಾರಿ ಮನಚನಿಯಾಳ ಮುಖದತ್ತ ಇನ್ನೊಂದು ಬಾರಿ ಕತ್ತನ್ನು ವಾಲಿಸಿ ಸವರುತ್ತಿದ್ದ ಮನಿಚನಿಯಾಳ ಬೆರಳುಗಳತ್ತ ದೃಷ್ಟಿ ಹರಿಸಿತ್ತು. ಏನೇನೋ ಅರಿಯಲು ಪ್ರಯತ್ನ ನಡೆಸಿದಂತಿತ್ತು. ಮನಚನಿಯಾಳ ಮುಖ ಅದರ ಮರಿಗಳನ್ನು ಹೋಲುತ್ತಿರಲಿಲ್ಲ. ಆದರೂ ಎದೆಯಲ್ಲಿ ಒಂದು ತರಹ ಕಚಗುಳಿ ಇಟ್ಟಂತಾಗುತ್ತಿತ್ತು. ಇದಂತೂ ನಿಜವಾಗಿ ದುಃಖದ ವಿಷಯ.

ಈ ತರಹ ಹೊಟ್ಟೆಯಲ್ಲಿ ಜನಿಸಿದ ಮಗು ಸಾಯುವುದು ನಿಜಕ್ಕೂ ನಾಚಿಕೆ ಪಡುವಂತಹ ವಿಷಯ. ಇದಕ್ಕೆ ಯಾರೂ ಸಮಾಧಾನ ಹೇಳಲಾರರು. ಸರ್ಕಾರಿ ಭಾವಿಯ ಬಳಿಯಲ್ಲಿ ಸೇರಿದ್ದ ಜನರೆಲ್ಲಾ ಈ ವಿಷಯವನ್ನೇ ಚರ್ಚಿಸುತ್ತಿದ್ದರು. ಏನು ಮಾತನಾಡಿಕೊಂಡರೋ ಯಾರಿಗೆ ಗೊತ್ತು ? ಮನೆಯಿಂದ ಹೊರಗೆ ಅಡಿ ಇರಿಸಲು ಮನಚನಿಯಾಳಿಗೆ ಧೈರ್ಯವೇ ಬರುತ್ತಿಲ್ಲ. ಆದರೆ ಇದರಿಂದ ಮನಸ್ಸಿಗೆ ಸಮಾಧಾನ ಲಭಿಸಲು ಸಾಧ್ಯವೇ ? ಮೊಹಲ್ಲಾದ ಜನ ಅವಳಿಗೆ ಸಮಾಧಾನ ಹೇಳಲು ಬರುತ್ತಿದ್ದರು. ಅವಳಿಗೆ ಎಲ್ಲವೂ ಅರ್ಥವಾಗುತ್ತಿತ್ತು. ಅವರು ಏನು ಮಣ್ಣು ಸಮಾಧಾನ ಹೇಳುವುದಿದೆ. ಯಾರಾದರೂ ಬರುತ್ತಿರುವುದು ಕಾಣಿಸಿದರೆ ತಕ್ಷಣ ಅವಳು ಹಾಸಿಗೆಯ ಮೇಲೆ ಮಲಗಿ ದುಪ್ಪಟಿ ಹೊದ್ದುಕೊಂಡು ಬಿಡುತ್ತಿದ್ದಳು.

ಯಾರು ಏನೇ ಮಾತನಾಡಿದರೂ ಅವಳು ಉತ್ತರವನ್ನೇ ಕೊಡುತ್ತಿರಲಿಲ್ಲ. ಪರಸಾದಿ ಮನೆಯಲ್ಲಿ ಇದ್ದರೆ ಮನಚನಿಯಾಳಿಗೆ ತೊಂದರೆ ಕೊಡಬೇಡಿರೆಂದು ಆತ ತಿಳಿಸುತ್ತಿದ್ದ. ಒಬ್ಬ ಮುದುಕಿ ಗಾಢ ನಿದ್ದೆಯಲ್ಲಿದ್ದ ಮನಚನಿಯಾಳನ್ನು ಎಬ್ಬಿಸಿದಳು. ಪರಸಾದಿ ಮಧ್ಯ ಪ್ರವೇಶಿಸಿ ಸುಮ್ಮನಾಗಿಸಿದ್ದ. ಚಾಪೆಯ ಬಳಿಯಲ್ಲಿ ಕಾರಿಯಾ

ನಾಲ್ಕು ಹೊತ್ತೂ ಕುಳಿತಿರುತ್ತಿತ್ತು. ಗೊತ್ತಿದ್ದವರು ಬಂದರೂ ಕೆಲವು ಬಾರಿ ಅದು ಬೊಗಳಿ ತನ್ನ ಅಸಮಾಧಾನ ವ್ಯಕ್ತಪಡಿಸುತ್ತಿತ್ತು.

ಪತ್ನಿಯ ಮಾನಸಿಕ ಸ್ಥಿತಿ, ಅವಳದೊಂದು ಮಾತಿನಿಂದ ಪರಸಾದಿಗೆ ಅರ್ಥವಾಯಿತು. ನೆಲದ ಮೇಲೆ ದೃಷ್ಟಿ ನೆಟ್ಟು ಬಹಳ ಕಷ್ಟಪಟ್ಟುಕೊಂಡು ಅವಳು ಸರಕಾರಿ ಭಾವಿಯಿಂದ ನೀರು ತರಲು ಪರಸಾದಿಗೆ ಸೂಚಿಸಿದಳು.

“ಏನು ಕುಡಿಯುವ ನೀರೇ ?” ಪರಸಾದಿ ಪ್ರಶ್ನಿಸಿದ.

ಮನಚನಿಯಾ ಸುಮ್ಮನಿದ್ದಳು.

“ಸ್ನಾನಕ್ಕೆ ನೀರು ಬೇಕೆ ?”

ಮನಚನಿಯಾಳ ಕಣ್ಣುತುಂಬಿ ಬಂತು. ತನ್ನ ಸ್ನಾನಕ್ಕಾಗಿ ಸರಕಾರಿ ಭಾವಿಯಿಂದ ನೀರು ತನ್ನಿ ಎಂದು ಯಾವ ಹೆಣ್ಣಾದರೂ ಹೇಳಲು ಸಾಧ್ಯವೇ ? ಅವಳು ದಪ್ಪವಿದ್ದುದರಿಂದ ಸ್ನಾನ ಮಾಡದೆ ಇರಲು ಸಾಧ್ಯವಾಗುತ್ತಿರಲಿಲ್ಲ. ಇದನ್ನು ನೆನಸಿದರೆ ಅವಳ ಮನಸ್ಸಿಗೇ ಬೇಸರವಾಗುತ್ತಿತ್ತು. ನಾಚಿಕೆ ಪಟ್ಟುಕೊಂಡೇ ಅವಳು ಗಂಡನಿಗೆ ಸ್ನಾನಕ್ಕಾಗಿ ನೀರು ತರಲು ಹೇಳಿದಳು. ಜನಗಳ ಜೊತೆಯಲ್ಲಿ ತಾನೇ ಭಾವಿಗೆ ಹೋಗಿ ನೀರು ತರಲು ಅವಳಿಗೆ ಹೆಚ್ಚು ನಾಚಿಕೆಯಾಗುತ್ತಿತ್ತು. ಪರಸಾದಿ ಮಣ್ಣಿನ ಮಡಿಕೆ ತೆಗೆದುಕೊಂಡು ನೀರು ತರಲು ಹೊರಟು ನಿಂತ. ಮನಚನಿಯಾ ಬಕೀಟನ್ನು ಮುಂದೆ ತಳ್ಳಿದಳು. ಗಂಡನು ನೀರು ತರಲು ಸರ್ಕಾರಿ ಭಾವಿಯ ಬಳಿಗೆ ಹೋಗುವುದೇ ? ಬೀದಿಯ ಜನ ಏನಂದಾರು ?

ಮನಚನಿಯಾ ತನ್ನ ಮನಸ್ಸಿನ ಬೇಸರಿಕೆಯನ್ನು ಹೋಗಲಾಡಿಸಿಕೊಳ್ಳಲು ಪ್ರಯತ್ನವನ್ನು ತಾನೇ ನಡೆಸಬೇಕು ಎಂದು ಪರಸಾದಿಯ ಬುದ್ಧಿಗೆ ಹೊಳೆಯುತ್ತಿತ್ತು. ಮನಚನಿಯಾ ತಾನೇ ಬಿತ್ತು ನೆಟ್ಟಿದ್ದ ತರಕಾರಿ ಗಿಡಗಳು ಬೆಳೆದು ನಿಂತಿದ್ದವು. ಇವುಗಳ ಆರೈಕೆ ಮಾಡಿದರೆ ಅವಳ ಮನಸ್ಸು ಪ್ರಸನ್ನವಾಗುವುದರಲ್ಲಿ ಸಂದೇಹ ಇರಲಿಲ್ಲ. ಆದರೆ ಅವಳು ಅದನ್ನು ಮಾಡುತ್ತಿರಲಿಲ್ಲ. ವರಾಂಡದಲ್ಲಿ ಕುಳಿತು ದಿನವಹಿ ಏನು ಯೋಚಿಸುತ್ತಾಳೋ ಅದು ಅವಳಿಗೇ ಗೊತ್ತು. ಬೆಳಿಗ್ಗೆ ಏಳುತ್ತಲೇ ಪ್ರತಿದಿನವೂ ಮಾರುಕಟ್ಟೆಗೆ ಕೊಂಡೊಯ್ಯಲು ಅವರೆ ಮುಂತಾದ ಕಾಯಿಪಲ್ಲೆಗಳನ್ನು ಕೀಳುತ್ತಿದ್ದಳು. ಈಗ ಮೂರು ದಿನಗಳಿಂದ ಅವರೆಕಾಯನ್ನು ಕೊಯ್ಯುವುದನ್ನೇ ಮರೆತಿದ್ದಾಳೆ.

ಸಮಯ ಸಿಕ್ಕಾಗಲೆಲ್ಲಾ ಪರಸಾದಿ ತನ್ನ ಪತ್ನಿಯನ್ನು ಮಾತಿಗೆಳೆಯಲು ಪ್ರಯತ್ನಿಸುತ್ತಿದ್ದ. ಆದರೆ ಮಾತುಕತೆ ಪ್ರಾರಂಭದಲ್ಲಿ ಮುರಿದುಹೋಗುತ್ತಿತ್ತು. ಮಾತನಾಡಲು ಬೇರೆ ವಿಷಯವೇ ಸಿಗುತ್ತಿರಲಿಲ್ಲ. ಮಾತು ಪ್ರಾರಂಭಿಸಿದ ಕೆಲವೇ ಕ್ಷಣಗಳಲ್ಲಿ ವಿಷಯ ಅತ್ತಲೇ ಹರಿಯುತ್ತಿತ್ತು. ಆದರೆ ಆ ವಿಷಯ ಮಾತನಾಡಲು ನಿರ್ಬಂಧವಿತ್ತು. ಬೇರೆ ಏನನ್ನೇ ಪ್ರಾರಂಭಿಸಿದರೂ ಮಾತಿಗೆ ತಾನೇ ತಾನಾಗಿ ಅಡಚಣೆ ಒದಗುತಿತ್ತು. ತರಕಾರಿಯ ಬೆಲೆಯ ಬಗೆಗೆ ಮಾತನಾಡುವುದು ಅವರ ಅನುದಿನದ ಅಭ್ಯಾಸವಾಗಿತ್ತು. ಪರಸಾದಿ ಹೇಳುತ್ತಿದ್ದ “ಈ ದಿನಗಳಲ್ಲಿ ಅವರೆಯ ಬೆಲೆ ಏರುತ್ತಿದೆ. ಆದರೆ ಒಂದು ತಿಂಗಳ ನಂತರ ನಾಯಿ ಕಿವಿಯನ್ನು ಹೋಲುವ ಈ

ಅವರೆಕಾಯಿಗಳನ್ನು ಕೇಳುವವರಾರು? ಈ ಬಳ್ಳಿ ಅವರೆಕಾಯಿಯಿಂದ ಲಾಭ ಬಹಳವಿದೆ. ಏತಕ್ಕೆಂದರೆ ಅದು ಬಹು ಹುಲುಸಾಗಿ ಬೆಳೆಯುತ್ತದೆ. ಒಂದೊಂದು ಗೊಂಚಲಿನಲ್ಲಿ ಏಳೇಳು ಕಾಯಿಗಳು ಜೋತು ಬಿದ್ದಿರುತ್ತವೆ. ಅಂಗಳದಲ್ಲಿರುವ ಆ ಅವರೇಗಿಡ ದಸರಾಕ್ಕೆ ಮೊದಲೇ ಫಲ ಕೊಡುತ್ತದೆ. ಮನಚನಿಯಾ "ನಿನಗೆ ನೆನಪಿರಬಹುದು. ಖಿಗರಿಯಾ ಪೇಟೆಯಲ್ಲಿನ ದಸರಾ ಜಾತ್ರೆಯಲ್ಲಿ ನಿನಗೆ ನಾನು ಮೊಸರು ವಡೆ..." ಹೇಳುತ್ತಾ ಹೇಳುತ್ತಾ ಪರಸಾದಿ ಸುಮ್ಮನಾಗುತ್ತಿದ್ದ. ಈ ಮಾತನ್ನು ಆತ ಹೇಳಬಾರದಾಗಿತ್ತು. ಆಗ ಮನಚನಿಯಾ ಬಸುರಿ. ಮೊಸರು ವಡೆ ತಿನ್ನುವ ಬಯಕೆಯನ್ನು ಆಕೆ ಪ್ರಕಟಿಸಿದ್ದಳು. ಪರಸಾದಿ ಮಾತನ್ನು ಬದಲಾಯಿಸಿದ. ನುಡಿದ "ಹೌದು... ಹೌದು ಆ ಕಾಲದ ಸೊಪ್ಪು ತರಕಾರಿಗಳಲ್ಲೇ ಹೆಚ್ಚು ಲಾಭವಿದೆ. ಅವರೆ ಈಗತಾನೆ ಚಿಗುರತೊಡಗಿದೆ. ಹಳೆಯ ಬಳ್ಳಿ ಹಿಂದಿನ ವರ್ಷದ ಬೇರು. ನೀನೇನೋ ಅದನ್ನು ಕಿತ್ತುಹಾಕಲು ಬಯಸಿದ್ದಿ. ನನ್ನ ಮಾತನ್ನು ಕೇಳಿಯೇ ನೀನು ವೈಶಾಖ ಮಾಸದಿಂದ ಆ ಬಳ್ಳಿಗೆ ನೀರು ಹಾಕಲು ಪ್ರಾರಂಭಿಸಿದೆ. ಹೌದೋ ಅಲ್ವೋ ಹೇಳು.... ?"

ಇವೆಲ್ಲಾ ಕೇಳಿ ಮನಚನಿಯಾಳ ಮುಖದ ಭಾವ ಬದಲಾಗುತ್ತಿತ್ತು. ಇದನ್ನು ನೋಡಿ ಪರಸಾದಿ ಸುಮ್ಮನಾಗುತ್ತಿದ್ದ. "ನೋಡು ಕುಂಬಳದ ಬಳ್ಳಿ ಹೇಗೆ ಛಾವಣಿಯ ಮೇಲೆ ಹರಡಿ ನಿಂತಿದೆ. ಎಲೆಗಳು ನೋಡು ಎಷ್ಟು ದೊಡ್ಡದಾಗಿವೆ. ಬಳ್ಳಿ, ಬೆರಳಷ್ಟು ಗಾತ್ರವಿದೆ. ತಾಯಿ ದಿನವೂ ಬುಡಕ್ಕೆ ಅಕ್ಕಿಯನ್ನು ಹಾಕುತ್ತಾಳಲ್ಲಾ ಅದಕ್ಕೆ ಈ ಗಿಡ ಇಷ್ಟು ಬಲವಾಗಿ ಬೆಳೆದಿದೆ. ಇಷ್ಟು ಹುಲುಸಾಗಿ ಬೆಳೆದರೆ ಫಸಲು ಕಟ್ಟಲ್ಲ. ಅದರ ಬಳ್ಳಿಯನ್ನು ಕತ್ತರಿಸಿ ಮಾರುವುದೇ ಒಳ್ಳೆಯದು."

ಪರಸಾದಿಗೆ ತಾನು ಆಡಿದ್ದಾದರೂ ಏನು ತಪ್ಪು? ಅರ್ಥವೇ ಆಗುತ್ತಿರಲಿಲ್ಲ. ಏತಕ್ಕೆಂದರೆ ಈ ಮಾತಿನಿಂದ ಪತ್ನಿಯ ಮುಖ ಮುದುಡುತ್ತಿತ್ತು. ಪರಸಾದಿಯ ಮಾತು ಇಷ್ಟಕ್ಕೇ ಅರ್ಧಕ್ಕೆ ನಿಂತುಹೋಗುತ್ತಿತ್ತು. ಆತ ಎದ್ದು ನಿಲ್ಲುತ್ತಿದ್ದ. ಇಷ್ಟು ಯೋಚಿಸಿ ಯೋಚಿಸಿ ಮಾತನಾಡಲು ಸಾಧ್ಯವೇ?

ಹೊಲಿಗೆ ಕೆಲಸವನ್ನಾದರೂ ಮಾಡಿದರೆ ಬಹುಶಃ ಅವಳ ಮನಸ್ಸು ಪ್ರಸನ್ನಗೊಳ್ಳಬಹುದು ಎಂದು ಊಹಿಸಿ ಪರಸಾದಿ ಪೇಟೆಯಿಂದ ಹಿಂತಿರುಗುವಾಗ ಮನಚನಿಯಾಳ ನಾಯಿಗಾಗಿ ಚೀಟಿ ಬಟ್ಟೆ ಖರೀದಿಸಿ ತಂದ. ಅದನ್ನು ನೋಡಿ ಮನಚನಿಯಾ ನುಡಿದಳು "ಇದು ಒಗೆದರೆ ಚಿಕ್ಕದಾಗುತ್ತದೆ."

"ಇಷ್ಟು ಬಿಗಿಯಾದ ಕುರ್ತಾ ಏಕೆ ಧರಿಸುತ್ತಿ? ಸ್ವಲ್ಪ ಸಡಿಲಾಗಿ ಹೊಲಿಸು." ಇದನ್ನು ಹೇಳುವಾಗ ಆತ ಬೇರೇನೋ ಯೋಚಿಸಿರಲಿಲ್ಲ. ಆದರೆ ಮನಚನಿಯಾ ತಲೆ ತಗ್ಗಿಸಿದಳು. ಪರಸಾದಿ ಇಂದು ಅವಳೊಡನೆ ಚೆನ್ನಾಗಿ ಮನಃಪೂರ್ತಿ ಮಾತನಾಡಲು ನಿರ್ಧರಿಸಿ ಬಂದಿದ್ದ. ಆದರೆ ಎಲ್ಲವೂ ಹಾಳಾಯಿತು. ಪತ್ನಿಯ ಅಪರಾಧಿ ಮುಖಭಾವ ಆತನ ಕಣ್ಣು ತಪ್ಪಿಸಲು ಸಾಧ್ಯವಿರಲಿಲ್ಲ.

ಪರಸಾದಿ ತನ್ನ ಪ್ರಯತ್ನಗಳನ್ನು ಕಡಿಮೆ ಮಾಡಲಿಲ್ಲ. ಮಾರನೆ ದಿನ ಪರಸಾದಿ ಒಂದು ನಾಯಿ ಕುನ್ನಿಯನ್ನು ಪೇಟೆಯಿಂದ ಹೊತ್ತು ತಂದ. ಆ ಕುನ್ನಿ ಇನ್ನೂ ಬಹಳ

ಪುಟ್ಟದು. ಅದೇತಾನೆ ಇನ್ನೂ ಕಣ್ಣು ಬಿಟ್ಟಿತ್ತು. ಮನಚನಿಯಾ ಪ್ರಶ್ನಿಸಿದಳು "ಇದೇನು ತಂದಿದ್ದೀರಿ ?"

"ಕಾರಿಯೂ ಮುದಿಯಾಯಿತು. ಯಾವಾಗ ಸತ್ತು ಹೋಗುತ್ತೋ ತಿಳಿಯದು. ಅದಕ್ಕೆ ಈಗಿನಿಂದಲೇ ಒಂದು ನಾಯಿಮರಿಯನ್ನು ಸಾಕುವುದು ಒಳ್ಳೆಯದು. ರಸ್ತೆಯ ಬದಿಯಲ್ಲಿ ಮಲಗಿ ಕೂ ಕೂ ಎನ್ನುತ್ತಿತ್ತು. ಹೊತ್ತು ತಂದೆ."

ಅಂದು ಮನಚನಿಯಾ ಪೇಟೆಗೆ ಹೋಗಲು ತಯಾರಿ ನಡೆಸಿದ್ದಳು. ಎಷ್ಟು ದಿನ ತಾನೇ ಅವಳು ಮನೆಯಲ್ಲೇ ಕುಳಿತಿರಬಲ್ಲಳು ? ಇಂತಹ ಜನ ಯಾರೂ ಸುಮ್ಮನೆ ಮನೆಯೊಳಗೆ ಕುಳಿತಿರಲಾರರು. ಇಂತಹುದೇ ಸಮಯದಲ್ಲಿ ಆಕೆಯ ಪತಿ ನಾಯಿಕುನ್ನಿಯನ್ನು ತಂದಿದ್ದ. ಎಲ್ಲಿಯವರೆಗೆ ಕಾರಿಯಾ ಮರಿಗಳನ್ನು ಈಯುತ್ತಿತ್ತೋ ಅಲ್ಲಿಯವರೆಗೆ ನಾಯಿಕುನ್ನಿಯನ್ನು ತರುವ ಯೋಚನೆ ಬಂದಿರಲಿಲ್ಲ. ಎಷ್ಟೋ ಮರಿಗಳನ್ನು ನರಿ ತಿಂದು ಹಾಕಿತ್ತು. ಕೆಲವನ್ನು ಗಲ್ಲಿಯ ಹುಡುಗರು ಕೊಂಡೊಯ್ದಿದ್ದರು. ಮನೆಯಲ್ಲಿ ಉಳಿದಿದ್ದನ್ನೇ ಅದಕ್ಕೆ ತಿನ್ನಲು ಹಾಕಿದರೂ ನಾಯಿ ಸಾಕಲು ಖರ್ಚಂತೂ ಆಗುತ್ತದೆ. ಹೊಟ್ಟೆಗೆ ಹಾಕದಿದ್ದರೆ ನಾಯಿ ಒಂದು ಮನೆಯಿಂದ ಇನ್ನೊಂದು ಮನೆಗೆ ಅದು ಅಲೆದಾಡತೊಡಗುತ್ತದೆ. ಏನೇ ಆದರೂ ಗಂಡಸು ಇದನ್ನು ಹೊತ್ತು ತಂದ ಮೇಲೆ ಅದರ ವಾಸಕ್ಕಾಗಿ ಜಾಗ ಮಾಡಬೇಕಾದ್ದು ಅತ್ಯಗತ್ಯ.

ತಲೆಯ ಮೇಲಿದ್ದ ಮಂಕರಿಯನ್ನು ಕೆಳಗಿಳಿಸಿ ಮನಚನಿಯಾ ನಾಯಿಮರಿಯನ್ನು ಕೈಗೆತ್ತಿಕೊಂಡಳು. ಮನೆಯಿಂದ ಹೊರಡಲು ನಾಚಿಕೆ ಆಗುತ್ತಿತ್ತು. ಈ ನಾಯಿಮರಿ ಬಂದುದು ಒಳ್ಳೆಯದೇ ಆಯಿತು. ಮನೆಯಲ್ಲಿ ಉಳಿಯಲು ಸ್ವಲ್ಪ ಸಮಯ ದೊರೆಯಿತು. ಒಂದು ದಿನ ಹೊರಗೆ ಹೋಗದಿರಲು ಕಾರಣ ದೊರೆತು ಅವಳಿಗೆ ಸಂತೋಷವಾಯಿತು.

ನಾಯಿಮರಿ ಬಹಳ ಪುಟ್ಟದು. ಮೂಗನ್ನು ಅತ್ತಇತ್ತ ಚಾಚಿ ಮೂಸಿ ನೋಡುತ್ತಿತ್ತು. ಕುರುಗುಟ್ಟುವ ಸ್ವರವೂ ಕೇಳಿಬರುತ್ತಿತ್ತು. ಅದು ಅವಳ ಬಟ್ಟೆಯೊಳಗೆ ಮುಖ ಮುಚ್ಚಿಕೊಳ್ಳಲು ಹವಣಿಸುತ್ತಿತ್ತು. ಚಿಕ್ಕ ನಾಲಿಗೆಯಿಂದ ಬೆರಳುಗಳು ಹಾಗೂ ಅಂಗೈಯನ್ನು ನೆಕ್ಕಲು ಪ್ರಾರಂಭಿಸಿತು. ಮನಚನಿಯಾಳ ಶರೀರದ ವಾಸನೆ ಅದಕ್ಕೆ ಇಷ್ಟವಾಗಿರಬೇಕು. ಹಾಲಿನ ವಾಸನೆ ಒಂದೇ ಅದಕ್ಕೆ ಪರಿಚಯವಿದ್ದುದು. ಈ ನಾಯಿಮರಿ ಈಗ ಇನ್ನೊಂದು ವಾಸನೆಯನ್ನು ಗುರುತಿಸಿತು. ಈ ವಾಸನೆ ಹಾಲಿನತ್ತ ತನ್ನನ್ನು ಕರೆದೊಯ್ಯಬಲ್ಲದು ಎಂದು ಅದಕ್ಕೆ ಅನಿಸಿರಬಹುದು.

ಓಹ್ ! ಒಂದು ಕ್ಷಣವೂ ಸುಮ್ಮನೆ ಕೂಡಲಾರದು. ಮನಚನಿಯಾ ತೊಡೆಯ ಮೇಲಿಂದ ಅದನ್ನು ಕೆಳಗಿಳಿಸಿ ಅಮುಕಿ ಕೂಡಿಸಿದಳು.

ಕಾರಿಯಾಳ ಗಂಟಲಿನಿಂದ ಗರ್ ಗರ್ ಸ್ವರ ಹೊರಟಿತು. ಅದಕ್ಕೆ ಹೊಸ ಆಗಂತುಕನ ಆಗಮನ ಇಷ್ಟವಿರಲಿಲ್ಲ. ಕಾರಿಯಾ ಕುಳಿತೇ ಬಹುಶಃ ಯೋಚಿಸುತ್ತಿತ್ತು. ನ್ಯಾಯಕ್ಕೆ ಇದೇ ಕೊನೆಯೆ ? ಕಾರಿಯಾ ಆಚೆ ಬಂದು

ನಾಯಿಮರಿಯನ್ನು ಒಮ್ಮೆ ಮೂಸಿ ನೋಡಿತು. ಅದರ ವಾಸನೆ ನೋಡಿದುದರಿಂದ ಅದಕ್ಕೆ ಏನು ಅರ್ಥವಾಯಿತೋ? ಅನಂತರ ಅದು ಒಮ್ಮೆ ಮೈ ಮುರಿದು ವರಾಂಡದಿಂದ ಕೆಳಗಿಳಿದು ಅಂಗಳಕ್ಕೆ ಹೋಗಿ ತೂಕಡಿಸತೊಡಗಿತು. ನಾಯಿಮರಿಯ ಬಗ್ಗೆ ಅದು ಸಂಪೂರ್ಣವಾಗಿ ಉದಾಸೀನ ಭಾವ ತಳೆದಿತ್ತು.

ಮನಚನಿಯಾಳ ಕೈಬೆರಳುಗಳು ನಾಯಿಮರಿಯ ಮೃದುಕೂದಲುಗಳಲ್ಲಿ ಹುದುಗಿತ್ತು. ಇದರಿಂದ ಅವಳಿಗೆ ಒಂದು ತರಹ ತೃಪ್ತಿಯು ಅನುಭವವಾಗುತ್ತಿತ್ತು. ಕೂದಲಲ್ಲಿ ಬೆರಳು ಆಡಿದಾಗ ಆಗುತ್ತಿದ್ದ ತೃಪ್ತಿಯು ಜೊತೆಯಲ್ಲೆ ಮೈಯಲ್ಲಿ ಒಂದು ತರಹ ನಡುಕ ಹುಟ್ಟುತ್ತಿತ್ತು. ಅದೇನೋ ಕೆಟ್ಟದಾಗಿ ತೋರುತ್ತಿರಲಿಲ್ಲ. ಬೆರಳು ಗೆಣ್ಣಿಗೆ ಆಗುತ್ತಿದ್ದ ಮೃದು – ಬಿಸಿಯ ಅನುಭವ ಮನಚನಿಯಾಳನ್ನು ಬೇಸರಗೊಳಿಸುತ್ತಿತ್ತು.

ಅಳಿದುಳಿದ ಹಾಲನ್ನು ನಿತ್ಯವೂ ಹೊರಗೆ ಎಸೆಯಬೇಕಾಗುತ್ತಿತ್ತು. ಡಬ್ಬದ ಒಂದು ಮುಚ್ಚಳದಲ್ಲಿ ಸ್ವಲ್ಪ ಹಾಲನ್ನು ಹಾಕಿ ನಾಯಿಮರಿಯ ಮುಂದಿರಿಸಿದಳು. ಅದು ಚುಕ್ ಚುಕ್ ಎಂದು ಹಾಲನ್ನು ನೆಕ್ಕಲು ಪ್ರಾರಂಭಿಸಿತು. ಶಬ್ದ ಎಷ್ಟು ಸಿಹಿಯಾಗಿತ್ತು. ಹಾಲು ಕುಡಿದಂತೆ ಅದು ಮನಚನಿಯಾಳತ್ತ ನೋಟ ಹರಿಸಿತ್ತು. ಇದ್ದಕ್ಕಿದ್ದಂತೆ ತೂಕಡಿಸುತ್ತಿದ್ದ ಕಾರಿಯಾ ಎದ್ದು ನಿಂತಳು. ಅದರ ಉದಾಸೀನತೆ ಹರಿದಿತ್ತು. ಅದು ಹಾಲಿನ ಮುಚ್ಚಳದತ್ತ ಓಡಿ ಬಂತು.

"ಏ ನೀನೇಕೆ ಇಲ್ಲಿ ಬಂದೆ... ಓಡು ಓಡು..." ಮನಚನಿಯಾ ಗದರಿಸಿದಳು. ಕಾರಿಯಾ ಬೌ....ಬೌ ಶಬ್ದ ಮಾಡಿತು.

"ಇದೇನು ನೀನು ಕುಡಿಯುವ ವಸ್ತುವೇ, ಸುಮ್ಮನೆ ಸಿಟ್ಟಾಗುತ್ತಿದ್ದಿ. ಇಷ್ಟು ಸಣ್ಣ ಪ್ರಾಣಿಯ ಸಂಗಡ ನಿನ್ನ ದ್ವೇಷವೇ? ನಾಚಿಕೆ ಆಗುವುದಿಲ್ಲವೇ, ಓಡು..... ಓಡು."

"ಘರ್... ರ್...ರ್"

ಅಂದರೆ ಈ ಹೊಸ ವ್ಯವಸ್ಥೆ ಕಾರಿಯಾಳಿಗೆ ಸರಿ ಕಾಣಲಿಲ್ಲ. ಆದರೆ ಆಜ್ಞೆ ಪಾಲಿಸುವುದು ಬಿಟ್ಟು ಮತ್ತೇನು ಅದು ಮಾಡಲು ಶಕ್ಯವಿತ್ತು. ಮನೆಯ ಕೆಲಸ ಕಾರ್ಯಗಳೆಲ್ಲಾ ಪೂರೈಸಿದ ನಂತರ ಮನಚನಿಯಾ ಮಂಕರಿಯನ್ನೆತ್ತಿಕೊಂಡು ಅಂಗಳದಿಂದ ಹೊರಬಂದಳು. ಕಾರಿಯಾಳತ್ತ ತಿರುಗಿ ನುಡಿದಳು."ಏ! ನೀನೇಕೆ ಏಳ್ತಾ ಇದ್ದಿ? ನೀನು ಇಲ್ಲೇ ಇರು. ನೀನು ಇಂದು ನನ್ನ ಜೊತೆ ಬರೋದು ಅಗತ್ಯವಿಲ್ಲ. ಹುಂ.... ಹೋಗು.... ಹೋಗು ನಾನು ಹೇಳ್ತಾ ಇದ್ದೀನಿ ಮನೆ ಒಳಗೆ ನಡೀ."

ಇಷ್ಟು ಹೇಳಿ ಮನಚನಿಯಾ ಬಾಗಿಲ ಚಿಲಕ ಹಾಕಿಕೊಂಡು ಹೊರನಡೆದಾಗ ಕಾರಿಯಾ ಗಂಟಲು ಹರಿದುಹೋಗುವಂತೆ ಕಿರುಚಿ ಬೀದಿಯ ಜನರನ್ನೆಲ್ಲಾ ಒಟ್ಟುಗೂಡಿಸತೊಡಗಿತ್ತು.

ಯಾವ ಕಾರಣದಿಂದ ಮನಚನಿಯಾ ಹೊರಗೆ ಬರಲು ನಾಚಿಕೊಳ್ಳುತ್ತಿದ್ದಳೋ ಅದೇ ಇಂದು ಘಟಿಸಿತು. ಮಕ್ಕಳಿಗೆ ನಗುವುದಕ್ಕೆ ಕಾರಣವೊಂದು ದೊರೆತರೆ ಸಾಕು ಮತ್ತೇನೂ ಬೇಡ ಅವರಿಗೆ. ಇಂದೂ ಕೂಡ ಆಡುತ್ತಿದ್ದ ಮಕ್ಕಳು ಅವಳು

ಬರುತ್ತಿರುವುದನ್ನು ಕಂಡು ಆಟ ನಿಲ್ಲಿಸಿದವು. ಕೂಗಿಕೊಂಡವು "ತರಕಾರಿ ದಪ್ಪ ಹೆಂಗಸು ಇಂದೇಕೋ ಒಬ್ಬಳೇ ಇದ್ದಾಳೆ ಕಣ್ರೋ. ಅವಳ ಬಡಕಲು ನಾಯಿ ಇವತ್ತು ಎಲ್ಲಿ ಹೊರಟುಹೋಗಿದೆ." ಇಂದು ಅವರು ಅವಳ ಚಲನವಲನವನ್ನು ಅನುಕರಿಸಿ ಕೆಣಕುವ ಕವಿತೆಯನ್ನು ಹೇಳಲಿಲ್ಲ. ಆದರೆ ಪೂತನಿ, ಹೆಸರು ತೆಗೆದು ಅವಳನ್ನು ಗೇಲಿ ಮಾಡತೊಡಗಿದರು. ಮನಚನಿಯಾಳಿಗೆ ಎಲ್ಲವೂ ಕೇಳಿಸಿತು. ಅನಂತರ ಅವಳು ಕಿವಿ, ಕಣ್ಣು ಎರಡನ್ನು ಮುಚ್ಚಿಕೊಂಡು ಹೇಗೋ ಅಲ್ಲಿಂದ ಕಾಲು ತೆಗೆದಳು. ಅವಳು ತರಕಾರಿ ಮಾರಲು ಯಾರ ಮನೆಗೆ ಹೋದರೂ ಆ ಮನೆಯ ಹೆಂಗಸು ಕೆದಕಿ ಕೆದಕಿ ಅದೇ ಘಟನೆಯ ಬಗ್ಗೆ ಅವಳನ್ನು ಪ್ರಶ್ನಿಸುತ್ತಿದ್ದರು. ಪೊಲೀಸರೂ ಯೋಚಿಸದ ವಿಷಯವನ್ನೆಲ್ಲಾ ಅವರು ಯೋಚಿಸಿದ್ದರು. ಇದೇ ತಾನೆ ಮಗುವನ್ನು ಕಳೆದುಕೊಂಡಿರುವ ಇವಳನ್ನು ಆ ಮನೆಯಾಕೆ ಅಲ್ಲದಿದ್ದರೆ ಮತ್ತೆ ಯಾರು ಬೇಕಾದರೂ ಕೇಳಬಹುದೆಂದು ಅವಳಿಗೇನು ಗೊತ್ತು? ಅವಳ ಗಂಡ ಇನ್ನೂ ಕೆಲದಿನ ಮನೆ ಮನೆಗೆ ಹೋಗಿ ತರಕಾರಿ ಮಾರುವುದನ್ನು ನಿಷೇಧಿಸಿದ್ದ. ನಿನಗೆ ಬೇಕೆನಿಸಿದರೆ ತರಕಾರಿಯನ್ನು ತೆಗೆದುಕೊಂಡು ಹೋಗಿ ಪೇಟೆಯಲ್ಲಿ ಕುಳಿತುಕೋ. ಆತ ಹೇಳಿದ್ದೇ ಸರಿ ಇತ್ತು. ಆಗ ಪರಸಾದಿಯ ಮಾತು ಅವಳಿಗೆ ಸರಿಯಾಗಿ ಅರ್ಥವಾಗಿರಲಿಲ್ಲ. ಮನೆ ಮನೆಗೆ ತರಕಾರಿ ಹೊತ್ತು ಹೋದರೆ ದಣಿವಾಗುತ್ತದೆ. ಅದಕ್ಕೆ ಬೇಡವೆಂದು ಆತ ಹೇಳಿದ್ದಾನೆ ಎಂದು ಯೋಚಿಸಿದ್ದಳು.

ಇದಾದ ನಂತರ ಮನಚನಿಯಾ ಯಾರ ಮನೆಗೂ ತರಕಾರಿ ಮಾರಲು ಹೋಗಲಿಲ್ಲ. ತರಕಾರಿ ತೆಗೆದುಕೊಂಡು ಸೀದಾ ಬಜಾರಿಗೆ ಹೋಗಿ ಕುಳಿತುಬಿಡುತ್ತಿದ್ದಳು.

ಅಂದು ಪತಿ ಪತ್ನಿ ಇಬ್ಬರೂ ಜೊತೆಯಾಗಿಯೇ ಮನೆಗೆ ಹಿಂತಿರುಗಿದರು. ಬಾಗಿಲು ತೆಗೆಯುವ ಶಬ್ದ ಕೇಳಿಸಿಕೊಂಡು ಕಾರಿಯಾ ಬಾಲ ಅಲ್ಲಾಡಿಸಿಕೊಂಡು ಇವರ ಬಳಿ ಬರಲಿಲ್ಲ. ಮನೆಯಲ್ಲೇನೂ ಶಬ್ದವೇ ಇರಲಿಲ್ಲ. ಏನು ಸಮಾಚಾರ? ಮನಚನಿಯಾ ದೀಪ ಹಚ್ಚಿ ನೋಡಿದಳು. ಅಂಗಳದಲ್ಲಿ ಕಾರಿಯಾ ಕಾಲು ಚಾಚಿ ಮಲಗಿದೆ. ಆ ನಾಯಿಮರಿ ಅದರ ಒಣಗಿದ ಮೊಲೆಯನ್ನು ಚೀಪುತ್ತಿತ್ತು. ಮನಚನಿಯಾ ಹತ್ತಿರ ಹೋಗಿ ನಾಯಿಮರಿಯನ್ನು ಎತ್ತಿಕೊಂಡಾಗ ಕಾರಿಯಾ ಎದ್ದು ನಿಂತು ತನ್ನ ಮೈ ಕೊಡವಿತು. ಬಹುಶಃ ಅದು ಹೇಳುತ್ತಿತ್ತು "ನಿಮ್ಮ ಮಾತಿನಂತೆ ನಾನು ಇದನ್ನು ಇದುವರೆವಿಗೂ ಸಂಭಾಳಿಸುತ್ತಿದ್ದೇನೆ. ಒಂದೇ ಮಗ್ಗುಲಲ್ಲಿ ಮಲಗಿ ಮೈ ಎಲ್ಲಾ ಸೆಟೆದುಕೊಂಡಿದೆ. ಈಗ ನಿಮ್ಮ ವಸ್ತು ನಿಮಗೆ ಒಪ್ಪಿಸುತ್ತಿದ್ದೇನೆ. ನೀವೇ ಸಂಭಾಳಿಸಿ" ಅದು ನೆಲವನ್ನು ಮೂಸಿ ನೋಡುತ್ತಾ ಮನೆಯಿಂದ ಹೊರಗೆ ಹೊರಟಿತು.

"ಇದಕ್ಕೊಂದು ಹೆಸರಿಡಬೇಕು. ನಾನೇನೋ ಇದರ ಹೆಸರು 'ಮರಿ' ಎಂದು ಇಡಬೇಕೆಂದಿದ್ದೇನೆ."

"ಸರಿ 'ಮರಿ' ಹೆಸರು ಚೆನ್ನಾಗಿಯೇ ಇದೆ. ಅದು ನಿಜವಾಗಿ ಮಗುವೇ. ಮರಿ ದುರುಗುಟ್ಟಿಕೊಂಡು ನೋಡುತ್ತಿದೆ. ಪೂ.....ಪೂ ಬೆರಳನ್ನು ಸುಮ್ಮನೆ ತಿನ್ನಬೇಡ.

ಬೇಕೂಫ್, ಬೆರಳೇನು ತಿನ್ನೋ ವಸ್ತುವೇ? ಹೊಟ್ಟೆ ಹಸಿಯುತ್ತಿದೆಯೇನು? ಹಸಿಬೇಕಾದ್ದೇ. ಬಹಳ ಹೊತ್ತಾಗಿ ಹೋಗಿದೆ. ಹಾಲು ಕುಡಿಯೋ ಮಕ್ಕಳಿಗೆ ಒಂದೊಂದು ಗಂಟೆಗೊಮ್ಮೆ ಹಸಿವಾಗ್ತದೆ. ಹೂಂ.... ನನ್ನ ಜೊತೆ ಬಾ.'' ಪರಸಾದಿ ಹೇಳಿದ ''ಮರಿ ಯಾವಾಗ ಕೂ....ಕೂ ಎನ್ನುವುದೋ ಆಗ ಅದಕ್ಕೆ ''ಹಸಿವು ಆಗ್ತಾ ಇದೆ ಎಂದರ್ಥ.'' ಮನಚನಿಯಾ ನುಡಿದಳು ''ಇವು ಹೀಗೇನೆ ಹಲವು ಬಾರಿ ಕೂಗ್ತಾನೆ ಇರುತ್ತವೆ.''

ಮನಚನಿಯಾಳ ತುಟಿಗಳ ಮಧ್ಯೆ ನಗು ಅರಳಿತ್ತು. ಅವಳ ಮುಖದಲ್ಲಿ ನಗು ಇಲ್ಲದಿದ್ದರೆ ಅವಳ ಮಾತಿನ ಸಂಕೇತ ಇವನಿಗೆ ಅರ್ಥವಾಗುತ್ತಿರಲಿಲ್ಲ. ಐದು ದಿನಗಳ ನಂತರ ಮೊದಲ ಬಾರಿಗೆ ಆಕೆ ನಕ್ಕಿದ್ದಳು.

''ಈ ಮಾತುಗಳನ್ನು ನೀನು ಚೆನ್ನಾಗಿ ಅರ್ಥ ಮಾಡಿಕೊಳ್ಳುತ್ತಿ. ನಾಯಿ ಸಾಕಿಯೇ ನಿನ್ನ ಮೂಳೆ ಬಲಿತಿದೆ.''

ಮಾರನೆ ದಿನ ಆತ ನಾಯಿಮರಿಯನ್ನು ಎದೆಗವಚಿಕೊಂಡೇ ಕಳೆದ. ಕಾರಿಯಾ ದಿನಪೂರ್ತಿ ಆರಾಮವಾಗಿ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಂತೆ ಕಾಲು ಚಾಚಿ ಮಲಗಿ ನಿದ್ರಿಸಿತು.

ಮನಚನಿಯಾ ತಲೆಯ ಮೇಲೆ ಮಂಕರಿ ಹೊತ್ತು ಹೊರಗೆ ಹೊರಟಾಗ ಇಂದೂ ಕಾರಿಯಾ ಅವಳನ್ನು ಹಿಂಬಾಲಿಸಲಿಲ್ಲ. ಇಂದು ಅದನ್ನು ಗದರಿಸಿ ಹಿಂದೆ ಓಡಿಸಬೇಕಾಗಲಿಲ್ಲ. ಅದೇ ಹಿಂದೆ ಉಳಿಯಿತು. ಮಾರುಕಟ್ಟೆಯಿಂದ ಹಿಂತಿರುಗಿದ ಮನಚನಿಯಾ ನೋಡುತ್ತಾಳೆ. ಕಾರಿಯಾ ಅದೇ ಭಂಗಿಯಲ್ಲಿ ಆರಾಮವಾಗಿ ಮಲಗಿದೆ. ನಾಯಿಮರಿ ಪಲ್ಟಿ ಹೊಡೆದು ಹೊಡೆದು ಅದರ ಮೊಲೆಗಳನ್ನು ಚೀಪುತ್ತಿದೆ. ಮೊಲೆಯ ತೊಟ್ಟುಗಳು ಹಿಂದಿನಂತೆ ಈಗ ಚಿಕ್ಕದಾಗಿ ಕಾಣಿಸುತ್ತಿರಲಿಲ್ಲ, ಸ್ವಲ್ಪ ದೊಡ್ಡದಾಗಿದ್ದವು. ಮೊಲೆಗಳ ಹಿಂದಿನ ಭಾಗ ಸಹ ಈಗ ಸ್ವಲ್ಪ ದಪ್ಪನಾಗಿತ್ತು. ಕೊಂಚ ಕೆಂಪಗೂ ಕಾಣಿಸುತ್ತಿತ್ತು. ಏನೊ ಸಿಪ್ಪೆ ಸುಲಿದು ಹೋಗಿದೆಯೇ? ಮನಚನಿಯಾ ಯೋಚಿಸಿದಳು. ನಾಯಿಮರಿ ಸುಮ್ಮನೆ ನೆಕ್ಕುತ್ತಿಲ್ಲ. ಹಲ್ಲುಗಳಿಂದ ಕೀಳುತ್ತಲೂ ಇದೆ. ಮನಚನಿಯಾ ಮುಟ್ಟಿ ನೋಡಿದಳು. ಅದು ಚರ್ಮ ಸುಲಿದಿದ್ದರಿಂದ ಆಗಿರಲಿಲ್ಲ. ನರ ಉಪ ನರಗಳು ಕೆಂಪು ಗೆರೆಗಳಂತೆ ಮೇಲೇಳುತ್ತಿರುವಂತೆ ಭಾಸವಾಗುತ್ತಿತ್ತು. ಚರ್ಮ ಬಹಳ ಮೃದುವಾಗಿತ್ತು. ಮನಚನಿಯಾಳ ಕುತೂಹಲ ದೃಷ್ಟಿಯನ್ನು ಕಾರಿಯಾ ನೋಡುತ್ತಿದ್ದ ನೋಟದಲ್ಲಿ ಶಂಕಿಸುತ್ತಿರುವಂತೆ ಕಾಣುತ್ತಿತ್ತು. ಬಹುಶಃ ಅದು ಹೇಳುತ್ತಿರಬಹುದು. ''ಏನು ಅಷ್ಟು ಕಣ್ಣು ಆಗಲಿಸಿ ನೋಡಬೇಕೆ? ಹಿಂದೆಂದೂ ಇಂತಹದನ್ನು ನೋಡೇ ಇಲ್ಲವೆ?''

ಟಿನ್ ಡಬ್ಬದ ಮುಚ್ಚಳ ತೆಗೆದುಕೊಂಡು ವರಾಂಡದಲ್ಲಿ ಕೂಗಿದಳು. ''ಏ ಮರಿ.. ಏ ಮರಿ... ಚೂ... ಚೂ... ಬಾ ಮಗು.''

ಅದು ಎಂತಹ ಕೂಗೆಂದು ಮರಿಗೆ ಅರ್ಥವಾಯಿತು. ಅದು ನಿಧಾನವಾಗಿ ವರಾಂಡದ ಮೆಟ್ಟಲುಗಳನ್ನು ಹತ್ತಿತು. ಅದು ಮನಚನಿಯಾಳನ್ನು ತಳ್ಳಿಕೊಂಡೇ ಅದರ ಮೇಲೆ ಹತ್ತಲು ಹವಣಿಸುತ್ತಿತ್ತು. ಅವಳ ಪಾದದ ಮೇಲಿನ ಬಟ್ಟೆಗೆ ತನ್ನ

ಹಲ್ಲಿನಿಂದ ಕಡಿಯುತ್ತಾ ನಡೆದಿತ್ತು.

"ಏ ನಿಲ್ಲಪ್ಪಾ... ನೀನು ಬಂದಿದ್ದೇ ಗೊತ್ತಾಗಿಲ್ಲ. ನೀನ್ಯಾಕೆ ಇಲ್ಲಿ ಬಂದೆ. ಕಾರಿಯಾ ಹತ್ತಿರ ಹೋಗು. ಹೇಗೋ ನಿಂಗೆ ಹೊಸ ಅಮ್ಮ ಸಿಕ್ಕಿದ್ದಾಳೆ. ಏನು ಮೂಸ್ನೋಡ್ತಾ ಇದ್ದಿ ?"

ಯಾವ ವಸ್ತುವೇ ಆಗಲಿ. ಯಾವಾಗ ಕೆಲಸಕ್ಕೆ ಬರುತ್ತದೆ ಹೇಳುವುದು ಕಷ್ಟ. ಅದೇ ರೀತಿ ಯಾವುದಾದರೂ ವಸ್ತು ಹೊರಟು ಹೋದರೆ ಅದರ ನೆನಪು ಕಾಡುತ್ತದೆ. ಅದನ್ನು ಮರೆಯಲು ಸಾಧ್ಯವಿತ್ತೆ ?

ಈಗ ಕಾರಿಯಾ ಅಂಗಳದಲ್ಲಿ ಕತ್ತೆತ್ತಿ ನೋಡುತಿತ್ತು. ಅದರ ಕಣ್ಣಿನಲ್ಲಿ ಇರುತ್ತಿದ್ದ ಪಿಸುರು ಈಗೆಲ್ಲಿ ಹೋಯಿತು. ಅದು ಮನಚನಿಯಾಳ ಮಾತನ್ನು ಕೇಳಿಸಿಕೊಳ್ಳುತ್ತಿತ್ತು. ಅವಳ ಹಾವಭಾವ ಚಲನ ವಲನಗಳನ್ನು ಅದು ಆಸಕ್ತಿಯಿಂದ ನಿರುಕಿಸುತ್ತಿತ್ತು. ಮನಚನಿಯ ಟಿನ್ ಡಬ್ಬದ ಮುಚ್ಚಳವನ್ನು ಎತ್ತಿಕೊಂಡೊಡನೆ ಕಾರಿಯಾಳ ಕಿವಿ ನೆಟ್ಟಗಾಯಿತು.

ಮರಿಯಿಂದ ಬಿಡಿಸಿಕೊಂಡು ಒಂದೇ ನೆಗೆತಕ್ಕೆ ಓಡಿಬರುವುದು ಸ್ವಾಭಾವಿಕವಾಗಿತ್ತು. ಆದರೆ ಅದು ಹಾಗೆ ಮಾಡದೆ ಬಾಲ ಅಲ್ಲಾಡಿಸುತ್ತಾ ಅಂಗಳದಲ್ಲಿ ಹೋಗಿ ಕುಳಿತುಬಿಟ್ಟಿತು. ಅಲ್ಲಿ ಅದು ವ್ಯಾಕುಲತೆಯಿಂದ ಮರಿ ಬರುವುದನ್ನು ನಿರೀಕ್ಷಿಸುತ್ತಿತ್ತು. ಟಿನ್ ಮುಚ್ಚಳವನ್ನು ನೆಕ್ಕಿದ ಮೇಲೆ ಕೂ... ಕೂ ಎಂದು ನಾಲ್ಕು ಕಡೆ ನೋಡತೊಡಗಿತ್ತು.

'ಹೇ....ಹಿಂದೆಂದೂ ಇಷ್ಟು ಪ್ರೀತಿ ಇರಲಿಲ್ಲ' ಮನಚನಿಯಾಳ ಈ ಕೂಗಿನಲ್ಲಿ ಯಾವುದೋ ಆಪತ್ತಿನ ದನಿ ಇತ್ತು. ಇದು ಕಾರಿಯಾಗೆ ಅರ್ಥವಾಗಿತ್ತು. ಟಪ್ ಎಂದು ಕಾರಿಯಾ ಧುಮುಕಿ ಅಂಗಳಕ್ಕೆ ಹತ್ತಿ ಬಂದು ಮರಿಯ ಕುತ್ತಿಗೆಯನ್ನು ಕಚ್ಚಿ ಹಿಡಿದುಕೊಂಡು ಬಹುಶಃ ಅದು ಹೇಳುತ್ತಿರಬಹುದು "ಹೂಂ... ನಡಿ ನಿನ್ನ ಸ್ಥಳಕ್ಕೆ... ಏನ್ಬೇಕೋ ಮಾಡು ಅಲ್ಲಿ."

ಹಿಂದಿನ ಸ್ಥಳಕ್ಕೆ ಅದನ್ನು ಕರೆದೊಯ್ದು ಮರಿಯ ಕುತ್ತಿಗೆಯನ್ನು ಬಿಟ್ಟಿತು. ಕಚ್ಚಿದ ಜಾಗವನ್ನು ನೆಕ್ಕಿ ನೇವರಿಸಿತು. ಅನಂತರ ಮೈ ಮುರಿದು ಆರಾಮವಾಗಿ ಮಲಗಿಬಿಟ್ಟಿತು.

"ಹೂಂ.... ಈಗ ತಗೋ."

ಈಗ ಏನು ಮಾಡಬೇಕೆಂಬುದನ್ನು ಮರಿಗೆ ಹೇಳಬೇಕಾಗಿರಲಿಲ್ಲ. ಬಿದಿರಿನ ಗೂಟ ಹಿಡಿದು ನಿಂತಿದ್ದ ಮನಚನಿಯಾ ಚಕಿತಳಾಗಿ ಎಲ್ಲವನ್ನು ನೋಡುತ್ತಿದ್ದಳು. ಮುದಿ ಕಾರಿಯಾಳ ಆಸೆ ಇನ್ನೂ ಹಿಂಗಿರಲಿಲ್ಲ. ನೊಣಗಳು ಮರಿಗೆ ಮುತ್ತಿ ತೊಂದರೆ ಕೊಡುತ್ತಿದ್ದವು. ಶರೀರವನ್ನು ಕೊಂಚವೂ ಅಲುಗಾಡಿಸದೆ ತಲೆಯೆತ್ತಿ ನೊಣಗಳನ್ನು ಕೊಲ್ಲಲು ಪ್ರಯತ್ನ ನಡೆಸಿತು. ಶರೀರವನ್ನು ಅಲ್ಲಾಡಿಸುವುದರಿಂದ ಮರಿಗೆ ಹಾಲು ಕುಡಿಯಲು ತೊಂದರೆಯಾಗುವುದೆಂದೋ ಅಥವಾ ತನ್ನ ವಿಶ್ರಾಂತಿಗೆ ಭಂಗ ಉಂಟಾಗುವುದೆಂದೋ ಅಂತೂ ಅದು ಸುಮ್ಮನಿತ್ತು. ಮುದಿ ನಾಯಿಯ ಎದೆಯ ಪರಿವರ್ತನವನ್ನು ಪರಸಾದಿ ಗಮನಿಸಿದ್ದಾರೆಯೇ ? ತನ್ನ ಪತಿಯನ್ನು ಕರೆತಂದು

ಇದನ್ನು ತೋರಿಸಲು ಮನಚನಿಯಾಳಿಗೆ ಆಸೆಯಾಯಿತು. ಆದರೆ ಸಂಕೋಚಗೊಂಡು ಕರೆಯಲಿಲ್ಲ.

ಈ ವಿಷಯ ಪರಸಾದಿಯ ಗಮನಕ್ಕೂ ಬಾರದೇ ಇರಲಿಲ್ಲ. ಆದರೆ ಇದನ್ನು ಮನಚನಿಯಾಳ ಮುಂದೆ ಹೇಳಲು ಸಾಧ್ಯವಿತ್ತೆ?

ಆ ದಿನ ರಾತ್ರಿ ಮನಚನಿಯಾ ಹಲವು ಬಾರಿ ನಿದ್ದೆಯಿಂದ ಎಚ್ಚರಗೊಂಡಳು. ನರಿಯ ವಾಸನೆ ಹಿಡಿದು ಇಡೀ ರಾತ್ರಿ ಕಾರಿಯಾ ಸಹ ಅರಚುತ್ತಿತ್ತು.

ಬೆಳಿಗ್ಗೆ ಎದ್ದು ನೋಡಿದಾಗ ಅಂಗಳ ಶೂನ್ಯ. ಕಾರಿಯಾ ಹಾಗೂ ಅದರ ಮರಿ ಎಲ್ಲೂ ಕಾಣಿಸಲಿಲ್ಲ. ಎಲ್ಲಿ ಹೋಗಿರಬಹುದು? 'ಸತ್‌ಪುತಿಯಾ' ಅವರೇ ಬಳ್ಳಿಯ ಬಳಿ ಸಂದೂಕ ಮಾದರಿಯ ಒಂದು ಮರದ ಗೂಡಿತ್ತು. ಹಿಂದೆ ಮನಚನಿಯಾ ಅಲ್ಲಿ ಬಾತು ಸಾಕಿದ್ದಳು. ಅವುಗಳಿಗಾಗಿಯೇ ಮನಚನಿಯಾ ಮರದ ಆ ಗೂಡನ್ನು ಮಾಡಿಸಿದ್ದಳು. ಕಾರಿಯಾ ತನ್ನ ಮರಿಯೊಡನೆ ಅದೇ ಗೂಡಿನಲ್ಲಿ ಮಲಗಿರುವುದನ್ನು ನೋಡಿದಳು. ಆ ಗೂಡು ನಾಲ್ಕು ಕಡೆ ಮುಚ್ಚಿತ್ತು. ಬಾತುಗಳು ನುಸುಳಲು ಚಿಕ್ಕ ಕಿಂಡಿಯೊಂದಿತ್ತು. ಕಾರಿಯಾ ಸಹ ಒಳಹೋಗಲು ಬಹಳ ಪ್ರಯತ್ನ ಮಾಡಬೇಕಾಗುತ್ತಿತ್ತು. ಮನಚನಿಯಾ ತಲೆತಗ್ಗಿಸಿ ಇಣಕಿದಳು. ಒಳಗಿನ ಅಂಧಕಾರದಲ್ಲಿ ಏನೂ ಕಾಣಿಸಲಿಲ್ಲ. ಘರ್.... ಘರ್ ಎನ್ನುತ್ತಿದ್ದ ಕಾರಿಯಾಳ ಸ್ವರ ಇಲ್ಲಿ ಯಾವ ವಸ್ತುವಿನ ಅಗತ್ಯವಿಲ್ಲವೆನ್ನುತ್ತಿತ್ತು.

"ಹೇ ಕಾರಿಯಾ.... ನಾಯಿ.... ಮೊದಲು ಸುಮ್ಮನಾಗು' ಮನಚನಿಯಾ ಅವರೇಕಾಯನ್ನು ಕೀಳತೊಡಗಿದಳು. ಏನೇ ಶಬ್ದ ಕೇಳಿಸಿದರೂ ಕಾರಿಯಾ ಒಳಗೇ ಗರ್ಜಿಸುತ್ತಿತ್ತು. ಪರಸಾದಿ ಪ್ರಶ್ನಿಸಿದ. 'ಕಾರಿಯಾ ಏಕೆ ಅಷ್ಟೊಂದು ಬೊಗಳುತ್ತಾ ಇದೆ?'

"ಕಾರಿಯಾಳಿಗೆ ಏನೋ ಇಷ್ಟವಾಗುತ್ತಾ ಇಲ್ಲ."

"ಏಕೆ? 'ಸತಪುತಿಯಾ' ಅವರೇಬಳ್ಳಿ ಅವಳ ಇಲಾಖೆಯಲ್ಲೇ ಇದೇ ತಾನೆ?"

"ಇದೆ ಅನ್ನಿಸುತ್ತೆ."

"ಹೊಸ ಗಂಡು ಮರಿ ಬೇರೆ ಸಿಕ್ಕಿದೆ."

"ಹೌದು ಏಳು ಜನ್ಮದ ಸಂತಾನ."

ಈ ಬಗ್ಗೆ ತನ್ನ ಗಂಡ ಹೆಚ್ಚಿಗೆ ಹೇಳಲು ಬಿಡದೆ ಮನಚನಿಯಾ ಬಿಂದಿಗೆ ತೆಗೆದುಕೊಂಡು ಸರಕಾರಿ ಬಾವಿಯ ಬಳಿಗೆ ನಡೆದಳು.

ಪರಸಾದಿಯೂ ಸಮಾಧಾನದ ಉಸಿರುಬಿಟ್ಟ. ಇದ್ದಕ್ಕಿದ್ದಂತೆಯೇ ಒಂದು ವಿಚಿತ್ರ ಪರಿಸ್ಥಿತಿ ಒದಗಿ ಇಬ್ಬರ ಮಾತೂ ನಿಂತವು. ಇಂದು ಇಬ್ಬರು 'ಹರಿದಾಹಾಟ್'ನಲ್ಲಿ ತರಕಾರಿ ಮಾರಲು ಹೋಗುವುದಿತ್ತು. ಬೇಗನೆ ಹೋಗಬೇಕಾಗಿದ್ದುದರಿಂದ ಪರಸಾದಿಯೇ ಒಲೆ ಉರಿಸಲು ಪ್ರಾರಂಭಿಸಿದ. ಸೌದೆ ಮುರಿಯುವ ಶಬ್ದ ಕೇಳಿ ಕಾರಿಯಾ ಜೋರಾಗಿ ಬೊಗಳಲು ಪ್ರಾರಂಭಿಸಿತು.

'ಹೋ! ದೇವರೇ, ನಿನಗಾಗಿ ನಾನು ಏನೂ ಮಾಡಲಾರೆನಲ್ಲಾ' ಪರಸಾದಿ ಯೋಚಿಸಿದ.

ನಿಜವಾಗಿ ಕಾಗೆಯೊಂದು ಚಪ್ಪರದ ಮೇಲೆ ಕುಳಿತರೆ ಕಾರಿಯಾ ಅರಚುತ್ತದೆ. ಪರಸಾದಿ ಅಂಗಳಕ್ಕೆ ತಿರುಗಾಡಲು ಬಂದರೂ ಬೊಗಳುತ್ತದೆ. ಮನೆಯ ಸೂರಿನ ಮೇಲೆ ಹದ್ದು ಕುಳಿತರೂ ಅದು ಕಿರುಚುತ್ತದೆ. ಬಾಗಿಲು ಹೊರಗೆ ಬೆಕ್ಕು ಕಂಡರೂ ಬೊಗಳುತ್ತದೆ. ಈ ನಡುವೆ ಅದಕ್ಕೆ ಎಲ್ಲರೂ ವೈರಿಗಳೇ. ಇವೆಲ್ಲಾ ಅವಳಿಗೆ ತೊಂದರೆ ಕೊಡಲು ಶಕ್ಯವಿತ್ತು. ಅದಕ್ಕೆ ಇವೆಲ್ಲದರ ಕಣ್ಣು ತಪ್ಪಿಸಿ ಅದು ತನ್ನ ಮರಿಯನ್ನು ರಕ್ಷಿಸುತ್ತಿತ್ತು.... 'ತೊಂದರೆಯ ವಾಸನೆ ಬಂದೊಡನೆ ಬಗುಳಿ ಅದನ್ನು ಹೆದರಿಸು. ಕಣ್ಣು, ಕಿವಿ, ಮೂಗನ್ನು ಇಪ್ಪತ್ತನಾಲ್ಕು ಗಂಟೆಗಳೂ ತೆರೆದಿಡು. ಯಾವುದನ್ನೂ ನಂಬಬೇಡ. ವೈರಿ ಎರಗುವ ಮುಂಚೆಯೇ ಅದರ ಮೇಲೆ ತಾನೇ ಧಾಳಿ ಮಾಡಬೇಕಾಗುತ್ತದೆ. ಸರಿಯಾದ ಸಂದರ್ಭ ಕೈತಪ್ಪಿ ಹೋದರೆ ಸೋಲ ಬೇಕಾಗುತ್ತದೆ.'

ಗಟಾರಿನ ತುದಿಯಲ್ಲಿ ಒಂದು ಮುಂಗುಸಿಯನ್ನು ಕಂಡು ಕಾರಿಯಾ ಬಾತಿನ ಗೂಡು ಬಿಟ್ಟು ಓಡುತ್ತಾ ಹೊರಗೆ ಬಂತು. ಒಲೆಯನ್ನು ಉರಿಸುತ್ತಲೇ ಪರಸಾದಿ, ಕಾರಿಯಾಳತ್ತ ಗಮನ ಹರಿಸಿದ. ಕಾರಿಯಾಳ ಕಣ್ಣುಗಳು ಕೆಂಪಗಿದ್ದವು. ಅವಳ ಶರೀರ ಹಾಗೂ ಚಲನ–ವಲನಗಳಿಂದ ಅವಳಿಗೆ ಮಕ್ಕಳಾಗುವ ಸಕಲ ಲಕ್ಷಣಗಳು ಕಂಡುಬರುತ್ತಿದ್ದವು. ಮರಿಯೂ ಬಾತಿನ ಗೂಡು ಬಿಟ್ಟು ಕಾರಿಯಾ ಹಿಂದೆ ನಡೆದು ಬಂತು. ಮರಿಗಳು ಹೆದರಿ ಓಡಿಹೋಗಿದ್ದವು. ಆದರೂ ಕಾರಿಯಾಳ ಎಗರುವುದು, ನೆಗೆಯುವುದು, ಬೊಗಳುವುದು ನಿಂತಿರಲಿಲ್ಲ. ಹಾಲಿನ ಭಾರದಿಂದ ಅವಳ ಎದೆ ನೆಲ ಮುಟ್ಟುತ್ತಿತ್ತು. ನಡೆಯುತ್ತ ನಡೆಯುತ್ತಲೇ ಮರಿ ನಾಯಿ ಅದರ ಎದೆಯನ್ನು ಚೀಪುತ್ತಿತ್ತು.

"ಓ ಅದೇನು ? ನಾನು ಕಣ್ಣು ತೆರೆದೇ ನೋಡುತ್ತಿದ್ದೇನೆ. ಇದರಲ್ಲಿ ತಪ್ಪೇನು ಆಗಲಿಕ್ಕೆ ಸಾಧ್ಯವಿಲ್ಲ. ಆದರೆ ಇದು ಆದದ್ದು ಹೇಗೆ ?...." ಪುನಃ ಅವೆರಡೂ ಬಾತಿನ ಗೂಡು ಹೊಕ್ಕವು.... ಪರಸಾದಿ ಆಶ್ಚರ್ಯಗೊಂಡ.

ಪ್ರಾಣಿಗಳಲ್ಲಿ ಹೀಗಾಗಬಹುದೆಂದು ಅವನಿಗೆ ಗೊತ್ತಿರಲೇ ಇಲ್ಲ. ಮನಚನಿಯಾ ಇದನ್ನು ಕಂಡಿದ್ದಾಳೆಯೆ. ಮನಚನಿಯಾಳಿಗೆ ಈ ವಿಷಯ ತಿಳಿಸಬೇಕು. ಅಷ್ಟೇ ಅಲ್ಲದೆ ಬೀದಿಯ ಎಲ್ಲರನ್ನು ಕರೆದು ಇದನ್ನು ತೋರಿಸಬೇಕು ಅನಿಸಿತು. ಆದರೆ ಇದನ್ನು ಮಾಡುವಂತಿಲ್ಲ. ಮಾತನಾಡಲು ನಿರ್ಬಂಧವಿತ್ತು.

ಹರಿದಾಹಾಟ್‌ಗೆ ಹೋಗುವಾಗ ಮನಚನಿಯಾ ನಾಯಿಯ ಮಾತು ತೆಗೆದಳು. ಊಟಕ್ಕೆ ಕರೆದಾಗಲೂ ಇಂದು ಕಾರಿಯಾ ಬಾತಿನ ಗೂಡು ಬಿಟ್ಟು ಹೊರಗೆ ಬಂದಿರಲಿಲ್ಲ. ಅಷ್ಟೇ ಅಲ್ಲದೆ ತಾನೂ ಉಂಡಿರಲಿಲ್ಲ, ಮರಿಯನ್ನು ಉಣ್ಣಲು ಬಿಟ್ಟಿರಲಿಲ್ಲ. ಅದಕ್ಕೆ ತನ್ನದೇ ಮರಿಗಳ ಚಿಂತೆ ಹತ್ತಿತ್ತು.

ಯಾರಾದರೂ ಉಣ್ಣದೆ, ಕುಡಿಯದೆ ಇರಲು ಸಾಧ್ಯವೇ ? ಏನು ಹೇಳಬೇಕೆಂದರೂ ಪರಸಾದಿಗೆ ಮನಚನಿಯಾಳಿಗೆ ಇದಕ್ಕಿಂತ ಹೆಚ್ಚಿಗೆ ಹೇಳಲು ಸಾಧ್ಯಾವಾಗಲಿಲ್ಲ. ಮನಚನಿಯಾ ಅರ್ಥ ಮಾಡಿಕೊಂಡರೆ ತಾನೇ ? ಅರ್ಥ ಮಾಡಿಕೊಳ್ಳಲೇ ಇಲ್ಲ.

ಮನೆಗೆ ಹಿಂತಿರುಗುವಲ್ಲಿ ರಾತ್ರಿಯಾಗಿತ್ತು. ಇಷ್ಟು ಚಿಕ್ಕಮರಿ ದಿನವೆಲ್ಲಾ ಹಸಿದಿರಬೇಕಾಯಿತಲ್ಲಾ ಎಂದು ಮನಚನಿಯಾ ಚಡಪಡಿಸಿದಳು. ಟಿನ್ ಮುಚ್ಚಳ ತೆಗೆದುಕೊಂಡು ಬಾತಿನ ಗೂಡಿನತ್ತ ಹೊರಟಳು. ಕೂಗಿದಳು "ಮರಿ... ಮರಿ... ತು... ತು... ಕುರೋ.... ಕುರೋ."

ಪರಸಾದಿ ಕೊಠಡಿಯೊಳಗಿಂದಲೇ ನುಡಿದ "ಹೂಂ.... ಬಂದ್ಬಿಡುತ್ತೆ ಬಿಡು." ಆದರೆ ಮರಿ ಹೊರಗೆ ಬರಲಿಲ್ಲ.

ಚಿಕ್ಕ ಬಾಗಿಲಲ್ಲಿ ಕತ್ತು ತೂರಿಸಿ ಕಾರಿಯಾ ಬೊಗಳುತ್ತಿತ್ತು. ಹಲ್ಲು ಕಿರಿದಿರುವುದು ಕಂಡರೆ ಕಚ್ಚಲು ಸಿದ್ಧವಾಗುತ್ತಿತ್ತು.

"ನೀನೇಕೆ ಸುಮ್ಮಸುಮ್ಮನೆ ಕೂಗ್ತಾ ಇದ್ದಿ, ಸುಮ್ಮನಾಗು."

ಕೈಮುಂದೆ ಮಾಡಿದೊಡನೆಯೇ ಕಾರಿಯಾ ಹುಚ್ಚಿಯಂತಾದಳು. ಇದು ಮನಚನಿಯಾಳ ಪರಿಚಿತ ನಾಯಿಯಾಗಿರಲಿಲ್ಲ, ಬೇರೆಯದೇ ಆಗಿತ್ತು. ಮನಚನಿಯಾ ಈ ಬಗ್ಗೆ ಯೋಚಿಸುವ ಮುನ್ನವೇ ಅವಳನ್ನು ಪರಚಿ ಕಡಿಯಲು ಮುಂದಾಯಿತು. ಮನಚನಿಯಾ ಗಾಬರಿಗೊಂಡು ಕುಂಬಳದ ಬಳ್ಳಿಯ ಮೇಲೆ ಬಿದ್ದಳು. ಅವಳ ಸೀರೆಯನ್ನು ಕಾರಿಯಾ ಹಿಂದೆ ಚೂರು ಚೂರು ಮಾಡಿತು. ಅವಳ ಕೈಯಿಂದ ರಕ್ತ ಹರಿಯತೊಡಗಿತ್ತು. ಪರಸಾದಿ ದೊಣ್ಣೆ ತೆಗೆದುಕೊಂಡು ಓಡಿಬಂದ. ಆದರೆ ಮನಚನಿಯಾಳ ಗಮನ ಇತ್ತ ಇರಲೇ ಇಲ್ಲ. ಕಾರಿಯಾ ಬಾತುಗೂಡಿನೊಳಗೆ ಹೋಗುವ ತನಕ ಮನಚನಿಯಾಳ ದೃಷ್ಟಿ ನಾಯಿಯ ಎದೆಯ ಮೇಲೆ ಇತ್ತು. ಕಾರಿಯಾ ಎದೆಯಿಂದ ಹಾಲು ಒಸರುತ್ತಿತ್ತು. ಕಾರಿಯಾ ಇವಳ ಮೇಲೆ ಹಾರಿದಾಗ ಅದರ ಮೃದು, ಮಾಂಸಭಾರದಿಂದ ಇಳಿಬಿದ್ದಿದ್ದ ಹೊಟ್ಟೆಯ ಸ್ಪರ್ಶ ಇವಳಿಗೆ ಆಗಿತ್ತು. ಅದು ಸಂಪೂರ್ಣ ಒದ್ದೆಯಾಗಿತ್ತು. ಕಾರಿಯಾ ಎದೆಯಿಂದ ಹಾಲು ತೊಟ್ಟಿಡುತ್ತಿತ್ತು. ಈಗಲೂ ಕಾರಿಯಾಳ ಸ್ಪರ್ಶಿಸಿದ ಕೈಯಲ್ಲಿ ಹಾಲು ಮೆತ್ತಿಕೊಂಡಿತ್ತು.

ಮನಚನಿಯಾಳಿಗೆ ತನಗೆ ಹತ್ತಿರುವ ಶಾಪ ಭಾರವಾಗಿ ತೋರಿತು. ಕಲ್ಲಿಗಿಂತಲೂ ಭಾರವಾಗಿ ಭಾಸವಾಯಿತು.

# ಗಡಿರೇಖೆ

ಆಶಾಪೂರ್ಣದೇವಿ

ಎಲ್ಲರೂ ಸೋತು ಹಿಂತಿರುಗಿದ್ದರು.

ಕೊನೆಯವರಾದ ಸತೀನಾಥ್ ತಾವೇ ಮೂರು ಅಟ್ಟ ಹತ್ತಿ ಮೇಲೆ ಬಂದರು. ತೀಕ್ಷ್ಣ ಸ್ವರದಲ್ಲಿ ನುಡಿದರು ''ಛವಿ, ಅಸಭ್ಯ ವರ್ತನೆಗೂ ಒಂದು ಮಿತಿ ಇರಬೇಕು. ಇಷ್ಟೊಂದು ಜನ ಮದುವೆ ಮನೆಯಲ್ಲಿ ನೆರೆದಿರಬೇಕಾದರೆ ನೀನು ಮಾಡಿದ ಅಸಭ್ಯ ವರ್ತನೆ ಮಿತಿಮೀರಿದ್ದು. ಇಷ್ಟೊಂದು ಬಳಗದವರ ಮುಂದೆ ನೀನು ನನ್ನ ಮಾನ ತೆಗೆದಿದ್ದಿ. ನಿನ್ನನ್ನೂ ನಗೆಪಾಟಲು ಮಾಡಿಕೊಂಡೆ. ಈಗಲಾದರೂ ದಯಮಾಡಿ ಕೆಳಗೆ ಬಾ.''

ಮೂರು ಮಹಡಿಯ ಆ ಭಾವಣೆ ಕಟ್ಟಲು ಅನುಮತಿ ಇರಲಿಲ್ಲ. ಆದರೂ ಅವಳಿಗಾಗಿ ಹೆಂಚಿನ ಆ ಕೊಠಡಿಯನ್ನು ನಿರ್ಮಿಸಲಾಗಿತ್ತು. ಛವಿಯ ಆ ಹೆಂಚಿನ ಕೊಠಡಿಗೆ ವಿದ್ಯುತ್ ದೀಪ ಇರಲಿಲ್ಲ. ಕೆಳಗಿನ ಮದುವೆ ಮನೆಯ ಕೆಲ ಬೆಳಕಿನ ಕಿರಣಗಳು ಮೇಲಿನ ಆ ಬಾಗಿಲನ್ನು ಸ್ವಲ್ಪ ಬೆಳಗಿದ್ದವು.

ಛವಿ ಅದೇ ಬಾಗಿಲನ್ನು ಹಿಡಿದು ನಿಂತಿದ್ದಳು. ಅವಳ ಕೈ ಬೆರಳುಗಳ ಹಾಗೂ ಗಲ್ಲದ ಕೊಂಚ ಭಾಗ ಮಾತ್ರ ಕಂಡುಬರುತ್ತಿದ್ದವು. ಮುಖದ ಭಾವ ಓದುವುದು ಕಷ್ಟಸಾಧ್ಯವಾಗಿತ್ತು.

ಛವಿ ಈಗಲಾದರೂ ಮೆತ್ತಗಾಗುತ್ತಾಳೆಯೋ ಅಥವಾ ಹಾಗೇ ಗಡುಸಾಗಿಯೇ ಇರುತ್ತಾಳೆಯೋ ಹೇಳುವುದು ಕಷ್ಟವಾಗಿತ್ತು. ಸತೀನಾಥ ಕರೆದರೂ ಅದು ಛವಿಯ ಮೇಲೆ ಪ್ರಭಾವ ಬೀರದಿದ್ದರೆ ಅವಳಿಗೂ ಅವಳ ಗಂಡನಂತೆ ಹುಚ್ಚು ಹಿಡಿದಿದೆ ಅಂತಾ ನಾವು ತಿಳಿಯಬೇಕು.

ಪರಿಸ್ಥಿತಿ ಸುಧಾರಿಸಲಿಲ್ಲ. ಛವಿ ವಿಚಿತ್ರವಾದ ಶುಷ್ಕ ಸ್ವರದಲ್ಲಿ ನುಡಿದಳು "ಭಯ್ಯಾ ನೀನು ಸುಮ್ಮಸುಮ್ಮನೆ ಕಷ್ಟಪಡುತ್ತಾ ಇದ್ದಿ. ನಾನು ಆಗಲೇ ಹೇಳಿದ್ದೀನಿ....''

"ನಂಗೊತ್ತು'' ವಿಕ್ಷುಬ್ಧಗೊಂಡು ಕೋಪದಿಂದ ಸತೀನಾಥ್ ನುಡಿದರು ''ನಂಗೊತ್ತು ಮನೆಯ ಜನರೆಲ್ಲಾ ಒಬ್ಬೊಬ್ಬರಾಗಿ ಬಂದು ನಿನ್ನ ಹೊಗಳಲು ಬಂದ್ರೂ ನೀನು ನಾನು ತಿನ್ನಲ್ಲ ಕೆಳ್ಗೆ ಬರೋಲ್ಲ ಅಂತಾ ಎಲ್ಲರನ್ನು ಓಡಿಸಿಬಿಟ್ಟೆ. ನಿನ್ನ ಅತ್ತಿಗೆ

ಸಹ ಬಂದು ಕೈ ಜೋಡಿಸಿ ಕೇಳಿಕೊಂಡರೂ ನೀನು....." ಛವಿಯು ಮುಖ ಇನ್ನೂ ಕಂಡುಬರುತ್ತಿರಲಿಲ್ಲ. ಛವಿ ಕೊಠಡಿಯಿಂದ ಇನ್ನು ಸ್ವಲ್ಪ ಹೊರಗೆ ಬಂದಿದ್ದರೆ ಬಹುಶಃ ಕಾಣಿಸುತ್ತಿದ್ದಳು. ಆದರೆ ಎದುರಿಗೆ ಯಾರೋ ಲಕ್ಷ್ಮಣರೇಖೆಯನ್ನು ಎಳೆದಿರುವಂತೆ ಅದನ್ನು ದಾಟಿದರೆ ಸೀತೆಯನ್ನು ರಾವಣ ಹಾರಿಸಿಕೊಂಡು ಹೋದ ಹಾಗೆ ತಾನು ಸಿಕ್ಕಿಬೀಳಬಹುದೆಂದು ಅವಳು ಹೊರಗೆ ಹೋಗುತ್ತಿರಲಿಲ್ಲ.

ಬಾಗಿಲನ್ನು ಮುಚ್ಚಿಕೊಂಡು ಹಾಯಾಗಿ ಹಾಸಿಗೆಯ ಮೇಲೆ ಮಲಗಿಬಿಡಬೇಕೆನಿಸುತ್ತಿತ್ತು. ಆದರೆ ಅಂತಹ ಸಂದರ್ಭವೇ ಒದಗಿ ಬಂದಿರಲಿಲ್ಲ.

ಸಂಜೆಯಿಂದ ಒಬ್ಬರಾದ ಮೇಲೊಬ್ಬರು ಅವಳನ್ನು ಕರೆಯಲು ಬರುತ್ತಲೇ ಇದ್ದರು.

"ಅರೇ ಛವಿ.... ಒಂದ್ಸಾರಿ ಕೆಳಗೆ ಇಳಿದು ಬಾ... ನೋಡು ಐದು ನೂರು ಜನಕ್ಕೂ ಹೆಚ್ಚಿಗೆ ಕೆಳಗೆ ಸೇರಿದ್ದಾರೆ. ಎಷ್ಟೊಂದು ಜನ ನಿನ್ನ ಹುಡುಕುತ್ತಾ ಇದ್ದಾರೆ ಅಂತಾ.... ನೋಡು ಬಾ... ನಿನ್ನ ಅಣ್ಣನ ಅಳಿಯ ಎಷ್ಟು ಸುಂದರವಾಗಿದ್ದಾನೆ ಅಂತಾ."

"ಅತ್ತೆ, ನೀವು ಕನ್ಯೆಯ ಕೊಠಡಿಯಲ್ಲಿ ಏನೋ ಇಡೋದನ್ನು ಮರೆತು ಬಿಟ್ಟಿದ್ದೀರಾ ಅಪ್ಪಾ ಸಿಟ್ಟಾಗ್ತಾ ಇದ್ದಾರೆ. ಬೇಗ ಬನ್ನಿ." ಆದರೂ ಛವಿ ಅಲುಗಾಡಲಿಲ್ಲ.

ಛವಿಯ ಸ್ವಾಭಿಮಾನ ಮುರಿಯಲಿಲ್ಲ. "ತಲೆ ನೋಯ್ತಾ ಇದೆ" ಅಷ್ಟೇ ನುಡಿದಳು ಛವಿ.

ನಿಜವಾಗಿ ಆ ದಿನ ಎಲ್ಲವೂ ಸಾಂಗವಾಗಿಯೇ ನಡೆದಿತ್ತು. ಪ್ರಾರಂಭದಿಂದಲೂ ಛವಿಯೇ ಎಲ್ಲಾ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದಳು. ಅಡಿಗೆ ಮನೆಯಿಂದ ಉಗ್ರಾಣದವರೆಗೆ ಎಲ್ಲೆಲ್ಲೂ ಅವಳು ಚಕ್ರದಂತೆ ತಿರುಗುತ್ತಿದ್ದಳು. ಆದರೆ ಮದುವೆ ದಿನ ಸಾಯಂಕಾಲ ಆ ಘಟನೆ ಘಟಿಸಿತು. ಆ ಘಟನೆಯ ಪರಿಣಾಮವಾಗಿಯೇ ಸ್ವಾಭಿಮಾನಿ ಛವಿ ಹಾಸಿಗೆ ಹಿಡಿದಳು. ಇದು ಯಾರ ಗಮನಕ್ಕೂ ಬಂದಿರಲಿಲ್ಲ. ಎಲ್ಲರ ಗಮನ ಹರಿದಿದ್ದು ಅಂದು ವಿವಾಹದ ಕಾಲದಲ್ಲಿ.

"ಛವಿ ಎಲ್ಲಿ.... ಛವಿ ಎಲ್ಲಿ ?"

ಮದುವೆ ಶಾಸ್ತ್ರಕ್ಕೆ ಬೇಕಾದ ಅರಿಶಿನ ಮತ್ತು ಕವಡೆಯನ್ನು ಛವಿ ಎಲ್ಲಿಟ್ಟಿದ್ದಾಳೆ ? ಕನ್ಯೆಯ ಧಾರೆ ವಸ್ತ್ರಗಳೆಲ್ಲಿ ? ಸಮಯದಲ್ಲಿ ಒಂದೂ ಸಿಗುತ್ತಿಲ್ಲ.

ವಾಸ್ತವವಾಗಿ ಇದೆಲ್ಲವೂ ಬಹುಬೇಗ ಲಭ್ಯವಾದವು. ಎಲ್ಲವೂ ಹತ್ತಿರದಲ್ಲೇ ಇಡಲ್ಪಟ್ಟಿದ್ದವು. ಇವೆಲ್ಲವನ್ನು ಯಾರಾದರೂ ಹಿಡಿದುಕೊಂಡು ನಿಂತಿದ್ದರೆ ತಾನೇ ತೊಂದರೆ ತಪ್ಪುತ್ತಿದ್ದುದು.. ಇಷ್ಟೇ ಅಲ್ಲ ಛವಿಗೆ ಮದುವೆಗೆ ಬೇಕಾದ ಅರಿಶಿನ ಕವಡೆ, ಧಾರೆ ವಸ್ತ್ರ ಮುಂತಾದ ಸಕಲ ವಸ್ತುಗಳ ಜ್ಞಾನವಿತ್ತು. ಎಲ್ಲಾ ನಿಯಮಗಳ ಅರಿವೂ ಇತ್ತು. ಕನ್ಯೆಯ ತಾಯಿ ಏನೇನು ಸಂಭಾಳಿಸಿಯಾಳು. ಬಂದಿರುವ ಅತಿಥಿಗಳನ್ನು ಇವಳೇ ನೋಡಿಕೊಳ್ಳಬೇಕಾಗಿತ್ತು.

"ಇವೆಲ್ಲವನ್ನೂ ತಿಳಿದು ಸರಿಯಾದ ಸಮಯದಲ್ಲಿ ಛವಿ ಕಾಣೆಯಾದಳು. ಛೀ... ಛೀ.. ಆಕ್ಷೇಪಗಳಿಂದ ನೊಂದಿರೋ ಗಂಡನಿಗೆ ಸಮಾಧಾನ ಮಾಡಲು ಬಹುಶಃ

ಹೋಗಿರಬಹುದು. ಆದರೂ ಯಾವುದಕ್ಕೂ ಸಮಯವಿಲ್ಲವೆ?'' ಸತೀನಾಥ್ ಯೋಚಿಸುತ್ತಿದ್ದರು, "ಅವನೊಬ್ಬ ಹುಚ್ಚ.. ಬುದ್ಧಿ ಇಲ್ಲದ ಮನುಷ್ಯ. ಯಾವಾಗ ಏನು ಮಾಡಿಬಿಡ್ತಾನೋ? ಅವನಿಗೆ ನಿದ್ರೆ ಗುಳಿಗೆ ನುಂಗಿಸಿ ನೀನು ಕೆಳಗೆ ಇಳಿದು ಬಾ. ಮದುವೆ ಶಾಸ್ತ್ರ ಮುಗಿದ ಮೇಲೆ ಆತನನ್ನು ನಿದ್ದೆಯಿಂದ ಎಬ್ಬಿಸಿ ಊಟ ಮಾಡಿಸು... ಪ್ರೀತಿ ತೋರಿಸು.''

"ನಾನಂತೂ ಇದನ್ನು ಸಹಿಸಲಾರೆ. ಮನೆ ತುಂಬಾ ನೆಂಟರಿಷ್ಟರು ತುಂಬಿರುವಾಗ ನೀನು ನಿನ್ನ ಗಂಡನ ಜೊತೆ ಕೂತ್ಕೊಂಡು ನಿನ್ನ ಬುದ್ಧಿ ತೋರಿಸ್ತಾ ಇದ್ದಿ. ಗಂಡ ಊಟ ಮಾಡದೆ ಇದ್ದರೆ ನಾನೂ ಮಾಡಲ್ಲ ಅಂತಾ ಹೇಳ್ತಾ ಇದ್ದಿ. ಛಿ.. ಛಿ.. ಅಣ್ಣಂಗೆ ಎಂಥಾ ಒಳ್ಳೆ ಅಳಿಯ ಸಿಕ್ಕಿದ್ದಾನೆ ಎಷ್ಟು ಸಂತೋಷವಾಗಿದೆ. ಆದರೆ ನೀನು ಮದುವೆ ಶಾಸ್ತ್ರಾನು ನೋಡದೆ ಕೂತಿದ್ದಿ. ಊಟ ಮಾಡಲ್ಲ ಏನೋ ಕೊಬ್ಬು ತೋರಿಸುತ್ತಿದ್ದಿ. ಇಷ್ಟು ದೊಡ್ಡ ಸಮಾರಂಭ. ಎಷ್ಟು ಒಳ್ಳೆಯ ಊಟ ಉಪಚಾರ ವ್ಯವಸ್ಥೆ. ಆದ್ರೆ ನೀವಿಬ್ರೂ ಉಪವಾಸ ಇದ್ದೀರಿ, ಅಣ್ಣನ ಮಗಳ ಮಾನ ಅವಮಾನದ ಚಿಂತೆನೇ ಇಲ್ಲ. ಅಣ್ಣ, ಅಣ್ಣನ ಹೆಂಡತಿಯು ಮುಖ ತಗ್ಗಿಸೋ ಹಾಗೆ ಮಾಡುತ್ತಾ ಇದ್ದಿ. ನೀಚತನಕ್ಕೂ ಒಂದು ಇತಿಮಿತಿ ಇರಬೇಕಷ್ಟೆ.''

"ಈ ಅಣ್ಣ ನಿನಗಿಂತ ಇಪ್ಪತ್ತು ವರ್ಷ ದೊಡ್ಡೋನು. ತಂದೆ ಸಮಾನ. ತಂದೆ ಹಾಗೇ ನಿನ್ನನ್ನು ಸಾಕಿ ಸಲುಹಿ ಮದುವೆ ಕೂಡ ಮಾಡಿದ್ದಾನೆ. ವರ್ಷದ 12ತಿಂಗಳು ಮೂವತ್ತು ದಿನವೂ ನಿನ್ನ ಹಾಗೂ ನಿನ್ನ ಹುಚ್ಚು ಗಂಡನ್ನ ಪೋಷಿಸುತ್ತಾ ಇದ್ದಾನೆ. ನಿನಗೋಸ್ಕರ ಕೊಠಡಿ ಸಹ ಕಟ್ಟಿಸಿಕೊಟ್ಟಿದ್ದಾನೆ. ಇಂಥಾ ಅಣ್ಣ ನಿನ್ನ ಹುಚ್ಚು ಗಂಡನ ಮೇಲೆ ಒಮ್ಮೆ ರೇಗಿದ್ರೆ, ಬೈದಿದ್ರೆ ಅದನ್ನು ಮಾತ್ರ ಜ್ಞಾಪಕ ಇಟ್ಟುಕೊಂಡಿರುತ್ತಿ. ನಿನ್ನ ಮನಸ್ಸಿನಲ್ಲಿ ಕೃತಜ್ಞತೆ ಅನ್ನೋ ಭಾವವೇ ಇಲ್ವೆ?''

ಇಂತಹ ಅನುಚಿತ ವ್ಯವಹಾರ ಮಾಡಿದ ನಂತರವೂ ಛವಿ ಹೇಗಿದ್ದಾಳೆ ಎಂಬುದನ್ನು ನೋಡುವ ಸಲುವಾಗಿಯೇ ಬಹುಶಃ ಅವಳ ಕೊಠಡಿಯ ಮುಂದೆ ರಥಯಾತ್ರೆಯಲ್ಲಿ ನಿಲ್ಲುವಂತೆ ಜನರ ಗುಂಪು ಸೇರಿತ್ತು.

ಕೆಲ ಜನ ಅವಳ ಬಗ್ಗೆ ಸಹಾನುಭೂತಿ ಸಹ ವ್ಯಕ್ತಪಡಿಸುತ್ತಿದ್ದರು. ಆದರೂ ಅವಳು ಸುಮ್ಮನಿದ್ದಳು. ಏತಕ್ಕೆಂದರೆ ಯಾರ ಮನೆಯಲ್ಲಿದ್ದಾಳೋ ಅವರ ವಿರುದ್ಧವೇ ಮಾತನಾಡಬೇಕಾದರೆ ಸುಮ್ಮನಿರುವುದೊಂದೇ ಮಾರ್ಗ. ಸುಮ್ಮನೆ ಇದ್ದು ಹೇಳಬಹುದಿತ್ತು. ಆಹಾ! ಹೇಳಬಹುದಿತ್ತು 'ಚಿಕ್ಕ ಭಾವ ಹುಚ್ಚ, ಬುದ್ಧಿ ಇಲ್ಲದವನು. ಅದಕ್ಕೆ ಹೀಗೆ ಮಾಡಬೇಕಾಯಿತು. ಆದರೆ ನೀನೊಬ್ಬ ವಿಲಕ್ಷಣ ಬುದ್ಧಿಯ ಮನುಷ್ಯ. ಮಗಳ ಮದುವೆ ಮಾಡ ಹೊರಟಿದ್ದಿ. ಈ ಶುಭದಿನದಂದು ಅವಳ ಕತ್ತು ಹಿಡಿದು ತಳ್ಳಬೇಕಾಗಿತ್ತೆ. ವಿವಶವಾಗಿ ಅವಳು ಇಂದು ನಿಂತಿದ್ದಾಳೆ. ಅದಕ್ಕೆ ನೀನು ಹೀಗೆಲ್ಲಾ ಮಾಡಲು ಶಕ್ತವಾಯಿತು. ಒಂದು ವೇಳೆ ಅವಳು ಐಶ್ವರ್ಯವಂತ ಸಹೋದರಿ ಆಗಿದ್ದರೆ ಹೀಗೆ ಮಾಡುತ್ತಿದ್ದೆಯಾ?''

ಆದರೆ ಇದೇ ಜನ ಕೆಳಗೆ ವಿರುದ್ಧ ರಾಗದಲ್ಲಿ ಹಾಡುತ್ತಿದ್ದರು. ಆ ಜನ ಏಕೆ ಹೀಗೆ ಮಾಡಬಾರದು? ಅವರೇನು ಕ್ರೈಸ್ತ ಪಾದ್ರಿಗಳೇನಲ್ಲವಲ್ಲ. ಚೈತನ್ಯ

ಮಹಾಪ್ರಭುಗಳೂ ಅಲ್ಲ, ಅವರ ಶರೀರದಲ್ಲಿ ಕೋಪ ಇಲ್ಲದಿರುವುದಕ್ಕೆ. ಈ ಸಹಾನುಭೂತಿಗೆ ಉತ್ತರವಾಗಿ ಒಂದು ವೇಳೆ ಛವಿ ಕಣ್ಣೀರು ಸುರಿಸದೆ "ನಂಗೆ ಈ ಮಾತೆಲ್ಲಾ ಸರಿ ಕಾಣ್ಸಲ್ಲ. ತಾವು ಕೆಳಗೆ ಇಳಿದು ಹೋಗಿ" ಎಂದು ಹೇಳಿದ್ದರೆ? ಮತ್ತೇನು ಪಾದ್ರಿ ಹಾಗೂ ಚೈತನ್ಯರಿಗೂ ಸಿಟ್ಟು ಬರುತ್ತಿರಲಿಲ್ಲವೆ?

ಇದೇ ವಾಸ್ತವ್ಯದ ಲೀಲೆ. ರಾತ್ರಿ ಸಾಕಷ್ಟು ಸಮಯ ಕಳೆದಿತ್ತು. ಹೊರಗಿನ ಜನವೆಲ್ಲಾ ಉಂಡು ಹೊರಟು ಹೋಗಿದ್ದರು. ಊಟ ಮಾಡಲು ಮನೆಯವರು ಮಾತ್ರ ಉಳಿದಿದ್ದರು. ಸತೀನಾಥ್ ತನ್ನ ಅಳಿಯನ ರೂಪ ಹಾಗೂ ಗುಣದ ಬಗ್ಗೆ ಮೋಹಿತನಾಗಿದ್ದಾಗ ಅವರು ಇದ್ದಕ್ಕಿದ್ದಂತೆ ಪ್ರಶ್ನಿಸಿದರು "ಕ್ಷಿತೀಶ್ ಊಟ ಮಾಡಿದರೇ"

ಆಗಲೇ ಸತೀನಾಥ್‌ನಿಗೆ ಜ್ಞಾಪಕ ಬಂತು. ಕ್ಷಿತೀಶ್ ಮಧ್ಯಾಹ್ನ ಒಬ್ಬ ಬೇಕೂಫನಂತೆ ಪ್ರಪಂಚದಲ್ಲಿರುವ ಎಲ್ಲಾ ಪೂರಿ, ಮಿಠಾಯಿ ಮುಂತಾದವುಗಳನ್ನು ಒಂದು ಕೊಳಕು ತಟ್ಟೆಯಲ್ಲಿ ತುಂಬಿಕೊಂಡು ಅತಿಥಿಗಳ ಮಧ್ಯೆ ತಿನ್ನಲು ಕುಳಿತಿದ್ದ. ಇದನ್ನು ನೋಡಿ ಕ್ಷಿತೀಶ್‌ನ ಕತ್ತು ಹಿಡಿದು ಸತೀನಾಥ್ ಹೊರಗೆ ಎಳೆದು ಹಾಕಿದ್ದ.

ಇದು ನಿಜವಾಗಿ ತಪ್ಪಾದ ಕೆಲಸವಾಗಿತ್ತು. ಸತೀನಾಥನಿಗೂ ಇದು ಅರ್ಥವಾಗಿತ್ತು. ಎಷ್ಟಾದರೂ ಆತನದೂ ರಕ್ತ ಮಾಂಸ ತುಂಬಿದ ಶರೀರ ತಾನೆ?

ಬಾರಾತ್ ಕರೆ ತಂದಿದ್ದ ಬಸ್ ಅದೇ ತಾನೆ ಬಂದಿತ್ತು. ಕನ್ಯಾದಾನಕ್ಕೋಸ್ಕರ ಸತೀನಾಥ್ ಬೆಳಿಗ್ಗೆಯಿಂದ ಉಪವಾಸ ಇದ್ದು ಇಂತಹ ಉದ್ವೇಗ ಹಾಗೂ ಉತ್ಕಟತೆ ತುಂಬಿ ಆಶಂಕೆಯಿಂದ ಪೀಡಿತನಾಗಿರುವ ಸಂದರ್ಭದಲ್ಲಿ ಅಂತಹ ಕೆಟ್ಟ ದೃಶ್ಯ ನೋಡಿ ಸಂಯಮ ತಂದುಕೊಳ್ಳುವುದು ಸಾಧ್ಯವೇ? ಸತೀನಾಥ್‌ನಿಗೂ ಅದು ಸಾಧ್ಯವಾಗಿರಲಿಲ್ಲ. ಆ ಹುಚ್ಚ ಇದನ್ನು ಅಪಮಾನಕರ ಘಟನೆ ಎಂದು ತಿಳಿಯುತ್ತಾನೆ ಎಂಬ ಆಶಂಕೆಯೂ ಈತನಿಗೂ ಇರಲಿಲ್ಲ. ಅಲ್ಲಿ ಇಲ್ಲಿ ಸುತ್ತಿ ಸಿಹಿ ತಿಂಡಿ ಅಂಗಡಿಯಲ್ಲಿ ಹೋಗಿ ಕುಳಿತುಕೊಳ್ಳುತ್ತಾನೆ ಎಂದೇ ತಿಳಿದಿದ್ದ. ಛವಿ ಇದ್ದಕ್ಕಿಂತೆಯೇ ಕಾಣೆಯಾದಾಗಲೇ ಆತನಿಗೆ ಪರಿಸ್ಥಿತಿಯು ಅರಿವಾದದ್ದು. ಛವಿಯನ್ನು ಬಿಟ್ಟು ಆತನಿಗೆ ಮಾತ್ರ ತೊಂದರೆಯಾಗಿದ್ದರೆ ಅದು ಬೇರೆ ಮಾತು. ಈಗ ಮನೆಯಲ್ಲೆಲ್ಲಾ ಅಸಮಾಧಾನ ತುಂಬಿದೆ. ಎಲ್ಲರ ನಾಲಿಗೆಯ ಮೇಲೂ ಛವಿಯ ಹೆಸರೇ ಸುಳಿದಾಡುತ್ತಿತ್ತು.

ಇದೇ ಸಮಯದಲ್ಲಿ ಕನ್ಯಾದಾನ ನಡೆಯುತ್ತಿದ್ದಾಗ ನಾದಿನಿ ಛವಿಯ ಅನುಪಸ್ಥಿತಿಗೆ ಕಾರಣ ನೀಡಿದಳು "ನಂಗೇನು ಗೊತ್ತು. ಇದು ನಾನು ಕೇಳಿದ ವಿಷಯ. ನೀನೇ ನಿನ್ನ ಭಾವನನ್ನು ಕತ್ತು ಹಿಡಿದು ಹೊರಗೆ ಹಾಕಿದೆಯಂತಲ್ಲಾ? ಅದಕ್ಕೇ ನಿನ್ನ ತಂಗಿ ನೊಂದುಕೊಂಡು ತನ್ನ ಗಂಡನ ಸಂಗಡ ಕೊಠಡಿಯಲ್ಲಿ ಕುಳಿತು ಬಿಟ್ಟಿದ್ದಾಳೆ. ಆಗಿನಿಂದ ಕೆಳಗೆ ಇಳಿದು ಬಂದಿಲ್ಲ. ಸಿಟ್ಟಿನಲ್ಲಿ ಊಟಾನೂ ಅಂಗಳದಲ್ಲಿ ಚೆಲ್ಲಿ ಹೊರಟು ಹೋಗಿದ್ದಾಳೆ. ಅವನೇನೋ ಹುಚ್ಚ ಸರಿ. ಆದರೆ ನಿನ್ನ ತಂಗಿ, ಅವಳೇನೂ ಹುಚ್ಚಳಲ್ಲವಲ್ಲ."

ಈ ಮಾತು ಕೇಳಿ ಸತೀನಾಥ್‌ನೂ ಕೋಪದಿಂದ ಹುಚ್ಚನಾದ. ಮತ್ತೇನೂ

ಮಾಡಲಾರದಾಗಿದ್ದ. ಕನ್ಯಾದಾನಕ್ಕಾಗಿ ಹಸೆಮಣೆಯ ಮೇಲೆ ಕುಳಿತಿದ್ದುದರಿಂದ ಮತ್ತೇನೂ ವ್ಯವಸ್ಥೆಯನ್ನು ಮಾಡಲಾರದಾಗಿದ್ದ. ಆದರೆ ಅವರ ಮನಸ್ಸು ಅಷ್ಟು ಹೊತ್ತಿಗೆ ಮೃದುವಾಗಿತ್ತು, ಉದಾರತೆ ತಲೆದೋರಿತ್ತು. ಆದ್ದರಿಂದಲೇ ಅವರು ಪ್ರಶ್ನಿಸಿದರು "ಕ್ಷಿತೀಶ್ ಊಟ ಮಾಡಿದರೆ?" ಅನುಕೂಲ್, ಸಂಧ್ಯಾ ಮುಂತಾದ ಸುಮಾರು ಐವತ್ತು ಜನ ಛವಿಯ ಬಳಿಗೆ ಹೋಗಿ ಊಟ ಮಾಡಲು ಪುಸಲಾಯಿಸಿದರು. ಹೇಳಿದರು "ಎಲ್ಲರ ಮಧ್ಯೆ ಬಂದು ಕುಳಿತಿಕೋ. ಎಲ್ಲರ ಜೊತೆ ಊಟ ಮಾಡು." ಆದರೆ ಛವಿ ಅಲುಗಲಿಲ್ಲ. ಪರ್ವತದಂತೆ ಸ್ಥಿರವಾಗಿದ್ದಳು. ಅವಳನ್ನು ಯಾರೂ ಕೆಳಗಿಳಿಸಲಾಗಲಿಲ್ಲ.

ಈ ಅಸಭ್ಯ ವರ್ತನೆಯ ಪೂರಾ ಕಥೆಯನ್ನು ಪತ್ನಿಯಿಂದ ಕೇಳಿದ ನಂತರವೂ ಸತೀನಾಥನ ಮನದಲ್ಲಿ ಉದಾರತೆಯ ಭಾವ ಉದಯಿಸುವ ನಂಬಿಕೆ ಯಾರಿಗೂ ಇರಲಿಲ್ಲ. ಅವರು ಸಿಟ್ಟಿನಿಂದ ತಟಪಟಿಸಿ ಮೂರೇ ನೆಗೆತಕ್ಕೆ ಮೆಟ್ಟಲು ಹತ್ತಿ ಹೋಗಿ ಹೇಳಿದರು "ಛವಿ, ನಿನ್ನ ಮುಂದೆ ಕೈ ಮುಗೀತೀನಿ... ಹೊರಡು.. ಎಲ್ಲರೂ ಜೊತೆಯಾಗಿ ಊಟ ಮಾಡೋಣ." ಇದರಿಂದ ಛವಿಯ ಸ್ವರ ಕಂಪಿಸಿತೆ? ಅಥವಾ ಇದು ಸತೀನಾಥನ ಮನದ ಭ್ರಮೆಯೆ? ಛವಿ ಸ್ಪಷ್ಟವಾದ ಸ್ವರದಲ್ಲಿ ನುಡಿದಳು "ಇದೆಲ್ಲಾ ಯಾಕೆ ಭಯ್ಯಾ... ನಾನು ಹೇಳುತ್ತಾನೆ ಇದ್ದೀನಿ ನನಗೆ ಊಟ ಮಾಡೋ ಧೈರ್ಯವಿಲ್ಲ. ನಾನು ಊಟ ಮಾಡಲಾರೆ. ತಲೆನೋವಿಂದ ಸಿಡಿದು ಹೋಗ್ತಾ ಇದೆ."

ಸತೀನಾಥನ ಕಣ್ಮುಂದೆ ಇದ್ದಕ್ಕಿದ್ದಂತೆಯೇ ಭಾವ ಊಟ ಚೆಲ್ಲುತ್ತಿದ್ದ ದೃಶ್ಯ ಕಾಣಿಸಿತು. ಜೊತೆಯಲ್ಲಿ ಇನ್ನೊಂದು ವಿಷಯ. ಆತ ಹುಚ್ಚನಾಗಲಿ ಅಥವಾ ಬುದ್ಧಿ ಇಲ್ಲದವನಾಗಲಿ ಆದರೂ ಆತ ಛವಿಯ ಗಂಡ. ತಕ್ಷಣ ಮೃದುಸ್ವರದಿಂದ ನುಡಿದರು "ಸರಿ.. ಸರಿ ಊಟ ಮಾಡಬೇಡ. ಹೋಗಿ ನಮ್ಮಗಳ ಜೊತೆ ಒಮ್ಮೆ ಬಂದು ಕೂತ್ಕೊ. ಕ್ಷಿತೀಶ್‌ನ ಊಟ ಮಹಡಿ ಮೇಲಕ್ಕೆ ಕಳಿಸ್ತೀನಿ. ಊಟ ಮಾಡಿಸಿ ಬಾ."

ಛವಿ ಹಿಂದಿನಂತೆಯೇ ಸ್ಥಿರವಾಗಿದ್ದಳು. ನುಡಿದಳು "ಅವರು ಊಟ ಮಾಡಲ್ಲ, ಭಯ್ಯಾ."

ಸತೀನಾಥನ ಧೈರ್ಯ ಚೂರುಚೂರಾಯಿತು. ಕೆಳಗೆ ಇಳಿಯುತ್ತಾ ಕಿರುಚಿದರು "ಕೃತಘ್ನರು ಇರೋದೆ ಹೀಗೆ."

ಇವರು ಕೆಳಗೆ ಇಳಿದಂತೆಯೇ ಅಮಲ್ ಮೇಲೆ ಹತ್ತಿ ಹೋದ. ಎಲ್ಲರಿಗೂ ಊಟ ಮಾಡಿಸುವ ಭಾರವನ್ನು ತಾನೇ ಹೊತ್ತಿದ್ದ. ಆದರೆ ಒಬ್ಬ ಸಾಮಾನ್ಯ ಹುಡುಗಿಯ ಧನಸ್ಸು ಭಂಗ ಮಾಡಿದ ಪ್ರೇಮ ಪ್ರಕರಣದಿಂದಾಗಿ ಗಡಿಯಾರದ ಮುಳ್ಳು ಹನ್ನೆರಡರಿಂದ ಒಂದನ್ನು ಮುಟ್ಟಿತು.

ಅಮಲ್‌ನೇನೂ ಇವರ ಬಳಗದವನಲ್ಲ. ಹಾಗೆಂದರೆ ಏನೂ ಅಲ್ಲ. ಬೀದಿಯವನು ಅಷ್ಟೇ. ಇಷ್ಟೊಂದು ಜವಾಬ್ದಾರಿಯನ್ನು ಹೊರಬೇಕಾಗಿರಲಿಲ್ಲ. ಆದರೂ ಹೊತ್ತಿದ್ದ, ತನ್ನ ತಲೆಯ ಮೇಲೆ. ಹೀಗೆ ಜವಾಬ್ದಾರಿ ಹೊರುವುದು ಆತನಿಗೆ ಅಭ್ಯಾಸವಾಗಿ ಹೋಗಿತ್ತು. ಇನ್ನು ರಾತ್ರಿ ಹೊತ್ತಾದರೆ ಮನೆಯವರು

ಏನೆಂದುಕೊಂಡಾರು ?

ಮೇಲೆ ಮೆಟ್ಟಲು ಹತ್ತುವಾಗ ಸತೀನಾಥ್‌ಗೆ ಡಿಕ್ಕಿ ಹೊಡೆಯುವುದನ್ನು ಹೇಗೋ ತಪ್ಪಿಸಿಕೊಂಡ.

ಸತೀನಾಥ ಆತನತ್ತ ನೋಡಿದ. ವಿಕ್ಷುಬ್ಧಗೊಂಡು ವ್ಯಂಗ್ಯ ತುಂಬಿದ ಸ್ವರದಲ್ಲಿ ನುಡಿದ "ನೀನೊಬ್ಬ ಬಾಕಿ ಇತ್ತು."

ಸತೀನಾಥ ಕೆಳಗೆ ಉಳಿದುಹೋದ.

ಅರ್ಧ ಬೀದಿಯ ಪಕ್ಕದ ಮನೆಯವನು ದಿನವೂ ನೋಡುತ್ತಿರುವ ಗುರುತಿನ ವ್ಯಕ್ತಿ. ಸತೀನಾಥನಿಗೆ ಆಶ್ಚರ್ಯವೇನೂ ಆಗಲಿಲ್ಲ. ಆದರೆ ನಂಬಿಕೆಯೂ ಇರಲಿಲ್ಲ. ಅಮಲ್‌ನಿಗೂ ಈ ಬಗ್ಗೆ ನಂಬಿಕೆ ಇರಲಿಲ್ಲ.

ಆತನೂ ಎಲ್ಲವನ್ನೂ ಕೇಳಿಸಿಕೊಂಡಿದ್ದ. ಘಟನೆ ಹಾಗೂ ಜನರಿಂದ ಬಂದ ಟಿಪ್ಪಣಿವರೆಗೆ ಆದರೂ ಆತನಿಗೆ ತನ್ನ ಆತ್ಮಶಕ್ತಿಯು ಮೇಲೆ ಭರವಸೆ ಇತ್ತು. ಅವಳನ್ನೊಮ್ಮೆ ನೋಡುವ ಕುತೂಹಲವೂ ಇತ್ತು. ಛವಿ ಇಷ್ಟು ಕಠೋರವಾಗಿ ತೋರಿದರೂ ಹೇಗೆ ಕಾಣಿಸುತ್ತಿರಬಹುದು. ಇದನ್ನು ಕಾಣುವ ಆಸೆ ಅಮಲನಿಗಾಗಿತ್ತು.

ಛವಿ ಆಗ ಕೊಠಡಿಯ ಬಾಗಿಲು ಮುಚ್ಚುವವಳಿದ್ದಳು. ಇನ್ನು ಸ್ವಲ್ಪ ಹೊತ್ತು ಮಲಗಬಹುದೆಂದುಕೊಳ್ಳುತ್ತಿದ್ದಳು.

ಅಮಲನನ್ನು ಕಂಡು ಅವಳ ಕೈ ಹಾಗೆ ನಿಂತಿತು. ಬಾಗಿಲು ಅರ್ಧವೇ ತೆರೆದುಕೊಂಡಿತ್ತು.

ಒಂದು ಬೆಂಕಿಕಡ್ಡಿಯನ್ನು ಗೀರಿ ಅವಳ ಮುಖ ನೋಡಲೇ ಅನಿಸಿತು ಅಮಲನಿಗೆ. ಆದರೆ ಆತ ಹಾಗೆ ಮಾಡಲಿಲ್ಲ. "ದೀಪ ಹಚ್ಚಬಹುದಲ್ಲಾ?" ಆತ ನುಡಿದ.

ಛವಿ, ಮುಂಚಿನಂತೆಯೇ ಶುಷ್ಕ ಸ್ವರದಲ್ಲಿ ನುಡಿದಳು "ಅಂಥಾ ಆಗತ್ಯವೇನು ?"

"ಆಗತ್ಯವೇನೂ ಇಲ್ಲ. ಆದರೆ ನೀವು ಭೂತ ಹಿಡಿದವರಂತೆ ಕಾಣಿಸ್ತಾ ಇದ್ದೀರಿ, ಅದಕ್ಕೆ." ಛವಿ ಇದಕ್ಕೆ ಪ್ರತಿವಾದ ಮಾಡಲಿಲ್ಲ. ಚಂಚಲಳೂ ಆಗಲಿಲ್ಲ. ಶುಭ ಸಂದರ್ಭದ ಗೌರವಕ್ಕಾದರೂ ಛವಿ ಕಿರು ನಗೆ ಬೀರಲಿಲ್ಲ. ಆ ಮಬ್ಬು ಬೆಳಕಿನಲ್ಲಿ ಛವಿ, ಛವಿಯಂತೆಯೇ ನಿಂತಿದ್ದಳು.

ಛವಿಯ ಕೊಠಡಿಯ ದೃಶ್ಯ ಅಮಲನಿಗೆ ಕಾಣಿಸುತ್ತಿರಲಿಲ್ಲ. ಅರ್ಧ ತೆರೆದಿದ್ದ ಬಾಗಿಲ ಮೇಲೆ ಕೈ ಇರಿಸಿ ಛವಿ ನಿಂತಿದ್ದಳು. ಆದ್ದರಿಂದ ಒಳಗೆ ಬಗ್ಗಿ ನೋಡುವ ಪ್ರಯತ್ನವನ್ನು ಮಾಡದೆ ಅಮಲ್ ನುಡಿದ "ಕ್ಷಿತೀಶ್ ಬಾಬು ಮಲಗಿದ್ದಾರೆಯೇ ?"

ಏನೂ ಕಾರಣವಿಲ್ಲದೆ ಈಗ ಛವಿ ಸ್ವಲ್ಪ ನಗುತ್ತಾ ನುಡಿದಳು "ಹಾ ಮಲಗಿದ್ದಾರೆ."

"ಸತೀನಾಥ್ ಏನೇನೂ ಹೇಳಿದ್ರು ಅಂತಾ ನಾನು ಕೇಳಿದೆ. ಆದರೂ ಛವಿ, ನೀವೂ ಹಾಗೆ ಮಾಡಬಾರದಾಗಿತ್ತು. ನಂಗೇನೋ ಅದೆಲ್ಲಾ ಕೇಳಿ ನಾಚ್ಕೆ ಆಗ್ತಾ ಇದೆ."

ಈಗ ಛವಿ ಗಟ್ಟಿಯಾಗಿ ನಕ್ಕಳು.

ನಿಜವಾಗಿ ಛವಿ, ಭೂತ ಹಿಡಿದವಳಂತೆಯೇ ಕಾಣಿಸುತ್ತಿದ್ದಾಳೆ ಎಂದು ಅಮಲನಿಗೆ ತೋರಿತು. ಅವಳ ನಗು ಎಷ್ಟು ವಿಚಿತ್ರ! ಛವಿ ನಗುತ್ತಲೇ ನುಡಿದಳು "ನನ್ನ ನಿರ್ಲಜ್ಜತೆ ಬಗ್ಗೆ ನಿಮಗೇಕೆ ನಾಚ್ಕೆ ಆಗಬೇಕು ?"

ಏನು, ಅಮಲ್ ಈಗ ಬೆಂಕಿಕಡ್ಡಿ ಗೀರುವನೆ? ಆತ ಛವಿಯ ಮುಖದಲ್ಲಿ ಕೇವಲ ನಿರ್ಲಜ್ಜತೆಯನ್ನು ಮಾತ್ರವಲ್ಲ, ನಿಷ್ಠುರತೆಯನ್ನು ಕಾಣುತ್ತಾನೆ.

ಆ ಕತ್ತಲಿನಲ್ಲಿ ಛವಿಯನ್ನು ಗುರುತಿಸುವುದು ಕಷ್ಟವಾಗಿತ್ತು. ಛವಿಯ ಅಣ್ಣ ಮೋಸ ಹೋಗಿದ್ದ. ಏನೂ ಗೊತ್ತಿಲ್ಲದೆ, ಅರ್ಧ ಹುಚ್ಚು ಹಿಡಿದ ಯುವಕನೊಡನೆ ತಂಗಿಯ ಮದುವೆ ನಡೆಸಿಬಿಟ್ಟ. ಆದರೂ ಛವಿ ತನ್ನ ಅಣ್ಣನ ಈ ವಿಚಾರದ ಬಗ್ಗೆ ದೂರಿರಲಿಲ್ಲ. ಹುಚ್ಚು ಗಂಡನ ಸಂಗಡ ಛವಿಯನ್ನು ಆತ ತಳ್ಳಿಬಿಟ್ಟಿದ್ದ. ಇದಕ್ಕಾಗಿ ಅವನನ್ನು ಛವಿ ಧಿಕ್ಕರಿಸಿರಲಿಲ್ಲ.

ಅಮಲನ ಈ ಹೇಡಿತನವನ್ನು ಛವಿ ಧಿಕ್ಕರಿಸಲಿಲ್ಲ. ಸಹಜ, ಸ್ವಾಭಾವಿಕ ರೀತಿಯಿಂದಲೇ ಎಲ್ಲಾ ಕೆಲಸಗಳನ್ನು ಮಾಡಿಕೊಂಡು ಹೋಗುತ್ತಿದ್ದಳು. ಮದುವೆಗೆ ಮುಂಚೆ ಮನೆ ಕೆಲಸಗಳನ್ನು ಅವಳು ಹೇಗೆ ಮಾಡಿಕೊಂಡು ಹೋಗುತ್ತಿದ್ದಳೋ ಹಾಗೆಯೇ ಮದುವೆಯ ನಂತರವೂ ಎಲ್ಲಾ ಜವಾಬ್ದಾರಿಯನ್ನು ತಾನೇ ಹೊತ್ತಳು. ಈಗ ಅವಳಿಗೆ ಹೆಚ್ಚಿಗೆ ಲಭಿಸಿದ್ದು ಎಂದರೆ ಹುಚ್ಚು ಗಂಡನನ್ನು ಸಂಭಾಳಿಸುವ ಜವಾಬ್ದಾರಿ.

ಇಷ್ಟೆಲ್ಲಾ ಮನೆಯಲ್ಲಿ ನಡೆದಿದ್ದರೂ ಅವಳು ಒಂದು ವಿಚಿತ್ರ ಹೊದಿಕೆಯನ್ನು ತನ್ನ ಮೇಲೆ ಹೊದೆದಿದ್ದಳು. ಈ ಹೊದಿಕೆಯಲ್ಲಿ ತನ್ನನ್ನು ತಾನೇ ಮರೆಮಾಚಿಕೊಂಡಿದ್ದಳು. ಇದೆಲ್ಲಾ ಅಮಲನಿಗೆ ಗೊತ್ತಿಲ್ಲವೆ? ಆತ ಆಗಾಗ್ಯೆ ಈ ಮನೆಗೆ ಬಂದು ಹೋಗುತ್ತಿರುವ ಮನುಷ್ಯ.

ಒಂದು ವೇಳೆ ಕ್ಷಿತೀಶ್ ಕೆಲಕ್ಷಣ ಕಾಣದೆ ಹೋದರೆ ಛವಿಯ ಮನಸ್ಸು ಬಹಳವಾಗಿ ಉತ್ಕಟಗೊಳ್ಳುತ್ತಿತ್ತು. ಹರಟೆ ಹೊಡೆಯುತ್ತ ಕುಳಿತಿದ್ದರೆ ಇದ್ದಕ್ಕಿದ್ದಂತೆಯೇ ಎದ್ದು ಬಿಡುತ್ತಿದ್ದಳು. ಹೇಳುತ್ತಿದ್ದಳು "ಹೋ... ಎಲ್ಲೋ ಹೊರಟು ಹೋದರು. ಬಾಳ ಹೊತ್ತಿನಿಂದ ನನ್ನ ಸಂಪತ್ತು ಕಾಣಿಸ್ತಾನೆ ಇಲ್ಲ. ಸನ್ಯಾಸಿಯಾಗಿ ಹೊರಟು ಹೋಗಿಲ್ಲ ತಾನೆ? ಹೋಗಿ ನೋಡ್ತೀನಿ." ಇನ್ನೊಮ್ಮೆ ಹೇಳುತ್ತಾಳೆ "ಓಹೋ ಮೋಡ ಕವಿದಿದ್ದ ಸಂಜೆ ಕರಗಿ ಹೋಯಿತು. ಹೋಗಿ ನೋಡುತ್ತೀನಿ. ನನ್ನ ಪತಿ ಅಡಿಗೆ ಮನೆಗೆ ಹೋಗಿ ತಪ್ಪಲೆಯನ್ನೇನು ನೆಕ್ಕುತ್ತಿಲ್ಲ ತಾನೆ?" ಮತ್ತೊಮ್ಮೆ ಹೇಳುತ್ತಾಳೆ "ಓ ಅಲ್ಲಿ ನೋಡಿ. ಉದಾಸೀನ ತುಂಬಿದ ಮುಖದಿಂದ ಆ ಕೃಪಾಳು ಮಹಾಶಯರು ಹೊರಟು ಬಿಟ್ರು. ಹುಂ... ಹೋಗ್ತೀನಿ. ಇಲ್ಲೇ ಇದ್ರೆ ಭೋಲೆನಾಥ್ ರುದ್ರ ರೂಪ ತಾಳಿ ಬಿಡುತ್ತಾರೆ." ಆತನ ಹುಚ್ಚುತನದ ಮೇಲೆ ಯಾರಾದರೂ ಅಸಂತೋಷ ವ್ಯಕ್ತಪಡಿಸಿದರೆ ಅವರ ಮೇಲೆ ಛವಿ ಎಂದೂ ಸಿಟ್ಟಾಗುತ್ತಿರಲಿಲ್ಲ. ಅವರ ಜೊತೆ ತಾನೂ ಸೇರಿಕೊಂಡು ಹೇಳುತ್ತಿದ್ದಳು "ನೀವೇ ಹೇಳಿ... ನೀವೆಲ್ಲಾ ಸೇರಿ ಹೇಳಿ. ನನ್ನ ಕೆಲಸನಾದ್ರೂ ಸ್ವಲ್ಪ ಕಮ್ಮಿ ಆಗುತ್ತೆ. ಭಾವ ಅನ್ನೊಂಡು ಹೆಚ್ಚಿಗೆ ಗೌರವ ತೋರಿಸದೆ ಸ್ವಲ್ಪ ಗದರಿ ಹೇಳಿದ್ರೆ ಸ್ವಲ್ಪ ಉಪಕಾರ

ಆಗಬಹುದು."

ಇದೆಲ್ಲಾ ಅವಳು ನಗು ನಗುತ್ತಲೇ ಹೇಳುತ್ತಿರುತ್ತಾಳೆ. ಆದರೆ ಇಂದು ಗಂಡನಿಗಾದ ಕೊಂಚ ಅವಮಾನದಿಂದ ಅವಳ ರೂಪವೇ ಬದಲಾಯಿಸಿ ಹೋಯಿತು.

ಸತೀನಾಥನ ಹೆಂಡತಿಯ ಮಾತನ್ನೇ ನಾವು ನಂಬಬೇಕಾಗುತ್ತದೆ. ಈ ಬಗ್ಗೆ ಯೋಚಿಸಲೂ ಬೇಕಾಗುತ್ತದೆ. ಈರ್ಷ್ಯೆ ತುಂಬದ ಛವಿ ಏನೋ ಕಾರಣ ದೊರೆತೊಡನೆ ಹೀಗೆ ವ್ಯವಹರಿಸುತ್ತಿದ್ದಾಳೆ. ಅಣ್ಣನ ಮಗಳ ಮದುವೆ ಇಷ್ಟು ಸಂಭ್ರಮದಿಂದ ನಡೆದಿದೆ. ಇಷ್ಟು ಸುಂದರವಾದ ಅಳಿಯ ಸಿಕ್ಕಿದ್ದಾನೆ. ಅದಕ್ಕೆ ಅವಳ ಎದೆ ಒಡೆದು ಹೋಗ್ತಾ ಇದೆ."

ಛವಿ ಇಂತಹ ವಿಷಯವನ್ನು ಯೋಚಿಸಲಾರಳು. ಆದರೆ ಛವಿ ಹೀಗೆ ತಿಳಿಯಲು ಎಲ್ಲರನ್ನೂ ಒತ್ತಾಯಿಸುತ್ತಿದ್ದಳು.

ಈ ಎಲ್ಲಾ ವ್ಯವಹಾರಕ್ಕೂ ಈರ್ಷ್ಯೆಯೇ ಕಾರಣ ಎಂದು ಎಲ್ಲರೂ ಹೇಳುವಂತೆ ಆಕೆಯ ಈ ವಿಚಿತ್ರ ಅವ್ಯವಹಾರ ಪ್ರೇರೇಪಿಸುತ್ತಿತ್ತು.

ಇಲ್ಲದಿದ್ದರೆ ಇಂದಿನವರೆಗೆ ಅವಳ ಪತಿಭಕ್ತಿ ಎಲ್ಲಿ ಹೋಗಿತ್ತು? ಅವಳ ಅತ್ತಿಗೆ ನುಡಿದಳು "ತನ್ನ ಪತಿ ಹುಚ್ಚ. ಈ ಬಗ್ಗೆ ಅವಳಿಗೇನಾದರೂ ದುಃಖವಿದೆಯೆ? ಇದ್ದ ಹಾಗೆ ಕಾಣಿಸೋದೆ ಇಲ್ಲ. ಎಂತಹ ಅದ್ಭುತ ಕಲ್ಲು ಹೃದಯ ಅವಳದು. ?"

ಅವಳ ಕಲ್ಲು ಹೃದಯ ಈಗ ಒಡೆದುಹೋಗಿತ್ತು. ಸತ್ಯವಾಗೂ ಇದು ಈರ್ಷ್ಯೆಯ ಉರಿಯಿಂದಲೇ. ಅಮಲ ತನ್ನ ಮನಸ್ಸಿನಲ್ಲಿನ ಈ ಎಲ್ಲಾ ಭಾವನೆಗಳನ್ನು ಅದುಮಿ ಇಷ್ಟು ಮಾತ್ರ ನುಡಿದ "ನೀನು ನಿರ್ದಯಿ ಛವಿ."

ಛವಿ ನುಡಿದಳು "ಓ ನಿಂಗೆ ಇವತ್ತು ಗೊತ್ತಾಯ್ತಾ? ಆದರೂ ನೀನೇಕೆ ಬಂದೆ? ಏನು ಸಮಾಚಾರ? ಊಟಕ್ಕೆ ಕರೆಯೋದಿಕ್ಕೆ ಬಂದಿದ್ದೀಯಾ?"

ಪೆಟ್ಟು ತಿಂದವನಂತೆ ಅಮಲ್ ಛವಿಯತ್ತ ದೃಷ್ಟಿ ಹರಿಸಲು ಪ್ರಯತ್ನಿಸುತ್ತಾ ನುಡಿದ "ನಿನ್ನನ್ನು ಊಟಕ್ಕೆ ಕರ್ಯೋದಿಕ್ಕೆ ಬರುವಷ್ಟು ದುಸ್ಸಾಹಸ ನಾ ಮಾಡಲಾರೆ. ಆದರೆ ಯೋಚಿಸುತ್ತಾ ಇದ್ದೀನಿ. ಕ್ಷಿತೀಶ್‌ಬಾಬು ಅಲ್ಲದೆ ನಿನ್ನನ್ನೂ ಉಪವಾಸ ಇರಿಸಿಕೊಂಡು ನೀನು ನಿನ್ನ ಅಣ್ಣಂಗೆ ಎಂಥಾ ಶಿಕ್ಷೆ ಕೊಡ್ತಾ ಇದ್ದಿ? ಪಾಪ ಆ ಸಜ್ಜನರನ್ನು ಒಳ್ಳೇ ಪೇಚಾಟಕ್ಕೆ ಸಿಕ್ಕಿಸಿಬಿಟ್ಟಿದ್ದಿ. ಬಾಳ ಉತ್ಸಾಹದಿಂದ ಅವರು ನನಗೆ ಹೇಳಿದ್ರು "ನೀನೆ ನಂಗೆ ಖುದ್ದಾಗಿ ನಿಂತು ಬಡಿಸಿ ತಿನ್ನಿಸಬೇಕು. ಈ ಜನ ಸರಿಯಾಗಿ ಬಡಿಸ್ತಾರೋ ಇಲ್ವೋ" ಇಷ್ಟು ಹೇಳಿ ಅಮಲ್ ಇನ್ನೊಮ್ಮೆ ಮುಗುಳ್ನಕ್ಕ. ಮತ್ತೆ ನುಡಿದ "ನಿಜವಾಗಿ ಆತ 'ಈ ಜನ ಅಂತಾ ಹೇಳಿರಲಿಲ್ಲ ಈ ನೀಚರು' ಅಂತಾ ಹೇಳಿದ್ದ."

ಇಷ್ಟು ಹೊತ್ತು ಉಪವಾಸ ಇದ್ದ ಕಾರಣದಿಂದಲೋ ಅಥವಾ ಇಷ್ಟು ಹೊತ್ತಿನ ಅಸಭ್ಯ ವ್ಯವಹಾರದಿಂದ ಬೇಸತ್ತುದುದರಿಂದಲೋ ಅವಳ ಧ್ವನಿ ಒಣಗಿ ಹೋಗಿತ್ತು. ಛವಿಯ ಧ್ವನಿಯ ಮಧುರತೆ ಅಷ್ಟಕ್ಕಷ್ಟೆ. ಹಿಂದೊಂದು ಕಾಲದಲ್ಲಿ ಅವಳ ಧ್ವನಿ ಮಧುರವಾಗಿದ್ದಿರಬಹುದು. ಆದರೆ ಈಗ ಇಲ್ಲ. ಈಗ ಒಣಗಿದ ಸ್ವರದಿಂದಲೇ ಛವಿ ನುಡಿದಳು 'ನೀನು ಬಡಿಸೋ ರೀತಿಯ ವೈಶಿಷ್ಟ್ಯ ಅವರು ಸವಿದಿಲ್ಲ ಅಂತಾ ಕಾಣುತ್ತೆ.

ಸ್ವಯಂ...'

"ಇವೆಲ್ಲಾ ಮಾತು ಇರಲಿ ಬಿಡು ಭವಿ. ನೀನು ಊಟ ಮಾಡು, ಬಿಡು. ಸ್ವಲ್ಪ ನಿನ್ನ ಗಂಡನ್ನ ಎಬ್ಬಿಸು. ನಾನು ಕೊಟ್ಟ ಮಾತ್ನಾರೂ ನಿಭಾಯಿಸುತ್ತೀನಿ."

ಭವಿ ಉದಾಸೀನಳಾಗಿಯೇ ನುಡಿದಳು "ಅವರು ಊಟ ಮಾಡಲ್ಲ." "ಭವಿ ಸತ್ಯವಾಗಿ ನಿನ್ನ ಅಸಭ್ಯ ವರ್ತನೆಗೆ ಇತಿಮಿತಿಯೆ ಇಲ್ಲವಾಗಿದೆ. ಎಲ್ಲದಕ್ಕೂ ಒಂದು ಮಿತಿ ಇರುತ್ತೆ. ಸಿಟ್ಟಿನಿಂದ ಇವತ್ತು ನೀನು ಅವರಿಗೆ ಊಟ ಕೊಡ್ದೆ ಇರಬಹುದು, ಆದರೆ ನಾಳೆ ಕೊಡಲೇ ಬೇಕಾಗುತ್ತಲ್ಲಾ. ಆಗ ?"

ಭವಿ ನಕ್ಕಳು.

ಜೋರಾಗಿ ನಕ್ಕಳು. ಗಹಗಹಿಸಿದಳು.

ನುಡಿದಳು "ಅವರು ನಾಳೇನೂ ಊಟ ಮಾಡಲ್ಲ ಅಮಲ್. ನಾಳೆ ಮಾತ್ರವಲ್ಲ ನಾಡಿದ್ದು ಅನಂತರ ಇನ್ನೆಂದೂ ಊಟ ಮಾಡಲ್ಲ."

ಕೋಪದ ಈ ಮಾತು ಸಾಧಾರಣವಾದದ್ದಾದರೂ ಅಮಲ್ ಭಯದಿಂದ ಕಂಪಿಸಿದ. ಅವಳ ನಗುವಿನ ಆ ಸ್ವರ ಕೇಳಿ ಅವಳಿಗೆ ಭೂತ ಹಿಡಿದಿದೆಯೆ ಅನಿಸಿತು.

ಆದಕ್ಕೆ ಆತ 'ಭವಿ' ಎಂದು ಕಿರುಚಿದ. ಈ ಆರ್ತನಾದಕ್ಕೆ ಭವಿ ಉತ್ತರಿಸಲಿಲ್ಲ. ನಿಂತಲ್ಲಿಂದ ಕದಲಲೂ ಇಲ್ಲ.

ನಿಶ್ಚಲವಾಗಿ ನಿಂತಿದ್ದ ಭವಿಯನ್ನೇ ಸ್ವಲ್ಪ ಹೊತ್ತು ನಿರುಕಿಸಿ ಅಮಲ್ ಒಂದು ಮೂರ್ಖ ಕೆಲಸ ಮಾಡಿದ. ಅವಳ ಹತ್ತಿರ ಸರಿದು ಬಾಗಿಲು ಹಿಡಿದಿದ್ದ ಭವಿಯ ಕೈಯನ್ನು ಎಳೆದು ಹಿಡಿದುಕೊಂಡು ಬಿಟ್ಟ "ಭವಿ ದೀಪ ಹಚ್ಚು."

ನಿಧಾನವಾಗಿ ಭವಿ ಕೈಯನ್ನು ಬಿಡಿಸಿಕೊಂಡಳು. ನುಡಿದಳು "ಏನೀಗ ?"

"ನಾನು ನೋಡ್ತೀನಿ."

"ಇಲ್ಲಿ ನೋಡೋ ಅಂಥದ್ದು ಏನಿದೆ ?"

"ಬಾಗಿಲಿಂದ ಸರಿ... ನಾನು ನೋಡ್ತೀನಿ."

ಭವಿ ಈಗಲೂ ಹಿಂದಕ್ಕೆ ಸರಿಯಲಿಲ್ಲ. ಅವಳ ಸ್ವರದಲ್ಲಿ ಕಠೋರತೆ ಮೂಡಿತ್ತು. "ನಿಜವಾಗಲೂ ನೋಡೋಕ್ಕೆ ಇಲ್ಲಿ ಏನೂ ಇಲ್ಲ."

"ಏನು ಅಮಲ್‌ಗೂ ಭೂತ ಹಿಡಿದಿದೆಯೇ ?"

ಅಮಲ್ ಏಕೆ ಹೀಗೆ ನೋಡುತ್ತಿದ್ದಾನೆ ? ಇಷ್ಟು ಹೊತ್ತೂ ತಾನು ಕೆಳಗೆ ಇಲ್ಲದಿದ್ದರೆ ಜನ ಏನೆಂದುಕೊಂಡಾರು ಎಂಬ ಪರಿಜ್ಞಾನವೂ ಬೇಡವೇ ? ಈತನ ಶೌರ್ಯದ ಇತಿಹಾಸ ಅಲ್ಲಿ ಯಾರಿಗೆ ಗೊತ್ತಿಲ್ಲ. ಬಹಳ ಹೊತ್ತಾದ ನಂತರ ಅಮಲ್‌ಗೆ ಅರಿವಾಯಿತು. ಕೆಳಗೆ ಒಂದು ಪ್ರಪಂಚ ಇದೆ ಎಂದು. ಈಗ ಆತ ಕೆಳಗೆ ಇಳಿಯಲೇಬೇಕಾಗಿತ್ತು. ಆದ್ದರಿಂದ ಆತ ನುಡಿದ "ಇದೇನು ಭವಿ ? ನೀನೇನು ಕಲ್ಲು ಮನುಷ್ಯಳೇ ?"

ಭವಿಯ ಅಂತರ್ಯದಲ್ಲೇ ಒಂದು ಯುದ್ಧ ನಡೆಯುತ್ತಿತ್ತು. ನುಡಿದಳು "ಇರಬಹುದು." "ಭವಿ, ನಾನು ಕೆಳಗೆ ಹೋಗಿ ಏನು ಹೇಳಲಿ ?"

"ಏನೂ ಹೇಳಬೇಕಾಗಿಲ್ಲ ಅಮಲ್, ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ.

ವಧುವರರು ಸಜ್ಜೆಮನೆಯಲ್ಲಿರಬಹುದು (ಬಂಗಾಳದಲ್ಲಿರುವ ಒಂದು ಪದ್ಧತಿ ಪ್ರಕಾರ ವಿವಾಹದ ನಂತರ ವಧು-ವರರನ್ನು ವಿಶ್ರಮಿಸಿಕೊಳ್ಳಲು ಒಂದು ಪ್ರತ್ಯೇಕ ಶಯ್ಯಾಗೃಹಕ್ಕೆ ಕಳುಹಿಸುತ್ತಾರೆ. ಇದನ್ನು ಸಜ್ಜೆಮನೆ ಎನ್ನುತ್ತಾರೆ. ಅಲ್ಲಿ ನಿಕಟ ಸಂಬಂಧಿಗಳು ಮಾತ್ರ ಇರುತ್ತಾರೆ. ಇವರೊಡನೆ ನಕ್ಕು ನಲಿಯುತ್ತಾರೆ). ಅವರ ಈ ರಾತ್ರಿ ವ್ಯರ್ಥವಾಗದಿರಲಿ."

"ಛವಿ ಇದನ್ನು ಹೇಳಲು ನಿನಗೆ ಹೇಗೆ ಸಾಧ್ಯವಾಗುತ್ತದೆ ?"

"ಹೇಳಲೇಬೇಕಲ್ಲಾ ಅಮಲ್. ಗಡಿರೇಖೆಯನ್ನು ನಾನು ಹೇಗೆ ಮರೆಯಲು ಸಾಧ್ಯ ? ಅವರ ಈ ಆಹ್ಲಾದ ಸಮಯದಲ್ಲಿ ನಾನು ನನ್ನ....."

"ರಾತ್ರಿ ಪೂರ್ತಿ ಹೀಗೆ ಇರಬಲ್ಲೆಯಾ ?"

"ಇಲ್ಲ ನಾನು ನಿದ್ದೆ ಮಾಡುತ್ತೇನೆ. ನನಗೆ ಒಳ್ಳೆಯ ನಿದ್ದೆ ಬರುತ್ತಿದೆ. ನಿದ್ದೆಯಿಂದ ಎಲ್ಲಿ ಬಿದ್ದು ಹೋಗ್ತಿನೋ ಅನ್ನಿಸುತ್ತಾ ಇದೆ."

ಇಷ್ಟು ಹೇಳಿದ ಛವಿ ದಿಢೀರನೆ ಬಾಗಿಲನ್ನು ಆತನ ಮುಖದ ಮೇಲೆ ಮುಚ್ಚಿಬಿಟ್ಟಳು.

ಒಳಗಿನಿಂದ ಚಿಲುಕ ಹಾಕುವ ಶಬ್ದ ಕೇಳಿಬಂತು.

ಹಾ ! ಬಾಗಿಲನ್ನು ಬಂಧಿಸದೆ ಛವಿ ತನ್ನ ಅಂತರ್ಯದಲ್ಲಿ ಯುದ್ಧ ಮಾಡಲು ಅಸಮರ್ಥಳಾಗಿದ್ದಳು. ಸತೀನಾಥನ ಮಾತೇ ಈಗ ಅವಳಿಗೆ ಸರಿ ಕಾಣುತಿತ್ತು. ಎಲ್ಲಾದಕ್ಕೂ ಒಂದು ಗಡಿ ಇರುತ್ತದೆ. ಇದು ಇರಲೇಬೇಕಾದ್ದು.

ಕೆಲಗಂಟೆಗಳ ಕಾಲ ಅಂಧಕಾರದಲ್ಲಿ ಕಳೆದರೆ ಛವಿ ಮತ್ತೆ ಧೈರ್ಯ ಕೂಡಿಸಿಕೊಳ್ಳಲು ಸಾಧ್ಯ. ನಾಳೆ ಬೆಳಿಗ್ಗೆ ಅವಳು ಸ್ವಾಭಾವಿಕವಾಗಿ ಕೆಳಗಿಳಿದು ಬಂದು ಸ್ವಾಭಾವಿಕ ಸ್ವರದಲ್ಲಿ ಹೇಳಲು ಶಕ್ತಳಾಗುತ್ತಾಳೆ. "ನಿನ್ನೆಯ ಮದುವೆಯ ಗಡಿಬಿಡಿಯ ಮಧ್ಯೆ ನಾನು ನಿಮ್ಮನ್ನು ವ್ಯಾಕುಲಗೊಳಿಸಲು ಇಚ್ಛಿಸಲಿಲ್ಲ. ಈಗ ಇನ್ನಷ್ಟು ವಿಲಂಬ ಮಾಡುವುದು ಸರಿಯಲ್ಲ. ನೀವೇ ಈಗ ಹೋಗಿ ಒಮ್ಮೆ ನೋಡಿ ಬನ್ನಿರಿ. ಏನು ಬೇಕೋ ಮಾಡಿ. ಮುಂದಿನದನ್ನು ಮಾಡಬೇಕಾದೋರು ನೀವೇ ತಾನೇ."

# ಮೋಸಗಾರ್ತಿ

*ಸುಬೋಧ್ ಘೋಷ್*

ಸನಾತನ್ ಮತ್ತು ಅವನ ಮಗಳು ಸುಧಾ, ತಂದೆಯಂತೆಯೇ ಮಗಳು. ಒಂದಾದ ನಂತರ ಒಂದು ವಿಚಿತ್ರ ಘಟನೆಗಳು ಜರುಗಿದವು. ಈ ಘಟನೆಯಿಂದಾದ ವೇದನೆಯಿಂದ ತಂದೆಯ ಹೃದಯ ಹೇಗೆ ಸಿಡಿದು ಹೋಯಿತೋ ಹಾಗೆಯೇ ಮಗಳೂ ಸಹ ದುಃಖದಿಂದ ಮುಖ ಎತ್ತದಾಗಿದ್ದಳು. ಸೆರಗಿನಿಂದ ಮುಖ ಮುಚ್ಚಿಕೊಂಡು ಕುಸುಕುಸು ಅಳುತ್ತಿದ್ದಳು. ಈ ದೃಶ್ಯವನ್ನು ನೋಡುತ್ತ ಹತ್ತಿರ ನಿತವರ ಕಣ್ಣು ತೇವಗೊಳ್ಳುತ್ತಿದ್ದವು. ನಿಟ್ಟುಸಿರುಬಿಡುತ್ತಿದ್ದರು. ಆಹ್ ! ನಿಜವಾಗಿ ಇರು ದುಃಖದ ವಿಷಯ. ಒಬ್ಬಳೇ ಮಗಳು, ದುಃಖ ಆಗುವುದು ಸಹಜ. ಇವಳನ್ನು ಬಿಟ್ಟು ಆತನಿಗೆ ಮತ್ತಾರೂ ಇಲ್ಲ, ಇಂತಹ ಹುಡುಗಿಯನ್ನು ಬೀಳ್ಕೊಡುವಾಗ ಹೃದಯ ಬಿರಿಯುವುದು ಸಹಜವೇ.

ಸುಧಾಳ ಮದುವೆ ಆದ ಮಾರನೆ ದಿನ ಗಂಡ ತನ್ನ ಪರಿವಾರದೊಡನೆ ಊರಿಗೆ ಹಿಂತಿರುಗಲು ಸಿದ್ಧನಾಗಿ ನಿಂತುಕೊಂಡಾಗ ಸನಾತನ್ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದ. ಸುಧಾ ಸಹ ಅಳ ಹತ್ತಿದಳು.

ಒಂದು ತಿಂಗಳ ನಂತರ ಬೀದಿಯ ಜನರಿಗೆ ಹಾಗೂ ವರನಿಗೆ ಅರ್ಥವಾಗಿ ಹೋಯಿತು. ಗಾದೆ ಸತ್ಯ, ತಂದೆಯಂತೆಯೇ ಮಗಳು. ಸನಾತನ್ ಎಷ್ಟು ಚತುರನಾಗಿದ್ದನೋ ಅದಕ್ಕಿಂತ ಹೆಚ್ಚು ಚತುರಳು ಅವನ ಮಗಳು ಸುಧಾ.

ಪೋಲೀಸ್ ಸಹ ಇದನ್ನೇ ಹೇಳುತ್ತಿದ್ದರು. 'ತಂದೆಯಂತೆಯೇ ಮಗಳು'. ಈಗಿನ ಘಟನೆಯನ್ನು ಸೇರಿಸಿಕೊಂಡರೆ ಇದು ಮೂರನೆಯದು. ಇಂತಹುದೇ ಮೊದಲನೆ ಘಟನೆ ತಾರಕೇಶ್ವರದಲ್ಲಿ ನಡೆದಿದ್ದರೆ ಎರಡನೇ ಘಟನೆ ಬಶೀರ್ ಹಾಟ್‌ನಲ್ಲಿ ಜರುಗಿತ್ತು. ಎರಡು ತಿಂಗಳಲ್ಲೇ ಎರಡು ಕೇಸುಗಳು. ಇದು ಮೂರನೆಯದು. ಈ ಮೂರು ಘಟನೆಗಳ ಹಿನ್ನೆಲೆಯಲ್ಲೂ ಈ ತಂದೆ ಮಗಳ ಕೈವಾಡವೇ ಇದ್ದುದು. ಜನರನ್ನು ವಂಚಿಸುವುದು ಇವರ ವೃತ್ತಿಯಾಗಿತ್ತು.

ಭಾಟ್‌ಪಾಡಾ ಮೊಹಲ್ಲಾದಲ್ಲಿ ಮಾರುಕಟ್ಟೆಯ ಹತ್ತಿರದ ಒಂದು ಗಲ್ಲಿಯಲ್ಲಿನ ಒಂದು ಚಿಕ್ಕ ಮನೆಯ ಬೀಗವನ್ನು ಪೊಲೀಸರು ಒಡೆದರು. ಆದರೆ ಅಲ್ಲಿ ಅವರಿಗೆ ಎಳ್ಳಷ್ಟೂ ಏನೂ ಸಿಗಲಿಲ್ಲ. ಸನಾತನ್ ಮತ್ತು ಸುಧಾ ತಂದೆ ಮಗಳು ಈ ವಿಚಿತ್ರ

ಆಟ ಆಡಿ ಎಲ್ಲಿ ಹೊರಟು ಹೋದರೋ ಯಾರಿಗೂ ತಿಳಿಯದು. ಮೊಹಲ್ಲೆಯ ಜನ ಒಂದು ತಿಂಗಳ ಹಿಂದೆ ತಂದೆ ಮಗಳ ದುಃಖದಲ್ಲಿ ಸಹಭಾಗಿಗಳಾಗಿ ಅತ್ತಿದ್ದರು. ಈಗ ಅದನ್ನು ನೆನೆದು ಅವರಿಗೆ ನಾಚಿಕೆ ಆಗುತ್ತದೆ. ವಾಸ್ತವವಾಗಿ ಈ ಪ್ರಪಂಚವೇ ಒಂದು ಮೃಗಾಲಯಕ್ಕೆ ಸಮಾನ. ಇಲ್ಲಿ ಏನಿಲ್ಲದಿರುವುದಿಲ್ಲ! ಯಾರೋ ನುಡಿದರು "ಮೃಗಾಲಯದಲ್ಲೂ ಇಂತಹ ಕುತ್ಸಿತ ಘಟನೆ ಘಟಿಸುವುದಿಲ್ಲ. ಇದೆಲ್ಲಾ ಮನುಷ್ಯರ ಲೋಕದಲ್ಲಿ ಮಾತ್ರ ಸಧ್ಯ. ಮತ್ತೊಬ್ಬರು ನುಡಿದರು, ಇದು ನಿಜವಾಗಿ ನಾವೆಲ್ಲಾ ನಾಚಿಕೆಪಡುವ ವಿಷಯ. ನಮ್ಮ ಕಣ್ಣೆದುರಿಗೇ, ನಮ್ಮ ಮೊಹಲ್ಲೆಯಲ್ಲೆ ಇಂತಹ ವಿಚಿತ್ರ ಘಟನೆ ಜರುಗಿದೆ. ಇದು ಆಶ್ಚರ್ಯದ ಸಂಗತಿ. ಎಲ್ಲಿಂದಲೋ ಬಂದ ಈ ತಂದೆ-ಮಗಳು ಕೆಲವೇ ದಿನಗಳಲ್ಲಿ ಮೊಹಲ್ಲೆಯ ಜನರನ್ನೆಲ್ಲಾ ಬೇವಕೂಫರನ್ನಾಗಿ ಮಾಡಿ ಜಾರಿಹೋದರು. ಈ ಬಗ್ಗೆ ಯಾರಿಗೂ ಅನುಮಾನವೇ ಬಂದಿರಲಿಲ್ಲ."

ಹೌದು, ಯಾರಿಗೂ ಅನುಮಾನ ಬಂದಿರಲಿಲ್ಲ. ಈ ತರಹದ ಅಳುವಿನ ಹಿಂದೆ ಚೆನ್ನಾಗಿ ನಿಯೋಜಿಸಿದ ಒಂದು ಮೋಸದ ನಗುವಿರುತ್ತದೆ. ಇದು ಮೊಹಲ್ಲೆಯ ಜನರು, ಮೆರವಣಿಗೆಯವರು ಮತ್ತು ವರ, ಯಾರಿಗೂ ಗೊತ್ತಾಗಿರಲಿಲ್ಲ. ಇದನ್ನು ತಿಳಿಯುವುದು ತಾನೆ ಹೇಗೆ ಸಾಧ್ಯ? ತಂದೆ ಮಗಳ ಆ ದಿನದ ಅಳುವನ್ನು ನೆನೆಸಿಕೊಂಡರೆ ಇದರ ಹಿನ್ನೆಲೆಯಲ್ಲಿ ಮೋಸ ಇದೆ ಎಂದು ಯಾರಿಗೂ ಅನ್ನಿಸುತ್ತಲೇ ಇರಲಿಲ್ಲ. ಮತ್ತೇನೋ ವಿಷಯವಿರಬೇಕು ಎಂದೇ ಅನಿಸುತ್ತಿತ್ತು.

ಪೋಲೀಸ್ ತಿಳಿಸಿದರು "ಮತ್ತೇನೂ ವಿಷಯವಿಲ್ಲ, ಇವರಿಬ್ಬರೂ ತಂದೆ ಮಗಳು ಅಲ್ಲ. ಹೊಸ ಹೊಸ ಜಾಗಕ್ಕೆ ಹೋಗಿ ಹೊಸ ಹೊಸ ಹೆಸರು ಧರಿಸಿ ಕೆಲದಿನ ಇರುತ್ತಾರೆ. ಅನಂತರವೇ ಈ ತರಹದ ಘಟನೆ ಜರುಗುತ್ತದೆ. ಅನಂತರ ಇಬ್ಬರೂ ಕಾಣೆಯಾಗುತ್ತಾರೆ."

ಮೊಹಲ್ಲೆಯ ಜನ ದುಃಖ ಹಾಗೂ ನಾಚಿಕೆಗೊಂಡ ಮುಖದಿಂದ, ಯಾರು ಒಂದು ತಿಂಗಳ ಹಿಂದೆ ತಲೆಗೆ ಪೇಟ ಸುತ್ತಿಕೊಂಡು, ಒಬ್ಬ ಬಡಹುಡುಗಿಯ ಮದುವೆ ಆಗಿ ಉದ್ಧಾರ ಮಾಡಿದ್ದನೋ, ಆ ಮನುಷ್ಯನನ್ನೇ ನೋಡುತ್ತಿರುತ್ತಾರೆ. ಮೊಹಲ್ಲೆಯ ಕೆಲ ಹುಡುಗರಂತೂ ಈ ಘಟನೆಯ ಬಗ್ಗೆ ಗೇಲಿ ಸಹ ಮಾಡುತ್ತಾರೆ.

ವರ ಮಹಾಶಯ ಸ್ವಲ್ಪ ವಯಸ್ಸಾದವನೇ ಆಗಿರುತ್ತಾನೆ. ಬಹುಶಃ ನಲವತ್ತೈದು ವರ್ಷಕ್ಕೆ ಮೇಲ್ಪಟ್ಟು ಆಗಿದೆ. ನೈಹಾಟಿಯಲ್ಲಿ ಈತನಿಗೆ ಬಟ್ಟೆಯ ಅಂಗಡಿ ಇತ್ತು. ಮೊದಲನೆ ಹೆಂಡತಿ ಸತ್ತು ಹೋಗಿದ್ದಳು. ಮಕ್ಕಳು ಮರಿ ಇರಲಿಲ್ಲ, ವ್ಯವಸಾಯ ಸಹ ಮಾಡುತ್ತಿದ್ದ. ಎರಡನೆಯ ಮದುವೆಯ ಆಸೆಯೂ ಇರಲಿಲ್ಲ. ಅದಕ್ಕೆ ಈ ಬಗ್ಗೆ ಯಾವ ಏರ್ಪಾಡೂ ಮಾಡಿರಲಿಲ್ಲ. ಸನಾತನ್ ಬಾಬುವಿನ ಪರಿಚಯ ಆದಮೇಲೆ, ಅವರ ಬಡತನ ಅರಿವಾದಾಗ ಇವರ ಜೀವನದಲ್ಲೂ ಸಂಸಾರ ಸುಖದ ಸಿಹಿ ನಗುವನ್ನು ಅನುಭವಿಸುವ ಆಸೆ ಜನಿಸಿತು. ಅದೇ ಗಲ್ಲಿಯ, ಅದೇ ಮನೆಯಲ್ಲಿ ಸನಾತನ್‌ಬಾಬುವಿನ ಆಹ್ವಾನದ ಮೇಲೆ ಒಂದು ದಿನ ಊಟಕ್ಕೆ ಹೋದ. ಅಲ್ಲಿ ಅದೇ ದಿನ ಆತ ಸನಾತನ ಬಾಬುವಿನ ಮಗಳ ಕನ್ಯಾ ಸೆರೆ ಬಿಡಿಸಲು ನಿಶ್ಚಯಿಸಿದ. ತನ್ನದೇ ಜಾತಿಯ, ಒಂದು ಬಡ ಕುಟುಂಬದಲ್ಲಿ ಇಷ್ಟು ಸುಂದರ ಹುಡುಗಿಯೊಬ್ಬಳು

ಕತ್ತಲೆ ಕೋಣೆಯಲ್ಲಿ ಜೀವ ತಳ್ಳುತ್ತಿರುವುದು ಕಂಡು ನೈಹಾಟಿಯ ಈ ಮನುಷ್ಯನಿಗೆ ಬಹು ದುಃಖವಾಯಿತು. ಗಣೇಶ ವಸ್ತ್ರಾಲಯದ ಈ ಮಾಲೀಕ, ಹುಡುಗಿಯ ತಂದೆ ಸನಾತನ ಬಾಬುವಿಗೆ ನಗದು ಐದುನೂರು ಹಣ ನೀಡಿ, ದಾನಧರ್ಮಕ್ಕೆ ಬೇರೆ ಹಣ ಇತ್ತ. ಹುಡುಗಿಗಾಗಿ ಐದು ತೊಲ ತೂಕದ ಒಡವೆಗಳನ್ನು ಕೊಟ್ಟು, ಆತನ ಸಮ್ಮತಿಯ ಮೇರೆಗೆ ಮದುವೆಗೂ ಒಂದು ಶುಭಮುಹೂರ್ತವನ್ನು ನಿಶ್ಚಯಿಸಿದ. ಪಾಪ ಬಡಪಾಯಿ! ಮುಖದ ಸೆರಗು ಹೊದ್ದ ಸುಂದರಿ ಸುಧಾಳ ಮುಖವನ್ನು ನೋಡಿ ಕೃತಾರ್ಥನಾಗಿ ಒಂದು ದಿನ ಬೆಳಗ್ಗೆ ಅದೇ ಗಲ್ಲಿಯಿಂದ ಬೀಳ್ಕೊಡಿಗೆ ಪಡೆದ. ಅದೇ ಮನುಷ್ಯ ಇಂದು ಪೋಲೀಸ್ ಕರೆತಂದು ಅದೇ ಗಲ್ಲಿಗೆ ಬಂದಿದ್ದಾನೆ. ಮದುವೆ ಆದ ಏಳು ದಿನಗಳ ನಂತರ ಸನಾತನ್ ಬಾಬು ನೈಹಾಟಿಗೆ ಹೋಗಿ ಸುಧಾಳನ್ನು ಕರೆದುಕೊಂಡು ಇದೇ ವಿಳಾಸಕ್ಕೆ ಹಿಂತಿರುಗಿದ್ದ. ಇದಾದ ನಂತರ ಎಷ್ಟು ದಿನ ಅವರು ಇಲ್ಲಿ ನೆಲೆಸಿದ್ದರು ಸರಿಯಾಗಿ ಯಾರಿಗೂ ತಿಳಿಯದು. ಕಾಗದ ಕಳುಹಿಸಿಯೂ ಉತ್ತರ ಬಾರದೆ ಇದ್ದಾಗ ವರ ಮಹಾಶಯ ತಾನೇ ಅಲ್ಲಿಗೆ ದಯಮಾಡಿಸಿದ. ಮನೆಯ ಬಾಗಿಲು ಹಾಕಿರುವುದು ಕಂಡು ಬೆಚ್ಚಿದ. ಪೋಲೀಸ್‌ಗೆ ದೂರು ಕೊಟ್ಟ. ಪೋಲೀಸ್ ಬಂದು ನುಡಿದರು "ಹೋ! ಈ ಘಟನೆಯೂ ಸೇರಿ ಇದು ಮೂರನೆಯದು. ಇದೇ ತಂದೆ ಹಿಂದೆ ಮಗಳ ಎರಡು ಮದುವೆ ಮಾಡಿದ್ದಾನೆ. ಮದುವೆ ಆದ ಕೆಲದಿನಗಳಲ್ಲಿ ಮಗಳೊಡನೆ ಇಬ್ಬರೂ ನಾಪತ್ತೆ. ಅವರ ನಿಜ ಹೆಸರು ಪೋಲೀಸರಿಗೂ ತಿಳಿಯದು."

ತಾರಕೇಶ್ವರದಲ್ಲಿ ಇವರಿಬ್ಬರೂ ಬ್ರಾಹ್ಮಣರಾಗಿದ್ದರು. ಬಶೀರ್‌ಹಾಟ್‌ನಲ್ಲಿದ್ದಾಗ ಕಾಯಸ್ಥರಾಗಿದ್ದರು. ಭಾಟ್‌ಪಾಡಾಕ್ಕೆ ಬಂದು ಅವರಿಬ್ಬರೂ ವೈದ್ಯರಾಗಿದ್ದರು. ತಾರಕೇಶ್ವರದಲ್ಲಿ ಪ್ರಸನ್ನ ಚಕ್ರವರ್ತಿ ಹಾಗೂ ಆತನ ಮಗಳು ಸುನಯನಾಳ ವಿರುದ್ಧ ಒಂದು ಮೊಕದ್ದಮೆ ದಾಖಲಾಗಿತ್ತು. ಸದಾನಂದ ಘೋಷ್ ಹಾಗೂ ಆತನ ಮಗಳು ಮಾಧವಿ ಬಶೀರ್ ಫಾಲ್‌ನಲ್ಲಿ ಜರುಗಿದ ಘಟನೆಯ ಮುಖ್ಯ ವ್ಯಕ್ತಿಗಳಾಗಿದ್ದರು. ಈಗ ಭಾಟ್‌ಪಾಡಾದಲ್ಲಿ, ಈ ಗಲ್ಲಿಯಲ್ಲಿ, ಸನಾತನ್ ಸೇನ್ ಮತ್ತು ಆತನ ಮಗಳು ಸುಧಾಸೆನ್ ಹೆಸರಿನ ಒಬ್ಬ ಅದ್ಭುತ ತಂದೆ ಮತ್ತು ಆತನ ವಿಚಿತ್ರ ಮಗಳು ತಮ್ಮ ವಿಶ್ವಾಸಘಾತದ ನೆನಪನ್ನು ಬಿಟ್ಟು ಕಾಣೆಯಾಗಿದ್ದಾರೆ. ಮೂರು ನಿಸ್ಪೃಹ ಹಾಗೂ ವಿಶ್ವಾಸಿ ಮನುಷ್ಯರ ಜೀವನದಲ್ಲಿ ಸುಳ್ಳು ಮದುವೆ ಮತ್ತು ಸುಳ್ಳು ಸೌಭಾಗ್ಯ ರಾತ್ರಿಯ ಢೊಂಗು ರಚಿಸಿ ನಿರ್ದಯತೆಯಿಂದ ಒಬ್ಬ ಕಳ್ಳ, ಇನ್ನೊಬ್ಬ ಕಳ್ಳಿ, ಇವರಿಗೆ ಮೋಸ ಮಾಡಿ ಜನಗಳ ಮಧ್ಯೆ ಎಲ್ಲೊ ತಲೆ ಮರೆಸಿಕೊಂಡು ಬಿಟ್ಟಿದ್ದಾರೆ. ಇವರ ಪತ್ತೆ ಯಾರಿಗೂ ಆಗಿಲ್ಲ. ತಂದೆಯಂತೆ ಮಗಳು ಅಥವಾ ಮಗಳಿಗೆ ತಕ್ಕ ತಂದೆ. ಏನು ಬೇಕಾದರೂ ತಿಳಿಯಬಹುದು. ಏನನ್ನೋ ಯೋಚಿಸುತ್ತಾ ಪೋಲೀಸ್‌ನವನೊಬ್ಬ ಭಾಟ್‌ಪಾಡಾದ ಗಲ್ಲಿಯಲ್ಲಿ ಹಾದುಹೋದ. ಮೊಹಲ್ಲಾದ ಜನರೂ ಬೆವಕೂಫರಂತೆ ಸುಮ್ಮನೆ ಯೋಚಿಸುತ್ತಾ ನಿಂತಿದ್ದರು. ಗಣೇಶ ವಸ್ತ್ರಾಲಯದ ಯಜಮಾನ ಒಬ್ಬ ಶಾಂತ, ಸುಂದರ ಮುಖದ ನಗುವ ಮನುಷ್ಯನನ್ನು ನೆನೆದು ದುಃಖ ಹಾಗೂ ವಿಸ್ಮಯದಿಂದ ತಟಪಟಿಸುತ್ತಿದ್ದ. ಓಹ್!

ಹೀಗೂ ಜನರು ಮೋಸಹೋಗುತ್ತಾರೆ!!

ಭಾಟ್‌ಪಾಡಾದ ಜನರಿಗೆ ಏನೂ ಗೊತ್ತಿರಲಿಲ್ಲ. ಪೋಲೀಸರಿಗೆ ಹೀಗಾಗಬಹುದೆಂಬ ನಿರೀಕ್ಷೆಯೇ ಇರಲಿಲ್ಲ. ಗಣೇಶ ವಸ್ತ್ರಾಲಯದ ಮಾಲೀಕ ಈ ವಿಷಯದ ಬಗ್ಗೆ ಏನೂ ಕಲ್ಪನೆಯನ್ನೇ ಮಾಡಲಾರದಾಗಿದ್ದ. ಇದೇ ಸಮಯದಲ್ಲಿ ರಾಣಾಘಾಟ್‌ನ ಒಂದು ಬೀದಿಯ ಒಂದು ಚಿಕ್ಕ ಮನೆಯ ಕಿಟಕಿಯೊಂದರಿಂದ ಹೊರಗೆ ದೃಷ್ಟಿ ಹರಿಸಿ ಒಬ್ಬಾಕೆ ತನ್ನ ಭಾಗ್ಯವನ್ನು ಇನ್ನೊಬ್ಬನಲ್ಲಿ ಸಮರ್ಪಿಸಿಕೊಳ್ಳುವ ಉತ್ಸಾಹದಿಂದ ಕಣ್ಣಿನಲ್ಲಿ ಆನಂದವನ್ನು ತುಳುಕಿಸಿದ್ದಳು. ವಿಜಯ ಬಾಬುವಿನ ತರುಣಿ ಮಗಳು ಕರವಿ. ಇವಳು ರಮೇಶ್ ಎಂಬ ಹೆಸರಿನ ಯುವಕನೊಡನೆ ಮಾತನಾಡುತ್ತಿದ್ದಳು.

ಕಿಟಕಿಯ ಹತ್ತಿರ ನಿಂತು ಕರವಿ ಸ್ವಾಭಿಮಾನ ತುಂಬಿದ ಸ್ವರದಲ್ಲಿ ಮೆಲ್ಲಗೆ ನುಡಿದಳು "ತಾವು ಪ್ರತಿದಿನವೂ ಬರುವುದೇಕೆ?"

ರಮೇಶ ಸಂತೋಷದಿಂದ ಕುಣಿದಾಡಿ ನುಡಿದ "ಯಾರೊ ಒಬ್ಬ ಜ್ಯೋತಿಷಿ ನನ್ನ ಕೈ ನೋಡಿ ಏನು ಹೇಳಿದ್ದಾನೆ ಗೊತ್ತಾ? ನನ್ನ ಹೆಂಡತಿ ಆಗುವವಳ ಹೆಸರಿನ ಮೊದಲ ಅಕ್ಷರ 'ಕ' ಅಂತೆ."

ಕರವಿ ನಗಲು ತೊಡಗಿದಳು. ನುಡಿದಳು "ನೀವು ಹೀಗೆ ಪ್ರತಿದಿನವೂ ಬಂದು ಕಿಟಕಿಯ ಬಳಿ ನಿಂತರೆ ನನಗೆ ಖಂಡಿತಾ ಕೆಟ್ಟ ಹೆಸರು ಬರದೇ ಇರದು."

ಸೈಕಲ್ ಹಿಡಿದು, ಅದಕ್ಕೆ ಒರಗಿ ನಿಂತು ರಮೇಶ್ ನುಡಿದ "ಒಂದೇ ಒಂದಿನವೂ ನಾನು ಇರ್ಲಾರೆ ಕರವಿ. ನೀನು ನನ್ನನ್ನು ಪ್ರಥಮ ಬಾರಿಗೆ ನೋಡಿದ ದಿನದಿಂದ ನೀನೇ ನನ್ನ ಸಮಸ್ತ ಶಾಂತಿ ಹಾಗೂ ಸುಖವಾಗಿದ್ದಿ."

ಕರವಿ ನುಡಿದಳು "ಇದು ಐಶ್ವರ್ಯವಂತರ ಯೋಚನೆಯ ಧಾಟಿಯಲ್ಲಿದೆ. ಈಗೇನೊ ಇಲ್ಲಿಗೆ ಬರುವುದು ನಿಮಗೆ ಚೆನ್ನಾಗಿ ಕಾಣಬಹುದು. ಆದರೆ ಕೆಲದಿನಗಳ ನಂತರ ಮರೆತೂ ನೀವು ನನ್ನನ್ನು ನೆನೆಯಲಾರಿರಿ. ಆಗ ಬರಲೇ ಇಚ್ಛಿಸುವುದಿಲ್ಲ. ಹಾಗಿದ್ದಾಗ ಈ ಸುಳ್ಳು ಸುಳ್ಳು..."

ರಮೇಶ ನುಡಿದ "ನಾನೇನು ಹಣವಂತನಲ್ಲ, ಹಣವಂತರ ಯೋಚನಾಲಹರಿಯನ್ನೂ ನಾನು ಹೊಂದಿಲ್ಲ. ನಾನು ನನ್ನ ಅಂತರಾತ್ಮದ ಕೂಗು ಕೇಳಿಕೊಂಡು ಇಲ್ಲಿಗೆ ಬರುತ್ತಿದ್ದೇನೆ."

ಕರವಿ ನುಡಿದಳು "ಇದೆಲ್ಲಾ ಸುಳ್ಳು. ನೀವು ಸುಮ್ಮನೆ ಹೇಳುತ್ತಾ ಇದ್ದೀರಿ."

ರಮೇಶ್: "ಸುಮ್ಮನೆ."

ಕರವಿ: "ನೀವು ಏನು ಕೆಲಸ ಮಾಡುತ್ತಿರುವಿರಿ?"

ರಮೇಶ್: "ನಾನೊಬ್ಬ ಕಲಾವಿದ... ಆರ್ಟಿಸ್ಟ್."

ಕರವಿ: "ಅಂದರೆ ಇದರ ಅರ್ಥ?"

ರಮೇಶ್: "ನೀನು ಯಾವಾಗಲಾದರೂ ಕಲ್ಕತ್ತಾದಲ್ಲಿ ಇದ್ದೆಯಾ?"

ಕರವಿ: "ಹೂಂ.... ಕೆಲದಿನ ಇದ್ದೆ."

ರಮೇಶ: "ಸಿನಿಮಾ ಗಿನಿಮಾ ನೋಡಿದ್ದೀಯಾ?"

ಕರವಿ: "ಹೂಂ, ಒಂದೆರಡು ಬಾರಿ."

ರಮೇಶ್: "ಸಿನಿಮಾ ಹಾಲ್‌ಗಳ ಗೋಡೆಯ ಮೇಲೆ ದೊಡ್ಡ ದೊಡ್ಡ ಬಣ್ಣ ಬಣ್ಣದ ಫೋಟೋಗಳನ್ನು ತಗುಲಿ ಹಾಕಿರುತ್ತಾರೆ. ಅವುಗಳತ್ತ ನಿನ್ನ ಗಮನ ಹರಿದಿದೆಯೆ ?"

ಕರವಿ: "ಹೂಂ."

ರಮೇಶ್: "ನಾನು ಆ ಚಿತ್ರಗಳನ್ನು ತಯಾರಿಸುತ್ತೇನೆ."

ಕರವಿ ಪ್ರಶ್ನಿಸಿದಳು "ಇದಕ್ಕಾಗಿ ನಿಮಗೆ ಹಣ ಸಿಗುತ್ತದೆಯೇ ?"

ರಮೇಶ್: "ಹೌದು ನಿಜವಾಗಿ ಸಿಗುತ್ತೆ, ಇದೇ ನನ್ನ ವೃತ್ತಿ. ಈಶ್ವರನ ದಯದಿಂದ ಕೆಲಸ ಚೆನ್ನಾಗಿ ನಡೆದಿದೆ."

ಕರವಿ ಪ್ರಶ್ನಿಸಿದಳು "ತಿಂಗಳಿಗೆ ಐವತ್ತು ರೂಪಾಯಿ ಸಿಗುತ್ತದೆಯೇ ?"

ರಮೇಶ ನಗುತ್ತಾ ನುಡಿದ "ಖಂಡಿತಾ."

ಕರವಿ: "ಎಷ್ಟು ಸಿಗುತ್ತೆ ಸರಿಯಾಗಿ ಹೇಳಿ."

ರಮೇಶ್: "ಎಷ್ಟೇ ಸಿಗಲಿ, ನಿನ್ನನ್ನಂತೂ ಸುಖವಾಗಿ ಇಡಬಲ್ಲೆ."

ಕರವಿ ಮುಖ ಆಗಲಿಸಿ ನುಡಿದಳು "ಹಾ....ಹಾ... ಬಡಹುಡುಗೀನ ಸುಖವಾಗಿಡಲು ವರ್ಷಕ್ಕೆರಡು ಸೀರೆ, ಪ್ರತಿದಿನ ಸಂಜೆ ಊಟಕ್ಕೆ ಎರಡು ಹಿಡಿ ಅಕ್ಕಿ ತಾನೇ ಬೇಕಾಗಿರುವುದು, ಇದಕ್ಕೆ ಹೆಚ್ಚಿಗೆ ಇನ್ನೇನು ಬೇಕಾಗಿದೆ ?"

ರಮೇಶ್ ಗಾಬರಿಗೊಂಡು ನುಡಿದ "ಏಕೆ ಹೀಗೆ ಹೇಳುತ್ತಿ ? ನಾನು ವರ್ಷದಲ್ಲಿ ಒಂದು ಜೊತೆ ಪಂಚೆಯನ್ನು ಮಾತ್ರ ಧರಿಸುತ್ತೇನೆಯೇ ? ಸಂಜೆ ಎರಡು ಹಿಡಿ ಅಕ್ಕಿ ಮಾತ್ರ ತಿನ್ನುತ್ತೇನೆಯೇ ?

ಕರವಿ ನಗುತ್ತಾ ನುಡಿದಳು "ಹೋ ಹಾಗಾದ್ರೆ ಹೇಳಿ, ನಿಮ್ಮಲ್ಲಿ ಹಣಕಾಸು ಎಷ್ಟಿದೆ ?"

ರಮೇಶ್ ನುಡಿದ "ನಿನ್ನ ಪೂರ್ಣ ಸಿಂಗರಿಸಲು, ಮತ್ತೆ ನಿನಗೆ ಕಷ್ಟವಾಗದಂತೆ ಇಡಲು ಸಾಕಾಗುವಷ್ಟು ಹಣ ನನ್ನ ಬಳಿ ಇದೆ. ಇದಕ್ಕೆ ಹೆಚ್ಚಿಗೆ ನನ್ನ ಬಳಿ ಇಲ್ಲ."

ಎದುರಿಗೆ ಮಾರ್ವಾಡಿಯ ಭವ್ಯ ಮಹಲ್ ಕಾಣಿಸುತ್ತಿತ್ತು. ಅದರತ್ತ ಕೈ ತೋರಿಸುತ್ತಾ ರಮೇಶ್ ನುಡಿದ "ಅಷ್ಟು ಹಣ ನನ್ನತ್ರ ಇಲ್ಲ, ಕರವಿ, ನೀನೋ ಅಷ್ಟು ಐಶ್ವರ್ಯವಂತಳಲ್ಲಾ ಅದಕ್ಕೇ...."

ಕರವಿ ಪ್ರಶ್ನಿಸಿದಳು "ಮದ್ವೆ ಖರ್ಚಿಗೆ ಏನ್ಮಾಡ್ತೀರಿ ?"

ರಮೇಶ ಕೆಲಕಾಲ ಯೋಚಿಸಿದ. ಅನಂತರ ಖಿನ್ನನಾಗಿ ನುಡಿದ "ವಿಜಯ ಬಾಬುಗಳ ಹತ್ತಿರ ಏನೂ ಇಲ್ವೆ ?"

ಕರವಿಯ ಕಣ್ಣು ತುಂಬಿತು "ಇದ್ರೇನು ?" ಪ್ರಶ್ನಿಸಿದಳು.

ರಮೇಶ ಪ್ರಶ್ನಿಸಿದ "ಮದ್ವೆಗೆ ಹಣ ಎಷ್ಟು ಬೇಕಾಗಬಹುದು."

ಕರವಿ ನುಡಿದಳು "ನನಗೆ ಗೊತ್ತಿರುವ ಹಾಗೆ ಗೌರವಸ್ಥರು ಹೆಚ್ಚಿಗೆ ಏನೂ ಖರ್ಚು ಮಾಡದೆ ಈಶ್ವರನ ಹೆಸರು ಹೇಳಿಕೊಂಡು ಮದ್ವೆ ನಡೆಸಿದರೂ ಕೊನೇ ಪಕ್ಷ ಎರಡು ಸಾವಿರನಾದ್ರೂ ಬೇಕಾಗುತ್ತೆ."

ರಮೇಶ್ ವಿಸ್ಮಿತಗೊಂಡು "ಎರಡು ಸಾವಿರ!" ನುಡಿದ.

ಕರವಿಯ ಕಣ್ಣಿನಲ್ಲಿ ಶಂಕೆ ಹಾಗೂ ಕೋಪ ಒಮ್ಮೆಗೆ ಮೂಡಿದವು. "ಏನು ಯೋಚಿಸುತ್ತಿದ್ದೀರಿ. ಕೇವಲ ಎರಡು ಸಾವಿರ ಹಣವನ್ನೂ ನೀವು ಕೂಡಿಸಲಾರಿರಾ ?"

ಖಿನ್ನನಾಗಿ ರಮೇಶ ನುಡಿದ "ಕೂಡಿಸಬಲ್ಲೆ, ಅವಾಂತರ ಮಾಡಿದರೆ ಅಲ್ಲಿ, ಇಲ್ಲಿ ಒಂದು ಎರಡು ನೂರರಂತೆ ಹಣ ಕೂಡಿಸಬೇಕಾಗುತ್ತೆ. ಇದು ಬಿಟ್ಟರೆ ಮತ್ತೇನೂ ಉಪಾಯವೇ ಇಲ್ಲ."

ಕರವಿ ನುಡಿದಳು "ಹೋಗಲಿ ಸಾಲ ತಗೊಳ್ಳಿ, ಸಾಲ ಈಗಲ್ಲ ನಾಳೆ ತೀರಿಸಬಲ್ಲಿರಿ, ತಡಮಾಡಿದ್ರೆ...."

ಹೇಳುತ್ತಾ ಹೇಳುತ್ತಾ ಕರವಿ ಇದ್ದಕ್ಕಿದ್ದಂತೆಯೇ ಸುಮ್ಮನಾದಳು. ಪುನಃ ಅವಳ ಕಣ್ಣು ತುಂಬಿ ಬಂದವು.

ರಮೇಶ ಪ್ರಶ್ನಿಸಿದ "ಏನಾಯ್ತು ?"

ಕರವಿ ನುಡಿದಳು "ನಿಜವಾಗಿ ನೀವು ನನ್ನ ಪ್ರೀತಿಸ್ತೀರಾ ?"

ರಮೇಶ:"ಹೌದು ಕರವಿ."

ಕರವಿ: "ಹಾಗಿದ್ರೆ ಬೇಗ್ನೆ ಏರ್ಪಾಡು ಮಾಡಿ. ನಿಮ್ಮ ಕೈಲಿ ಸಾಧ್ಯವಾಗದೆ ಹೋದರೆ ಬಹುಶಃ ನಾನು ಸಾಯಬೇಕಾಗುತ್ತೆ."

ರಮೇಶ್ ವಿಚಲಿತಗೊಂಡು ನುಡಿದ "ನೀನು ಏನು ಹೇಳುತ್ತಾ ಇದ್ದಿ ?"

ಕರವಿ ನುಡಿದಳು "ನಾನು ಸರಿಯಾಗೇ ಹೇಳುತ್ತಾ ಇದ್ದೀನಿ. ವೈದ್ಯ ಬಾಟಿಯ ಎಂಬ ಒಬ್ಬ ವೃದ್ಧ ವಿಧುರನೊಡನೆ ನನ್ನ ಮದ್ವೆ ನಿಶ್ಚಯವಾಗಿದೆ. ಮದುವೆ ಖರ್ಚಿಗಾಗಿ ಅವರು ನನ್ನ ತಂದೆಗೆ ಮೂರು ಸಾವಿರ ಕೊಡುವುದಕ್ಕೆ ಸಿದ್ಧರಿದ್ದಾರೆ."

ಇದನ್ನು ಕೇಳಿ ಸೈಕಲ್ಲು ಹಿಡಿದಿದ್ದ ರಮೇಶ್‌ನ ಕೈ ಹಿಡಿತ ಸಡಿಲಗೊಂಡಿತು. ಅವನ ಕಣ್ಣುಗಳಲ್ಲಿ ಹಾಗೂ ಮುಖದಲ್ಲಿ ಒಮ್ಮೆಗೇ ಪ್ರತಿಜ್ಞೆಯ ದೃಢತೆ ಮೈ ತಳೆಯಿತು. ಕರವಿಯನ್ನು ದಿಟ್ಟಿಸುತ್ತಾ ಆತ ನುಡಿದ "ಕರವಿ, ಅದನ್ನು ನಾನು ಎಂದೂ ಆಗಗೊಡಲಾರೆ, ವಿಜಯ ಬಾಬೂ ಇದನ್ನು ಮಾಡಲು ಬಿಡಬೇಡ. ಆ ಮುದ್ಕನ ಹಣ ಅವರು ಮುಟ್ಟದೆ ಇರಲಿ."

ರಮೇಶ್ ಸೈಕಲ್ ಪೆಡಲ್ ಮೇಲೆ ಕಾಲಿರಿಸಿ ಕೂಗಿ ಹೇಳಿದ "ನಾನು ನಿನಗೆ ಮಾತು ಕೊಡುತ್ತಾ ಇದ್ದೀನಿ ಕರವಿ, ಮದ್ವೆಯ ಎಲ್ಲಾ ಖರ್ಚು ನಂದೇ."

"ಇನ್ನು ಹತ್ತು ದಿನಗಳ ಒಳಗೆ ನಾನು ನಿನ್ನ ಕರ್‌ಕೊಂಡು ಹೋಗುತ್ತೇನೆ" ಎಂದು ಮತ್ತೆ ಹೇಳಿ ರಮೇಶ್ ಹೊರಟುಹೋದ.

ರಾಣಾಘಾಟ್‌ನ ಆ ಸಣ್ಣ ಮನೆಯ ಅಂಗಳದಲ್ಲಿ ಒಂದು ಪುಟ್ಟ ಉತ್ಸವ ನಡೆಯಿತು. ಕೆಲವೇ ದಿನಗಳಲ್ಲಿ ಮೊಹಲ್ಲಾದ ಜನರು ವಿಜಯ ಬಾಬು ಎಂಬ ಹೆಸರಿನ ಬಡವ ಸಜ್ಜನ ಹಾಗೂ ಶಾಂತ ಸ್ವಭಾವದ ಸುಂದರ, ನಮ್ಮ ಆ ಹುಡುಗಿಯರ ವ್ಯವಹಾರದಿಂದ ತುಂಬಾ ಪ್ರಭಾವಿತರಾದರು. ವಿಜಯಬಾಬು ಮೊಹಲ್ಲಾದ ಜನರಿಗಾಗಿ ಒಂದು ಭೋಜನ ಕೂಟ ಏರ್ಪಡಿಸಲು ಇಚ್ಛಿಸಿದ. ಆದರೆ

ಅವರೇ ಅದನ್ನು ಬೇಡವೆಂದು ನಿಲ್ಲಿಸಿದರು. ಸುಮ್ಮಸುಮ್ಮನೆ ಖರ್ಚು ಮಾಡುವ ಅಗತ್ಯವಿಲ್ಲ. ತಮ್ಮಂಥ ಜನರಿಗೆ ಈ ಖರ್ಚು ಅಗತ್ಯವಿಲ್ಲದ್ದು ಎಂದರು.

ವಿಜಯಬಾಬು ಕೇವಲ ಎರಡೂವರೆ ಸಾವಿರ ರೂಪಾಯಿಗಳ ಒಡವೆಯಿಂದ ಆಕೆಯನ್ನು ಸಿಂಗರಿಸಿ ಉಳಿದ ಎಲ್ಲಾ ಶುಭಕಾರ್ಯಗಳನ್ನು ಅತಿ ಕಡಿಮೆ ಖರ್ಚಿನಲ್ಲಿ ಮುಗಿಸಿದ. ಪಾಪ, ಈ ಸಜ್ಜನ ತನ್ನ ಜೀವನದಲ್ಲಿ ಸಂಪಾದಿಸಿದ ಹಣವನ್ನೆಲ್ಲಾ ಖರ್ಚು ಮಾಡಿ ತನ್ನ ಮಗಳನ್ನು ಚಿನ್ನದ ಆಭರಣಗಳಿಂದ ಮದುವೆ ಮಾಡಿದ ಎಂದು ಮೊಹಲ್ಲಾದ ಜನರು ತಿಳಿದರು. ಹಾಗೆ ನೋಡಿದರೆ ಇಷ್ಟೆಲ್ಲಾ ಮಾಡುವ ಕಾರಣವೂ ಇರಲಿಲ್ಲ. ಗಂಡಿನ ಕಡೆಯವರು ಏನೊಂದನ್ನೂ ಕೇಳಿರಲಿಲ್ಲ. ಹೂಂ, ಏನಾದರಾಗಲಿ ವಿಜಯ ಬಾಬುವಿನ ಒಬ್ಬಳೇ ಮಗಳು. ಅವಳನ್ನು ಸಾಕುವುದರಲ್ಲೇ ಅವರು ಭಿಕ್ಷುಕರಾಗಿದ್ದರು. ಎಷ್ಟಾದರೂ ಅವಳು ಅವರ ಪ್ರೀತಿಪಾತ್ರ ಮಗಳು ತಾನೇ.

ರಮೇಶ್ ಇತ್ತಿದ್ದ ಹಣದಿಂದ ಕೊಂಡಿದ್ದ ಒಡವೆಗಳನ್ನು ಧರಿಸಿ ರಮೇಶನ ಹೆಂಡತಿ ಕರವಿ ಆತನ ಜೊತೆ ಹೊರಟು ನಿಂತಳು. ಅವಳನ್ನು ಬೀಳ್ಕೊಡುವಾಗ ಅದೇ ಕರುಣಾರ್ದ್ರ ದೃಶ್ಯ ಕಂಡುಬಂತು. ಒಮ್ಮೆ ತಾರಕೇಶ್ವರ್, ಇನ್ನೊಮ್ಮೆ ಬಾಶೀರ್ ಹಾಟ್, ಮತ್ತೊಮ್ಮೆ ಭಾಟ್‌ಪಾಡಾದ ಸಮಸ್ತ ಜನಗಳೂ ಇಂತಹುದೇ ದೃಶ್ಯ ನೋಡಿ ಕಣ್ಣೀರು ಮಿಡಿದಿದ್ದರು. ವಿಜಯ ಬಾಬು ಬಿಕ್ಕಿ ಬಿಕ್ಕಿ ಅಳಹತ್ತಿದರು. ಕರವಿ ಸಹ ಗೊಳೋ ಎಂದು ಅತ್ತಳು.

ರಾಣಾಘಾಟ್‌ನ ಮೊಹಲ್ಲಾದ ಜನರನ್ನು ದುಃಖಿತಗೊಳಿಸಿ ಕರವಿ ತನ್ನ ಗಂಡನ ಮನೆಗೆ ಹೊರಟು ನಿಂತಳು. ಅದೇ ದಿನ ಸಂಜೆ ಕಲ್ಕತ್ತೆಯ ಬಾಗ್ ಬಜಾರಿನ ಒಂದು ಗಲ್ಲಿಯ ಒಂದು ಕೊಠಡಿಯಲ್ಲಿ ಬಂದು ನಿಂತಳು. ರಮೇಶನ ಈ ನವ ವಿವಾಹಿತೆ ಪತ್ನಿ.

ಎರಡು ದಿನಗಳ ನಂತರ ಬಾಗ್ ಬಜಾರ್‌ನ ಈ ಪುಟ್ಟ ಮನೆ ಉತ್ಸವದ ವಿದ್ಯುತ್ ದೀಪಗಳಿಂದ ಕಂಗೊಳಿಸತೊಡಗಿತು. ಅಂದೇ ಸೌಭಾಗ್ಯ ರಾತ್ರಿ. ನಾಲ್ಕು ಮೂಲೆಗಳಲ್ಲೂ ಸಂತೋಷ ಹಾಗೂ ಸಂಭ್ರಮದ ಸಾಮೂಹಿಕ ಕೋಲಾಹಲ ಕೇಳಿ ಬರುತ್ತಿತ್ತು. ಈ ಜಗತ್ತಿನಲ್ಲಿ ರಮೇಶನಿಗೆ ಆತ್ಮೀಯರಾಗಿದ್ದವರೆಲ್ಲಾ ಆತನ ಜೀವನದ ಈ ಸಂಭ್ರಮದ ರಾತ್ರಿಯು ಸಾರ್ಥಕವಾಗಲು ಶ್ರಮಿಸಿದ್ದರು. ಒಬ್ಬ ಚಿಕ್ಕಮ್ಮ ಹಾಗೂ ಆಕೆಯ ಮೂರು ಜನ ಹುಡುಗಿಯರೂ ಆಗಮಿಸಿದ್ದರು. ಕರವಿಯನ್ನು ನೋಡಿ ಎಲ್ಲರೂ ಸಂತೋಷಗೊಂಡಿದ್ದರು. ಹಗಲು ರಾತ್ರಿ ಜನಗಳ ನಗು, ಹಾಸ್ಯ, ಕೂಗಾಟಗಳಿಂದ ಪ್ರತಿಧ್ವನಿಸುತ್ತಿತ್ತು. ಬಂದಿದ್ದ ಅತಿಥಿಗಳೆಲ್ಲಾ ಹೊರಟು ಹೋದಾಗ ಸಂಜೆಯ ಬಿಸಿಲು ಕಿಟಕಿಯಿಂದ ಒಳಗೆ ತೂರಿ ನೆಲದ ಮೇಲೆ ಹೊರಳಾಡುತ್ತಿತ್ತು. ಕೊಠಡಿಯ ಒಳಗೆ ನವವಧು ಸಮಾಧಾನದ ನಿಟ್ಟುಸಿರುಬಿಟ್ಟಳು. ತಲೆಯ ಮೇಲೆ ಮುಸುಕು ಹೊದ್ದು ಕಪ್ಪು ಹಚ್ಚಿದ ದೊಡ್ಡ ದೊಡ್ಡ ಕಣ್ಣುಗಳನ್ನು ಕೊಠಡಿಯ ನಾಲ್ಕೂ ಕಡೆ ಹರಿಸಿದಳು. ಆಗ ರಮೇಶ್ ಅವಳನ್ನೇ ದಿಟ್ಟಿಸುತ್ತಿದ್ದ.

ರಮೇಶ್ ನುಡಿದ "ನಿನ್ನದೊಂದು ಚಿತ್ರ ಬರೀತೀನಿ ಕರವಿ, ಎರಡೇ ದಿನಗಳಲ್ಲಿ ತಯಾರಿಸ್ತೀನಿ. ಆಗ ನಿಂಗೇ ಅರ್ಥವಾಗುತ್ತೆ ನನ್ನ ಈ ಕೈಗಳು ಏನೇನು ಮಾಡಲು

ಶಕ್ತ ಅಂತಾ.''

ಕರವಿ ಉತ್ಸುಕಳಾಗಿ ಪ್ರಶ್ನಿಸಿದಳು "ನನಗಂತೂ ಅರ್ಥವಾಗುತ್ತಿಲ್ಲ. ನೀವು ಏನು ಹೇಳುತ್ತಿದ್ದೀರಿ ಅಂತಾ.''

"ನಿನ್ನ ಈ ಕಣ್ಣುಗಳನ್ನು ನನ್ನ ಚಿತ್ರದಲ್ಲಿ ಜೀವಂತಗೊಳಿಸುತ್ತೇನೆ.''

"ಬರೆದು ಇಡಿ, ನಾನು ಒಂದು ನೋಡ್ತೀನಿ.''

ರಮೇಶ್ ಚಕಿತಗೊಂಡು ಪ್ರಶ್ನಿಸಿದ "ನೀನು ಎಲ್ಲಿ ಹೋಗುವೆ ?''

ಕರವಿ ನುಡಿದಳು "ತಂದೆ ಪತ್ರ.''

"ಅಲ್ಲಿಗೆ ಹೋಗುವೆ ಸರಿ. ಆದರೆ ಇವತ್ತು ನಾಳೆ ಅಲ್ವಲ್ಲಾ.'' "ನಂಗೂ ಹೋಗಕ್ಕೆ ಇಷ್ಟವಿಲ್ಲ, ಆದರೆ ತಂದೆ ಒಂದು ವೇಳೆ ಬಂದು ಬಿಟ್ಟರೆ ಹೋಗದೆ ಇರಲಾರೆ.''

"ನಿನ್ನ ತಂದೆ ಬರುವ ಸಮಾಚಾರ ಉಂಟೇನು ?''

"ನನಗೆ ಅನ್ನಿಸುತ್ತೆ ಅವರು ನಾಳೆ ಬೆಳಗ್ಗೆಯೇ ಬರಬಹುದು.''

ಕರವಿ ಸ್ವಲ್ಪ ಹೊತ್ತು ಸುಮ್ಮನಿದ್ದಳು. ಅನಂತರ ಯಾವುದೋ ಅಸಹ್ಯ ವೇದನೆಯಿಂದ ಚಡಪಡಿಸಿದಳು. "ಉಫ್ ತಂದೆ ನೆನಪು ಬಂದರೆ ಒಂದು ಥರ ಆಗುತ್ತೆ. ಬಹುಶಃ ಅವರು ಇನ್ನೂ ಅಳುತ್ತಾ ಇರಬಹುದು.''

ಅವಳನ್ನು ಸಂತೈಸುವ ಧ್ವನಿಯಲ್ಲಿ ರಮೇಶ ನುಡಿದ "ಇದರಲ್ಲಿ ಆಶ್ಚರ್ಯಪಡೋ ಅಂಥಾದ್ದು ಏನೂ ಇಲ್ಲ. ಎಷ್ಟಾದ್ರೂ ನೀನು ಅವರ ಏಕೈಕ ಪುತ್ರಿ ತಾನೇ ! ನಿಮ್ಮ ತಂದೆಯ ಮನದ ಸಂಕಟ ನಂಗೆ ಅರ್ಥವಾಗುತ್ತೆ ಕರವಿ. ಆದ್ರೆ, ಒಳ್ಳೇದು ಮೊದಲು ನಿನ್ನ ತಂದೆ ಬರಲಿ, ನಾನೇ ಅವರಿಗೆ ಸಮಾಧಾನ ಹೇಳುತ್ತೇನೆ.''

"ಏನು ಹೇಳುವಿರಿ ?''

"ಅದೇ... ನೀನು ಇನ್ನು ಒಂದು ತಿಂಗಳ ನಂತರ ಬರುವಿ ಅಂತಾ. ಅದಕ್ಕೆ ಮುಂಚೆ ಕರೆದುಕೊಂಡು ಹೋಗಲು ಬಲವಂತ ಮಾಡ್ಬೇಡಿ ಅಂತಾ.''

"ಬಹುಶಃ ತಂದೆ ನಿಮ್ಮ ಮಾತಿಗೆ ಒಪ್ಪೋದಿಲ್ಲ. ನಾನೂ ಈಗ್ಲೇ ಹೇಳ್ತಾ ಇದ್ದೀನಿ. ಸುಮ್ನೆ ಅಡ್ಡಿಪಡಿಸ್ಬೇಡಿ. ತಂದೆ ಮನಸ್ಸಿಗೆ ದುಃಖ ಮಾಡ್ಬೇಡಿ.''

ಉದಾಸೀನದ ನಗೆ ಹರಿಸಿ ರಮೇಶ್ ನುಡಿದ "ನನ್ನ ಮನಸ್ಸಿಗೆ ಆಗೋ ದುಃಖ ಅವರಿಗೆ ಅರ್ಥವಾಗಲ್ವೆ ?''

"ನಿಮ್ಗೆ ಯಾತಕ್ಕಾಗಿ ದುಃಖ ?''

"ಒಂದು ವೇಳೆ ನಿನ್ನ ತಂದೆ ನಿಜವಾಗಿ ನಾಳೆ ಬಂದುಬಿಟ್ರೆ ನೀನು ಅವರ ಜೊತೆ ಹೊರಟು ಹೋದರೆ ನನಗಂತೂ ಬಹಳ ಬೇಜಾರಾಗುತ್ತೆ ಕರವಿ.''

ಕರವಿ, ಕಾಡಿಗೆ ಹಚ್ಚಿದ ತನ್ನ ಅಗಲ ಕಣ್ಣುಗಳನ್ನು ರಮೇಶ್‌ನತ್ತ ಹರಿಸಿದಳು. ರಮೇಶ್ ನುಡಿದ "ನೀನು ಹೋದರೆ ನಾನೂ ನಿನ್ನ ಜೊತೆಯಲ್ಲಿ ಬಂದು ಬಿಡುತ್ತೇನೆ. ರಾಣಾಘಾಟ್‌ನಲ್ಲಿ ನಾಲ್ಕು ದಿನ ಇದ್ದು ಬರುತ್ತಾ ನಿನ್ನನ್ನೂ ಕರಕೊಂಡೇ ಬರುತ್ತೇನೆ.''

"ಛಿ! ಛಿ! ನಿಮಗೇನು ಮಾನ ಮರ್ಯಾದೆ ಇಲ್ವೆ? ಆಹ್ವಾನ ಇಲ್ದೆ ಯಾರಾದರೂ ಮಾವನ ಮನೆಗೆ ಹೋಗುತ್ತಾರಾ ?''

"ನಿಮ್ಮ ತಂದೆ ಏನು ನನ್ನ ಕರೆಯದೇ ಇರುತ್ತಾರೆಯೇ ?"

"ಕರೆಯುವುದಿಲ್ಲ."

"ಏಕೆ ?"

ಕರವಿ ಗಾಬರಿಗೊಂಡು ನುಡಿದಳು "ನಂಗೇನು ಗೊತ್ತು."

"ನನ್ನ ಬಗ್ಗೆ ನಿನ್ನ ತಂದೆ ಹತ್ತಿರ ನೀನು ಹೇಳುವೆ ತಾನೇ ?"

"ಏನು ಹೇಳಲಿ ?"

"ನಿನ್ನ ಜೊತೇಲಿ ನನ್ನನ್ನೂ ಕರೆದುಕೊಂಡು ಹೋಗಿ ಅಂತಾ."

"ಛಿ ! ನನ್ನೇನು ನಾಚ್ಕೆಗೆಟ್ಟೋಳು ಅನ್ಕೊಂಡ್ರಾ, ಯಾರಾದ್ರೂ ಮಗಳು, ಈ ಮಾತು ಹೇಳೋಕೆ ಸಾಧ್ಯಾನ ? ಎಷ್ಟು ನಾಚಿಕೆಗೇಡಿನ ವಿಷಯ."

ರಮೇಶ ಸುಮ್ಮನಾದ. ಕರವಿಯೇ ಮತ್ತೆ ಪ್ರಶ್ನಿಸಿದಳು "ಏನು.... ಏಕೆ ಇಷ್ಟು ಗಂಭೀರ ಆಗಿಬಿಟ್ರಿ. ಏನಾದರೂ ಅನುಮಾನವೇ ನಿಮ್ಮ ಮನಸ್ಸಿನಲ್ಲಿ ?"

"ಅನುಮಾನ ? ಯಾವ ಮಾತಿಗೆ ?"

"ಬಹುಶಃ ನೀವು ಯೋಚಿಸುತ್ತಾ ಇರಬಹುದು. ನನಗೆ ನಿಮ್ಮ ಬಗ್ಗೆ ಏನು ಭಾವನೇನೆ ಇಲ್ಲಾ ಅಂತಾ."

"ನನ್ನ ಬಗ್ಗೆ ನಿನ್ನ ಮನಸ್ಸಿನಲ್ಲಿ ಭಾವನೆಗಳೇ ಇಲ್ಲಾ ಅಂತಾ ಯೋಚಿಸುವ ಮೊದಲು ನಾನೇ ಸಾಯಬೇಕು ಅಂತೀನಿ."

ಕರವಿಯ ಕಣ್ಣು ಮಿಂಚಿದವು. ಏನೊ ಭಯದ ಶಂಕೆಯಿಂದ ಅವಳ ಹೃದಯ ಕಂಪಿಸಿತು. ನಿಧಾನವಾಗಿ ಆದರೆ ಹೆದರಿದ ಸ್ವರದಲ್ಲಿ ಕರವಿ ನುಡಿದಳು "ನೀವು ಏಕೆ ಸಾಯಬೇಕು. ಇದಕ್ಕೆ ಬದಲು ನಾನು ಸಾಯುವುದು ಒಳ್ಳೆಯದು. ಈ ಮನೆಗೆ ನೀವು ಹೊಸ ಹೆಂಡತಿಯನ್ನು ತರುವಿರಿ. ಆಗ ನನ್ನ ಕಥೆ ಹೇಳುವಿರಿ. ನಕ್ಕು ನಲಿದು ಹಾಸ್ಯ ಮಾಡುವಿರಿ."

"ಕರವಿ ಇಂಥಾ ಭಯಾನಕ ಮಾತನ್ನು ಹಾಸ್ಯದಲ್ಲೂ ತರ್ಬಾರ್ದು."

ಕರವಿ ನಗುತ್ತಾ ನುಡಿದಳು "ಅದೃಷ್ಟವಂತರಿಗೇ ಹೆಂಡತಿ ಸಾಯುವುದು."

"ಇದು ಸುಳ್ಳು ಮಾತು" ರಮೇಶ ನಗುತ್ತಾ ಮುಂದೆ ಬಂದು ಕರವಿಯ ಕೈ ಹಿಡಿದು ನುಡಿದ "ಇಂಥ ಹೆಂಡತಿ ಯಾರಿಗೂ ಇಲ್ಲ."

ಕರವಿ ಕಂಪಿಸಿದಳು.

ರಮೇಶ ನಗುತ್ತಾ ನುಡಿದ "ಇಂಥಾ ಹೆಂಡ್ತಿ ಒಂದುವೇಳೆ ಸತ್ತುಹೋದ್ರೆ ಆಕೆಯ ದುರದೃಷ್ಟದ ಗಂಡ ಬದುಕಿದ್ದೂ ಪ್ರಯೋಜನ ಇಲ್ಲ." ಇದ್ದಕ್ಕಿದ್ದಂತೆಯೇ ಕೈ ಬಿಡಿಸಿಕೊಂಡು ಕರವಿ ಬೇರೊಂದು ಕಡೆ ನೋಡಲು ಪ್ರಾರಂಭಿಸಿದಳು. ರಮೇಶನತ್ತ ನೋಡುವ ಬಯಕೆ ಇಲ್ಲದೆ ಹಾಗೂ ತನ್ನ ಮುಖವನ್ನು ತೋರಿಸುವ ಇಚ್ಛೆ ಇಲ್ಲವೆನ್ನುವಂತೆ ಕರವಿ ಎದ್ದು ಹೋಗಿ ಮಂಚದ ಮೂಲೆಯಲ್ಲಿ ಹುದುಗಿ ಕುಳಿತಳು.

ಸಂಜೆ ಸರಿಯಿತು. ಇದ್ದಕ್ಕಿದ್ದಂತೆಯೇ ಕರವಿಗೆ ಹೆದರಿಕೆಯಾಯಿತು. ಪ್ರಶ್ನಿಸಿದಳು "ಏನು ನಿಮ್ಮ ಯೋಚ್ನೆ ? ನೀವೂ ಊಟ ಮಾಡುತ್ತಾ ಇಲ್ಲ, ನನ್ನನ್ನೂ ಮಾಡುವುದಕ್ಕೆ ಬಿಡುತ್ತಾ ಇಲ್ಲ ?"

"ಇದರ ಅರ್ಥ ?"

"ನೀವೂ ಹೊರಗಿನಿಂದ ಊಟ ತರ್ತಾನೂ ಇಲ್ಲ. ನಂಗೂ ಅಡಿಗೆ ಮಾಡಲು ಹೇಳ್ತಾನೂ ಇಲ್ಲ."

ಉತ್ತರ ಹೇಳುವಲ್ಲಿ ರಮೇಶನ ಧ್ವನಿ ಸಂತೋಷದಿಂದ ತುಂಬಿತ್ತು. ಪ್ರಶ್ನಿಸಿದ "ನಿಂಗೆ ಅಡ್ಗೆ ಮಾಡಲು ಬರುವುದಾ ?"

"ಹಾ ! ಒಂದಿನಾ ತಾನೆ ? ನಿಮ್ಮ ಮನೆಯಲ್ಲೇ ಈ ದಿನ ಕಳೆದು ಹೋಗುತ್ತೇನೆ" ನಕ್ಕಳು. ರಮೇಶನೂ ನಗುತ್ತಾ ನುಡಿದ "ಎಷ್ಟೋ ಹೊತ್ತಿನಿಂದ ಇದೇ ಮಾತು ಹೇಳಲು ತಡಪಡಿಸುತ್ತಿದ್ದೆ."

"ಏನಾಯ್ತು ?"

"ಇಷ್ಟು ದಿನ ಹೊಟೇಲಿನ ಊಟ ತಿನ್ನುತ್ತಾ ಇದ್ದೆ. ಈಗ ನೀನು ಮನೆಯಲ್ಲಿ ಇರುವುದರಿಂದ ಹೊಟೇಲಿನ ಊಟ ಸ್ವಲ್ಪಾನೂ ಇಷ್ಟವಾಗುತ್ತಿಲ್ಲ."

"ನನ್ನ ಕೈ ಊಟ ಮಾಡಲು ನಿಮ್ಮ ಮನಸ್ಸು ಅಷ್ಟೊಂದು ಹಂಬಲಿಸುತ್ತಾ ಇದೆಯೆ ?"

"ನಿಜವಾಗ್ಲೂ ಹೌದು ಕರವಿ."

ಕರವಿ ಖಿನ್ನಳಾಗಿ ಇನ್ನೊಂದು ಕಡೆ ನೋಡುತ್ತಾ ಇದ್ದಕ್ಕಿದ್ದಂತೆಯೇ ನುಡಿದಳು. "ಇಷ್ಟೊಂದು ಆಸೆ ಇಟ್ಕೊಳ್ದೆ ಇದ್ರೇ ಒಳ್ಳೇದು."

"ಈ ಆಸೆ ನನಗೆ ಬಹಳ ದಿನಗಳಿಂದ ಇದೆ" ರಮೇಶ ನುಡಿದ.

ಇದಾದ ನಂತರ ಹೆಚ್ಚು ಸಮಯ ವ್ಯಯವಾಗಲಿಲ್ಲ. ಬಾಗ್‌ಬಜಾರಿನ ಆ ಬೀದಿಯ ಈ ಚಿಕ್ಕ ಕೋಣೆಯಲ್ಲಿ ಇದ್ದಲಿನ ಹೊಗೆ ಹೊರಟು ಸಂಜೆಯ ವಾತಾವರಣ ಸೇರಿತು. ಹೊಸ ಸಂಸಾರದಲ್ಲಿ ನವವಧುವಿನ ಕೈಗೆ ಸಿಕ್ಕಿದ ಪಾತ್ರೆಗಳು ಮಧುರವಾಗಿ ಝುಣಝುಣ ಶಬ್ದ ಮಾಡುತ್ತಿದ್ದವು. ಹೊಸ ಸೀರೆಯ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿಕೊಂಡಳು. ಅರಿಶಿಣ ಕೈ ಕೆನ್ನೆಯ ಮೇಲೆ ಸುಳಿಯುತ್ತಿದ್ದ ಕೂದಲನ್ನು ಸವರುತ್ತಿತ್ತು. ಹಣೆಯ ಮೇಲೆ ಹಾರಾಡುತ್ತಿದ್ದ ಕೂದಲನ್ನು ಬೈತಲೆಯ ಇಕ್ಕೆಡೆಗೆ ಸರಿಸುತ್ತಾ ಹೊಸ ಗೃಹಸ್ಥ ಜೀವನದಲ್ಲಿ ಉತ್ಸಾಹದಿಂದ ತೊಡಗಿದಳು.

ಅಡಿಗೆ ತಯಾರಾಯಿತು. ಕೊಠಡಿಯ ನೆಲದ ಮೇಲೆ ಆಸನ ಹಾಸಿದಳು. ರಮೇಶ ಊಟ ಮಾಡಲು ಕುಳಿತ.

ಆಸನದ ಮೇಲೆ ಕುಳಿತ ರಮೇಶ ಹೆಂಡತಿಯತ್ತ ದೃಷ್ಟಿ ಹರಿಸಿದ. ಏನೋ ಹೇಳಲು ಮನಸ್ಸು ತವಕಿಸುತ್ತಿತ್ತು. ಮಾತು ತುಟಿಗಳ ಮಧ್ಯೆ ಹೊರಬರಲು ಚಡಪಡಿಸುತ್ತಿತ್ತು.

ಕರವಿ ನುಡಿದಳು "ಊಟ ಮಾಡುತ್ತಾ ಆದೇಕೆ ಹಾಗೆ ಗಂಭೀರರಾದಿರಿ ?"

ರಮೇಶ ನುಡಿದ "ಒಂದು ಮಾತು ಹೇಳಲೇ ?"

"ಹೇಳಿ."

ಒಬ್ಬನೇ ಕುಳಿತು ಊಟ ಮಾಡಲು ಮನಸ್ಸು ಒಪ್ಪುತ್ತಾ ಇಲ್ಲಾ."

"ಅಂದರೆ !"

"ನೀನೂ ಬಾ ಒಂದೇ ತಟ್ಟೆಯಲ್ಲಿ ಇಬ್ಬರೂ ಊಟ ಮಾಡೋಣ."

ಕರವಿ ಈ ಮಾತು ಕೇಳಿ ಬೆಚ್ಚಿಬಿದ್ದಳು. ಆದರೆ ಮತ್ತೇನನ್ನೂ ಹೇಳಲಿಲ್ಲ. ಸ್ತಬ್ಧಳಾಗಿ ನಿಂತಳು.

ರಮೇಶ ಎದ್ದು ನಿಂತುಕೊಂಡ. ನಗುತ್ತಾ ಕರವಿಯ ಹಸ್ತವನ್ನು ತನ್ನ ಹಸ್ತದಲ್ಲಿ ಹಿಡಿದುಕೊಂಡು ಅವಳನ್ನು ಆಸನವೊಂದರ ಮೇಲೆ ಕೂಡಿಸುತ್ತಾ ನುಡಿದ "ಇದಾದ ನಂತರ ಕೆಲಸ ಕಾರ್ಯಗಳಲ್ಲಿ ಎಷ್ಟೋ ಸಂದರ್ಭಗಳು ಕೈ ತಪ್ಪಿ ಹೋಗುತ್ತವೆ. ನಿನ್ನ ಜೊತೆ ಕುಳಿತು ಈ ತರಹ ಊಟ ಮಾಡುವ ಆನಂದ ನಮ್ಮ ಜೀವನದಲ್ಲಿ ಎಷ್ಟು ಬಾರಿ ಬರುವುದೋ ನಾಕಾಣೆ."

ಕರವಿಯೂ ಊಟ ಮಾಡಲು ಕುಳಿತಳು. ರಮೇಶ ಹಾಗೂ ಕರವಿ ಜೊತೆಯಲ್ಲಿ ಕುಳಿತು ಒಂದೇ ತಟ್ಟೆಯಲ್ಲಿ ಬಿಸಿ ಹುಳಿಯ ಅನ್ನ ತಿನ್ನತೊಡಗಿದರು. ಪತ್ನಿಯ ಜೊತೆಯಲ್ಲಿ ಕುಳಿತು ಜೀವನದ ಒಂದು ಅತ್ಯಂತ ಪ್ರಮುಖ ವ್ರತ ಆಚರಿಸುತ್ತಿರುವಂತೆ ರಮೇಶನಿಗೆ ಅನಿಸಿತು. ಊಟ ಮಾಡುತ್ತಲೇ ಗದ್ಗದ ಸ್ವರದಲ್ಲಿ ಕರವಿ ಪ್ರಶ್ನಿಸಿದಳು "ನೀವು ಬಹಳ ದುಡಿಯಬೇಕಾಗುತ್ತೆ ಅಲ್ವೆ ?"

"ಹೌದು, ಬಹಳ ಕೆಲಸ ಯಾರಿಗೂ ದಯೆ ತೋರಿಸುವುದಿಲ್ಲ. ಕೆಲವು ಬಾರಿ ಜ್ವರ ಇದ್ದಾಗಲೂ ಕೆಲಸ ಮಾಡ್ಬೇಕಾಗುತ್ತದೆ."

"ಇಷ್ಟೊಂದು ಕೆಲ್ಸ ಏಕೆ ಮಾಡ್ಬೇಕು ?"

"ಹೊಟ್ಟೆಗೋಸ್ಕರ."

"ಎಷ್ಟು ಸಂಪಾದಿಸ್ತೀರಾ ?"

"ಕೆಲವು ತಿಂಗಳು ಐವತ್ತು, ಇನ್ನು ಕೆಲವು ತಿಂಗಳು ನೂರು. ಕೆಲವು ತಿಂಗಳು ಏನೂ ಇಲ್ಲದೆಯೂ ಇರಬಹುದು."

"ಇದರ ಮೇಲೆ ನಾನ್ಬೇರೆ ಹೊಸ ಹೊರೆ. ಇನ್ಮೇಲೆ ದುಡಿದು ದುಡಿದು ಹುಚ್ಚರಾಗ್ಬಿಡ್ತೀರಾ."

"ಖಂಡಿತಾ ಇಲ್ಲ, ಮನದಲ್ಲಿನ ಸಂತೋಷದಿಂದ ನಾನು ಇನ್ನೂ ಹೆಚ್ಚಿಗೆ ಕೆಲಸ ಮಾಡಬಲ್ಲೆ."

"ಈಗಾಗಲೇ ನೀವು ಸಾಕಷ್ಟು ಖರ್ಚು ಮಾಡಿದ್ದೀರಿ ?"

ರಮೇಶನ ರೀತಿ ಆತ ಸಾಲದ ಬಡ್ಡಿಯ ಬಗ್ಗೆ ಚಿಂತೆಯೇ ಮಾಡಿಲ್ಲವೆನಿಸಿತ್ತು. ನುಡಿದ "ಎರಡು ವರ್ಷ ಕಷ್ಟಪಟ್ಟು ದುಡೀತೀನಿ. ಎಲ್ಲಾ ಸಾಲ ತೀರಿ ಹೋಗುತ್ತೆ. ಈ ಬಗ್ಗೆ ನಂಗೆ ಯೋಚನೆಯೇ ಇಲ್ಲ."

ಕರವಿ ತಲೆ ತಗ್ಗಿಸಿದಳು. ಕೈ ಎತ್ತಿ ರಮೇಶನನ್ನು ಸುಮ್ಮನಾಗಿಸಿದಳು.

"ಏನಾಯ್ತು ? ನೀನ್ಯಾಕೆ ಊಟಾನೇ ಮಾಡ್ತಾ ಇಲ್ಲ" ಕರವಿಯ ಒಣ ಹಸ್ತವನ್ನು ನೋಡುತ್ತಾ ರಮೇಶ ಪ್ರಶ್ನಿಸಿದ. ಅನಂತರ ಒಂದು ವಿಚಿತ್ರ ವಸ್ತುವನ್ನು ನೋಡಿ ಕಿರುಚಿದ. "ಇದೇನು ಕರವಿ ?"

ಕರವಿಯ ಕೈ ಮೇಲೆ ತಲೆ ತಗ್ಗಿಸಿದ ಕಣ್ಣಿನಿಂದ ಒಂದು ಹನಿ ನೀರು ತೊಟ್ಟಿಡುತ್ತಿತ್ತು. ಕೈ ತೊಳೆದು ಕರವಿ ಎದ್ದು ನಿಂತಳು. ಸೊಂಟಕ್ಕೆ ಸಿಕ್ಕಿಸಿದ್ದ ಸೆರಗನ್ನು

ಬಿಚ್ಚಿ ಅದರಿಂದ ಕಣ್ಣು ಒರೆಸಿಕೊಂಡಳು. ಅನಂತರ ನುಡಿದಳು "ನನ್ಮಾತು ಕೇಳಿ."

"ಹೂಂ, ಹೇಳು."

"ನಿಮ್ಗೆ ಜೀವಿಸಲು ಆಸೆ ತಾನೇ ?"

"ಏನು ಹೇಳ್ಬೇಕು ಅಂತಿದ್ದಿ ಕರವಿ ?"

"ನಿಮ್ಗೆ ಜೀವನದಲ್ಲಿ ಆಸಕ್ತಿ ಇದ್ದರೆ ಈ ಕೂಡಲೇ ಪೋಲೀಸರನ್ನು ಕರೆಸಿ ನನ್ನ ಹಿಡಿದುಕೊಡಿ."

ರಮೇಶನ ಕಣ್ಣು ಗಾಬರಿಗೊಂಡವು. ನುಡಿದ "ನಿನ್ನ ಈ ಮಾತಿನ ಅರ್ಥವೇನು ಕರವಿ ?"

"ನಿಮಗೆ ಮೋಸ ಮಾಡಲೇ ನಾನು ಬಂದಿರೋದು. ನಾನು ನಿಮ್ಮ ಜಾತಿಯೋಳು ಅಲ್ಲ. ನಾನು ಕರವೀನೂ ಅಲ್ಲ, ಕನ್ಯೇನೂ ಅಲ್ಲ. ನಾನು....."

ಕರವಿ ಕಿರುಚಿಕೊಂಡಳು "ನಾನು ಭಯಂಕರ ತಂದೆಯೊಬ್ಬನ ಭಯಂಕರ ಮಗಳು. ನಿಮ್ಮ ಮನೆಗೆ ಸಂಸಾರ ನಡೆಸಲು ನಾನು ಬಂದಿಲ್ಲ. ಇಲ್ಲಿಂದ ಓಡಿ ಹೋಗಲೇ ನಾನು ಬಂದಿರೋದು."

ನಾಟಕದಲ್ಲಿ ಸುಳ್ಳು ಅಭಿನಯ ಮಾಡುತ್ತಿರುವ ಹುಡುಗಿಯಂತೆ, ರಮೇಶನನ್ನು ಸುಳ್ಳು ಸುಳ್ಳು ಹೆದರಿಸಿ ತಮಾಷೆ ಮಾಡಿ ಅದರ ಆನಂದ ಸವಿಯಲು ಇದೆಲ್ಲಾ ಮಾಡುತ್ತಿರುವಂತೆ ಭಾಸವಾಗುತ್ತಿತ್ತು. ರಾಜಕುಮಾರಿಯ ಪೋಷಾಕು ಧರಿಸಿರುವ ಮಾಯಾವಿ ಪಿಶಾಚಿಯೊಬ್ಬಳು ಒನಪು ಒಯ್ಯಾರ ತೋರಿಸಿ, ಭಯಂಕರ ಮಾತೊಂದನ್ನು ಹೇಳಿ ಓಡಿ ಹೋಗುತ್ತಿರುವ ನಿರ್ಲಜ್ಜಳಂತೆ ಕಾಣಿಸಿದಳು. ಆ ನಿರ್ಭಾಗ್ಯ ರಾಜನ ಹೆಸರು ರಮೇಶನಿಗೆ ನೆನಪು ಬರುತ್ತಿಲ್ಲ. ಆ ನಾಟಕದ ಹೆಸರೂ ನೆನಪು ಬರಲೊಲ್ಲದು.

ಆದರೂ ರಮೇಶ ಹೆದರಿದ, ನಿಶ್ಶಬ್ದವಾದ ಮರಣದಂಡನೆಯ ನಿರ್ಣಯ ಕೇಳುತ್ತಿರುವಂತೆನಿಸಿತು. ಕರವಿಯತ್ತ ತಿರುಗಿ ಅವಳನ್ನು ಅರ್ಥಮಾಡಿಕೊಳ್ಳಲು ಬಯಸಿದಂತೆ ನೋಡಿದ. ನಿಜವಾಗಿ ಈ ಮುಖ ಒಬ್ಬ ಭಯಂಕರ ಮೋಸಗಾರ್ತಿಯ ಮುಖವಾಗಿರಲಿಕ್ಕೆ ಸಾಧ್ಯವೇ ?

ಕರವಿ ನುಡಿದಳು "ನನಗೆ ಗೊತ್ತು ನೀವು ನನ್ನನ್ನು ಪೋಲೀಸರಿಗೆ ಹಿಡಿದುಕೊಡಲಾರಿರಿ. ನೀವೊಬ್ಬ ಬೇಕೂಫ, ಅಂತಹ ಕೆಲಸ ಮಾಡುವ ಶಕ್ತಿ ನಿಮ್ಮಲ್ಲಿಲ್ಲ."

ಕರವಿ ತನ್ನ ದೇಹದ ಮೇಲಿದ್ದ ಒಂದೊಂದು ಒಡವೆಗಳನ್ನು ಕಳಚಿ ನೆಲದ ಮೇಲಿರಿಸಿದಳು. ಅನಂತರ ನುಡಿದಳು "ಹೂಂ,.... ತೆಗೆದುಕೊಳ್ಳಿ ಕೊನೆಯ ಪಕ್ಷ ನಿಮ್ಮ ಎರಡೂವರೆ ಸಾವಿರ ರೂಪಾಯಿ ಉಳಿಯಿತು. ಈಗ ಸುಮ್ಮನೆ ನನ್ನನ್ನು ಹೋಗಲು ಬಿಡಿ."

"ಎಲ್ಲಿಗೆ ಹೋಗುವೆ ನೀನು ?

ಕರವಿ ಏನೂ ಉತ್ತರಿಸಲಿಲ್ಲ.

"ನನ್ನ ಮಾತಿಗೆ ಉತ್ತರ ಕೊಡು ಕರವಿ."

ಕರವಿ ಗೊಳೋ ಎಂದು ಅಳಹತ್ತಿದಳು. "ಹೂಂ.... ಹೇಳಿ ನೀವು ನನ್ನನ್ನು ಹೋಗಲು ಬಿಡುವುದಿಲ್ಲಾ ಅಂತಾ."

ರಮೇಶ ಶಾಂತಭಾವದಿಂದ ಸ್ವಲ್ಪ ಹೊತ್ತು ಯೋಚಿಸುತ್ತಿದ್ದ. ಅನಂತರ ಕಣ್ಣು ಹನಿದುಂಬಿದಂತೆ ಕರವಿಯ ಬಳಿಗೆ ಹೋಗಿ ಅವಳ ಕೈಯನ್ನು ಹಿಡಿದುಕೊಂಡು ನುಡಿದ "ನಿಜವಾಗಲೂ ನಿನ್ನನ್ನು ಕಳುಹಿಸಲು ನನಗೆ ಇಷ್ಟವಿಲ್ಲ."

"ಸರಿ ಹಾಗಾದರೆ ಕೇಳಿ."

"ಏನು ?"

"ಇಂದೇ ಹೊರಡಿ. ನಾವಿಬ್ಬರೂ ಎಲ್ಲಾದರೂ ಹೊರಟು ಹೋಗೋಣ."

"ಎಲ್ಲಿ ಹೋಗೋಣ ?"

"ನೀವು ಎಲ್ಲಿಗೆ ಕರೆದುಕೊಂಡು ಹೋಗುವಿರೋ, ಎಲ್ಲಿ ಇಡುವಿರೋ ಅಲ್ಲಿಗೆ."

ರಮೇಶ ತಡ ಮಾಡಲಿಲ್ಲ. ಅಂದೇ ರಾತ್ರಿ ರಾಣಾಘಾಟ್‌ನ ಆ ಗಲ್ಲಿಯ ಚಿಕ್ಕಮನೆ ಖಾಲಿ ಆಯಿತು. ಮೋಸಗಾರನ ಮಗಳು ಮೋಸಗಾತಿ ಜೀವನದ ಕೊನೆಯ ಬಾರಿಯಾಗಿ ಮೊಹಲ್ಲಾದ ಜನರನ್ನು ಯೋಚನೆಯಲ್ಲಿ ಕೆಡವಿ, ತನ್ನ ಗಂಡನ ಜೊತೆಯಲ್ಲಿ ಓಡಿಹೋದಳು.

ಒಬ್ಬನೇ ವ್ಯಕ್ತಿಯನ್ನು ಅವಳು ಮೋಸ ಮಾಡಿದ್ದಳು. ರಾಣಾಘಾಟ್‌ನ ವಿಜಯಬಾಬು ಎಂಬೊಬ್ಬ ವ್ಯಕ್ತಿ ಮಾರನೆ ದಿನ ಬೆಳಗ್ಗೆ ಬಾಗ್‌ಬಜಾರ್‌ನ ಗಲ್ಲಿಗೆ ಹೋಗಿ ಕೊಠಡಿಯೊಂದರ ಮುಂದೆ ನಿಂತು ನೋಡಿದ. ಕೊಠಡಿಯ ಬಾಗಿಲಲ್ಲಿ ಬೀಗ ನೇತಾಡುತ್ತಿದೆ. ಬಹಳ ಭಾರಿ ಹಾಗೂ ಭದ್ರವಾದ ಬೀಗ. ಬಾಗಿಲಿನ ಕಿಂಡಿಯಲ್ಲಿ ವಿಜಯ ಬಾಬು ಒಳಗೆ ಇಣಿಕಿ ನೋಡಿದ. ಒಳಗೆಲ್ಲಾ ಸಂಪೂರ್ಣ ಖಾಲಿ. ಭಯಾನಕ ಶೂನ್ಯತೆ.

ಬಹಳ ಹೊತ್ತು ಆತ ವಿಸ್ಮಿತನಾಗಿ ನಿಲ್ಲಬೇಕಾಗಲಿಲ್ಲ. ಪೊಲೀಸರ ಕೈಗೆ ಸಿಕ್ಕಿ ವಿಜಯಬಾಬು ಎಂಬ ವ್ಯಕ್ತಿ ಜೋರಾಗಿ ಅಳ ಹತ್ತಿದ.

ಓಹ್ !, ಮಗಳಾಗಿ ತಂದೆಗೆ ಹೀಗೆ ಮೋಸ ಮಾಡುತ್ತಾರೆಯೇ ? ಏ, ಮೋಸಗಾತಿ !

# ಒಂದು ಪ್ರೇಮದ ಕಥೆ

*ನರೇಂದ್ರನಾಥ ಮಿಶ್ರ*

ಕಿಟಕಿಯಲ್ಲಿ ಇಣಕಿ ನೋಡುತ್ತಾ ಪ್ರಭಾತ್‌ಬಾಬು ಪ್ರಶ್ನಿಸಿದರು "ಬರೆಯುತ್ತಿದ್ದೀರಾ ? ಹೋಗ್ಲಿಬಿಡಿ. ಈಗ ನಿಮಗೆ ಡಿಸ್ಟರ್ಬ್ ಮಾಡಲ್ಲ." ಕಾಗದ ಲೇಖನಿಯನ್ನು ಒಂದು ಬದಿಗೆ ಸರಿಸಿ ತನ್ನ ಆದರಣೀಯ ಸ್ನೇಹಿತನನ್ನು ಸ್ವಾಗತಿಸುತ್ತಾ ನಾನು ನುಡಿದೆ. "ಬನ್ನಿ... ಬನ್ನಿ ಒಳಗೆ ದಯಮಾಡಿಸಿ." ಪ್ರಭಾತ್‌ಬಾಬು ಸ್ವಲ್ಪ ಅಂಜುತ್ತಲೇ ನುಡಿದರು. "ಆದರೆ ತಾವು ಬರೆಯುತ್ತಿದ್ದೀರಲ್ಲಾ ?" ನಾನು ನುಡಿದೆ "ಇದೆಲ್ಲಾ ಏನು ಬರೆಯೋದು ಹೇಳಿ. ಒಂದೆರಡು ಕಾಗದಕ್ಕೆ ಉತ್ತರ ಬರೀತಿದ್ದೆ ಅಷ್ಟೇ... ತಾವು ಬನ್ನಿ."

ಆಮಂತ್ರಣ ಪಡೆದು ಪ್ರಭಾತ್ ಬಾಬು ಒಳಗೆ ಬಂದರು. ಸೋಫಾದ ಮೇಲೆ ಕುಳಿತುಕೊಂಡು ಕೈಯಲ್ಲಿದ್ದ ಛತ್ರಿಯುನ್ನು ನೆಲದ ಮೇಲಿಟ್ಟರು. ಹೋಗುವಾಗ ಮರೆತು ಬಿಟ್ಟೇನೆಂದು ತಮ್ಮ ಪ್ರಿಯವಸ್ತುವನ್ನು ಕಣ್ಣಿನಿಂದ ದೂರ ಇಟ್ಟಿರದಾಗಿದ್ದರು.

ಅವರು ಒಳಗೆ ಬಂದೊಡನೆ ನಾನು ನನ್ನ ಎತ್ತರದ ಆಸನವನ್ನು ಬಿಟ್ಟು ಅವರ ಎದುರಿನ ಸೋಫಾದಲ್ಲೇ ಬಂದು ಕುಳಿತೆ.

ಅವರು ನನ್ನ ಕಡೆ ನೋಡುತ್ತಾ ನುಡಿದರು "ಬಹಳ ಕಾಗದ ಪತ್ರ ಬರೆಯುತ್ತೀರಲ್ಲವೆ, ನನಗೂ ಹಿಂದೆ ಪತ್ರ ಬರೆಯುವ ಹುಚ್ಚು ಇತ್ತು. ರಾತ್ರಿಯೆಲ್ಲಾ ಎಚ್ಚೆತ್ತು ಸ್ನೇಹಿತರಿಗೆ ಕಾಗದ ಬರೀತಾ ಇದ್ದೆ. ಈ ಬಗ್ಗೆ ನೀವು ನನ್ನನ್ನು 'ಎ ಮ್ಯಾನ್ ಆಫ್ ಲೆಟರ್ಸ್' ಎಂದು ಕರೆಯಬಹುದು."

ಅವರು ನೀಡಿದ ಪುಸ್ತಕವನ್ನು ಕೃತಜ್ಞತೆಯಿಂದ ಸ್ವೀಕರಿಸಿ ಮುಗುಳ್ನಕ್ಕೆ ಮತ್ತು ಪ್ರಶ್ನಿಸಿದೆ "ಚಹ ಕುಡಿತೀರ ತಾನೆ ?"

ಚಹ ಬಗ್ಗೆ ಮಾತು ಕೇಳಿ ಪ್ರಭಾತ್ ಪ್ರಸನ್ನರಾಗಿ ನುಡಿದರು "ಚಹ ಆಗಬಹುದು. ಆದರೆ ಇಂತಾ ಮಧ್ಯಾಹ್ನ ಚಹ ಕೇಳಿ ತಮ್ಮ ಈ ಆಶ್ರಮದಲ್ಲಿ ತೊಂದರೆ ಕೊಡುತ್ತಾ ಇಲ್ಲಾ ತಾನೆ ?" "ಗೃಹಸ್ಥಾಶ್ರಮ ! ನಾನೇ ಸ್ವಯಂ ಗೃಹಸ್ಥ ಅಲ್ಲ. ಅದಕ್ಕೆ ಒಳಗೆ ಬರ್ತಾ ಉಫ್ ಉಫ್ ಅಂತಾ ಊದ್ತಾನೆ ಇರುತ್ತೀನಿ. ಇತರ ಗೃಹಿಣಿಯರಿಗೆ ನನ್ನಿಂದ ಶಾಂತಿಭಂಗ ಆಗ್ದೇ ಇರಲಿ ಅಂತಾ."

ನಾನು ಒಳಗೆ ಹೋಗಿ ಎರಡು ಕಪ್ ಚಹಕ್ಕೆ ಆರ್ಡರ್ ನೀಡಿ ನನ್ನ ಸ್ಥಾನದಲ್ಲಿ

ಆಸೀನನಾದೆ.

ಪ್ರಭಾತ್‌ಬಾಬು ಹೆಸರಿನಿಂದ ಮಾತ್ರ ಪ್ರಭಾತ್. ಅವರ ಓಡಾಡುವ ಹಾಗೂ ಹರಟೆ ಹೊಡೆಯುವ ಸಮಯ ಮಾತ್ರ ಸಂಜೆ ಹಾಗೂ ಮಧ್ಯರಾತ್ರಿ. ಅವರ ವಯಸ್ಸು ಸುಮಾರು ಎಪ್ಪತ್ತನಾಲ್ಕು. ಶರೀರವೇನೋ ಜೀರ್ಣವಾಗಿತ್ತು. ಆದರೆ ಮನಸ್ಸು ಜೀರ್ಣವಾಗಲು ಬಿಟ್ಟಿರಲಿಲ್ಲ. ಈಗಲೂ ಸಹ ಟ್ರಾಮ್‌ನಲ್ಲಿ ಆರಾಮವಾಗಿ ಓಡಾಡುತ್ತಿದ್ದರು. ಅವರು ಸಂಪೂರ್ಣವಾಗಿ ಸಂಘಜೀವಿ. ತಮಗೆ ಇಷ್ಟವಾದ ಸಭೆ, ಸಮಿತಿಗಳಿಗೆ ಹೋಗಿ ಬರುತ್ತಿದ್ದರು. ಹಳೆಯ ಸ್ನೇಹಿತರನ್ನು ಹುಡುಕಿಕೊಂಡು ಹೋಗುತ್ತಿದ್ದರು. ಹೊಸ ಸ್ನೇಹಿತರನ್ನು ಮಾಡಿಕೊಳ್ಳಲು ಹಿಂಜರಿಯುತ್ತಿರಲಿಲ್ಲ. ಅವರು ಇವರ ಮಗನ ವಯಸ್ಸಿನವರು ಆಗಿರಬಹುದು ಅಥವಾ ಮೊಮ್ಮಗನ ವಯಸ್ಸಿನವರು. ಇವರು ಮಾತ್ರ ಎಲ್ಲರ ವಯಸ್ಸಿನವರಾಗಿರುತ್ತಿದ್ದರು. ವಾಸ್ತವವಾಗಿ ಇವರಿಗೆ ಮಗನಾಗಲಿ ಮೊಮ್ಮಗನಾಗಲಿ ಇರಲಿಲ್ಲ. ಪ್ರಭಾತ್‌ಬಾಬು ಅವಿವಾಹಿತರು.

ಕೆಲವು ಅಲ್ಲಿನ ಇಲ್ಲಿನ ಮಾತನಾಡಿದ ಮೇಲೆ ನಾನು ನುಡಿದೆ "ಒಳ್ಳೇದು ಪ್ರಭಾತ್‌ಬಾಬು. ಮೊನ್ನೇರಾತ್ರಿ ಬರಬೇಕಾಗಿತ್ತಲ್ಲ ಏಕೆ ಬರಲಿಲ್ಲ. ನಾನು ನನ್ನ ನಾಲ್ಕಾರು ಸ್ನೇಹಿತರಿಗೆ ಹೇಳಿದ್ದೆ. ಅವರೆಲ್ಲಾ ನಿಮ್ಮನ್ನು ಭೇಟಿ ಮಾಡಲು ಉತ್ಸುಕರಾಗಿದ್ದರು. ನಾವು ಬಾಳ ಹೊತ್ತು ನಿಮ್ಮನ್ನು ನಿರೀಕ್ಷಿಸುತ್ತಾ ಇದ್ದೆವು."

ಪ್ರಭಾತ್‌ಬಾಬು ಹಲ್ಲಿನಿಂದ ನಾಲಿಗೆಯನ್ನು ಕಡಿಯುತ್ತ ನುಡಿದರು "ನಾನು ಮರೆತುಬಿಟ್ಟಿದ್ದೆ ಕಲ್ಯಾಣ್. ನಿಜವಾಗಿ ಮರೆತುಹೋಗಿತ್ತು. ಮೊನ್ನೆ ರಾತ್ರಿ ನಾನು ಆಲೀಪುರ್‌ನಲ್ಲಿ ಒಬ್ಬ ಸ್ನೇಹಿತರ ಮನೆಗೆ ಹೋಗಿದ್ದೆ. ಅಲ್ಲಿ ನಾವು ಒಂದು ಹುಟ್ಟುಹಬ್ಬ ಆಚರಿಸಿದೆವು."

"ನಿಮ್ಮ ಸ್ನೇಹಿತರ ಜನ್ಮದಿನವೇ ?" ನಾನು ಪ್ರಶ್ನಿಸಿದೆ.

ಪ್ರಭಾತ್‌ಬಾಬು ತಲೆ ಅಲ್ಲಾಡಿಸಿ ನುಡಿದರು "ಅಲ್ಲಾ ಸ್ವಾಮಿ, ಅವೇನೂ ಅಲ್ಲ. ಜನ್ಮದಿನ ಅವರು ಎಂದೂ ಆಚರಿಸಿಲ್ಲ. ಇದಕ್ಕೆ ಮೊದಲು ಅವರು ದುರ್ಗಾಪೂಜೆ ಅಥವಾ ಯಾವುದೇ ಹಬ್ಬವನ್ನು ಸಾಮೂಹಿಕವಾಗಲಿ ಅಥವಾ ವ್ಯಕ್ತಿಗತವಾಗಲಿ ಆಚರಿಸಿದ್ದು ನಾನು ಕಾಣೆ. ಸಂಧ್ಯಾವಂದನೆ, ಪೂಜೆ ಪಾಠ, ಜಪ ತಪ, ಆಸನ್–ವಾಸನ್ ಯಾವುದೂ ಇಲ್ಲ. ನಾನೇ ಆಗಾಗ್ಗೆ ಹೇಳುತ್ತಾ ಇದ್ದೆ. 'ಶೈಲೆನ್ ದೆವ್ವಗಳಿಗೂ ಕೆಲವು ಆಚರಣೆಗಳಿವೆ. ನೀನೇನು ದೆವ್ವ ಪಿಶಾಚಿಗಳಿಗಿಂತ ದೊಡ್ಡೋನಾ' ಇದಾದ ಕೆಲ ದಿನಗಳ ನಂತರ ನಾನು ನೋಡುತ್ತೇನೆ. ಅವರು ಯಾವುದೋ ಒಂದು ಕಾರ್ಯವನ್ನು ಬಹಳ ನಿಷ್ಠೆಯಿಂದ ಆಚರಿಸುತ್ತಿದ್ದರು. ವರ್ಷದಲ್ಲಿ ಕೇವಲ ಒಂದು ದಿನ ಮಾತ್ರ ಈ ಕಾರ್ಯಕ್ಕೆ ಅವರು ಕೇವಲ ಒಬ್ಬನನ್ನೇ ಆಹ್ವಾನಿಸುತ್ತಿದ್ದರು."

ನಾನು ಪ್ರಶ್ನಿಸಿದೆ "ಬಹುಶಃ ಆ ವ್ಯಕ್ತಿ ತಾವೇ ಆಗಿರಬೇಕು ?" ಪ್ರಭಾತ್‌ಬಾಬು ಸಮ್ಮತಿಸಿದರು.

ಚಹ ಬಂತು. ಪ್ರಭಾತ್‌ಬಾಬು ಒಂದು ಗುಟುಕು ಚಹ ಗುಟುಕರಿಸಿ ಜೇಬಿನಿಂದ ಸಿಗರೇಟ್ ಒಂದನ್ನು ತೆಗೆದು ಬೆಂಕಿ ಹತ್ತಿಸಿದರು. ಪ್ರಭಾತ್‌ಬಾಬು ಯಾವಾಗಲೂ

ಸೇದುವುದು ಅಗ್ಗದ ಸಿಗರೇಟ್. ನಾನು ಸಿಗರೇಟ್ ಸೇದುವುದಿಲ್ಲ. ಇದು ತಿಳಿದಿದ್ದೂ ಅವರು ಸುಮ್ಮನೆ ನನ್ನತ್ತ ಸಿಗರೇಟ್ ಪಾಕೇಟ್ ಸರಿಸುತ್ತಾ ಪ್ರಶ್ನಿಸಿದರು. "ಇದು ನಡೆಯುತ್ತೆ ಅಲ್ವೆ ?" ನಾನು ತಲೆ ಅಲ್ಲಾಡಿಸಿ ಬೇಡವೆಂದೆ. ಅದನ್ನು ನೋಡಿ ಮುಗುಳ್ನಗುತ್ತಾ ಅವರು ನುಡಿದರು "ನೀವು ಒಳ್ಳೆ ಮಜವಾಗಿದ್ದೀರಿ. ನಾನು ಯಾವಾಗ ಸಿಗರೇಟ್ ಕುಡಿಯೋದನ್ನು ಕಲಿತೆ ನಂಗೇ ನೆನಪಿಲ್ಲ. ಬಹುಶಃ ತಾಯಿಯ ಹಾಲು ಕುಡಿಯುವುದನ್ನು ಬಿಟ್ಟ ಕೂಡಲೇ ಸಿಗರೇಟ್ ಹಿಡ್ಕೊಂಡೆ ಅಂತಾ ಕಾಣ್ಸುತ್ತೆ."

ನಾನು ಪ್ರಶ್ನಿಸಿದೆ "ತಾವು ಯಾವ ಕಾರ್ಯಾರಂಭದ ಬಗ್ಗೆ ಹೇಳುತ್ತಾ ಇದ್ದೀರಿ ?"

ಪ್ರಭಾತ್‌ಬಾಬು ನುಡಿದರು "ಸ್ವಲ್ಪ ನಿಲ್ಲಿ ಸಾಬ್... ನಿಲ್ಲಿ... ಕಥೆ ಬರೆಯೋ ವೃತ್ತಿಯಂತೂ ನನಗಿಲ್ಲ. ಆದರೂ ಕಥೆ ಬರೆಯೋ ನೀತಿ ನಿಯಮಗಳು ನಂಗೊತ್ತು. ನಾನು ಮದುವೆ ಆಗಿಲ್ಲ. ಆದರೆ ನೂರಾರು ಮದುವೆಗಳಿಗೆ ಹೋಗಿ ಬಂದಿದ್ದೀನಿ. ಸಸ್ಪೆನ್ಸ್ ಈಗಲೇ ಹಾಳು ಮಾಡೋನಲ್ಲ ನಾನು. ಕಥೆಯ ಸಾರವನ್ನು ಈಗಲೇ ನಾನು ಹಾಳು ಮಾಡಿಬಿಟ್ರೆ ನನ್ನ ಕಥೇನ ನೀವೇಕೆ ಕೇಳಬೇಕಾಗಿದೆ ?"

ಈ ಕಥೆ ನಂದಲ್ಲ. ನನ್ನ ಸ್ನೇಹಿತನದು. ಅದಕ್ಕೆ ಇದನ್ನು ಹೇಳಲು ನಂಗೆ ಸ್ವಲ್ಪ ಭಯವಾಗುತ್ತಾ ಇದೆ. ತಮ್ಮ ಹೊಟ್ಟೇಲಿ ಯಾವ ಮಾತೂ ನಿಲ್ಲಲ್ಲ. ನಾನು ಹೇಳೋ ಕಥೇನಾ ನೀವು ಸುಮ್ಮನೆ ಕೇಳಿಕೊಂಡು ಹತ್ತು ಜನರಿಗೆ ತಲುಪಿಸಿದಾಗಲೆ ನಿಮಗೆ ಸಮಾಧಾನ. ಆದರೆ ಕಲ್ಯಾಣಬಾಬು ಈ ಕಥೇನ ನೀವು ಬರೆಯುವುದರಿಂದ ನಿಮಗೆ ಲಾಭವಿಲ್ಲ. ಈ ಕಥೆ ಕೇಳೋರೂ ಯಾರೂ ನಿಮಗೆ ಸಿಕ್ಕಲ್ಲ. ಬಹಳ ಹಳೆಯ ಕಥೆ. ಬಹಳ ಹಿಂದಿನ ಮಾತು. ಆದ್ರೆ ನಮಗೆ ಅದು ಹೊಸದಾಗೇ ಇತ್ತು. ಅದು ನಮ್ಮ ಯೌವ್ವನದ ದಿನದ ವಿಷಯ. ಹಿಂದಿನ ಕಾಲದ ಮಾತು ಅಂತಾನೇ ತಿಳಿದುಕೊಳ್ಳಿ. ಸುಮಾರು ಅರ್ಧ ಶತಮಾನದ ಹಿಂದಿನ ಮಾತಿರಬಹುದು. ಆದರೂ ಅನ್ನುತ್ತೆ, ಅದು ನಿನ್ನೆ ಮೊನ್ನೆ ನಡೆದದ್ದು ಅಂತಾ. ಕೆಲವು ಸಾರಿ ಅನ್ನುತ್ತೆ. ಅದು ಐತಿಹಾಸಿಕ ಅಥವಾ ಪ್ರಾಗೈತಿಹಾಸಿಕ ಯುಗ ಅಂತಾ.

ಆ ಕಾಲದಲ್ಲಿ ಕಲ್ಕತ್ತಾದಿಂದ ಪಶ್ಚಿಮ ಸೀಮೆಯ ಯಾವುದೋ ಒಂದು ನಗರಕ್ಕೆ ನನ್ನ ವರ್ಗ ಆಗಿತ್ತು. ನಾನೇನು ಗೃಹ ವ್ಯಾಮೋಹಿಯೇನಲ್ಲ. ಆದರೂ ಕಲ್ಕತ್ತಾದಿಂದ ಅಲ್ಲಿಗೆ ಹೋಗಲು ಮನಸ್ಸು ಒಪ್ತಾ ಇರಲಿಲ್ಲ. ಕಲ್ಕತ್ತಾದಲ್ಲೇ ನನ್ನೆಲ್ಲಾ ಸ್ನೇಹಿತರಿದ್ದರು. ಆಫೀಸಿನ ಕೆಲಸ ಆದ ಮೇಲೆ ಅವರ ಮನೆಗಳಿಗೇ ಸುತ್ತಾ ಇದ್ದೆ... ಎಷ್ಟೋ ಬಾರಿ ಎಷ್ಟೋ ರಾತ್ರಿಗಳನ್ನು ಸಹ ಹೀಗೆ ಕಳೆಯುತಿದ್ದೆ. ಆ ಸ್ನೇಹಕೂಟಗಳಲ್ಲಿ ಸಾಹಿತ್ಯ, ಸಂಗೀತ, ನಾಟಕ ಎಲ್ಲವೂ ಇರುತ್ತಿದ್ದವು. ನನ್ನ ವರ್ಗಾವಣೆ ಆಗಿದ್ದ ಸ್ಥಳದಲ್ಲೇ ಕೆಲಸ ಬಿಟ್ಟು ಮತ್ತೇನೂ ಇರ್ಲಿಲ್ಲ. ಆ ನೌಕರಿ ತಾನೇ ಎಂಥಾದ್ದು ಕೇಳಿ. ಸೈನ್ಯದ ಸಿಪಾಯಿಗಳಿಗೆ ಊಟ ತಿಂಡಿ ಪೋಷಾಕಿಗೆ ಎಷ್ಟೆಷ್ಟು ಲಕ್ಷ ಖರ್ಚಾಗುತ್ತೆ. ಇದರ ಪೈಸಾ ಪೈಸಾ ಲೆಕ್ಕ ಬರೆದು ಇಡಬೇಕಾಗಿತ್ತು. ನನ್ನ ಜೀವನಕ್ರಮದಲ್ಲಿ ಲೆಕ್ಕಪತ್ರಕ್ಕೆ ಸ್ಥಳವೇ ಇರಲಿಲ್ಲ. ಆದರೂ ನೌಕರಿ ನೌಕರಿಯೇ. ಪತಿಯನ್ನು ಸತಿ ಪ್ರೀತಿಸದೆ ಇದ್ದರೂ ಆ ಪತಿ ಜೊತೆಯಲ್ಲೇ ಜೀವನ ಸಾಗಿಸೋದು

ಬಿಟ್ಟು ಬೇರೆ ಗತಿಯೇ ಇರಲಿಲ್ಲ. ಆ ಶಹರಿನ ಒಂದು ಮಧ್ಯಮ ವರ್ಗದ ಮೆಸ್‌ನಲ್ಲಿ ನಾನು ಹೋಗಿ ತಳ ಊರಿದೆ. ನಾನು ಒಬ್ಬನೇ ಜೊತೆಯಲ್ಲಿ ಯಾರೂ ಇಲ್ಲದೆ ಇರಬೇಕಾಗುತ್ತೆ ಅಂತಾ ಯೋಚಿಸುವಂತಾಗಲಿಲ್ಲ. ನಮ್ಮ ಮೆಸ್‌ನ ಒಂದು ಕೊಠಡಿಯಲ್ಲಿ ಒಂದು ಸಾಧಾರಣ ಗಾತ್ರದ ಕೂಟ ಸೇರುತ್ತಾ ಇತ್ತು. ಅಲ್ಲಿ ಹಾಡು, ಹರಟೆ, ನಗು ತಮಾಷೆ, ಇಸ್ಪೀಟು, ಚದುರಂಗ ಎಲ್ಲಾ ನಡೀತಾ ಇದ್ದವು. ಇವನ್ನು ಬಿಟ್ಟು ಬೇರೆ ರೀತಿಯ ನಶೆ ಬೇಕಾಗಿದ್ದೋರು ಬೇರೆ ಏರ್ಪಾಡು ಮಾಡ್ಕೊಂಡಿದ್ರು. ಇದೇ ಗುಂಪಿಗೆ ಈ ಶೈಲೆನ್‌ಸೆನ್ ಬರೋದಿಕ್ಕೆ ಪ್ರಾರಂಭಿಸಿದ್ರು. ಶೈಲೆನ್ ಹಾಗೂ ನಾನು ಒಂದೇ ಆಫೀಸಿನವರಾಗಿದ್ದೆವು. ಸಹೋದ್ಯೋಗಿಗಳಾಗಿದ್ದೆವು. ಅದೂ ಒಂದೇ ವಿಭಾಗದಲ್ಲಿ ಕೆಲಸ ಮಾಡುತ್ತಾ ಇದ್ದೆವು. ಆದರೂ ಶೈಲೆನ್ ನನ್ನ ಥರಾ ಅಲ್ಲ. ಮನಸ್ಸಿಟ್ಟು ಚೆನ್ನಾಗಿ ಕೆಲಸ ಮಾಡತಾ ಇದ್ದ. ಸದ್ಗುಣದ ಹುಡುಗ. ಗುಣಕ್ಕಿಂತ ಹೆಚ್ಚಿನ ಆತನ ರೂಪು ಎಲ್ಲರನ್ನೂ ಆಕರ್ಷಿಸುತ್ತಿತ್ತು. ಆತ ನನ್ನ ಸ್ನೇಹಿತನಾದ್ರೆ ತಾನೇ ಏನು ? ಅವನು ನನ್ನಂತೆ ಕಪ್ಪಗಿರಲಿಲ್ಲ. ಕುತ್ಸಿತನೂ ಅಲ್ಲ. ನನಗಿಂತ ಒಂದೆರಡು ಅಂಗುಲ ಕಡಿಮೆ ಇದ್ದ. ನನ್ನ ಎತ್ತರ ಆರು ಅಡಿ ಆದರೆ ಶೈಲೆನ್ ಇಷ್ಟು ಎತ್ತರವಿರಲಿಲ್ಲ.

ಇದರಿಂದೇನೂ ಅವನಿಗೆ ಯಾವ ರೀತಿಯ ಕೊರತೆಯೂ ಆಗಿರಲಿಲ್ಲ. ಗೋಧಿ ಬಣ್ಣದ ನೀಳ ತಿದ್ದಿದ ಮೂಗು ಹಾಗೂ ಸುಂದರ ಕಣ್ಣು, ತಲೆಯ ಮೇಲೆ ದಟ್ಟವಾದ ಕಪ್ಪು ಕೂದಲು, ಸದೃಢ ಶರೀರ. ಹಾಗೆಂದರೆ ಅವನೇನು ಕ್ರೀಡಾಪಟುವಾಗಲಿ, ವ್ಯಾಯಾಮ ಮಾಡುವ ಮನುಷ್ಯನಾಗಲಿ ಆಗಿರಲಿಲ್ಲ. ಆತನಲ್ಲಿ ಹೆಂಗಸಿನ ಸುಂದರತೆಯೂ ಇರಲಿಲ್ಲ. ಆದರೆ ಪೌರುಷವಿತ್ತು. ಈ ಪೌರುಷತ್ವವೇ ಆತನ ಗಾಂಭೀರ್ಯದಲ್ಲಿ, ಧೈರ್ಯದಲ್ಲಿ, ಸ್ಥಿರ ಸ್ವಭಾವದಲ್ಲಿ ಸೆಟೆದು ಮುಂದೆ ನಿಲ್ಲುತ್ತಿತ್ತು. ನಮ್ಮ ಸ್ನೇಹ ಅಸಮ ಸ್ನೇಹವಾಗಿತ್ತು. ಆತನ ವ್ಯಕ್ತಿತ್ವದಲ್ಲಿದ್ದ ಎಷ್ಟೋ ಗುಣಗಳು ನನ್ನಲ್ಲಿರಲಿಲ್ಲ. ನನ್ನಲ್ಲಿ ಇದ್ದ ಯಾವುದೇ ಗುಣ ಆತನಲ್ಲಿ ಇದ್ದಿರಲಾರದು. ಅದನ್ನೇ ಆತನ ಮನಸ್ಸು ಗುರುತಿಸಿದ್ದಿರಬಹುದು. ನಮ್ಮಿಬ್ಬರ ಮಧ್ಯದ ಈ ಆಕರ್ಷಣೆ ಈ ಅಸಮತೆಯ ಸೆಳೆತಕ್ಕೆ ಕಾರಣವಾಗಿದ್ದಿರಬಹುದು.

ಶೈಲೆನ್ ನಮ್ಮ ಗುಂಪಿನಲ್ಲಿ ಬಂದು ಸುಮ್ಮನೆ ಕುಳಿತಿರುತ್ತಿದ್ದ. ಆಗಾಗ್ಯೆ ನನ್ನ ರ್‍ಯಾಕಿನಿಂದ ಯಾವುದಾದರೂ ಪುಸ್ತಕ ತೆಗೆದುಕೊಂಡು ಓದುತ್ತಿದ್ದ. ಇನ್ನು ಕೆಲವು ವೇಳೆ ನನ್ನ ಸ್ನೇಹಿತರ ಕಾರ್ಯಾಚರಣೆಯನ್ನು ನೋಡುತ್ತಾ ಕುಳಿತಿರುತ್ತಿದ್ದ. ಆತನದು ಲಜ್ಜೆಯ ಹಾಗೂ ಅಂಜಿಕೆ ತುಂಬಿದ ಸ್ವಭಾವ. ಈಗಂತೂ ಆತ ಹೀಗಿಲ್ಲ.

ನಾನು ಒಬ್ಬನೇ ಇದ್ದಾಗ ಶೈಲೆನ್ ನನ್ನೊಡನೆ ನುಡಿದ "ನಿನ್ನ ಹತ್ತಿರ ಒಂದು ಮಾತ್ನಾಡೋದಿದೆ."

"ಒಳ್ಳೇದು ಹೇಳಿಬಿಡು." ಆದರೆ ಮಾತನ್ನು ಪ್ರಾರಂಭಿಸಿ ಶೈಲೆನ್ ಸುಮ್ಮನಾದ.

ನಾನು ಹೇಳಿದೆ "ಏನಾಯ್ತು, ಇದೆಂಥಾ ಮಾತನಾಡೋ ವಿಧಾನ ?"

ಶೈಲೆನ್ ನುಡಿದ "ಹೋಗ್ಲಿ ಬಿಡು."

ನಾನು ನುಡಿದೆ "ಏಕೆ, ಬಿಡೋದೇಕೆ ? ನೀನು ಏನೋ ಹೇಳಲು

ಅನುಮಾನಿಸುತ್ತಾ ಇದ್ದೀಯಾ, ಅದನ್ನು ನಾನು ಹೇಳಿಬಿಡ್ತೀನಿ.'' ಇದಾದ ನಂತರ ಆತನ ದನಿಯನ್ನೇ ಅನುಕರಿಸುತ್ತಾ ನಾನು ನುಡಿದೆ ''ಪ್ರಭಾತ್ ನಂಗೆ ಯಾರೊಡನೆಯೋ ಪ್ರೇಮ ಉಂಟಾಗಿದೆ. ಅದು ಅಂಥಾ ಇಂಥಾ ಪ್ರೇಮ ಅಲ್ಲ. ಬಾಳ ಆಳವಾಗಿ ಇಳಿದು ಹೋಗಿದೆ. ನೀನೇ ಈಗ ನನ್ನ ಉದ್ಧರಿಸಬೇಕು.''

ಶೈಲೆನ್ ನುಡಿದ ''ನಿಂಗೆ ಹೇಗೆ ಗೊತ್ತಾಯಿತು. ಆ ಮಾತುಗಳೆಲ್ಲಾ ನನ್ನ ಮಾತೇ.''

''ಇದೆಲ್ಲಾ ತಿಳಿಯೋಕೆ ತಡ ಯಾಕೆ ಆಗುತ್ತೆ. ಆ ದಿನ ನಿನ್ನ ಈ ಮನೆಗೆ ಬಂದಾಗಲೇ ನಂಗೆ ಗೊತ್ತಾಗಿತ್ತು.''

ಶೈಲೆನ್ ಮೌನಿಯಾಗಿದ್ದ.

ಆ ನಗರದಲ್ಲಿ ನಾನೇನೋ ಮೆಸ್‌ನಲ್ಲಿದ್ದೆ. ಆದರೆ ಶೈಲೆನ್ ಸ್ಥಿತಿ ನನ್ನಂತೆ ಇರಲಿಲ್ಲ. ಅಲ್ಲಿ ಅವನ ತಂದೆ ಒಂದು ದೊಡ್ಡ ಮನೆಯಲ್ಲಿ ವಾಸಿಸುತ್ತಿದ್ದರು. ತಂದೆ ತಾಯಿ ಸಹೋದರ ಸಹೋದರಿಯರು ಎಲ್ಲಾ ಒಟ್ಟಿಗೆ ಒಂದು ಪರಿವಾರದಲ್ಲಿದ್ದರು.

ಆಫೀಸಿನ ಕೆಲಸ ಆದ ಮೇಲೆ ಶೈಲೆನ್ ಕೆಲವೊಮ್ಮೆ ನನ್ನನ್ನು ಅವರ ಮನೆಗೆ ಕರೆದೊಯ್ಯುತ್ತಿದ್ದ. ಅವರ ತಾಯಿ ನನ್ನನ್ನು ತಮ್ಮ ಮಗನಂತೆಯೇ ಪ್ರೀತಿಸುತ್ತಿದ್ದರು. ನಿಮ್ಮಲ್ಲಿ ಏನು ಮುಚ್ಚಿಡಲಿ. ಆ ದಿನಗಳಲ್ಲಿ ಎಷ್ಟೋ ಪ್ರವಾಸಿ ಬಂಗಲೆಯ ಬಾಗಿಲುಗಳು ನನಗಾಗಿ ಸುಲಭವಾಗಿ ತೆರೆಯುತ್ತಿದ್ದವು. ಆದರೆ ನನಗೆ ಶೈಲೆನ್‌ನ ಮನೆಯೇ ಅತ್ಯಂತ ಪ್ರಿಯವಾಗಿತ್ತು.

ಮಾಧುರಿಯನ್ನು ಅಲ್ಲೇ ನಾನು ಪ್ರಥಮ ಬಾರಿಗೆ ನೋಡಿದುದು. ಹುಡುಗಿಯ ರೂಪ ಹಾಗೂ ಅವಳ ಮುಖ ಲಕ್ಷಣ ನೋಡಿ ನನಗೆ ಅವಳು ಶೈಲೆನ್‌ನ ಸಹೋದರಿ ಇರಬಹುದೆಂದೆನಿಸಿತು. ಬಣ್ಣ ರೂಪ ಎಲ್ಲದರಲ್ಲೂ ಏಕತೆ ಇತ್ತು. ಆಕೆ ಹುಡುಗಿ ಆದುದರಿಂದ ಇನ್ನೂ ಬಿಳುಪಾಗಿ ಕಾಣುತ್ತಿದ್ದಳು. ದೊಡ್ಡ ಸುಂದರ ಮೂಗು, ಉದ್ದ ಮುಖವೇ ನನಗೆ ಹೆಚ್ಚು ಇಷ್ಟ. ಅವಳ ಮುಖವೂ ತೆರೆದ ಕಮಲದಂತೆ ಕಾಣುತ್ತದೆ ಎಂಬುದನ್ನು ಅಂದೇ ಪ್ರಥಮ ಬಾರಿಗೆ ಅರಿತೆ. ತಲೆಯ ಕೂದಲು ! ಓಹ್ ಎಷ್ಟು ಸೊಗಸು. ಎಷ್ಟು ದಟ್ಟ, ಎಷ್ಟು ಕಪ್ಪು, ಎಷ್ಟು ಉದ್ದ. ಅಂತಹ ರೇಷ್ಮೆಯಂತಹ ಸುಂದರ ಕೂದಲನ್ನು ನಾನು ಮತ್ತೆಲ್ಲೂ ಕಂಡೇ ಇಲ್ಲ. ಶೈಲೆನ್‌ನ ತಾಯಿಯನ್ನು 'ಮೌಸಿ' ಎಂದು ಆಕೆ ಕರೆಯುತ್ತಿದ್ದರೂ ಮಾಧುರಿ ಶೈಲೆನ್‌ನ ಯಾವುದೇ ಮೌಸಿಯ ಮಗಳಾಗಿರಲಿಲ್ಲ. ಇದು ನನಗೆ ಕೆಲವೇ ದಿನಗಳಲ್ಲಿ ಅರ್ಥವಾಯಿತು. ಮಾಧುರಿ ಮುಖರ್ಜಿ ಜಾತಿಗೆ ಸೇರಿದ ಹೆಣ್ಣು ಮಗಳು. ಶೈಲೆನ್ ವಾಸವಾಗಿದ್ದ ಬೀದಿಯಲ್ಲೇ ಮಾಧುರಿಯ ಮನೆಯೂ ಇತ್ತು. ಎರಡಕ್ಕೂ ಕೆಲವೇ ಗಜಗಳ ದೂರ. ಎರಡೂ ಪರಿವಾರಗಳಲ್ಲೂ ಒಳ್ಳೆಯ ಸ್ನೇಹವಿತ್ತು. ಬಂದು ಹೋಗುವುದು ಮುಂತಾದವುಗಳೆಲ್ಲಾ ಇದ್ದವು. ಈ ಮನೆಯ ತಾಯಿ ಆ ಮನೆಯ ಮಕ್ಕಳಿಗೆ ಮೌಸಿ ಆದರೆ ಈ ಮನೆಯ ಮಕ್ಕಳಿಗೆ ಆ ಮನೆಯ ತಾಯಿಯೂ ಮೌಸಿಯಾಗಿದ್ದಳು.

ಶೈಲೆನ್ ಪ್ರಶ್ನಿಸಿದ ''ನಿಂಗೆ ಹ್ಯಾಗೆ ಗೊತ್ತಾಯಿತು ?''

ನಾನು ನುಡಿದೆ ''ನೀವಿಬ್ಬರು ಕದ್ದು ಕದ್ದು ನೋಡೋ ರೀತಿಯಿಂದಲೇ ನನಗೆ

ಅರ್ಥವಾಯಿತು. ನಿಮ್ಮ ಟೇಬಲ್ ಮೇಲೆ ಮಾಧುರಿಗೆ ಸೇರಿದ್ದ ಪುಸ್ತಕ ಬೇರೆ ಇತ್ತು. ಅವಳ ಸಂಗೀತದ ಹಾಳೆಯ ಮೇಲೆ ನೀವು ಬರೆದಿದ್ದ ಅವಳ ಹೆಸರನ್ನು ನೋಡಿ ನಾನು ಅರ್ಥ ಮಾಡಿಕೊಂಡೆ."

ಸಿಕ್ಕಿ ಬಿದ್ದಿದ್ದಕ್ಕೆ ಶೈಲೇನ್ ಮುಗುಳ್ನಕ್ಕು ನುಡಿದ "ಇಷ್ಟು ಅಲ್ಪ ಸಮಯದಲ್ಲಿ ಇಷ್ಟೊಂದು ನೋಡಿದ್ದೀರಿ ಪ್ರಭು. ನಿಮಗೆ ನಿಜವಾಗಿ ಗುಪ್ತಚಾರಿ ವಿಭಾಗದಲ್ಲಿ ಕೆಲಸ ಸಿಗಬೇಕಾಗಿತ್ತು."

ಶೈಲೇನ್ ನನ್ನನ್ನು ಪ್ರೀತಿಯಿಂದ 'ಪ್ರಭು' ಎಂದು ಕರೆಯುತ್ತಿದ್ದ. ಆಗಾಗ್ಗೆ 'ಗುರುದೇವ್' ಎಂದೂ ಸಂಬೋಧಿಸುತ್ತಿದ್ದ. ಏನಾದರೂ ನಾನು ತಾನೇ ಆತನ ಸ್ನೇಹಿತ, ಫಿಲಾಸಫರ್ ಹಾಗೂ ಗೈಡ್.

ಅಂದು ಸಿಕ್ಕಿ ಬಿದ್ದಿದ್ದರಿಂದ ಶೈಲೇನ್ ಎಲ್ಲಾ ವಿಷಯವನ್ನು ನನಗೆ ವಿವರಿಸಿ ಹೇಳಿದ. ಹೇಳುವುದಕ್ಕೇ ಆತ ಬಂದಿದ್ದುದು. ತನ್ನ ಯೌವ್ವನದ ಪ್ರೀತಿ, ಎಲ್ಲರ ಕಣ್ಣು ತಪ್ಪಿಸಿ ಭೇಟಿ ಮಾಡುತ್ತಿದ್ದುದು, ಪ್ರಥಮ ತರುಣಿಯನ್ನು ಭೇಟಿಯಾಗುವಾಗ ತನಗೆ ಆಗಿದ್ದ ಒಂದು ತರಹ 'ನಶೆ' ಮುಂತಾದವುಗಳನ್ನೆಲ್ಲಾ ಶೈಲೇನ್ ಬಿಚ್ಚುಮನಸ್ಸಿನಿಂದ ನನಗೆ ಹೇಳಿದ. ಒಂದು ಕಾಲದಲ್ಲಿ ಅವರಿಬ್ಬರೂ ಎಲ್ಲವನ್ನು ಮುಚ್ಚಿಡುವುದನ್ನೇ ಇಚ್ಛಿಸಿದ್ದರು. ಮನೆಯವರಿಂದ ಮುಚ್ಚಿಟ್ಟಿದ್ದಲ್ಲದೆ ತಮ್ಮಲ್ಲೂ ಮುಚ್ಚಿಟ್ಟುಕೊಂಡಿದ್ದರು. ಆದರೆ ಅದು ಸಾಧ್ಯವಿರಲಿಲ್ಲ. ಆದರೆ ಈಗ ಅವರಿಬ್ಬರೂ ಇಚ್ಛಿಸುತ್ತಿದ್ದರು. ತಮ್ಮಿಬ್ಬರ ವಿಷಯವನ್ನು ಎರಡೂ ಮನೆಯವರು ಅರಿತು ಬೇಗ ಮದುವೆಗೆ ಸ್ವೀಕೃತಿ ನೀಡಲಿ ಎಂದು. ಯಾವ ಮನೆಯಲ್ಲಿ ಮಾಧುರಿ ಹುಡುಗಿಯಾಗಿ ಆವರಿಸಲ್ಪಡುತ್ತಿದ್ದಳೋ ಅದೇ ಮನೆಯಲ್ಲಿ ಅವಳಿಗೆ ಸೊಸೆಯ ಸ್ಥಾನ ಗಳಿಸಿ ಬೆಳದಿಂಗಳು ಹರಿಸಲಿ. ಶೈಲೇನ್ ಆದರ್ಶ ಹುಡುಗನೆಂದು ಆ ಮನೆಯಲ್ಲಿ ಗೌರವ ಪಡೆಯುತ್ತಿದ್ದವ ಅಲ್ಲಿ ಒಂದು ಗೌರವ ಸ್ಥಾನ ಗಳಿಸಲು, ಅದು ಅಳಿಯ ಸ್ಥಾನ.

ನಾನು ಪ್ರಶ್ನಿಸಿದೆ "ಮತ್ತೇನು ತೊಂದರೆ ?"

ಶೈಲೇನ್ ನುಡಿದ "ನಮ್ಮ ಜಾತಿಗಳು ಅಡ್ಡ ಬರುತ್ತಿವೆ."

ನಾನು ನುಡಿದೆ "ಥತ್, ನಿನ್ನ ಹಾಳು ಜಾತಿ. ಒಂದು ಕೆಲಸ ಮಾಡು. ಒಂದು ವೇಳೆ ಮಾಧುರಿಯ ತಂದೆ ತಾನಾಗಿ ನಿನ್ನ ಜೊತೆ ಮದುವೆ ಮಾಡಿಕೊಡದೆ ಇದ್ರೆ, ನೀನು ಸುಭದ್ರಾ ಹರಣ ಮಾಡಿಬಿಡು. ನಾನು ನಿಮ್ಮ ರಥ ನಡೆಸುತ್ತೀನಿ. ಸರ್ವಧರ್ಮಾ ಪರಿತಜ್ಯ ಮಾಮೇಕಮ್ ಶರಣಂ ಬ್ರಜ."

ಶೈಲೇನ್ ನುಡಿದ "ಇಲ್ಲಾ ಹಾಗೆ ಆಗೋಲ್ಲ."

"ಏಕೆ ? ಮಾಧುರಿಗೆ ಹೆದರಿಕೆನಾ ?"

"ಭಯ ಅಲ್ಲದೆ ಸಂಕೋಚ ಕೂಡ ಇದೆ. ಅಲ್ಲದೆ ಅವಳು ಕೋಪಿಷ್ಠ ತಂದೆಯನ್ನು ಬಹಳ ಆದರಿಸುತ್ತಾಳೆ."

ನಾನು ನುಡಿದೆ "ಸರಿ, ನಡಿ ಹಾಗಾದರೆ. ಇಂಜಿನಿಯರ್ ಮಹಾಶಯರನ್ನು ನಾವು ಭೇಟಿ ಮಾಡಿ ತಿಳಿ ಹೇಳಿ ಒಪ್ಪಿಸೋಣ. ನಾನು ನಿನ್ನ ವಕೀಲ ಆಗ್ತೀನಿ."

ಶೈಲೇನ್ ನುಡಿದ "ಓ ದೇವರೇ, ಇನ್ನು ನನ್ನ ಕಣ್ಮುಂದೆ ಅವರ ಮನೆ ಬಾಗಿಲು

ಮುಚ್ಚಿ ಹೋಗುತ್ತೆ. ನನ್ನ ತಂದೆ ಈ ಅಪಮಾನ ಸಹಿಸುತ್ತಾರೆಯೇ ? ಅವರ ಕಡೆಯ ಒಂದು ಕಿಟಕಿ ಸಹ ತೆರೆಯೋಲ್ಲ. ನಾನು ಪ್ರಶ್ನಿಸಿದೆ "ನಿಮ್ಮ ತಂದೆ ತಾಯಿ ಅಭಿಪ್ರಾಯವೇನು ?"

"ಅವರೂ ಬೇಡ ಅಂತಿದ್ದಾರೆ. ಇಂಥಾ ಪ್ರೇಮ ವಿವಾಹ ಅಂದರೆ ಅವರಿಗೆ ಭಯ. ನಾನು ಗಾಂಧರ್ವ ವಿವಾಹದ ನಂತರ ಬೇರೆ ಎಲ್ಲಿ ಹೊರಟು ಹೋಗುವೆನೋ, ತಂದೆತಾಯಿ, ಸಹೋದರ ಸಹೋದರಿಯನ್ನು ಎಲ್ಲಿ ನೋಡಿಕೊಳ್ಳುವುದಿಲ್ಲವೋ ಅನ್ನುವ ಭಯ." ಶೈಲೆನ್ ಸ್ವತಃ ಒಬ್ಬ ಅಂಜುಬುರುಕ. ಅವನ ಮುಂದೆ ನಾನು ನನ್ನ ಶೂರತನ ತೋರಿಸಲೇ ? ಅವನು ಇಂತಹ ಸಂದರ್ಭ ಒದಗಿಸಲಿಲ್ಲ. ಇದರಿಂದ ಎಲ್ಲವೂ ಹಾಳಾಗಿ ಹೋಗುತ್ತದೆ ಎಂಬ ಭಯ. ಈಗ ಅಲ್ಪಸ್ವಲ್ಪ ಏನು ದೊರೆಯುತ್ತಿದೆಯೋ ಅದನ್ನು ಕಳೆದುಕೊಳ್ಳಬೇಕಾಗುತ್ತದೆ. ಈಗ ಒಬ್ಬ ಮಾತನ್ನೊಬ್ಬರು ಕೇಳುವುದಂತೂ ನಡೆಯುತ್ತಿದೆ. ಕದ್ದು ಮುಚ್ಚಿ ನಡೆಯತ್ತಿರುವ ಅಲ್ಪಸ್ವಲ್ಪ ಪ್ರೇಮದ ಆಹ್ಲಾದವಾದರೂ ಲಭಿಸುತ್ತಿದೆ. ಇವುಗಳನ್ನು ಕಳೆದುಕೊಳ್ಳುವ ಭಯ ಅವನಿಗೆ.

ನಾನು ನುಡಿದೆ "ಶೈಲೆನ್ ನೀನು ಈ ಕಥೆಯಲ್ಲೇ ನೆನೆಯುತ್ತಾ ಜೀವಿಸು. ಇನ್ನು ಹೆಚ್ಚಿಗೆ ಪಡೆಯುವ ಹಂಬಲವನ್ನೇ ಇಟ್ಟುಕೊಳ್ಳಬೇಡ."

ಇದಾದ ನಂತರ ಎರಡೂ ಮನೆಗಳಿಗೂ ಮದುವೆಯ ದಳ್ಳಾಳಿಗಳು ಬಂದು ಹೋಗುತ್ತಿದ್ದರು. ಮಾಧುರಿಗೂ ಸಂಬಂಧ ಕೂಡಿಸಲು ಪ್ರಯತ್ನ ನಡೆಯುತ್ತಿದ್ದವು. ಶೈಲೆನ್‌ನ ಮನಸ್ಸಿಗೆ ವಿರುದ್ಧವಾಗಿ ಆತನಿಗೂ ಹುಡುಗಿಯನ್ನು ನೋಡುವ ಕ್ರಮ ನಡೆದಿತ್ತು. ಆಭರಣ ಭೂಷಿತೆ ಹುಡುಗಿಯ ಜೊತೆ ವರದಕ್ಷಿಣೆ ಸಹ ಕೊಡಲು ಹಲವರು ಸಿದ್ಧರಿದ್ದರು. ಆದರೆ ಶೈಲೆನ್ ಇದೊಂದಕ್ಕೂ ಒಪ್ಪುತ್ತಿರಲಿಲ್ಲ. ಹೀಗೆ ಮದುವೆಯ ದಳ್ಳಾಳಿಗಳು ಬರುತ್ತಿದ್ದರು ಹೋಗುತ್ತಿದ್ದರು. ಆದರೆ ವಿವಾಹದ ದೇವದೂತ ಪ್ರತಿನಿಧಿ ಇಬ್ಬರ ಮನೆಯ ಮೇಲೂ ಹಾರಿ ಬಂದು ಕುಳಿತುಕೊಳ್ಳಲಿಲ್ಲ.

ಇದಾದ ನಂತರ ನನಗೆ ವರ್ಗವಾಗಿ ನಾನು ಸಿಮ್ಲಾಕ್ಕೆ ಹೊರಟುಹೋದೆ. ನಾನು ಹೊರಟ ದಿನ ತಮ್ಮ ಕೈತೋಟದಲ್ಲಿ ನಿಂತಿದ್ದ ಮಾಧುರಿ ನನಗಾಗಿ ಒಂದು ಕೆಂಪು ಗುಲಾಬಿಯ ಗೊಂಚಲನ್ನು ಉಡುಗೊರೆಯಾಗಿ ನೀಡಿದಳು. ಹಾಗೆಯೇ ಎರಡು ಅಮೂಲ್ಯ ಕಣ್ಣೀರಿನ ಮುತ್ತುಗಳು.

ಅಧೋಮುಖವಾಗಿದ್ದ, ಒದ್ದೆಯಾಗಿದ್ದ ಅವಳ ಕಪ್ಪು ಕಣ್ಣುಗಳನ್ನು ನೋಡುತ್ತಾ ನಾನು ನುಡಿದೆ "ಮಧು, ಹೀಗೇಕೆ ಮಾಡ್ತಾ ಇದ್ದಿ ?"

ಮಾಧುರಿ ನುಡಿದಳು "ಪ್ರಭಾತ್ ಭಾಯಿ ನಂಗಂತೂ ಯಾರೂ ಸ್ನೇಹಿತರೇ ಇಲ್ಲ. ಖಂಡಿತಾ ಮರೀಬೇಡಿ."

"ನಾನು ನನ್ನ ಸ್ನೇಹಿತ 'ಪ್ರಭು' ಪ್ರತಿನಿಧಿ ಮಾತ್ರ. ಇದಕ್ಕಿಂತ ಹೆಚ್ಚಿಗೆ ನಾನೇನು ಅಲ್ಲ. ಆದರೂ ನನಗೆ ಆತನಿಗಿಂತ ಕಡಿಮೆ ಪ್ರೀತಿ ದೊರೆತಿದೆ ಎಂದು ಅನಿಸುವುದೇ ಇಲ್ಲ. ನಾನು ಶೈಲೆನ್‌ನನ್ನು ತಡೆಯುತ್ತೇನೆ. ಆದರೆ ನನ್ನದು ಅಲ್ಪತೃಪ್ತಿ ಸ್ವಭಾವ. ನಾನೂ ಸಹ ಜೀವನ ಪರ್ಯಂತ "ಸ್ವಲ್ಪ ಸ್ವಲ್ಪ ಕೂಡಿಸಿಯೇ ಭಿಕ್ಷೆಪಾತ್ರೆಯನ್ನು

ತುಂಬುತ್ತಿದ್ದೇನೆ.''

ಪ್ರಭಾತ್ ಬಾಬುಗಳು ಗಡಿಯಾರ ನೋಡಿಕೊಂಡರು. ಆನಂತರ ನುಡಿದರು ''ಓಹೋ ಇನ್ನೂ ನಾನು ಸಂಕ್ಷೇಪವಾಗಿ ಹೇಳುತ್ತಾನೆ. ಇಲ್ಲದೆ ಇದ್ದರೆ ಬಾಭಿ ಕೈಲಿ ಬೈಗುಳ ತಿನ್ನಬೇಕಾಗುತ್ತೆ. ಈಗ ಸಿಗುತ್ತಿರೋ ಒಂದು ಲೋಟ ಚಹ ತಪ್ಪಿಹೋದೀತು.'' ನನ್ನ ವರ್ಗ ಸಿಮ್ಲಾಕ್ಕೆ ಆದ ಕೆಲ ದಿನಗಳಲ್ಲೇ ಶೈಲೆನ್‌ನ ವರ್ಗ ಪಾಟ್ನಾಗೆ ಆಯಿತು. ಎಷ್ಟಾದರೂ ಸರ್ಕಾರವೇ ನಮ್ಮ ಭಾಗ್ಯ ನಿರ್ಮಾತರು ತಾನೇ ? ಒಮ್ಮೊಮ್ಮೆ ನಾವಿಬ್ಬರೂ ಒಂದೇ ಸ್ಥಳದಲ್ಲಿ ಒಂದು ತಿಂಗಳಿಂದ ಹಿಡಿದು ಒಂದು ವರ್ಷದ ತನಕ ಒಂದೇ ಆಫೀಸಿನಲ್ಲಿ ಇರುತ್ತಿದ್ದೆವು. ಒಂದು ಮೇಜಿನ ಇಕ್ಕೆಡೆ ಕುಳಿತು ಕೆಲಸ ಮಾಡುತ್ತಿದ್ದೆವು, ಹರಟೆ ಹೊಡೆಯುತ್ತಿದ್ದವು. ದಿನ ಕಳೆದಂತೆ, ವಯಸ್ಸಾದಂತೆ ನಮ್ಮ ಮುಖಚರ್ಯೆಯೂ ಬದಲಾಗುತ್ತಿತ್ತು. ಇದೇ ರೀತಿಯಲ್ಲಿ ನಾವು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬದಲಾಗುತ್ತಾ ಹೊರಟೆವು. ಆದರೆ ಒಂದು ಮಾತ್ರ ಬದಲಾಗಿರಲಿಲ್ಲ. ಅದೇ ನಮ್ಮ ಸ್ನೇಹ. ಸ್ನೇಹದ ಪ್ರಾರಂಭದ ಆರು ತಿಂಗಳಲ್ಲಿ ಸಂಬೋಧನೆ ''ತಾವು'' ಇಂದ ''ನೀವು''ಗೆ ಇಳಿದಿತ್ತು. 'ನೀವು' ಇಂದ 'ನೀನು' ಗೆ ಪರಿವರ್ತನೆಗೊಳ್ಳಲು ಒಂದು ವರ್ಷಕ್ಕೆ ಹೆಚ್ಚಿಗೆ ತೆಗೆದುಕೊಂಡಿರಲಿಲ್ಲ. ನಾವು ದೂರ ದೂರದಲ್ಲಿದ್ದರೂ ಒಬ್ಬರ ಸಮಾಚಾರ ಇನ್ನೊಬ್ಬರಿಗೆ ತಿಳಿಯುತ್ತಿತ್ತು. ಕಾಗದ ಪತ್ರಗಳಿಂದಲೇ ಎಲ್ಲವೂ ತಿಳಿಯುತ್ತಿತ್ತು. ಭೇಟಿ ಮಾತ್ರ ಒಮ್ಮೊಮ್ಮೆ ಆಗುತ್ತಿತ್ತು. ಮಾಧುರಿಯ ತಾಯಿ ಅಷ್ಟು ಹೊತ್ತಿಗೆ ಮರಣಿಸಿದ್ದಳು. ಇಬ್ಬರು ಸಹೋದರರೂ ದೊಡ್ಡವರಾಗಿದ್ದರು; ತಂದೆ ಇನ್ನೂ ವೃದ್ಧರಾಗಿದ್ದರು. ಈಗ ಆ ತಂದೆ ಸಂಪೂರ್ಣವಾಗಿ ಅಸಹಾಯಕರಾಗಿ ತಮ್ಮ ಪುತ್ರಿಯನ್ನೇ ಅವಲಂಬಿಸಿದ್ದರು. ಮಾಧುರಿ ಇಂದು ಅವರಿಗೆ ಕೇವಲ ಮಗಳಾಗಿರಲಿಲ್ಲ. ಗತಿಸಿದ ತಾಯಿಯೂ ಆಗಿದ್ದಳು. ಶೈಲೆನ್‌ನ ತಂದೆ ತಾಯಿಗಳೂ ಗತಿಸಿಹೋಗಿದ್ದರು. ಚಿಕ್ಕ ತಮ್ಮ ತಂಗಿ ಶೈಲೆನ್‌ನನ್ನು 'ತ್ವಮೇವ ಪಿತಾ ಚ ಮಾತಾ ತ್ವಮೇವ' ಎಂದು ತಿಳಿದಿದ್ದರು. ಶೈಲೆನ್ ಇವರೆಲ್ಲರ ಮದುವೆ ಮಾಡಿ ಮುಗಿಸಿದ್ದ. ಎಲ್ಲರೂ ತಮ್ಮ ತಮ್ಮ ನೌಕರಿ ಇರುವಲ್ಲಿಯೇ ಸಂಸಾರ ನಡೆಸಿದ್ದರು. ಆದರೂ ಈ ಹಿರಿಯ ಅಣ್ಣ ಶೈಲೆನ್ ಪರಿವಾರಕ್ಕೆ ಆಸರೆಯ ಆಲದಮರದಂತೆ ಇದ್ದ. ನಾನು ಅಂದೂ ಶೈಲೆನ್‌ಗೆ ಕಾಗದ ಬರೆಯುತ್ತಿದ್ದೆ. ಮಾಧುರಿಗೂ ಕಾಗದ ಬರೆಯುತ್ತಿದ್ದೆ.

ಇದಾದ ನಂತರ ನಾನು ಹಾಗೂ ಶೈಲೆನ್ ಒಟ್ಟಿಗೆ ನಿವೃತ್ತರಾದೆವು. ಇದಕ್ಕೆ ಹಿಂದೆ ಶೈಲೆನ್‌ನ ನೌಕರಿ ಮುಂದುವರಿದಿತ್ತು. ಹಲವಾರು ಬಡ್ತಿಗಳೂ ಲಭಿಸಿದ್ದವು. ನನಗೆ ಇಂಥಹುದು ಒಂದೂ ಲಭಿಸಿರಲಿಲ್ಲ. ಇದಕ್ಕೆ ಬದಲಾಗಿ ನಾನು ಭಾರತ ವರ್ಷವೆಲ್ಲಾ ಸುತ್ತಿ ದರ್ಶಿಸಿದೆ. ಮುಖಕ್ಕೆ ಬಣ್ಣ ಹಚ್ಚಿಕೊಂಡು ನಕಲಿ ಕೂದಲನ್ನು ಸಿಕ್ಕಿಸಿಕೊಂಡು ರಂಗದ ಮೇಲೆ ಹೀರೋ ಆಗಿ ಮೆರೆದೆ. ಈ ಮಧ್ಯೆ ಅರ್ಧ ಸಾಹಿತ್ಯಕಾರನಾಗಿ, ಅರ್ಧ ರಾಜ್ಯ ನೈತಿಕ ವ್ಯಕ್ತಿಯಾಗಿ ಹಲವೆಡೆ ಭಾಷಣಗಳನ್ನು ನೀಡಿದೆ. ಈ ನಡುವೆ ಧಾರ್ಮಿಕ ಸಭೆಗಳಿಗೆ ಹೋಗುತ್ತೇನೆ. ಇದನ್ನು ಅರಿತು ನಿಮಗೆ ನಗು ಬರಬಹುದು.

ಈ ದಿನಗಳಲ್ಲಿ ಪೆನ್‌ಷನ್ ತೆಗೆದುಕೊಳ್ಳುವಾಗ 'ಡಾಲ್‌ಹೌಸಿ'ಯಲ್ಲಿ ಶೈಲೆನ್‌ನ

ಭೇಟಿಯಾಗುತ್ತದೆ. ನಿವೃತ್ತರಾಗಿರುವುದರಿಂದ ನಾನು ಮತ್ತು ಶೈಲೆನ್ ಇಬ್ಬರೂ ಕಲ್ಕತ್ತಾದಲ್ಲಿ ನೆಲೆಸಿದ್ದೇವೆ. ಆತ ದಕ್ಷಿಣ ಕಲ್ಕತ್ತಾದಲ್ಲಿದ್ದರೆ ನಾನು ಉತ್ತರ ಕಲ್ಕತ್ತಾದಲ್ಲಿ.

ಬೇಗ ಬೇಗ ಈ ನಡುವೆ ಭೇಟಿಯಾಗುತ್ತಿರಲಿಲ್ಲ. ಪತ್ರ ವ್ಯವಹಾರವೂ ನಿಂತೇ ಹೋಗಿತ್ತು. ಶೈಲೆನ್ ಒಮ್ಮೆ ಬರೆದಿದ್ದ. 'ಈ ನಡುವೆ ನಿನ್ನ ಹಸ್ತಾಕ್ಷರ ಓದುವುದೇ ದುಸ್ಸಾಧ್ಯ. ನೀನು ಏನು ಬರೆದಿದ್ದಿ ಎಂಬುದೇ ಅರ್ಥವಾಗುವುದಿಲ್ಲ.' ಇದಾದ ನಂತರ ನಾನು ಕೋಪದಿಂದ ಆತನಿಗೆ ಪತ್ರ ಬರೆಯುವುದನ್ನೇ ನಿಲ್ಲಿಸಿದ್ದೆ. ಈ ನಡುವೆ ಆಗಾಗ್ಯೆ ಆತನೊಡನೆ ಫೋನಿನಲ್ಲಿ ಮಾತನಾಡುತ್ತೇನೆ. ಅಲೀಪುರದಲ್ಲಿ ಶೈಲೆನ್ ಒಂದು ಸುಂದರ ಮನೆಯನ್ನು ಕಟ್ಟಿಸಿದ್ದಾನೆ. ಮೊದಲು ಅಲ್ಲಿ ಅಣ್ಣನ ಮಗಳು ವಾಸಿಸುತ್ತಿದ್ದರು. ಈಗ ಮೊಮ್ಮಕ್ಕಳು ವಾಸಿಸುತ್ತಿದ್ದಾರೆ. ಒಬ್ಬರು ಸ್ಕೂಲಿನಲ್ಲಿ ಓದುತ್ತಿದ್ದರೆ ಇನ್ನೊಬ್ಬರು ಕಾಲೇಜಿನಲ್ಲಿ. ನಾನು ಯಾವ ಮನೆಯನ್ನು ಕಟ್ಟಿಸಿರಲಿಲ್ಲ. ತಂದೆ ತಾತರ ಮನೆಯಂತೂ ಇತ್ತು. ಅಣ್ಣನಂತೆ ನಾನು ಅದಕ್ಕೆ ಹಿಸ್ಸೆದಾರ. ಆದರೆ ಇದು ಹೆಸರಿಗೆ ಮಾತ್ರ. ತಮಗೆ ಗೊತ್ತಿರುವಂತೆ ನಾನು ಮಾನಸಿಕವಾಗಿಯೂ ಮನೆ ಮಠ ಇಲ್ಲದವನು. ನಾನು ಮನೆಯಲ್ಲಿ ಇದ್ದರೂ ತಾನೆ ಎಷ್ಟು ಹೊತ್ತು ಇರುತ್ತೇನೆ ? ಇಂದಿಗೆ ಸುಮಾರು ಹನ್ನೆರಡು ವರ್ಷಗಳ ಹಿಂದಿನ ಮಾತು. ನಾನು ಪೆನ್‌ಷನ್ ಹಣ ಎಣಿಸುತ್ತಿದ್ದೆ. ಯಾರೋ ನನ್ನ ಕೈಯನ್ನು ಭದ್ರವಾಗಿ ಹಿಡಿದುಕೊಂಡರು ಮತ್ತು ನುಡಿದರು 'ಹೇ ಪರಮಾರ್ಥವಾದಿ, ಹಣದ ಬಗ್ಗೆ ಇಷ್ಟೊಂದು ಲೋಭವೇಕೆ ?'

ನಾನು ನೋಡಿದೆ. ನನ್ನ ಹಿಂದೆ ಶೈಲೆನ್ ನಿಂತಿದ್ದ. ನಾನು ನಗುತ್ತಾ ನುಡಿದೆ "ಮುದಿ ವಯಸ್ಸಿನಲ್ಲಿ ಕಾಮಿನಿಯನ್ನು ಬಿಟ್ಟು ಬಿಡಬಹುದು. ಆದರೆ ಕಾಂಚನ್‌ಳನ್ನು ಅಲ್ಲಾ. ಹಣ್ಣು ಕೊಳ್ಳುವಾಗಲೂ ಹೀಗೆ ಅನಿಸುತ್ತದೆ ಅಲ್ಲವೆ ?"

ಶೈಲೆನ್ ನನ್ನನ್ನು ಒಂದು ಚಹದಂಗಡಿಗೆ ಕರೆದೊಯ್ದು "ನಿನ್ನೊಡನೆ ಮಾತನಾಡುವುದಿದೆ" ನುಡಿದ.

ಮೂಲೆಯ ಒಂದು ಟೇಬಲನ್ನು ಆರಿಸಿ ಇಬ್ಬರೂ ಎದಿರು ಬದಿರಾಗಿ ಕುಳಿತೆವು. ವೃದ್ಧಾಪ್ಯ ಯಾರದೋ ತಲೆ ಕೂದಲನ್ನು ಬೋಳಾಗಿಸಿದರೆ ಇನ್ನೊಬ್ಬರಿಗೆ ಹಲ್ಲನ್ನು ಕಿತ್ತುಕೊಂಡಿರುತ್ತದೆ. ಶೈಲೆನ್ ತಲೆಸಂಪೂರ್ಣವಾಗಿ ಬೋಳು. ನನ್ನ ಎರಡು ವಸಡುಗಳ ಹಲ್ಲು ನಕಲಿಯವು.

ಶೈಲೆನ್ ಹೆಚ್ಚಿಗೆ ಏನನ್ನೂ ಹೇಳದೆ ಬ್ಯಾಗಿನ ಪಾಕೇಟಿನಿಂದ ಒಂದು ಕವರನ್ನು ಹೊರತೆಗೆದು ಅದರಿಂದ ಒಂದು ಕಾಗದ ಎಳೆದು ನನ್ನ ಮುಂದೆ ತಳ್ಳುತ್ತಾ ನುಡಿದ "ಇದನ್ನು ಓದಿನೋಡು."

ನಾನು ನುಡಿದೆ "ಇದು ನಿನ್ನ ಕಾಗದ."

ಶೈಲೆನ್ ಗದರಿಸುವಂತೆ ನುಡಿದ "ಓಹೋ ಮೊದಲು ಓದಿ ನೋಡು. ನನ್ನ ಕಾಗದ ನೀನು ಓದೇ ಇಲ್ಲವೆ ?"

ನಾನು ಕವರಿನಿಂದ ಕಾಗದ ತೆಗೆದು ಓದಿದೆ. ಕಾಗದ ಪೂರ್ಣ ಸೈಜಿನದು. ಆದರೆ

ಆ ಪತ್ರದಲ್ಲಿ ಕೇವಲ ಎರಡು ಸಾಲುಗಳಿದ್ದವು.

"ನಿಮ್ಮೊಡನೆ ಕೆಲವು ವೈಯಕ್ತಿಕ ಮಾತುಕತೆ ಆಡುವುದಿದೆ."

ನಿಮ್ಮ ಮಾಧುರಿ

ನಾನು ನಗುತ್ತಾ ನುಡಿದೆ "ನಾನು ನನ್ನ ಮಾತಿನ ಸಂಶೋಧನೆಯನ್ನೇ ಮಾಡುತ್ತಿದ್ದೇನೆ. ಕಾಮಿನಿ ನಿನ್ನ ವೃದ್ಧಾಪ್ಯದಲ್ಲೂ ಬಿಡೋ ಹಾಗೆ ಕಾಣಿಸುತ್ತಾ ಇಲ್ಲ. ಈಗೆಲ್ಲಿದ್ದಾಳೆ ಅವಳು ?"

ಶೈಲೆನ್ ನುಡಿದ "ಅವಳ ಸಹೋದರುಗಳೆಲ್ಲಾ ನೌಕರಿಯಲ್ಲಿದ್ದಾರೆ. ಮಾಧುರಿ ಕೂಡ ಒಂದು ಸ್ಕೂಲಿನಲ್ಲಿ ಪಾಠ ಹೇಳುತ್ತಾ ಇದ್ದಳು. ಆದರೆ ಆರೋಗ್ಯ ಕೆಟ್ಟಿದ್ದರಿಂದ ಈ ಉಪಾಧ್ಯಾಯ ವೃತ್ತಿ ಬಿಡಬೇಕಾಯ್ತು. ಅವಳ ಅಪ್ಪಾ ಇವಳಿಗಾಗಿ ಹೆಚ್ಚಿಗೆ ಏನೂ ಬಿಟ್ಟೇ ಹೋಗಿಲ್ಲ ಅಂತಾ ಕೇಳಿದ್ದೀನಿ. ಮೂವತ್ತು ಸಾವಿರ ತಮ್ಮ ಈ ಮಗಳ ಹೆಸರಿಗೆ ಬಿಟ್ಟು ಹೋದರು. ಹುಡುಗರಿಗೂ ಅಲ್ಪಸ್ವಲ್ಪ ಬಿಟ್ಟಿದ್ದಾರೆ."

ಪ್ರಸ್ತುತದ ವಿಷಯ ನನಗೇನೂ ತಿಳಿಯದು. ಈ ನಡುವೆ ನಾನು ಯಾವ ವಿಷಯವನ್ನು ಹುಡುಕಿ ತೆಗೆಯಲು ಇಚ್ಛಿಸುವುದೇ ಇಲ್ಲ. ಬಹಳ ದಿನಗಳಿಂದ ಕಾಗದ ಪತ್ರಗಳೂ ಇರಲಿಲ್ಲ.

ಶೈಲೆನ್ ನುಡಿದ "ಬಹಳ ದಿನದಿಂದ ಅವಳು ಕಾಯಿಲೆಯಿಂದ ನರಳ್ತಾ ಇದ್ದಾಳೆ. ನಡಿ ಹೋಗಿ ಒಂದ್ಸಾರಿ ನೋಡಿಕೊಂಡೇ ಬಂದು ಬಿಡೋಣ, ಏನು ಅಂಥಾ ಅಗತ್ಯ ಮಾತಿದ್ಯೋ ಆಡೋದು."

"ನೀನು ಹೋಗಿ ಬಾ. ನಾನು ಬಂದರೆ ನಿಮ್ಮಿಬ್ಬರ ಮಾತುಕತೆಯೇ ನಿಂತುಹೋಗುತ್ತೆ."

"ಇಲ್ಲ.. ಇಲ್ಲ ನೀನೂ ನನ್ನ ಜೊತೆ ಬಾ –ಈಗಲೇ ಹೊರಡು." ನಾನು ಎಂದಾದರೂ ಹೋಗೋಣವೆಂದೆ. ಆದರೆ ಶೈಲೆನ್ ಒಪ್ಪಲಿಲ್ಲ. ನುಡಿದ "ನಿನ್ನ ಜೊತೆ ಪುನಃ ಭೇಟಿ ಆಗುತ್ತೋ ಇಲ್ಲವೋ."

ನಾವಿಬ್ಬರೂ ನಮ್ಮ ನಮ್ಮ ಮನೆಗಳಿಗೆ ಟೆಲಿಫೋನಿನಲ್ಲಿ ತಿಳಿಸಿ ಬೈರಕ್‌ಪುರ ಕಡೆ ಹೊರಟೆವು. ಶೈಲೆನ್ ಟ್ಯಾಕ್ಸಿಯಲ್ಲಿ ಹೋಗಲು ಸೂಚಿಸಿದ. ನಾನೇ ತಡೆದು ನುಡಿದೆ "ಪೆನ್‌ಷನ್ ಹಣಾನ ಹಾಗೆಲ್ಲಾ ಲಂಗು ಲಗಾಮಿಲ್ಲದೆ ಖರ್ಚು ಮಾಡಬಾರದು. ನಡಿ ಬಸ್ಸಿನಲ್ಲೇ ಹೋಗೋಣ."

ಹೋಗುತ್ತಾ ದಾರಿಯಲ್ಲಿ ಕಾಲೇಜ್ ಸ್ಟ್ರೀಟ್‌ನ ಪೇಟೆಯಲ್ಲಿ ಒಂದು ಡಜನ್ ಹೊಸ ರಜನಿ ಗಂಧದ ಹೂಗೊಂಚಲುಗಳನ್ನು ಕೊಂಡೆ.

ಶೈಲೆನ್ ಹಾಸ್ಯ ಮಾಡುತ್ತಾ ನುಡಿದ "ನಿನ್ನಲ್ಲಿ ಇನ್ನೂ ಷೋಕಿ ಇದೆ."

ಆಕೆಯ ಮನೆ ಸ್ಟೇಷನ್ ಹತ್ತಿರದಲ್ಲೇ ಇತ್ತು. ಎರಡು ಅಂತಸ್ತಿನ ಮನೆಯಲ್ಲಿನ ಒಂದು ಫ್ಲಾಟಿನಲ್ಲಿ ಅವರು ವಾಸಿಸುತ್ತಿದ್ದರು.

ನಾವು ಬಾಗಿಲ ಚಿಲಕವನ್ನು ಬಡಿದೆವು. ಒಬ್ಬ ಸೊಸೆಯಂತಹ ಹುಡುಗಿ ಬಾಗಿಲು ತೆಗೆದಳು. ನಾವು ನಮ್ಮ ಪರಿಚಯವನ್ನು ಹೇಳಿಕೊಂಡೆವು. ಆಕೆ ನಮ್ಮಿಬ್ಬರನ್ನು ಮಾಧುರಿಯ ಕೊಠಡಿಗೆ ತಲುಪಿಸಿದಳು.

ಒಂದು ಚಿಕ್ಕ ಮಂಚದ ಮೇಲೆ ಮಾಧುರಿ ಮಲಗಿದ್ದಳು. ಬಿಳಿಯ ಹಾಸಿಗೆ ಸ್ವಚ್ಛವಾಗಿತ್ತು. ನಿಯಮಾನುಸಾರ ಹಾಸಲಾಗಿತ್ತು. ಕೊಠಡಿ ಸಹ ಬಹು ಅಚ್ಚುಕಟ್ಟಾಗಿ ಸಿಂಗರಿಸಲ್ಪಟ್ಟಿತ್ತು. ಆದರೆ ಮಾಧುರಿ ಹೇಗಾಗಿ ಹೋಗಿದ್ದಳು. ಹಾಸಿಗೆ ಬಿಟ್ಟು ಏಳಲು ಅಶಕ್ತಳಾಗಿರುವಂತೆ ಹಾಸಿಗೆಗೆ ಅಂಟಿಕೊಂಡು ಬಿಟ್ಟಿದ್ದಳು.

ನಮ್ಮನ್ನು ಕಂಡು ಮಾಧುರಿಯ ಶರೀರದಲ್ಲಿ ನವಶಕ್ತಿ ಬಂದಿತ್ತು. ಉತ್ಸಾಹದಿಂದ ಹಾಸಿಗೆಯ ಮೇಲೆ ಎದ್ದು ಕುಳಿತಳು.

"ನಂಗೊತ್ತಿತ್ತು ನೀನು ಬರ್ತಿ ಅಂತಾ" ನನ್ನ ಕಡೆ ನೋಡಿ ನುಡಿದಳು.

ಇದಾದ ನಂತರ ಮಾಧುರಿ ಮಾಡಿದ ಪ್ರಕರಣ (ಕಾಂಡ) ಕೇಳಿ. ತನ್ನ ಇಬ್ಬರು ಅತ್ತಿಗೆಯರನ್ನು ಕರೆದು ನುಡಿದಳು. "ಆ ಕೊಠಡಿಯಲ್ಲಿ ಲಕ್ಷ್ಮೀಪೀಠದ ಹತ್ತಿರ ಕುಂಕುಮದ ಭರಣಿ ಇದೆ. ಸ್ವಲ್ಪ ಅದನ್ನು ತರ್ತೀರಾ?" ಚಿಕ್ಕ ಸೊಸೆ ಕುಂಕುಮ ತಂದಳು. ಮಾಧುರಿ ಅದನ್ನು ತಾನೇ ತೆಗೆದುಕೊಂಡು ಅನಂತರ ಶೈಲೆನ್‌ನ ಕೈಗೆ ಕೊಟ್ಟು ಹೇಳಿದಳು "ಈ ಕುಂಕುಮ ನನ್ನ ಹಣೆಗೆ ಇಡಿ. ನಾನು ಕನ್ಯೆಯಾಗಿಯೇ ಸಾಯಲು ಇಚ್ಛಿಸುವುದಿಲ್ಲ."

ನಾನು ಕಣ್ಣು ಅಗಲಿಸಿ ನೋಡಿದೆ. ಮಾಧುರಿಯ ತಲೆಯಲ್ಲಿ ಹಿಂದಿನ ದಟ್ಟ ಕಪ್ಪು ಕೂದಲು ಇರಲಿಲ್ಲ. ಅದು ವಯಸ್ಸಿನ ಕಾರಣದಿಂದಲ್ಲ ರೋಗದ ಕಾರಣದಿಂದ ಕೂದಲು ತೆಳುವಾಗಿತ್ತು. ಮಧ್ಯೆ ಮಧ್ಯೆ ಬೆಳ್ಳಿಯ ಕೂದಲುಗಳೂ ಕಾಣಬರುತ್ತಿದ್ದವು.

ಶೈಲೆನ್ ಅವಳ ಹಣೆಗೆ ಕುಂಕುಮ ಇರಿಸಿದ. ಅತ್ತಿಗೆ ಶಂಖ ಊದಲು ಇಚ್ಛಿಸುತ್ತಿದ್ದಳು. ಆದರೆ ಮಾಧುರಿ ಸನ್ನೆ ಮಾಡಿ ಬೇಡವೆಂದಳು. ನಾನು ನುಡಿದೆ "ಮಧು ಹಣ್ಣಾದ ಕೂದಲಿಗೆ ಸಿಂಧೂರ ಹಚ್ಚಿಸಿಕೊಳ್ಳುವುದಕ್ಕಾಗಿಯೇ ಇಷ್ಟು ದಿನ ಕಾದೆಯಾ?"

ಬಿದಿಗೆ ಚಂದ್ರನಂತೆ ತೆಳುವಾದ ನವಿರು ಮುಗುಳ್ನಗೆ ಮಾಧುರಿಯ ಮುಖದಲ್ಲಿ ಮಿಂಚಿತು. ನುಡಿದಳು "ಪ್ರಭಾತ್ ಭಾಯಿ, ಈಗ ನೀವು ಮಂತ್ರ ಪಠಿಸಿ."

"ನಾನೇನು ಮಂತ್ರ ಹೇಳಲು ಬ್ರಾಹ್ಮಣನೇ? ನಾನಂತೂ ಈಗ ಮಂತ್ರಮುಗ್ಧನಾಗಿ ಹೋಗಿದ್ದೆ ಮಧು."

ಆದರೂ ನಾನು ನಿಧಾನವಾಗಿ ಎರಡು ಸಾಲಿನ ಆವೃತ್ತಿ ನಿರ್ಮಿಸಿ ನುಡಿದೆ 'ಯದದಂ ಹೃದಯಂ ತವ. ತದಿದಂ ಹೃದಯಂ ಮಮ'. ಅವರುಗಳು ಇದನ್ನು ಪುನರುಚ್ಚರಿಸಲಿಲ್ಲ. ಆದರೆ ಕಿವಿ ತೆರೆದು ಕೇಳಿದ್ದರು. ಜೀವನದಲ್ಲಿ ಅದೆಷ್ಟು ಬಾರಿ ಮದುವೆ ಮೆರವಣಿಗೆಯಲ್ಲಿ ಭಾಗವಹಿಸಿದ್ದೇನೆ. ಎಷ್ಟೋ ವಿಚಿತ್ರವಾದ ಸ್ಥಳಗಳಲ್ಲಿ, ಆಕ್ರಮಣಕಾರಿ ದುಸ್ಸಾಹಸ ಸಹ ಮಾಡಿದ್ದೇನೆ. ಆದರೆ ಕಲ್ಯಾಣಬಾಬು ಇಂಥಾ ದಿಬ್ಬಣದಲ್ಲಿ ಮಾತ್ರ ಪಾತ್ರ ವಹಿಸಿರಲಿಲ್ಲ. ಅಷ್ಟೇ ಅಲ್ಲ ಇಂಥಾ ಪುರೋಹಿತ ಕೂಡ ಆಗಿರಲಿಲ್ಲ.

ಅಂದು ರಜನಿಗಂಧ ಹೂ ಹಾರ ಕೊಂಡದ್ದು ಸಾರ್ಥಕವಾಯಿತು. ನಾನು ಆ ಹೂಗಳನ್ನು ಮಾಧುರಿಯ ಹಾಸಿಗೆಯ ಒಂದು ಬದಿಯಲ್ಲಿ ಇರಿಸಿದೆ. ಕೆಲ ನಿಮಿಷಗಳಿಗೆ ಅವಳ ರೋಗದ ಹಾಸಿಗೆ ಸುಹಾಗ ರಾತ್ರಿಯ ಶಯ್ಯೆಯಾಯಿತು.

ಇದಾದ ನಂತರ ಮಾಧುರಿ ಬಹಳ ದಿನ ಬದುಕಿರಲಿಲ್ಲ. ಅವಳ ಸಹೋದರರು ಅವಳ ಆರೈಕೆಗಾಗಿ ಬಹಳ ಹಣ ಖರ್ಚು ಮಾಡಿದರು. ಶೈಲೆನ್ ಸಹ ಈ ಬಗ್ಗೆ ತಾನು ಮಾಡಬಹುದಾದದ್ದೆಲ್ಲಾ ಮಾಡಿದ. ಕಲ್ಕತ್ತಾದ ಒಂದು ಉತ್ಕೃಷ್ಟ ನರ್ಸಿಂಗ್ ಹೋಂನಲ್ಲಿರಿಸಿದ. ಅವಳ ಹೊಟ್ಟೆಯ ಅಲ್ಸರ್ ಸರಿ ಹೋಗಲೇ ಇಲ್ಲ. ಆಪರೇಷನ್ ಮೇಜಿನ ಮೇಲೆ ಅವಳು ಸಾವನ್ನಪ್ಪಿದಳು. ಆಗ ನಾನು ಇನ್ನೊಮ್ಮೆ ಒಂದು ಡಜನ್ ರಜನಿ ಗಂಧದ ಹೂಗೊಂಚಲು ಕೊಂಡು ಅಲ್ಲಿಗೆ ಹೋಗಿದ್ದೆ.

ದೇಹಕ್ಕೆ ಬೆಂಕಿ ಇಡುವ ಕಾರ್ಯವನ್ನು ಶೈಲೆನ್ ಮಾಡಿದ. ತನ್ನಲ್ಲಿದ್ದ ಐದು ಸಾವಿರ ಖರ್ಚು ಮಾಡಿ ಶ್ರಾದ್ಧ ಮಾಡಿದ. ನೂರಾರು ಜನರಿಗೆ ಭೋಜನ ಮಾಡಿಸಿದ. ಕೀರ್ತನ ಮಂಡಲಿಗಳನ್ನು ಕರೆಸಿ ಹಾಡಿಸಿದ. ನಮಗಂತೂ ಇದೆಲ್ಲಾ ಕಂಡು ಆಶ್ಚರ್ಯವಾಗಿತ್ತು. ಶೈಲೆನ್ ಹಿಂದೆಂದೂ ಈ ಬಗ್ಗೆ ವಿಶ್ವಾಸವನ್ನೇ ತೋರಿಸಿರಲಿಲ್ಲ. ಮಾಧುರಿಯ ಇಚ್ಛಾನುಸಾರವೇ ಆತ ಇದನ್ನೆಲ್ಲಾ ಮಾಡಿದ್ದು ಎಂದು ನಾನು ತಿಳಿದೆ.

ಆ ಮಧುರ ಹೃದಯ ಇನ್ನೊಂದು ಅಂತಿಮ ಇಚ್ಛೆಯ ಮಾದರಿಯನ್ನು ಶೈಲೆನ್ ನನಗೆ ತೋರಿಸಿದ. ಹಿಂದೆ ಹೇಗೆ ಆತ ತನ್ನ ಜೇಬಿನಲ್ಲಿ ಪ್ರೇಮಪತ್ರ ಇಟ್ಟುಕೊಂಡು ತಿರುಗುತ್ತಿದ್ದನೋ ಅದೇ ರೀತಿ ಆ ದಿನಗಳಲ್ಲಿ ಒಂದು ದಪ್ಪ ಕವರನ್ನು ಹಿಡಿದು ಸುತ್ತುತ್ತಿದ್ದ. ಮಾಧುರಿ ಸಾಯುವ ಮುನ್ನ ಅದನ್ನು ನೀಡಿ ನುಡಿದಿದ್ದಳು "ನನ್ನ ಮರಣಕ್ಕೆ ಮುಂಚೆ ಅದನ್ನು ಒಡೆಯಬಾರದು."

ಅದನ್ನು ಒಡೆದಾಗ ಕಂಡುಬಂತು. ಕೆಂಪು ಆ ಲಕೋಟೆಯೊಳಗೆ ಕಾಗದವೇನೂ ಇರಲಿಲ್ಲ. ಆದರೆ ಶೈಲೆನ್‌ನ ಹೆಸರಿಗೆ ಬರೆದಿದ್ದ ಮೂವತ್ತು ಸಾವಿರ ರೂಪಾಯಿಗಳ ಒಂದು ಚೆಕ್ ಇತ್ತು.

ಶೈಲೆನ್ ನುಡಿದ "ಈ ಹಣ ನಾನೇಕೆ ತೆಗೆದುಕೊಳ್ಳಲಿ ?"

"ಇದು ಮದುವೆ ಹಣ ತೆಗೆದುಕೊ. ಉಡುಗೊರೆ ಏನೂ ಸಿಗಲಿಲ್ಲ. ವರದಕ್ಷಿಣೆ ಏಕೆ ಬಿಡುವೆ ?"

ಆ ಹಣದಲ್ಲಿ ಕೆಲವು ರೂಪಾಯಿಗಳನ್ನು ಮಾಧುರಿಯ ಸಹೋದರರಿಗೆ ನೀಡಿದ. ಉಳಿದ ಹಣದಲ್ಲಿ ಮಾಧುರಿಯ ಹೆಸರಿನಲ್ಲಿ ಆಸ್ಪತ್ರೆಯಲ್ಲಿ ಒಬ್ಬ ರೋಗಿಗೆ ಎಲ್ಲಾ ವೈದ್ಯಕೀಯ ಸೌಲಭ್ಯ ನೀಡಲು ಒಂದು ಹಾಸಿಗೆಯನ್ನು ಕಾದಿರಿಸಿದ.

ಇದಾದ ನಂತರ ಪ್ರತಿವರ್ಷವೂ ಮಾಧುರಿಯ ನೆನಪಿಗಾಗಿ 'ಮೃತ್ಯು ತಿಥಿ' ಆಚರಿಸುತ್ತಿದ್ದಾನೆ. ಈ ಕಾರ್ಯಕ್ರಮದ ಏಕಮಾತ್ರ ಅತಿಥಿಯೆಂದರೆ 'ನಾನು'. ಆತನ ಕೊಠಡಿಯ ಒಂದು ಗೋಡೆಯ ಮೇಲೆ ಮಧ್ಯಮ ಗಾತ್ರದ ಮಾಧುರಿಯ ಒಂದು ಚಿತ್ರ ತಗುಲಿ ಹಾಕಿದೆ. ಅದು ಆಕೆಯ ಇತ್ತೀಚಿನ ಚಿತ್ರವಲ್ಲ. ಯುವತಿ ಆಗಿದ್ದಾಗಿನ ಚಿತ್ರವಾಗಿತ್ತು.

ಆ ಯುವತಿಯ ಫೋಟೋ ಮುಂದೆ ನಾವು ಇಬ್ಬರು ವೃದ್ಧರೂ ಎದಿರು ಬದಿರಾಗಿ ಕುಳಿತುಕೊಳ್ಳುತ್ತೇವೆ, ಚಹ ಕುಡಿಯುತ್ತೇವೆ, ಹರಟೆ ಹೊಡೆಯುತ್ತೇವೆ. ಅನೇಕ ಬಾರಿ ಏನೊಂದು ಮಾತನಾಡದೆ ಸುಮ್ಮನೆ ಕೂಡುವುದು ಸಹ ಉಂಟು.

ಶೈಲೆನ್ ಮೃತ್ಯು ಹಸ್ತದಿಂದ ಒಬ್ಬ ಪ್ರೇಮಿಯನ್ನು ಉಳಿಸಿದ್ದಾನೆ. ನಾನು

ವೃದ್ಧಾಪ್ಯದಿಂದ ಒಬ್ಬ ಸ್ನೇಹಿತನನ್ನು ಕಾಪಾಡುತ್ತಿದ್ದೇನೆ.

ಪ್ರಭಾತ್‌ಬಾಬು ಎದ್ದು ನಿಂತರು. ಛತ್ರಿ ಎದುರಿಗೆ ಇದ್ದರೂ ಇಂದು ಅದನ್ನು ಮರೆತು ಹೊರಡಲನುವಾದರು. ನಾನು ಅದನ್ನೆತ್ತಿ ಅವರ ಕೈಗಿತ್ತೆ.

ಅವರು ಮುಗುಳ್ನಕ್ಕು ನುಡಿದರು "ಥ್ಯಾಂಕ್ಸ್."

# ಸನ್ಮಾನ್ಯ ಪರೀಕ್ಷಕರಿಗೆ

*ನಾರಾಯಣ ಗಂಗೋಪಾಧ್ಯಾಯ*

ಸರ್,

ಪರೀಕ್ಷೆಯ ಈ ಉತ್ತರ ಪತ್ರಿಕೆಯನ್ನು ತಾವು ಪೂರ್ಣ ಓದುವಿರೋ ಇಲ್ಲವೋ ತಿಳಿಯದು. ತಾವು ನೋಡಿರಬಹುದು ನಾನು ಪ್ರಶ್ನೆಪತ್ರಿಕೆಯ ಒಂದು ಪ್ರಶ್ನೆಗೂ ಉತ್ತರ ಬರೆಯದೆ ಪೂರ್ಣ ವೇಳೆ ತಮ್ಮ ಪತ್ರ ಬರೆಯುತ್ತಿದ್ದೇನೆ. ಈ ಪತ್ರದ ಎರಡು ಪಂಕ್ತಿಯನ್ನು ಓದಿದ ಕೂಡಲೇ ನಿಮ್ಮ ಹುಬ್ಬು ಗಂಟಿಕ್ಕುತ್ತದೆ. ಮತ್ತು ಸೊನ್ನೆಯೊಂದನ್ನು ಹಾಕುತ್ತೀರಿ. ಅನಂತರ ನನ್ನ ಈ ಕೆಟ್ಟ ಬರವಣಿಗೆಗಾಗಿ ನನ್ನ ಹೆಸರನ್ನು ವಿಶ್ವವಿದ್ಯಾಲಯಕ್ಕೆ ಕಳುಹಿಸಿಕೊಡುವಿರಿ. ತಾವು ನನಗೆ ಶೂನ್ಯ ಕೊಡಿರಿ ಅಥವಾ ರಿಪೋರ್ಟ್ ಮಾಡಿ, ಈ ಬಗ್ಗೆ ನನಗೆ ಚಿಂತೆ ಇಲ್ಲ. ಈ ಲೇಖನವನ್ನು ತಾವು ಧೈರ್ಯದಿಂದ ಓದಲೂ ಬಹುದು ಎಂದು ಯೋಚಿಸುತ್ತೇನೆ. ಇದೇ ಆಶಯದಿಂದಲೇ ನಾನು ಇದನ್ನು ಬರೆಯುತ್ತಿದ್ದೇನೆ.

ಈ ಪ್ರಶ್ನೆಪತ್ರಿಕೆಯಲ್ಲಿ ನಾನು ಒಂದೆರಡಕ್ಕೆ ಉತ್ತರ ಬರೆಯಬಹುದಿತ್ತು. ಆದರೆ ಇದರಿಂದ ಪಾಸ್ ಆಗುವ ಅಂಕ ಲಭಿಸುವ ಆಶಯವಿಲ್ಲ. ಆದ್ದರಿಂದಲೇ ಈ ಬಗ್ಗೆ ಪ್ರಯತ್ನವನ್ನೇ ಮಾಡುವುದಿಲ್ಲ. ಅಲ್ಲದೆ ಈ ದಿನದ ಸಾಯಂಕಾಲದ ನಂತರ ಪಾಸು – ಫೇಲುಗಳ ಗಡಿಯಿಂದಲೇ ನಾನು ಹೊರಗಿರುತ್ತೇನೆ. ಕಲ್ಕತ್ತಾದ ಹತ್ತಿರ ಅಗಣಿತ ಸಂಖ್ಯೆಯ ರೈಲುಗಳು ಹೋಗಿಬರುತ್ತವೆ. ಇವುಗಳೊಂದರ ಗಾಲಿಗೆ ನನ್ನ ಇತಿಹಾಸ ಮುಗಿಸುತ್ತೇನೆ. ತಾವು ಲೇಖನವನ್ನು ಓದುವ ಹೊತ್ತಿಗೆ ಒಬ್ಬ ಯುವಕ ರೇಲಿನ ಗಾಲಿಗೆ ಸಿಕ್ಕಿ ನುಚ್ಚುನೂರಾದ ಈ ಚಿಕ್ಕ ವಾರ್ತೆ ತಮಗೆ ಹಳೆಯ ವಿಷಯವಾಗಿ ಸ್ಮೃತಿಪಟಲದಿಂದಲೇ ಮಾಸಿ ಹೋಗಿರುತ್ತದೆ.

ತಮ್ಮ ವಿವೇಕ ಈ ಜಾಗಕ್ಕೆ ತಲುಪಿದಾಗ ತಾವೊಮ್ಮೆ ಬಹುಶಃ ಬೆಚ್ಚಿ ಬೀಳಬಹುದು. ತಾವು ಹೇಳುತ್ತೀರಿ, ಛೀ ಛೀ ಪರೀಕ್ಷೆ ಪಾಸಾಗದ್ದಕ್ಕೆ ಆತ್ಮಹತ್ಯೆ? ಇದಕ್ಕೆ ಕೀಳಾದ ಹೇಡಿಯನ್ನು ಯೋಚಿಸುವುದೂ ಕಷ್ಟ. ದೇಶದ ನವಯುವಕರ ನೈತಿಕ ಶಕ್ತಿ ಇಷ್ಟು ಹಾಳಾದರೆ ದೇಶದ ಗತಿ ಏನು? ನವ ಸಮಾಜದ ಭವಿಷ್ಯವೇನು?

ಸರ್, ತಾವು ವಿಶ್ವಾಸವಿಡಿ. ತಮಗೆ ಇವೆಲ್ಲದರ ಅರಿವಿದೆ. ತಮಗೆ ವಿಶ್ವಾಸ

ಮೂಡಲಿ ನನಗೂ ಬದುಕುವ ಆಸೆ ಇತ್ತು. ನಾನೂ ಯೋಚಿಸಿದ್ದೆ, ನನ್ನದೊಂದು ಸ್ಪರ್ಶದಿಂದಲೇ ಸಂಥಾಲ್ ಪರಗಣದ ಈ ಹುಚ್ಚು ಗುಡ್ಡ ಗಾಡಿನ ನದಿ ನೀರು ಕೊಡುವ ಜಾಗದಲ್ಲಿ ನರ್ತಿಸತೊಡಗುತ್ತದೆ. ನಾನೊಂದು ಗುಂಡಿ ಒತ್ತಿದರೆ ಬಿಹಾರ ಮತ್ತು ಪಶ್ಚಿಮ ಬಂಗಾಳದ ಮಹತ್ವಪೂರ್ಣ ಇಲಾಖೆಗಳಲ್ಲಿ ವಿದ್ಯುತ್ ಜಗಜಗಿಸ ತೊಡಗುತ್ತದೆ. ಉಕ್ಕಿನ ಕಾರ್ಖಾನೆಯ ಆ ಕರಗಿದ ಕೆಂಪು ಲೋಹದಲ್ಲಿ ಭಾರತದ ಭವಿಷ್ಯದ ತಳಹದಿ ಹಾಕುತ್ತೇನೆ. ಸರ್ ನಿಶ್ಚಯವಾಗಿ ನನಗೆ ಆತ್ಮಹತ್ಯೆ ಮಾಡಿಕೊಳ್ಳುವ ಬಯಕೆ ಇಲ್ಲ.

ನಾನು ನೋಡುತ್ತಲೇ ಇದ್ದೇನೆ ನನ್ನ ಸುತ್ತಲೂ ವಿದ್ಯಾರ್ಥಿಗಳು ಬಹಳ ರಭಸವಾಗಿ ಉತ್ತರ ಪತ್ರಿಕೆಯ ಮೇಲೆ ಬರೆಯುತ್ತಿದ್ದಾರೆ. ಇಲ್ಲಿಯವರೆಗೆ ಬಹಳಷ್ಟು ಜನ ನನ್ನಂತೆಯೇ ಸ್ವಪ್ನ ನೋಡುವವರಾಗಿದ್ದಾರೆ. ಕೆಲವೇ ದಿನಗಳಲ್ಲಿ ಇವರು ಫಲಿತಾಂಶದ ಪಟ್ಟಿಯಲ್ಲಿ ತಮ್ಮ ಹೆಸರನ್ನು ಕಾಣದೆ ಸ್ವಪ್ನ ಭಗ್ನಗೊಂಡವರಾಗುತ್ತಾರೆ. ಕೆಲವರಂತೂ ಇವರಲ್ಲಿ ಭಾಗ್ಯಶಾಲಿಗಳಾಗಿರುತ್ತಾರೆ. ಅವರೇ ಹಸ್ತದಲ್ಲಿ ಭಾರತದ ಆಶೆಗಳ ಕಂದೀಲು ಹಿಡಿದಿರುತ್ತಾರೆ, ಇವರು ಭಾಗ್ಯಶಾಲಿಗಳು. ಮುಂದುವರಿಯಬೇಕು, ಮುಂದುವರಿಯಲಿ. ನನ್ನಂತಹ ಅಸಂಖ್ಯ ಜನಗಳು ಕಾರಣರಾಗುತ್ತಾರೆ. ಇಲ್ಲವೇ ಉಸಿರಾಡುತ್ತಿದ್ದರೂ ಜೀವಿಸಿರುವುದಿಲ್ಲ. ಇವರ ಯಾವ ವಿಷಯವೂ ಯಾವ ಪಂಚವಾರ್ಷಿಕ ಖಾತೆಯಲ್ಲೂ ಬರೆದಿಡುವುದಿಲ್ಲ. ನನಗೆ ತಮ್ಮ ಪರಿಚಯವಿಲ್ಲ, ನಿಮ್ಮನ್ನು ನೋಡಿಯೂ ಇಲ್ಲ. ಮುಂದೆ ನೋಡುವುದೂ ಇಲ್ಲ. ಆದರೆ ತಮ್ಮ ಬಗ್ಗೆ ನನಗೆ ಇಷ್ಟು ಮಾತ್ರ ಗೊತ್ತಿದೆ, ತಾವೊಬ್ಬರು ಉಪಾಧ್ಯಾಯರು. ವಿದ್ಯಾರ್ಥಿಗಳನ್ನು ತೀರಾ ಹತ್ತಿರದಿಂದ ನೋಡುವ ಅವಕಾಶವಿರುತ್ತದೆ. ಅವರ ಜೀವನದಲ್ಲಿನ ಉಬ್ಬರ ಇಳಿತ ತಮ್ಮ ಮೇಲೆ ಪ್ರಭಾವ ಬೀರುತ್ತದೆ. ಇದು ಸಾಧ್ಯವೋ ಇಲ್ಲವೋ, ಬಹುಶಃ ತಾವು ಅವರನ್ನು ಪ್ರೀತಿಸುತ್ತೀರಿ. ಈ ಪತ್ರವನ್ನು ತಾವು ಓದಿ, ಬಿಡಿ, ನನ್ನ ವಿಷಯವನ್ನು ತಮ್ಮಲ್ಲಿ ಬಿಟ್ಟು ಮತ್ತೆ ಯಾರಲ್ಲಿ ಹೇಳಲಿ ?

ಸರ್, ಸ್ವಪ್ನ ನೋಡುತ್ತಾ ನೋಡುತ್ತಾ ನಾನು ಮರತೇ ಬಿಟ್ಟಿದ್ದೇ. ಮೈದಿನಿಪುರದ ಒಂದು ಅನಾಮಧೇಯ ಗ್ರಾಮದ ಬೇಸಾಯಗಾರನೊಬ್ಬನ ಮಗ ನಾನು. ನನ್ನ ತಂದೆ ಸಾಮಾನ್ಯ ಬೇಸಾಯಗಾರನಾದರೂ ದಿಲ್ಲಿಯ ಹೆಸರಾಂತ ನಾಯಕನ ದೇಶಭಕ್ತಿಗಿಂತ ಆತನ ದೇಶಭಕ್ತಿ ಕಡಿಮೆಯಾದುದೇನಲ್ಲ. 1942ರ ಡಿಸೆಂಬರ್‌ನ ಒಂದು ರಾತ್ರಿ ಕಾಡೊಂದರಲ್ಲಿ ನಾನು ಜನ್ಮ ತಾಳಿದೆ. ಆಗ ನಮ್ಮ ಹಳ್ಳಿಯನ್ನು ಮಿಲಿಟರಿಯವರು ಸುಟ್ಟು ಹಾಕಿದರು. ರಾಷ್ಟ್ರೀಯ ಬಾವುಟ ಕೈಯಲ್ಲಿ ಹಿಡಿದಿದ್ದ ನಮ್ಮ ತಂದೆಯ ಶರೀರ ಬಂದೂಕದ ಗೋಲಿಗಳಿಂದ ತೂತಾಗಿ ಒಂದು ಹೊಲದಲ್ಲಿ ಬಿದ್ದಿತ್ತು.

ನನ್ನ ತಂದೆಗೆ ಆಸೆ ಇತ್ತು, ಮಗನಾದರೆ ಅವನಿಗೆ ಸ್ವಾಧೀನಕುಮಾರನೆಂದು ಹೆಸರಿಡಬೇಕೆಂದು. ಸ್ವತಂತ್ರದ ಪ್ರಳಯಾಗ್ನಿ ಧಗಧಗಿಸುತ್ತಿದ್ದಂತೆ, ತಂದೆಯ ಆಶೀರ್ವಾದ ಪಡೆದು ಸ್ವತಂತ್ರ ಆಕಾಶದ ಕೆಳಗೆ ಜನ್ಮ ತಳೆದಿದ್ದೆ. ಬ್ರಿಟೀಷರು ಅತ್ಯಾಚಾರದ ತಾಂಡವ ನೃತ್ಯ ದೇಶಾದ್ಯಂತ ನಡೆಸಿದ್ದರು. ಒಬ್ಬ ದೇಶಭಕ್ತ ವ್ಯಕ್ತಿಯ

ಮನಸ್ಸು ಪರಾಧೀನವಾಗಿರಲಿಲ್ಲ.

ಸರ್, ಈ ಹಾಳು ಚರಿತ್ರೆಯನ್ನು ಬಿಡಿ. ತಾವು ನನ್ನ ಪತ್ರವನ್ನು ಇಲ್ಲಿಯವರೆಗೆ ಓದಿದ್ದರೆ ಇನ್ನು ಮುಂದೆ ತಮ್ಮ ಧೈರ್ಯ ಕುಸಿಯುತ್ತದೆ. ನನ್ನ ವಂಶವೃಕ್ಷ ಅರಿಯುವ ತಲೆನೋವು ತಾವು ಏಕೆ ತರಿಸಿಕೊಳ್ಳುತ್ತೀರಿ. ನಾನು ಮೂರು ಗಂಟೆಗಿಂತ ಹೆಚ್ಚಿನ ಕಾಲವನ್ನಂತೂ ತೆಗೆದುಕೊಳ್ಳಲಾರೆ. ಆನಂತರ ಈ ಪತ್ರಿಕೆಯನ್ನು ತಾವು ಹೇಗೂ ಕಿತ್ತು ಹಾಕುತ್ತಿರಿ. ಆದಕ್ಕೆ ಸಂಕ್ಷಿಪ್ತವಾಗಿಯೇ ನನ್ನ ವಿಷಯ ಹೇಳುತ್ತೇನೆ. ನಾನೊಬ್ಬ ಬೇಸಾಯಗಾರನ ಮಗ. ಬೇಸಾಯಗಾರನ ಮಗ ವ್ಯವಸಾಯ ಮಾಡಿಕೊಂಡು ಜೀವನ ತಳ್ಳಬಹುದಾಗಿತ್ತು. ಅಥವಾ ಬರಗಾಲ ಬಂದಾಗ ಹೇಗೆ ಜನ ಉಪವಾಸ ಬಿದ್ದು ಇಲ್ಲವೇ ತಿನ್ನಬಾರದ ಆಹಾರ ತಿಂದು ಸಾಯುತ್ತಾರೋ ಹಾಗೆ ನಾನೂ ಸಾಯಬಹುದಿತ್ತು. ಆದರೆ ನನ್ನದು ಹೀನ ಅದೃಷ್ಟ. ನನ್ನ ಚಿಕ್ಕಪ್ಪ ನನ್ನನ್ನು ಒಂದು ಪುಟ್ಟ ಸ್ಕೂಲಿಗೆ ಸೇರಿಸಿಬಿಟ್ಟಿದ್ದ. ತಾವು ನಂಬುವಿರೋ ಇಲ್ಲವೋ ತಿಳಿಯದು, ಅಂತೂ ನನಗೆ ಒಂದು ಸ್ಕಾಲರ್‌ಶಿಪ್ ಸಹ ದೊರೆತಿತ್ತು. ಇದೇ ನನ್ನ ವೈರಿಯಾಗಿ ಪರಿಣಮಿಸಿತ್ತು. ನಾನು ಕನಸುಗಳನ್ನು ಕಾಣಲು ಪ್ರಾರಂಭಿಸಿದೆ. ನನ್ನ ತಾಯಿ ನನ್ನನ್ನು ಎದೆಗವಚಿಕೊಂಡು ಕಣ್ಣೀರಿನ ಕೋಡಿ ಹರಿಸಿದಳು. ತಂದೆ ಸತ್ತಮೇಲೆ ನನ್ನ ತಾಯಿ ಇಷ್ಟು ಅತ್ತಿದ್ದು ಮೊದಲಬಾರಿಗೆ ನಾನು ಕಂಡಿದ್ದೆ. ಇದಾದನಂತರ ನಾನು ಕಣ್ಣಲ್ಲಿ ಆಸೆಯ ಭಾವನೆಯನ್ನು ಹೊತ್ತು ಚಿಕ್ಕಪ್ಪನ ಜೊತೆಯಲ್ಲಿ 8 ಮೈಲಿ ದೂರದ ಬಿಡಾಗಂಜ್‌ನ ಹೈಸ್ಕೂಲ್ ಸೇರಲು ಹೊರಟೆ. ಹಾಸ್ಟಲ್‌ನಲ್ಲಿ ಇರಲು ಹಣವಿರಲಿಲ್ಲ. ಹತ್ತಿ ಮತ್ತು ಇತರ ಧಾನ್ಯದ ದಳ್ಳಾಳಿಯ ಮನೆಯಲ್ಲಿ ನನಗೆ ಸ್ಥಳ ದೊರೆಯಿತು. ಅವರೇನೋ ನಮಗೆ ದೂರದ ಸಂಬಂಧಿಗಳು. ಆದರೆ ಈ ಬಡ ರೈತನ ಸಂಬಂಧಕ್ಕೆ ಬೆಲೆಯಿರಲಿಲ್ಲ. ಆತ ಭೂಮಿ ಉಳುವವನು ಹಾಗೂ ಊಳಿಗದವರೊಡನೆ ಸಂಪರ್ಕ ಇರಿಸಿಕೊಂಡಿದ್ದ. ಅಂದರೆ ಇವರಿಬ್ಬರ ಮಧ್ಯದ ಸಂಬಂಧ ಸಾಲಗಾರ ಮತ್ತು ಸಾಹುಕಾರನದಾಗಿತ್ತು. ನನ್ನ ಚಿಕ್ಕಪ್ಪ ಆತನ ಕೈಕಾಲು ಹಿಡಿದು ನನ್ನನ್ನು ಅವರಲ್ಲಿ ಇರಿಸಿಕೊಳ್ಳುವ ವ್ಯವಸ್ಥೆ ಮಾಡಿದ್ದ. ಹೈಸ್ಕೂಲಿಗೆ ನನ್ನ ದಾಖಲಾತಿಯಾಯಿತು. ನನ್ನ ಫೀಜು ಮಾಫಿ ಆಯಿತು. ಸರ್, ಆ ಮಹಾಜನರ ಮನೆಯಲ್ಲಿ ಲಕ್ಷ್ಮಿ ಸರಪಣಿಯಿಂದ ಬಂಧಿತಳಾಗಿದ್ದಳು. ಅವರ ಬಳಿಯಲ್ಲಿ ಎರಡು ಲಾರಿಗಳು ಇದ್ದವು; ಮೂರು ಗೋಡೌನುಗಳಿದ್ದವು. ಅವರು ಎಷ್ಟು ವ್ಯಾಪಾರ ಮಾಡಿದ್ದರೂ ಒಂದು ಬಿಡಿಕಾಸನ್ನು ವೃಥಾ ಕರ್ಚು ಮಾಡುತ್ತಿರಲಿಲ್ಲ. ಅವರು ಐವತ್ತು ಸಾವಿರ ಹಣ ಜೋಡಿಸಿ ಐನೂರು ಹಣ ದಾನ ನೀಡುತ್ತಿದ್ದರು. ನನಗೇನೋ ಅವರು ಸ್ಥಳ ನೀಡಿದ್ದರು, ಊಟ ಹಾಕುತ್ತಿದ್ದರು ಆದರೆ ಇವೆಲ್ಲಕ್ಕೂ ಪೂರ್ಣ ಹಣವನ್ನು ಪಡೆಯುತ್ತಿದ್ದರು.

ನನ್ನ ಈ ಲೇಖನ ನೋಡಿ ನನ್ನ ಬರಹ ಕೆಟ್ಟದ್ದಲ್ಲವೆಂದು ತಮಗೆ ಅರ್ಥವಾಗಿರಬಹುದು. ಅಷ್ಟೇ ಅಲ್ಲದೆ ನಾನು ಗಣಿತದಲ್ಲೂ ಹಿಂದಿರಲಿಲ್ಲ. ಆ ವರ್ಷದ ಪ್ರಥಮ ಪರೀಕ್ಷೆಯಲ್ಲಿ ನನಗೆ ಗಣಿತದಲ್ಲಿ 100 ಅಂಕಗಳು ಲಭಿಸಿದ್ದವು. ಮೊದ ಮೊದಲು ಆ ಕೃಪಾಶ್ರಯರು ನನ್ನಿಂದ ಕಾಗದ ಪತ್ರ ಬರೆಸುತ್ತಿದ್ದರು. ಅನಂತರ ನನ್ನಿಂದ ಲೆಕ್ಕ ಬರೆಸಲು ಪ್ರಾರಂಭಿಸಿದರು. ಮತ್ತೆ ಕ್ರಮವಾಗಿ

ಲೀಲಾದೇವಿಯ ಲೆಕ್ಕವನ್ನು ಸರಿಪಡಿಸಲು ನನ್ನನ್ನು ಉಪಯೋಗಿಸಿಕೊಳ್ಳಲು ಪ್ರಾರಂಭಿಸಿದರು. ಪ್ರತಿದಿನ ಎರಡು ಗಂಟೆ ಇದೇ ನನ್ನ ಕೆಲಸವಾಯಿತು.

ಓದಲು ನನಗೆ ಸಮಯ ರಾತ್ರಿ ಹನ್ನೆರಡರ ಮೇಲೆ ಮಾತ್ರ ದೊರೆಯುತ್ತಿತ್ತು. ಈಗ ತಾವೇ ಯೋಚಿಸಿ ಚೆನ್ನಾಗಿ ಓದಲು ನನಗೆ ಬೇರೆ ಮಾರ್ಗವಿತ್ತೆ? ಉಗ್ರಾಣಕ್ಕೆ ಅಂಟಿಕೊಂಡಂತೇ ಇದ್ದ ಒಂದು ಚಿಕ್ಕ ಕೋಣೆಯಲ್ಲೇ ನಾನು ವಾಸಿಸುತ್ತಿದ್ದೆ. ನನ್ನ ಜೊತೆಯಲ್ಲಿ ಒಬ್ಬ ಕಾರಕೂನ ಸಹ ಇದ್ದ. ಈತನ ವಯಸ್ಸು ನಲವತ್ತು ಮೀರಿತ್ತು. ಒಣ ಚರ್ಮದ ಮುಖ, ಸ್ವಲ್ಪ ವಿಲಕ್ಷಣ ಎನಿಸುವ ಅಗಲ ಕಣ್ಣುಗಳಲ್ಲಿ ಒಂದು ರೀತಿಯ ವಿಚಿತ್ರ ಹೊಳಪಿತ್ತು. ನಾನು ಓದುವುದಕ್ಕೆ ಪ್ರಾರಂಭಿಸುವುದೇ ತಡ ಆತ ಹುಕ್ಕಾ ಸೇದುತ್ತಾ ಕುಳಿತುಬಿಡುತ್ತಿದ್ದ.

ಆಗ ನನ್ನ ವಯಸ್ಸು ತಾನೇ ಎಷ್ಟು? ಸುಮಾರು ಹನ್ನೆರಡು ವರ್ಷ. ತಂಬಾಕು ರಸ ಹೀರುತ್ತಾ ಕಣ್ಣಿನಲ್ಲಿ ಹೊಳಪು ಹರಿಸಿ ಕೆಟ್ಟ ಕೊರಳ ಧ್ವನಿಯಲ್ಲಿ ಆತ ಹೇಳುತ್ತಿದ್ದುದು ಅಂದು ನನಗೆ ಅರ್ಥವಾಗುತ್ತಿರಲಿಲ್ಲ. ಅನಂತರ ನನಗೆಲ್ಲಾ ಅರ್ಥವಾಯಿತು. ನಾಲಿಗೆ ನುಡಿಯಬಾರದ ಕೆಟ್ಟ ಮಾತುಗಳನ್ನೆಲ್ಲಾ ಆತ ಆಡುತ್ತಿದ್ದ. ಹೇಗೆ? ಎಷ್ಟು ಜನ ಹುಡುಗಿಯರನ್ನು ಇವನು ಕೆಡಿಸಿದ್ದ ಎಂಬುದರ ಧಾರಾವಾಹಿ ವಿವರಣೆ ನೀಡುತ್ತಿದ್ದ.

ಒಳ್ಳೆಯದು, ಕೆಟ್ಟದ್ದು ನನಗೇನೂ ಅರ್ಥವಾಗುತ್ತಿರಲಿಲ್ಲ, ನನಗೆ ಬೇಸರ ಬಂದು ರೇಗುತ್ತಿದ್ದೆ "ನೀವು ದಯವಿಟ್ಟು ಸುಮ್ಮನಾಗಿ, ನನಗೆ ಓದಲು ಬಿಡಿ."

ಆತ ನುಡಿಯುತ್ತಿದ್ದ "ಅರೇ, ಸುಮ್ನಿರು ರೈತನ ಮಗ ವಿದ್ಯಾಸಾಗರ ಆಗಲು ಸಾಧ್ಯವೇ? ಹೂಂ, ಹುಕ್ಕಾ ಹಿಡಿದುಕೊ, ತಂಬಾಕು ಕುಡ್ಯೋದು ಕಲಿ, ಇದೇ ಮುಂದೆ ಕೆಲಸಕ್ಕೆ ಬರೋದು."

ಕಾರಕೂನನಿಗೆ ಆಯಾಸವಾದರೆ ಲಾಟೀನ್ ಊದಿ ಆರಿಸಿ ಬಿಡುತ್ತಿದ್ದ. ಸಾಮಂತನ ಲೆಕ್ಕದ ಪ್ರಕಾರ ಎಷ್ಟು ಸೀಮೆ ಎಣ್ಣೆ ಸಿಗುತ್ತಿತ್ತೋ, ಆದ್ದರಿಂದ ನಾವು ಒಂಬತ್ತರ ನಂತರ ದೀಪ ಉರಿಸುವ ಸಾಧ್ಯತೆ ಇರಲಿಲ್ಲ. ಸ್ಕಾಲರ್‌ಷಿಪ್ ಹಣದಿಂದ ನನಗೆ ಅಗತ್ಯವಾದ ವಸ್ತುಗಳನ್ನು ಕೊಂಡ ಮೇಲೆ ಎಣ್ಣೆ ಕೊಳ್ಳಲು ಹಣ ಉಳಿಯುತ್ತಿರಲಿಲ್ಲ. ಆದರೂ ಕ್ಲಾಸಿನಲ್ಲಿ ಪ್ರಥಮ ಅಥವಾ ದ್ವಿತೀಯ ಸ್ಥಾನ ಗಳಿಸುತ್ತಾ ನಾನು ಎಂಟನೆ ದರ್ಜೆ ತಲಪಿದೆ. ಆಗಲೇ ಪುಸ್ತಕ ಕೊಂಡುಕೊಳ್ಳುವುದಕ್ಕೆ ಸಮಸ್ಯೆ ಕಾಣಿಸಿಕೊಂಡದ್ದು. ಸ್ಕೂಲ್ ಫೈನಲ್‌ಗೋಸ್ಕರ ಪುಸ್ತಕ ಖರೀದಿಸಲು ಎಪ್ಪತ್ತು ಎಂಭತ್ತು ರೂಪಾಯಿಗಳ ಅಗತ್ಯವಿತ್ತು. ಚಿಕ್ಕಪ್ಪ ಧಾನ್ಯ ಮಾರಿ ಕೆಲ ರೂಪಾಯಿ ನೀಡಿದರು. ಸಾಮಂತರು ಹತ್ತು ರೂಪಾಯಿ ಕೊಟ್ಟರು, ಹೆಡ್ ಮಾಸ್ಟರ್ ಕೃಪೆ ಮಾಡಿ ಮೂರು ಪುಸ್ತಕಗಳನ್ನು ನೀಡಿದರು. ಇಷ್ಟೆಲ್ಲಾ ಆದರೂ ಅಗತ್ಯದ ಅರ್ಧದಷ್ಟೂ ಪೂರೈಸಲಿಲ್ಲ.

ಸಾಮಂತರ ಹತ್ತು ರೂಪಾಯಿಗಾಗಿ ಖಾತೆ ಪುಸ್ತಕಗಳ ಮೇಲೆ ಖಾತೆ ಪುಸ್ತಕ ಬರೆಯಬೇಕಾಯಿತು.

ಸರ್, ನನಗೆ ಸ್ಕಾಲರ್‌ಷಿಪ್ ದೊರೆತಾಗ ನಾನು ಸಾಧಾರಣ ವಿದ್ಯಾರ್ಥಿಗಳಿಂದ ಮೇಲ್ಮಟ್ಟದಲ್ಲಿದ್ದೇನೆ ಅನಿಸಿತ್ತು, ನನ್ನಲ್ಲಿರುವ ಈ ಶಕ್ತಿಯಿಂದಲೇ ಸ್ವಾಧೀನಕುಮಾರು

ಸ್ವತಂತ್ರ ಭಾರತದಲ್ಲಿ ಗೌರವದಿಂದ ತಲೆ ಎತ್ತಿ ನಿಲ್ಲಲು ಸಮರ್ಥನಾಗುತ್ತಾನೆ, ಯಾವ ಭಾರತಕ್ಕಾಗಿ ನನ್ನ ತಂದೆ ರಕ್ತ ಹರಿಸಿದ್ದನೊ ಈ ಭಾರತದಲ್ಲಿ ನನಗೆ ಒಳ್ಳೆಯ ಸ್ಥಾನ ಲಭಿಸುತ್ತದೆ ಎಂದು ನಂಬಿದ್ದೆ. ಆದರೆ ಹಾಗೆ ಆಗಲಿಲ್ಲ, ನಾನು ಸರಿಯಾಗಿ ಓದಲು ಆಗುತ್ತಿಲ್ಲ, ಸರಿಯಾಗಿ ಪರೀಕ್ಷೆಯಲ್ಲೂ ಕೂಡಲಾಗುತ್ತಿಲ್ಲ. ಪರೀಕ್ಷೆಯ ಫಲಿತಾಂಶ ಬಂದಾಗ ನಾನು ನೋಡಿದೆ, ನಾನು ಮೂರನೆ ದರ್ಜೆಯಲ್ಲಿ ಉತ್ತೀರ್ಣನಾಗಿದ್ದೆ. ಹೆಡ್ ಮಾಸ್ತರಿಂದ ಹಿಡಿದು ಎಲ್ಲರೂ ನನಗೆ ಛೀಮಾರಿ ಹಾಕಿದರು.

ಎರಡು ದಿನಗಳ ಪರ್ಯಂತ, ನಾನು ಮುಖ ಮುಚ್ಚಿಕೊಂಡು ಮಲಗಿದ್ದೆ, ಏಳಲೂ ಇಲ್ಲ, ತಿನ್ನಲೂ ಇಲ್ಲ. ನನ್ನ ತಲೆಯ ಮೇಲೆ ತಾಯಿಯ ಕಣ್ಣೀರು ಟಪಟಪ ಉದುರುತ್ತಿತ್ತು. ತಾಯಿ ನುಡಿದಳು, ಏಳು ಮಗು, ಏಳು, ಪುನಃ ಮನಸ್ಸಿಟ್ಟು ಓದು. ಜೀವನದಲ್ಲಿ ಖಂಡಿತಾ ನೀನು ದೊಡ್ಡವನಾಗಿ ಏನನ್ನಾದರೂ ಮಾಡೇ ತೋರಿಸುತ್ತಿ, ನಿನ್ನಂತಹವರೇ ಎಷ್ಟು ಜನ ದುಃಖಿತ ಹುಡುಗರು ಪರೀಕ್ಷೆಯಲ್ಲಿ ಉತ್ತೀರ್ಣರಾಗಲು ಶಕ್ತರಾಗಿಲ್ಲ, ಅವರ ಬಗ್ಗೆ ಕೊಂಚ ಯೋಚಿಸು.

ಸರ್, ನನ್ನನ್ನು ನಾನೇ ಸಂತೈಸಿಕೊಂಡೆ. ಈ ಸಾರಿ ನಾನು ಕಲ್ಕತ್ತಾಗೆ ಬಂದೆ, ಬಂದು ಮಾಡಿದ್ದಾದರೂ ಏನು? ಸಾವಂತರಿಂದ ಸರಕಾರ್ ಅಧಿಕಾರಿಗಳ ಹೆಸರಿಗೆ ಕಾಗದ ಬರೆಸಿಕೊಂಡು ಬಂದೆ. ಸರಕಾರ್ ಸಾವಂತನ ಬಂಧುವಾಗಿದ್ದರು. ದೊಡ್ಡ ಬೀದಿಯಲ್ಲಿ ಅವರ ತಂಬಾಕಿನ ಅಂಗಡಿ ಇತ್ತು. ನಾನು ಅಲ್ಲೇ ವಾಸಿಸತೊಡಗಿದೆ.

ಇಲ್ಲಿ ನಾನು ಅದೇ ಕೆಲಸವನ್ನು ಮಾಡಬೇಕಾಯಿತು. ಅಗತ್ಯ ಬಿದ್ದಾಗ ಅದರ ಪೂರೈಕೆಗಾದರೂ ನಾನು ಹೊರಡಬೇಕಾಗುತ್ತಿತ್ತು, ಆದರೂ ಅನಿಸುತ್ತಿತ್ತು, ಎಷ್ಟಾದರೂ ಕಲ್ಕತ್ತಾ ಕಲ್ಕತ್ತಾನೇ. ಇಲ್ಲಿಯ ಜೀವನದಲ್ಲಿ ಜೀವವಿತ್ತು, ಅವಕಾಶವಿತ್ತು, ಎಷ್ಟೋ ದೊಡ್ಡ ಕಾಲೇಜುಗಳಿದ್ದು ಹೆಸರಾಂತ ವಿದ್ವಾಂಸ ಅಧ್ಯಾಪಕರಿದ್ದರು. ನನಗೆ ಅನ್ನಿಸುತ್ತಿತ್ತು ಈ ಕಾಲೇಜಿನೊಳಗೆ ಒಮ್ಮೆ ಪ್ರವೇಶ ದೊರೆತರೆ ಸಾಕು. ಜ್ಞಾನವಂತ ಪ್ರೊಫೆಸರ್‌ರವರ ಸ್ಪರ್ಶ ಮಾತ್ರದಿಂದ ನನ್ನ ಮನದಲ್ಲಿ ಸಾವಿರಾರು ಜ್ಞಾನದೀಪಗಳು ಹಚ್ಚಿ ಬೆಳಗುತ್ತವೆ. ಸಮಸ್ತ ಪ್ರಪಂಚದಲ್ಲಿನ ವ್ಯಾಕುಲ ಹೃದಯಗಳೆಲ್ಲವೂ ಕಲ್ಕತ್ತಾದೆಡೆ ಧಾವಿಸುತ್ತಿರುವಂತೆ ನನಗೆ ತೋರುತ್ತಿತ್ತು.

ಊಟದ ಧಾನ್ಯವನ್ನು ಮಾರಿ ಬಂದ ಹಣದಿಂದ ನಾನು ಕಾಲೇಜಿನಲ್ಲಿ ದಾಖಲಾದೆ. ಇದಕ್ಕಾಗಿ ಮನೆಯ ಸಮಸ್ತರೂ ಬಹುಶಃ ಕೆಲದಿನ ಅರ್ಧ ಹೊಟ್ಟೆ ಉಣ್ಣಬೇಕಾಗುತ್ತಿತ್ತು, ಅಥವಾ ಉಪವಾಸವೇ ಇರಬೇಕಾಗುತ್ತಿತ್ತು. ಆದರೆ ನನಗೆ ಅನಿಸುತ್ತಿತ್ತು, ನಾನು ಒಂದು ವೇಳೆ ಪರೀಕ್ಷೆಯಲ್ಲಿ ಚೆನ್ನಾಗಿ ಮಾಡಿದರೆ, ಮನುಷ್ಯನಂತೇ ವ್ಯವಹರಿಸಿದರೆ, ನಾನು ಮನುಷ್ಯನಾಗಬಲ್ಲನೇ? ಆದರೆ......

ಕಾಲೇಜಿನ ಕಟ್ಟಡ ಬಹಳ ದೊಡ್ಡದಿತ್ತು, ಅಲ್ಲಿ ಜನಗಳ ಭಾರಿ ಗುಂಪಿತ್ತು. ಆ ಗುಂಪನ್ನು ಸೀಳಿಕೊಂಡು ನಾನು ಕಾಲೇಜಿನ ಯಾವುದೇ ಆಫೀಸಿಗೆ ಹೋದರೂ ಕೇಳಿಬರುತ್ತಿತ್ತು. ಮೂರನೆಯ ದರ್ಜೆ? ಐ.ಎಸ್.ಸಿ. ಗೆ ಸೀಟ್? ಪ್ರಶ್ನೆಯೇ ಏಳುವುದಿಲ್ಲ. ಸರ್, ಒಂದಲ್ಲ, ಎರಡಲ್ಲ ಆರು ಕಾಲೇಜುಗಳಲ್ಲಿ ನನ್ನನ್ನು ಸೇರಿಸಿಕೊಳ್ಳಲು ನಿರಾಕರಿಸಿದರು. ಅಂತೂ ಕೊನೆಗೆ ನನಗೆ ಒಂದು ಚಿಕ್ಕ ಕಾಲೇಜಿನಲ್ಲಿ

ಸೀಟು ಸಿಕ್ಕಿತು. ನಾನು, ರಿಯಾಯಿತಿ ಬಗ್ಗೆ ವಿಚಾರಿಸಲು ಸಹ ಪ್ರಾಚಾರ್ಯರನ್ನು ಭೇಟಿ ಮಾಡಿದೆ. "ರಿಯಾಯಿತಿ" ಸಹಪ್ರಾಚಾರ್ಯರು ಸಿಟ್ಟಾಗಿ ನುಡಿದರು "ಥರ್ಡ್‌ಕ್ಲಾಸ್....."

"ಸರ್"

ಸಹಪ್ರಾಚಾರ್ಯರು ನುಡಿದರು "ಐ.ಎಸ್.ಸಿಗೆ ನಾವು ಹೇಗೂ ರಿಯಾಯಿತಿ ನೀಡುವುದಿಲ್ಲ, ಆದರಲ್ಲೂ ಮೂರನೆಯ ದರ್ಜೆ ಅಂದರೆ ..." "ಸರ್ ... ನಾನು ಬಡವನ ಮಗ" "ನಿನ್ನ ಹಾಗೆ ಇನ್ನು ಬಹಳ ಜನ ಬಡ ಹುಡುಗರಿದ್ದಾರೆ. ಹಾಗೆ ನೋಡಿದರೆ ನಾನು ಎಲ್ಲಾ ವಿದ್ಯಾರ್ಥಿಗಳಿಗೂ ಫೀಜ್ ಮನ್ನಾ ಮಾಡಬೇಕಾಗುತ್ತೆ. "ಸರ್, ನಾನು, ನಿಜವಾಗಿ ರೈತರ ಮಗ ಸರ್...." ಸಹಪ್ರಾಚಾರ್ಯರು ಬಹಳ ಸಿಟ್ಟಾದರು, ನುಡಿದರು "ಹಾಗಾದರೆ ಕಾಲೇಜಿಗೆ ಓದಲು ಏಕೆ ಬಂದೆ? ಕೃಷಿನೇ ಮಾಡಬೇಕಾಗಿತ್ತು, ಉಚ್ಚ ಶಿಕ್ಷಣ ನಿಮ್ಮಂಥವರಿಗಲ್ಲಾ, ಹೋಗು, ಸುಮ್ಮೆ ತೊಂದರೆ ಕೊಡ್ಬೇಡಾ."

ರಿಯಾಯಿತಿ ನನಗೆ ದೊರಕಲಿಲ್ಲ, ಹಿಂತಿರುಗುವಾಗ ಸಾಮಂತನ ಮುನ್ಷಿ ಹೇಳಿದ್ದ ಮಾತುಗಳು ನೆನಪಿಗೆ ಬಂದವು "ರೈತರ ಮಗ, ವಿದ್ಯಾಸಾಗರ ಆಗಲು ಹೊರಟಿದ್ದಾನೆ."

ಸರ್, ಅಂದೇ ನಾನು ಹಳ್ಳಿಗೆ ಹಿಂತಿರುಗಿ ಹೊರಟು ಹೋಗಬೇಕಾಗಿತ್ತು. ಅಲ್ಲಿ ಅಂದು ಸುಡುವ ಬಿಸಿಲು ಬೆಂಕಿ ಕಾರುತ್ತಿತ್ತು. ಬೆವರು ದೇಹದಿಂದ ಧಾರಾಕಾರವಾಗಿ ಸುರಿಯುಹತ್ತಿತು. ಆದರೂ ನನಗೆ ಆ ಸ್ಥಳವೇ ಸರಿ ಇತ್ತು. ಆಸೆ ಅಂಟಿದ್ದ ನನಗೆ ಈ ತರಹ ಅಪಮಾನ ಹಣೆಯಲ್ಲಿ ಬರೆದಿತ್ತು. ಕೊನೆಯವರೆಗೂ ನೋಡೇ ಬಿಡುತ್ತೇನೆ ಎಂಬ ಹಟದಿಂದ ಅಲ್ಲೇ ನಿಂತು ಬಿಟ್ಟೆ. ಸರಕಾರ್‌ನ ತಂಬಾಕಿನ ಒಂದು ಅಂಗಡಿ ಇತ್ತು. ಅದರ ಒಂದು ಮೂಲೆಯಲ್ಲಿ ಬಿದ್ದುಕೊಂಡಿರುತ್ತಿದ್ದೆ. ಸಾಮಂತನ ಮನೆಗೂ ಇಲ್ಲಿಗೂ ಎಷ್ಟೊಂದು ವ್ಯತ್ಯಾಸವಿತ್ತು? ಅದು ಚಿಕ್ಕದಾದರೂ ನನ್ನದೇ ಬಿಡಾರ. ಆದರೂ ಅಲ್ಲಿ ಪ್ರಕಾಶವಿತ್ತು. ಮೇಲೆ ತೆರೆದ ಆಗಸವಿತ್ತು. ಸ್ನಾನ ಮಾಡಲು ಸನಿಹದಲ್ಲೇ ಕೆರೆ ಇತ್ತು. ವಾತಾವರಣದಲ್ಲಿ ಚಂಪಾ ಪುಷ್ಪದ ಸುಗಂಧವಿತ್ತು. ಆದರೆ ಇಲ್ಲಿರುವುದೇನು? ದೊಡ್ಡ ಬಜಾರಿನ ಈ ಇಕ್ಕಟ್ಟಾದ ಗಲ್ಲಿಗಳು ದಿನದ ಹನ್ನೆರಡು ಗಂಟೆಗಳೂ ಇಲ್ಲಿ ವಿದ್ಯುತ್ ದೀಪ ಉರಿಯುತ್ತಿರುತ್ತವೆ. ಮೂರು ಅಂಗೈ ಅಗಲದ ಈ ಗಲ್ಲಿಗಳ ಇಕ್ಕೆಡೆಗಳಲ್ಲೂ ಗಗನ ಚುಂಬಿಸುವ ಮಹಲುಗಳಿವೆ. ಒಳ್ಳೆಯ ಗಾಳಿಯ ಸುಳಿವೇ ಇಲ್ಲ. ರಾತ್ರಿ ಒಂದು – ಒಂದೂವರೆವರೆಗೂ ಸಾವಿರಾರು ಜನರ ಗುಂಪು ದಿನವಿಡೀ ಘಟನೆಗಳ ಬಿಸಿ ಸಾಲು ಸಾಲಾಗಿರುವ ಅಂಗಡಿಗಳಿಂದ ತಂಬಾಕು ಮತ್ತು ಬೆಲ್ಲದ ವಾಸನೆ! ಇವರೆಲ್ಲರ ಮಧ್ಯೆ ಒಂದು ಮೂಲೆಯಲ್ಲಿ ಹಾಸಿಗೆ ಮೇಲೆ ಬಿದ್ದಿರುತ್ತಿದ್ದೆ. ರಾತ್ರಿಯೆಲ್ಲಾ ಇಲಿಗಳ ಓಡಾಟ. ದಿನವೆಲ್ಲಾ ಗದ್ದಲದ ಉತ್ಪಾತ. ನನ್ನ ಕಾಲೇಜಿನ ಫೀಜು ಸರಕಾರ ಕೊಡುತ್ತಿದ್ದುದಲ್ಲದೆ ಮೇಲೆ ಐದು ರೂಪಾಯಿ ಸಹ ಕೊಡುತ್ತಿತ್ತು. ಇದಕ್ಕೆ ಬದಲಾಗಿ ನಾನು ಬೆಳಿಗ್ಗೆ, ಸಂಜೆ ಡ್ರಿಲ್‌ಗೆ ಹೋಗಬೇಕಾಗುತ್ತಿತ್ತು. ಪ್ರೈವೇಟ್ ಟ್ಯೂಷನ್ ಹೇಳುವ ಅವಕಾಶವೂ ಇರಲಿಲ್ಲ.

ಮತ್ತೆ ಪುಸ್ತಕಗಳು ? ಐಎಸ್.ಸಿ. ಪರೀಕ್ಷೆಯ ಪುಸ್ತಕಗಳನ್ನು ಕೊಳ್ಳುವಷ್ಟು ಹಣವೂ ಇರಲಿಲ್ಲ. ಇದಕ್ಕೆ ಎಷ್ಟು ಹಣ ತಗಲುತ್ತದೆ ಅದು ನನಗೆ ಇಂದೂ ಗೊತ್ತಿಲ್ಲ. ಸರ್, ಬಹುಶಃ ತಮಗೂ ಗೊತ್ತಿರಲಾರದು. ಏತಕ್ಕೆಂದರೆ ತಮ್ಮ ಕಾಲದಲ್ಲಿ ಯಾವ ಪುಸ್ತಕಗಳು ಐದು ರೂಪಾಯಿಗಳಿಗೆ ಸಿಕ್ಕುತ್ತಿದ್ದವೋ ಅವುಗಳ ಬೆಲೆ ಈಗ ಹನ್ನೆರಡಕ್ಕೆ ಕಡಿಮೆ ಇಲ್ಲ. ನಾನು ಒಂದೆರಡು ಪುಸ್ತಕಗಳನ್ನು ಫುಟ್‌ಪಾತ್ ವ್ಯಾಪಾರಿಯಿಂದ ಕೊಂಡಿದ್ದೆ, ಆದರೆ ಅದರಲ್ಲಿ ಸಿಲಬಸ್‌ನ ಅರ್ಧ ವಿಷಯವೂ ಸಹ ಇರುತ್ತಿರಲಿಲ್ಲ.

ಮತ್ತೆ ನಾನು ಎಷ್ಟು ಓದಲು ಶಕ್ತನಾಗಿದ್ದೆ, ಕೇಳಿರಿ. ಊಟಕ್ಕೋಸ್ಕರ ಬಹು ಬಜಾರ್‌ನ ಸರಕಾರ್‌ರವರ ಮನೆಗೆ ಹೋಗಬೇಕಾಗುತ್ತಿತ್ತು. ಊಟ ಪೂರೈಸಿ ಮನೆಗೆ ಹಿಂತಿರುಗುವಾಗ ರಾತ್ರಿ ಹತ್ತು ಗಂಟೆ ಆಗಿರುತ್ತಿತ್ತು. ಕಡಿಮೆ ಪವರಿನ ಮಿಣುಕು ಬೆಳಕಿನ ಬಲ್ಬಿನ ಮುಂದೆ ಓದಲು ಕುಳಿತರೆ ಕಣ್ಣುಗಳಲ್ಲಿ ಉರಿ ಕಾಣಿಸಿಕೊಳ್ಳುತ್ತಿತ್ತು. ನಾನು ಪುಸ್ತಕದಲ್ಲಿ ಗುರುತು ಹಾಕಿಕೊಂಡಿರುವ ವಿಷಯವೇ ಅರ್ಥವಾಗುತ್ತಿರಲಿಲ್ಲ. ಅವು ಅಕ್ಷರಗಳಲ್ಲಿ ಮಸಿಯಲ್ಲಿ ಗೀಚಿದ ಅರ್ಥವಿಲ್ಲದ ಗೆರೆಗಳಂತೆ ತೋರುತ್ತಿದ್ದವು. ನಾನು ಯಾವಾಗ ಮಲಗುತ್ತಿದ್ದೆನೋ ನನಗೇ ತಿಳಿಯದು. ರಾತ್ರಿಯೆಲ್ಲಾ ಇಲಿ ಮತ್ತು ಜಿರಲೆಗಳು ಮೈಮೇಲೆಲ್ಲಾ ಓಡಾಡುತ್ತಿದ್ದವು.

ನನ್ನ ಕಾಲೇಜು ಸಹ ಅದೇ ರೀತಿಯದು. ಭಾರಿ ಗದ್ದಲದ ಗುಂಪು ಯಾವಾಗಲೂ ಸೇರಿರುತ್ತಿತ್ತು. ಐದು ಜನ ಕುಳಿತು ಕೇಳಬಹುದಾದ ಬೆಂಚಿನ ಮೇಲೆ ಏಳು, ಎಂಟು ಜನ ಕೂಡಬೇಕಾಗುತ್ತಿತ್ತು. ನೋಟ್ಸ್ ಬರೆದುಕೊಳ್ಳಲು ಡೆಸ್ಕಿನ ಮೇಲೆ ಜಾಗವೇ ಇರುತ್ತಿರಲಿಲ್ಲ. ಲ್ಯಾಬೋರೇಟರಿ ಬಗ್ಗೆ ಹೇಳುವುದೇ ಬೇಕಿಲ್ಲ. ಹದಿನೈದು ಜನ ಕೆಲಸ ಮಾಡಬೇಕಾದೆಡೆ ಇಪ್ಪತ್ತೈದು ಜನ ಕೆಲಸ ಮಾಡಬೇಕಾಗಿತ್ತು.

ಇವರೇ ಭಾವಿ ವಿಜ್ಞಾನಿಗಳು ? ಸ್ವತಂತ್ರ ಭಾರತದ ಚರಿತ್ರೆಯನ್ನು ಬರೆಯಬೇಕಾದ ಈ ಜನರ ಸ್ಥಿತಿ ಹೀಗೆ.

ಸರ್, ನಾನು ನನ್ನ ಪ್ರಯತ್ನದಲ್ಲಿ ಹಿಂದೆ ಬೀಳಲಿಲ್ಲ. ನಾಲ್ಕೈದು ಜನರನ್ನು ಬಿಡಿ ಸಾಧಾರಣವಾಗಿ ನನ್ನಂತೆಯೇ ವಿದ್ಯಾರ್ಥಿಗಳು ಓದಲೆಂದೇ ಕಾಲೇಜು ಸೇರುತ್ತಾರೆ. ಆದರೆ ಏಕೆ ಇಂತಹ ವಿದ್ಯಾರ್ಥಿಗಳಿಂದ ಏನೂ ಆಗುವುದಿಲ್ಲ ? ಏಕೆ ಅಸಫಲರಾಗುತ್ತಾರೆ ?

ಸರ್, ಒಂದು ಘಟನೆಯನ್ನು ವಿವರಿಸುತ್ತೇನೆ. ಇಂದಿನ ಸ್ಥಿತಿಯಲ್ಲಿ ಆ ವಿಷಯವನ್ನು ನೆನೆದರೆ ನಗು ಬರುತ್ತದೆ. ಅಂದು ಕಾಲೇಜು ಸ್ಥಾಪನೆಯ ದಿನ. ಬಹಳ ಅದ್ದೂರಿಯಿಂದ ಆಚರಿಸುತ್ತಿದ್ದವು. ಬಾವುಟ ಹಾರಿಸಲಾಗಿತ್ತು. ಭಾಷಣಗಳು ನಡೆದವು. ಬಹಳ ಭಾರಿ ಭಾಷಣ ಅಂದರೆ ಪ್ರಾಂಶುಪಾಲ್‌ರದು, ಭಾಷಣ ಮಾಡುತ್ತಾ ಮಾಡುತ್ತಾ ಅವರ ಕಣ್ಣಿನಲ್ಲಿ ನೀರು ಕಾಣಿಸಿಕೊಂಡಿತ್ತು.

ನಾವುಗಳೆಲ್ಲಾ ಭಾರಿ ಸಂಖ್ಯೆಯಲ್ಲಿ ಅಲ್ಲಿ ನೆರೆದಿದ್ದೆವು. "ಕಾಲೇಜಿನಲ್ಲಿ ಶೇಕಡಾ ಹತ್ತು ಜನ ಮಾತ್ರ ಎಲ್ಲಾ ಪುಸ್ತಕಗಳನ್ನು ಮಾತ್ರ ಕೊಂಡುಕೊಳ್ಳಬಲ್ಲರು. ಉಳಿದ ಶೇಕಡಾ ಎಪ್ಪತ್ತು ವಿದ್ಯಾರ್ಥಿಗಳು ಏನೊಂದು ಪುಸ್ತಕವನ್ನು ಕೊಂಡುಕೊಳ್ಳಲು ಅಸಮರ್ಥರು. ಇಂಥಹ ಸ್ಥಿತಿಯಲ್ಲಿ ನಾವು ಸ್ವತಃ ವಿದ್ಯೆಯನ್ನು ಕಲಿಯಲಾರೆವು,

ಉಳಿದವರಿಗೂ ಕಲಿಸಲಾರೆವು. ಅದಕ್ಕೆ ಸರಿಯಾದ ಪರಿಹಾರವನ್ನು ನಾವು ಯೋಚಿಸದೆ ಹೋದರೆ ಈ ದೇಶದ ಗತಿ ಏನು ?''

ವಾಸ್ತವವಾಗಿ ಇದೇ ಸಹಪ್ರಾಂಶುಪಾಲರು ಇದಕ್ಕೆ ಪರಿಹಾರವನ್ನು ಸೂಚಿಸಿದ್ದರು. ಅವರೇ ನುಡಿದಿದ್ದರು ''ಕಾಲೇಜು ಶಿಕ್ಷಣ ಬಡ ವಿದ್ಯಾರ್ಥಿಗಳಿಗೆ ಅಲ್ಲ.'' ಸರ್, ಪರೀಕ್ಷೆಯ ಎರಡನೆ ಗಂಟೆ ಸಹ ಬಡಿದಿದೆ. ಇನ್ನು ಹೆಚ್ಚು ವೇಳೆ ನಾನು ಬರೆಯಲಾಗುವುದಿಲ್ಲ. ತಾವು ಇಲ್ಲಿಯವರೆಗೆ ಈ ಪತ್ರವನ್ನು ಓದಿದ್ದರೆ ತಮ್ಮ ಈ ದಯಾಪರತೆ ಮೇಲೆ ಮತ್ತೆ ಧಾಳಿ ಮಾಡಲು ನನಗೆ ಇಚ್ಛೆ ಇಲ್ಲ. ನಾನು ಸಂಕ್ಷೇಪವಾಗಿಯೇ ನಾನು ಹೇಳಬೇಕೆಂದಿರುವುದನ್ನು ಹೇಳಿಬಿಡುತ್ತೇನೆ.

ನನ್ನ ತಾಯಿ ಓದಿದವಳಲ್ಲ, ಆಕೆಯ ಪರವಾಗಿ ಮೋಡಿ ಅಕ್ಷರದಲ್ಲಿ ನನ್ನ ಚಿಕ್ಕಪ್ಪ ನನಗೆ ಕಾಗದ ಬರೆಯುತ್ತಿದ್ದರು. ''ನೀನು ಓದಿ ದೊಡ್ಡವನಾಗು ಮಗು, ದೇಶದಲ್ಲಿ ಹತ್ತರಲ್ಲಿ ಒಬ್ಬನಾಗು, ನಿನ್ನ ತಂದೆ ನಿನಗೆ ಏನು ಹೆಸರು ಇಟ್ಟಿದ್ದಾರೋ ಅದನ್ನು ಸಾರ್ಥಕಗೊಳಿಸು. ಸ್ವತಂತ್ರ ಭಾರತದಲ್ಲಿ ನೀನೊಬ್ಬ ಸೇವಕ. ಈ ಮಾತು ಮರಿಯಬೇಡ, ಮಗು.''

ಇಲ್ಲ, ನಾನು ಮರೆತಿಲ್ಲ. ಒಂದು ದಿನವೂ ಇದನ್ನು ಮರೆತಿಲ್ಲ. ಆದರೆ ಸ್ವತಂತ್ರ ಭಾರತ ತನ್ನ ಜವಾಬ್ದಾರಿಯನ್ನು ನಿರ್ವಹಿಸಿಲ್ಲ. ನನ್ನ ಓದಿಗೆ ಒಂದು ಮಾರ್ಗವನ್ನು ಕಲ್ಪಿಸಿಲ್ಲ. ಆ ತಂಬಾಕು ಅಂಗಡಿಯಲ್ಲಿ ಕೆಲಸ ಮಾಡುತ್ತಾ, ಹೆಸರಿಗೆ ಮಾತ್ರ ನಾನು ಕ್ಲಾಸಿಗೆ ಹೋಗುತ್ತಾ ಅರ್ಥಹೀನ ಗದ್ದಲದ ಮಧ್ಯೆ ಮೈ ಬೆವರಿಳಿಸುವ ಬಿಸಿಲಿನಲ್ಲಿ, ಕೋಲಾಹಲ ತುಂಬಿದ ಆ ಮಹಾಬೀದಿಯ ಸಣ್ಣ ಗಲ್ಲಿಯಲ್ಲಿನ ಆ ಕೊಠಡಿಯಲ್ಲಿ ಕೆಂಪಾದ ಕಣ್ಣಿಗೆ ಎಲ್ಲವೂ ಅಸ್ಪಷ್ಟವಾಗಿ ಗೋಚರಿಸುತ್ತಿವೆ. ತಲೆ ಬಿಸಿಯಾಗಿ ಒಡೆದು ಹೋಗುತ್ತಿರುವಂತೆ ಭಾಸವಾಗುತ್ತಿತ್ತು, ಎಲ್ಲಾದರೂ ಓಡಿಹೋಗಲೇ ಅನಿಸುತ್ತಿತ್ತು. ಯಾವುದಾದರೂ ನದಿಯಲ್ಲಿ ಬೀಳಲೇ ? ಮನಸ್ಸು ತೃಪ್ತಿಯಾಗುವಷ್ಟು ಚಂಪಾ ನಾಗಕೇಶರ್ ಹೊಸ ಸುಗಂಧವನ್ನು ಆಘ್ರಾಣಿಸಲೇ ? ನೀರು ತುಂಬಿದ ಕರಿ ಮೋಡವೊಂದನ್ನು ಹಿಡಿದು ಹೇಳಲೇ ? ''ನೀನು ಮಳೆ ಸುರಿಸು, ನಿನಗೆ ಆಳತೆ ಮಾಡಿ ನೆಲ್ಲು ನೀಡುತ್ತೇನೆ.''

ಕಲ್ಕತ್ತಾದಲ್ಲಿ ಕೆರೆಯ ಆ ತಂಪು ನೀರು ಎಲ್ಲೂ ಸಿಗದು, ಹಾಗೆಯೇ ನಾಗೇಶ್ವರ ಹೂವಿನ ಆ ಸುಗಂಧ. ನನ್ನ ಮನೆಯಲ್ಲಿ ಉಣ್ಣಲು ಒಂದು ಕಾಳು ಧಾನ್ಯವಿಲ್ಲ, ಒಂದು ಹನಿ ಮಳೆ ಇಲ್ಲದೆ ಅಲ್ಲಿನ ಜನರ ಹೃದಯದಲ್ಲಿ ಬಂದಿಯಾಗಿದೆ ಎಲ್ಲಿ ಹೋಗಲಿ ? ಎಲ್ಲಿ ಓಡಲಿ ?

ನಾನು ಆಸೆಯನ್ನು ಇನ್ನೂ ಬಿಟ್ಟಿಲ್ಲ, ಹೋಗುತ್ತೇನೆ. ಹೋಗಿ ಜೀವನದಲ್ಲಿ ಸಫಲನಾಗೇ ತೋರಿಸುತ್ತೇನೆ. ನಾನಿಲ್ಲದೆ ಈ ಹೊಸ ಉಕ್ಕಿನ ಕುಲುಮೆಯಲ್ಲಿ ಅಗ್ನಿ ಹೊತ್ತದು. ಪನ್‌ಬಿಜಲಿ ಯೋಜನೆಯಲ್ಲಿ ವಿದ್ಯುತ್ ಹರಿಯದು. ಅಣುಶಕ್ತಿ ಶೋಧ ಅರ್ಧಕ್ಕೆ ನಿಂತು ಹೋಗುವುದು. ತೈಲ ಶೋಧನೆ ಕಾರ್ಖಾನೆಯಲ್ಲಿ ಪೆಟ್ರೋಲ್, ಸೀಮೆಎಣ್ಣೆ, ಡೀಸಲ್, ಪ್ಯಾರಾಫಿನ್ ಹೊಸರೂಪ ತಾಳವು. ರಾಕ್ಷಸ ಮಯನ ಮಂತ್ರವನ್ನು ನಾನು ಕಲಿಯಲೇಬೇಕು, ಏತಕ್ಕೆಂದರೆ ಸ್ವತಂತ್ರ ಭಾರತದ ಪ್ರಗತಿಗಾಗಿ

ನಾವು ವೈಜ್ಞಾನಿಕರಾಗಲೇಬೇಕು. ಸರ್, ಆದರೆ ಇವೆಲ್ಲವೂ ಇಂದು ಸ್ವಪ್ನವಾಗಿವೆ. ನನ್ನಂತೆಯೇ ಕಾಲೇಜಿನ ಸಾವಿರಾರು ವಿದ್ಯಾರ್ಥಿಗಳು ಸ್ವಪ್ನದ ಬಲದಿಂದಲೇ ಜೀವಿಸುತ್ತಿದ್ದಾರೆ. ಇದೇ ಸ್ವಪ್ನದ ಸೂತ್ರ ಹಿಡಿದು ನಡೆಯುತ್ತಿದ್ದಾರೆ. ಒಂದು ದಿನ ತಮ್ಮ ಸ್ವಪ್ನ ಒಡೆದಾಗ ಅವರು ನೋಡುತ್ತಾರೆ, ಸರ್, ನನ್ನ ಓದಂತೂ ಸಾಗಲಿಲ್ಲ. ಯಾವಾಗ ಓದಲಿ? ಪುಸ್ತಕಗಳು ಎಲ್ಲಿಂದ ಬರುತ್ತವೆ? ಕೆಲವು ಪುಸ್ತಕಗಳಿಂದ ನಾನು ಮಾಡುವ ಟಿಪ್ಪಣಿ, ಕೆಂಪಾದ ಬಲ್ಬಿನ ಮಬ್ಬು ಬೆಳಕಿನಲ್ಲಿ ಅರ್ಥಹೀನವಾಗಿ ತೋರುತ್ತದೆ. ಅಕ್ಷರಗಳು ಲಕ್ಷದ ಸಂಖ್ಯೆಯಲ್ಲಿ ಹುಳಗಳಂತೆ ನನ್ನ ಕಣ್ಣ ಮುಂದೆ ತಿರುಗುತ್ತಿರುವಂತೆ ಭಾಸವಾಗುತ್ತದೆ. ಏನೂ ಅರ್ಥವೇ ಆಗುವುದಿಲ್ಲ. ತಂಬಾಕು, ಬೆಲ್ಲ ಇಲಿ, ಜಿರಲೆ, ಮುಂತಾದವುಗಳು ತುಂಬಿದ ಕೆಟ್ಟವಾಸನೆ ತುಂಬಿದ ಕೊಠಡಿಯಲ್ಲಿ ಮಲಗಿ ಬೆಳಗ್ಗೆ ಎದ್ದಾಗ ನನ್ನ ತಲೆಯ ಮೇಲೆ ಹತ್ತು ಇಪ್ಪತ್ತು ಮಣ ಭಾರವನ್ನು ಹೇರಿದಂತೆ ಭಾಸವಾಗುತ್ತಿತ್ತು. ಎಂಟು ಗಂಟೆ ಹೊತ್ತಿಗೆಲ್ಲಾ ನಾನು ಅಂಗಡಿಯಲ್ಲಿ ಹಾಜರಿದ್ದು ಲೆಕ್ಕ ಬರೆಯಲು ಕೂಡಬೇಕಾಗುತ್ತಿತ್ತು.

ವಾರ್ಷಿಕ ಪರೀಕ್ಷೆಯಲ್ಲಿ ಕಾಪಿ ಮಾಡಲಾಗುವುದಿಲ್ಲ ಆದರೆ ಫೀಜನ್ನು ಕೊಟ್ಟನಂತರ ಗುಂಪಿಗೆ ಗುಂಪೇ ಮುಂದಿನ ಕ್ಲಾಸಿಗೆ ಹೋಗುತ್ತದೆ. ಪ್ರೀಟೆಸ್ಟ್ ನಾನು ಬರೆದಿರಲಿಲ್ಲ, ಓದುವುದಕ್ಕೆ ತಾನೇ ನನ್ನ ಬಳಿ ಏನಿತ್ತು? ಅನಂತರ ಟೆಸ್ಟ್ ಪರೀಕ್ಷೆ ಇತ್ತು.

ಸರ್, ಇಲ್ಲಿ ನಾನು ನನ್ನ ಅಪರಾಧ ಒಪ್ಪಿಕೊಳ್ಳಲೇಬೇಕು. ಪರೀಕ್ಷೆ ಹತ್ತಿರ ಬಂದಂತೆ ನನ್ನ ಮನಸ್ಸಿನಲ್ಲಿ ಆರದ ಬೆಂಕಿ ಉರಿಯತೊಡಗಿತ್ತು. ಪುಸ್ತಕ ಅವು ನನ್ನ ಬಳಿ ಇದ್ದರೆ ಫಸ್ಟ್ ಬರದಿದ್ದರೆ ಹೋಗಲಿ ಸೆಕೆಂಡ್ ಕ್ಲಾಸಿನಲ್ಲಿ ಖಂಡಿತಾ ಪಾಸಾಗುತ್ತಿದ್ದೆ. ಗಣಿತದಲ್ಲಿ ಡಿಸ್ಟಿಂಕ್ಷನ್ ಬಂದೇ ಬರುತ್ತಿತ್ತು.

ಸರ್, ತಾವು ದಯವಿಟ್ಟು ನನ್ನ ಮೇಲೆ ಸಿಟ್ಟಾಗಬೇಡಿ, ನನ್ನ ಮನಸ್ಸಿನ ಪರಿಸ್ಥಿತಿಯನ್ನು ತಾವು ದಯವಿಟ್ಟು ತಿಳಿಯಲು ಯತ್ನಿಸಿ. ನಾನು ಹುಚ್ಚನಂತಾದೆ. ಅನಂತರ ನಾನು ಕಾಲೇಜಿನ ಸಹಪಾಠಿಗಳ ಪುಸ್ತಕ ಕದಿಯಲು ಪ್ರಾರಂಭಿಸಿದೆ. ನನ್ನ ಬಗ್ಗೆ ನೀವು ಏನು ಬೇಕಾದರೂ ಯೋಚಿಸಬಹುದು. ನಾನು ಕಳ್ಳನಾಗಿ ಬಿಟ್ಟೆ ಎಂದು ನಂಬಲು ಸಾಧ್ಯವಿತ್ತೆ? ನನ್ನ ತಂದೆ ದೇಶದ ಸ್ವಾತಂತ್ರ್ಯಕ್ಕಾಗಿ ರಕ್ತ ಹರಿಸಿದ್ದ. ಅವರ ಮಗ ನಾನು ಕೊನೆಗೆ ಕಳ್ಳನಾಗಿ ಪರಿವರ್ತನಗೊಂಡೆ ಸರ್, ಸಾಧ್ಯವಾದರೆ ನೀವು ಏನನ್ನು ನಿರ್ಧರಿಸುವ ಮೊದಲು ಸ್ವಲ್ಪ ವಿಚಾರಮಾಡಿ, ಹುಡುಗರು ಪುಸ್ತಕಗಳನ್ನು ಏತಕ್ಕೆ ಕದಿಯುತ್ತಾರೆ? ಪರೀಕ್ಷೆಗಳಲ್ಲಿ ಕಾಪಿ ಹೊಡೆಯುತ್ತಾರೆ? ಪ್ರಶ್ನೆ ಪತ್ರಿಕೆ ಕಠಿಣವಾಗಿರುವುದು ಕಂಡು ಅವರೇಕೆ ಹಿಂಸಕರಾಗುತ್ತಾರೆ? ನಿರಾಶರಾಗಿ ಅವರೇಕೆ ಪರೀಕ್ಷಾ ಕೊಠಡಿಯಿಂದ ಹೊರಗೆ ಹೋಗುತ್ತಾರೆ? ಇದು ಅನ್ಯಾಯ, ಬಹಳ ದೊಡ್ಡ ಅನ್ಯಾಯ. ಇವು ಖಂಡಿತ ಆಗಬಾರದು. ಇದನ್ನು ಎಲ್ಲರೂ ಸಮರ್ಥಿಸುತ್ತಾರೆ. ಆದರೂ ಇವೆಲ್ಲಾ ಏಕೆ ನಡೆಯುತ್ತವೆ? ಏತಕ್ಕೆ ಹುಡುಗರು ಕೆಟ್ಟ ದಾರಿ ಹಿಡಿಯುತ್ತಾರೆ? ಪಾಸು ಫೇಲು ಇವರ ಜೀವನದಲ್ಲಿ ಎಷ್ಟು ಏರು ಪೇರು ಮಾಡಲು ಸಾಧ್ಯ? ಇದನ್ನು ನೀವು ಎಂದಾದರೂ ಯೋಚಿಸಿದ್ದೀರಾ?

ಕದ್ದಿದ್ದ ಪುಸ್ತಕಗಳ ಬಲದ ಮೇಲೆ ಕಾಲೆಳೆದುಕೊಂಡು ಪರೀಕ್ಷೆಗೆ ಬಂದೆ. ಒಂದು ವೇಳೆ ನಾನು ಕ್ಲಾಸ್ ಫೀಸ್ ಕಟ್ಟಲು ಸಾಧ್ಯವಾಗಿದ್ದರೆ, ನಾನು ಪರೀಕ್ಷೆಗೆ ಕೂಡಲು ಅನುಮತಿ ದೊರೆಯುತ್ತಿತ್ತು, ಇದು ನನಗೆ ಗೊತ್ತಿದೆ. ಆದರೆ ವಾರ್ಷಿಕ ಪರೀಕ್ಷೆಯ ಹಣ ಕಡಿಮೆಯೇನಲ್ಲ.

ಹಳ್ಳಿಯಲ್ಲಿನ ಸ್ಥಿತಿ ಚೆನ್ನಾಗಿರಲಿಲ್ಲ. ಊಟಮಾಡಲೇ ಅಲ್ಲಿ ತೊಂದರೆ ಇದೆ ಎಂಬುದು ಚಿಕ್ಕಪ್ಪನ ಕಾಗದದಿಂದ ಗೊತ್ತಾಗುತ್ತಿತ್ತು. ತಾಯಿಯ ಪೂಜಾಗೃಹದಲ್ಲಿನ ಕುಂಕುಮ ಡಬ್ಬಿಯಲ್ಲಿನ ಹಣವೂ ತೀರಿತ್ತು. ಬಹುಶಃ ಹಸುವನ್ನು ಮಾರಿಯೇ ಕೊಂಚ ಹಣವನ್ನು ಕಳುಹಿಸಲು ಶಕ್ತಳಾಗಿದ್ದಾಳೆ.

ಅದಕ್ಕೆ ನಾನು ಬರೆದೆ "ಹಸುವನ್ನು ಮಾರಬೇಕಾಗಿಲ್ಲ. ನಾನೇ ಇಲ್ಲಿ ಹಣವನ್ನು ಹೇಗೋ ಹೊಂದಿಸಿಕೊಳ್ಳುತ್ತೇನೆ" ಆದರೆ ಹಣ ಹೊಂದಿಸಿಕೊಳ್ಳುವುದು ಹೇಗೆ? ವಿದ್ಯಾರ್ಥಿ ಸಹಾಯಕ ಫಂಡಿನಿಂದ ನನಗೆ ಹದಿನೈದು ರೂಪಾಯಿಗಳು ದೊರೆತವು. ಆದರೆ ಉಳಿದ ಹಣ? ಒಂದು ದಿನ ದೊಡ್ಡ ಸರಕಾರ ನನಗೆ ಕರೆಕಳುಹಿಸಿ ನುಡಿದರು "ಪರೀಕ್ಷೆಯ ಫೀಜಿಗಾಗಿ ನೀನೇನು ಯೋಚಿಸಬೇಕಾಗಿಲ್ಲ. ಐವತ್ತು ರೂಪಾಯಿ ನಾನು ಕೊಡುತ್ತೇನೆ." ಎಷ್ಟು ದಯಾಳು!

ಸರ್, ಇಷ್ಟು ದಿನಗಳ ನಂತರ ನನಗೆ ಅರ್ಥವಾಗಿದೆ ದಯೆ ಕೇವಲ ದಯೆಯೇ ಅಲ್ಲ. ಇದರ ಹಿಂದೆ ಕೊಡುವಾತನ ಭಯಂಕರ ದೊಡ್ಡಸ್ಥಿಕೆಯೇ ಯಾವಾಗಲೂ ಇರುತ್ತದೆ. ಈ ಪ್ರಪಂಚದಲ್ಲಿ ದಯೆಯ ಬೆಲೆ ಬಹಳ ದುಬಾರಿ. ಪರೀಕ್ಷೆಯ ಹಣವನ್ನಂತೂ ನಾನು ಕಟ್ಟಿದೆ. ಈಗ ನಾನು ಎರಡು ತಿಂಗಳಿಂದ ಈ ದಯೆಯ ಋಣವನ್ನು ತೀರಿಸುತ್ತಿದ್ದೇನೆ.

ಸರ್, ನೀವು ನಂಬಿ, ನಾನು ಗಣಿತ, ಭೌತಶಾಸ್ತ್ರ, ರಸಾಯನಶಾಸ್ತ್ರ, ಬಂಗಾಳಿ, ಇಂಗ್ಲಿಷ್ ಒಂದನ್ನೂ ಓದಲಾಗಲಿಲ್ಲ. ಐವತ್ತು ರೂಪಾಯಿಗಳ ಬದಲಿಗೆ ಅನೇಕ ರಾತ್ರಿಗಳು ಎದ್ದಿದ್ದು ಬಳಲಿದ್ದ ಕಣ್ಣುಗಳನ್ನು ತೆರೆದಿಟ್ಟುಕೊಂಡು ಇಪ್ಪತ್ತು ಮಣ ಭಾರವಾಗಿದ್ದ ಬುದ್ಧಿಯನ್ನು ಯಜಮಾನ ಸರಕಾರನ ಲೆಕ್ಕಪತ್ರಗಳನ್ನು ಪೂರ್ತಿ ಬರೆದು ಪೂರೈಸಿದೆ.

ಅದು ಎಂತಹ ಲೆಕ್ಕ? ಇನ್‌ಕಮ್ ಟ್ಯಾಕ್ಸ್ ಉಳಿಸುವ ಲೆಕ್ಕ. ಬಹಳ ಗೋಪ್ಯವಾದುದ್ದು. ಆ ಐವತ್ತು ರೂಪಾಯಿಗಳ ಸಾಲವನ್ನು ನನ್ನ ದೇಹದ ಪ್ರತಿಯೊಂದು ಸ್ನಾಯುವನ್ನು ಶ್ರಮಿಸಿ, ರಕ್ತದ ಒಂದೊಂದು ಹನಿ ನೀಡಿ ತೀರಿಸಬೇಕಾಯಿತು. ಇದಾದ ನಂತರ ನಾನು ಓದಬೇಕು? ಸರ್, ನಾನೇನು ಅತಿಮಾನವನಲ್ಲ.

ಆದರೂ ನಾನು ಪರೀಕ್ಷೆಯಲ್ಲಿ ಬರೆಯಲು ಬಂದೆ. ಧೈರ್ಯ ಕಳೆದುಕೊಂಡಿರಲಿಲ್ಲ. ನಾನು ಯೋಚಿಸಿದ್ದೆ. ಏನಾದರೂ ಚಮತ್ಕಾರದ ಘಟನೆ ನಡೆಯುತ್ತೆ. ಕಳ್ಳತನದಿಂದ ನನ್ನ ಕೈಯಂತೂ ಪಕ್ವವಾಗಿತ್ತು. ಕಾಪಿ ಮಾಡಲು ಪುಸ್ತಕದ ಹಾಳೆಗಳನ್ನು ಹರಿದು ಇಟ್ಟುಕೊಂಡಿದ್ದೆ. ಆದರೆ ಏನೂ ಚಮತ್ಕಾರ ಘಟಿಸಲೇ ಇಲ್ಲ. ಷರಟಿನೊಳಗಿಂದ ಕಾಗದದ ಚೂರನ್ನು ನಾನು ಹೊರಗೆ ತೆಗೆಯಲು

ಸಾಧ್ಯವೇ ಆಗಲಿಲ್ಲ. ಮೊದಲನೆಯದು, ಎರಡನೆಯದು, ಮೂರನೆಯದು ಪೇಪರ್ ನನ್ನ ಕಣ್ಣ ಮುಂದೆ ನರ್ತಿಸತೊಡಗಿದವು. ನನ್ನ ಬುದ್ಧಿಯ ಮುಂದೆ ಸರಕಾರನ ಸುಳ್ಳು ಲೆಕ್ಕ ಸುತ್ತಹತ್ತಿದ್ದವು. ಎಲ್ಲಾ ಪರೀಕ್ಷಕರ ಮುಖ, ಜಮಾ ಖರ್ಚಿನ ಪುಸ್ತಕದ ಹಾಳೆಗಳಂತೆ ಕಾಣುತ್ತಿದ್ದವು.

ಬಂಗಾಳಿಯ ಪರೀಕ್ಷೆಯೇ ಕೊನೆಯ ಪರೀಕ್ಷೆ.

ಸರ್, ವಾರ್ನಿಂಗ್ ಗಂಟೆ ಹೊಡೆದಿದೆ. ಐದು ನಿಮಿಷಗಳ ನಂತರ ನನ್ನ ಉತ್ತರ ಪತ್ರಿಕೆಯನ್ನು ಕಿತ್ತುಕೊಳ್ಳಲಾಗುವುದು. ನಾನು ಹೇಳುವುದೆಲ್ಲಾ ಹೇಳಿಯಾಗಿದೆ. ಇಂದು ಸಂಜೆ ಯಾವುದಾದರೂ ಟ್ರೈನ್‌ನ ಕಂಬಿಯ ಕೆಳಗೆ ನನ್ನ ಮನಸ್ಸಿನ ಭಾರವನ್ನೆಲ್ಲಾ ಇಳಿಸಿಬಿಡುತ್ತೇನೆ.

ಸರ್, ನಾನು ಬದುಕಲು ಇಚ್ಛಿಸಿದ್ದೆ. ನಾನು ಸ್ವಾಧೀನ ಕುಮಾರ, ಸ್ವತಂತ್ರ ಭಾರತಕ್ಕಾಗಿ ಬದುಕಿರಲು ಆಶಿಸಿದ್ದೆ. ಆದರೆ ನಾನೇಕೆ ಜೀವಿಸಲು ಅಸಮರ್ಥನಾದೆ ? ಸಾವಿರಾರು ವಿದ್ಯಾರ್ಥಿಗಳ ಪರವಾಗಿ ಈ ಪ್ರಶ್ನೆಯನ್ನು ತಮ್ಮ ಮುಂದಿಟ್ಟು ಹೋಗುತ್ತಿದ್ದೇನೆ, ತಾವು ಯೋಚಿಸಿ ಉತ್ತರಿಸಿ.

ನಾನು ಹೇಡಿಯಂತೆ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೇನೆಯೇ ? ಇಲ್ಲಾ ಸರ್, ಖಂಡಿತಾ ಇಲ್ಲ. ಇದು ನನ್ನ ಸೋಲಲ್ಲ, ನನ್ನ ಪ್ರತಿವಾದ. ಸರ್, 1942ನೇ ಡಿಸೆಂಬರ್ ಪ್ರಳಯರಾತ್ರಿ. ನನ್ನ ತಂದೆ ದೇಶದ ಮಣ್ಣಿನ ಮೇಲೆ ಎದೆಯಿಂದ ರಕ್ತ ಸುರಿಸಿದ್ದರು. ನನ್ನ ರಕ್ತವೂ ದೇಶದ ಸಾವಿರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಒಂದು ಐತಿಹಾಸಿಕ ದಾಖಲೆಯಾಗುಳಿಯುತ್ತದೆ. ಈ ಚರಿತ್ರೆ ಯಾವಾಗ ಆಗುತ್ತದೆ ನಾನು ಹೇಳಲಾರೆ. ತಾವು ಹೇಳಬಲ್ಲಿರಾ ಸರ್, ತಾವು ಹೇಳಬಲ್ಲಿರಿ, ನಮಸ್ಕಾರ.

ಇತಿ

# ಒಂದು ಚಿಕ್ಕ ವಿಷಯ

*ಸಂತೋಷ್ ಕುಮಾರ್ ಘೋಷ್*

ಆತ ನನ್ನ ಬೆನ್ನ ಹಿಂದೆ ಬಗ್ಗಿ ನಿಂತಿದ್ದ. ಆತ ಬಿಡುತ್ತಿದ್ದ ಉಸಿರು ನನ್ನ ಕಿವಿಗೆ ತಾಕುತ್ತಿತ್ತು. ನನ್ನ ಕೈಯ ಬೆರಳುಗಳು ನಿರ್ಜೀವವಾದಂತಿದ್ದುವು. ಆತ ಹೇಳುತ್ತಿದ್ದ "ಸರ್‌ಸಿಜ್ ನೀನು ಸುಮ್ಮ ಸುಮ್ಮನೆ ಹಳೇ ಕಾಗದಗಳನ್ನು ಕಿತ್ತು ಹಾಕುತ್ತಿದ್ದಿ. ಧೂಳನ್ನು ಹರಡುತ್ತಿದ್ದಿ. ಆ ಕಥೆ ಎಷ್ಟು ಹುಡುಕಿದರೂ ನಿನಗೆ ಸಿಕ್ಕದು."

ಆತನ ಮುಖ ನನ್ನ ಕಿವಿಯ ಬಳಿ ಇತ್ತು. ಆತನ ಸ್ವರ ಅಸ್ವಾಭಾವಿಕವಾಗಿತ್ತು. ಕೆಲವೊಮ್ಮೆ ನಲ್ಲಿಯಿಂದ ಹೊರಬರುವ ಬುಕ್ ಬುಕ್ ಶಬ್ದದಂತಿತ್ತು.

ನಾನು ನುಡಿದೆ "ಏನೇ ಆಗಲಿ ಆ ಲೇಖನ ನನಗೆ ಬೇಕೇ ಬೇಕು."

"ಬೇಕೇ ಬೇಕು" ಆತ ನಗಾಡಿದ "ಏಕೆ ಬೇಕು ?"

"ಕಥೆ ನಾನು ಹೆಣೆಯುತ್ತೇನೆ. ನಿಜವಾಗಿ ಹೇಳುವುದಾದರೆ ಬಿಜು ಮಾಮಿಗೆ ಹೇಳಿದ್ದ ಕಥೆಯೇ ಅದು."

"ಆ ಕಥೆಯಲ್ಲಿ ಏನಿದೆ ?"

"ಎಲ್ಲಾ ಮಾತೂ ನನಗೆ ಜ್ಞಾಪಕವಿಲ್ಲ. ಬಿರುಗಾಳಿ ಮಳೆಯ ರಾತ್ರಿ. ಸುಯ್ ಸುಯ್ ಎಂದು ಗಾಳಿ ಬೀಸುತ್ತಿತ್ತು. ನಮ್ಮ ಮನೆಯ ಹೊರಗೆ ಅಂಗಳದಲ್ಲಿ ಭಿಕಾರಿ ಹೆಂಗಸೊಬ್ಬಳು ತನ್ನ ಮಕ್ಕಳನ್ನು ಎದೆಗವಚಿಕೊಂಡು ಬೋರಲು ಮಲಗಿದ್ದಳು. ಮಗು ಆದರೂ ಅಳುತ್ತಿತ್ತು. ಕೊನೆಗೆ ಆಕೆ ಅತ್ತ ಇತ್ತ ನೋಡಿ ತನ್ನ ಶರೀರದ ಬಟ್ಟೆಯನ್ನು ಕಳಚಿ ಅದರಲ್ಲಿ ಮಗುವನ್ನು ಸುತ್ತಿದಳು. ಚಲನಚಿತ್ರದಂತೆ ನನಗೆ ಈ ದೃಶ್ಯ ಇನ್ನೂ ಜ್ಞಾಪಕವಿದೆ."

ಇದನ್ನು ಕೇಳಿ ಆತ ಜೋರಾಗಿ ನಗಲು ಪ್ರಾರಂಭಿಸಿದ. ಆತನ ಕಪ್ಪು ನಿಲುವಂಗಿ ನಿಧಾನವಾಗಿ ಹಿಗ್ಗುತ್ತಿರುವಂತೆ, ಹಿಗ್ಗಿ ಹಿಗ್ಗಿ ರಾತ್ರಿಯ ಅಂಧಕಾರದಲ್ಲಿ ಸೇರಿ ಹೋಗುತ್ತಿರುವಂತೆ ಭಾಸವಾಯಿತು.

ಆತನನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡುವ ಧೈರ್ಯವಿರಲಿಲ್ಲ. ನಾನು ಖಿನ್ನನಾಗಿ ಪ್ರಶ್ನಿಸಿದೆ "ಈ ಕಥೆ ಕೇಳಿದರೆ ನಗು ಬರುವುದು." ಅವನು ನುಡಿದ "ಹಾಸ್ಯಾಸ್ಪದವಾಗಿದೆ." "ಇದು ನಿನಗೂ ಗೊತ್ತಿದೆ, ಇದು ಎಷ್ಟು ಹಿಂದೆ ಬರೆದದ್ದು ನೀನೇ ಹೇಳು ?"

"ಎಣಿಸಿ ಅಂತೂ ಹೇಳಲಾರೆ, ಆಗ ಒಂದು ಪೈಸೆ ಕಡಲೆಕಾಯಿ ಕೊಂಡು ಒಂದು ಗಂಟೆ ಆರಾಮವಾಗಿ ಕಳೆಯಬಹುದಿತ್ತು. ಚಹದ ಅಂಗಡಿಯಲ್ಲಿ ಎರಡು ಪೈಸೆಯ ಚಹ ಕುಡಿದು ಎರಡು ಗಂಟೆ ಕಳೆಯಬಹುದಿತ್ತು. ಸಂಜೆ ಎರಡು ಆಣೆ ಕೊಟ್ಟು ಧರ್ಮತಲ್ಲಾದಿಂದ ಆಲಿಪೂರ್ ಸುತ್ತು ಹಾಕಿಕೊಂಡು ಬಾಲಗಂಜ್‌ಗೆ ಹೋಗಿ ಬರಬಹುದಿತ್ತು."

ಆಗಲೇ ಆತ ನನ್ನ ಕೈಯನ್ನೆತ್ತಿ ನುಡಿದ "ಇರ್ಲಿ ಬಿಡು, ಇಷ್ಟು ಹೇಳುವ ಅಗತ್ಯವಿಲ್ಲ ಸರ್‌ಸಿಜ್, ಆ ಕಥೆಯನ್ನು ನೀನು ಮತ್ತೆ ಹುಡುಕಬೇಡ."

"ಏಕೆ ? ಕಥೆ ಸಿಗುವುದಿಲ್ಲವೇ ?"

"ಇಲ್ಲ, ಕಥೆಯೇ ಇಲ್ಲ. ಅದಕ್ಕೇ."

ಇಷ್ಟು ಹೇಳಿ ಆತ ಕೊಂಚ ನಕ್ಕ. ವಿಚಿತ್ರವಾಗಿ ಆನಂತರ ಕೊಂಚ ಮುಗುಳ್ನಕ್ಕ. ಪುನಃ ನುಡಿದ "ಕಥೆ, ನಿಜವಾಗಿ ನನ್ನ ಬಳಿ ಇದೆ, ಇಲ್ಲಿ ನೋಡು." ಇಷ್ಟು ಹೇಳಿ ಆತ ತನ್ನ ಕರೀ ಚೀಲದೊಳಗೆ ಕೈ ಇರಿಸಿದ. ತೇಲಿ ತೇಲಿ ಅಲೆಗಳಂತೆ ಆತನ ನಿಲುವಂಗಿ ಅಸ್ಪಷ್ಟವಾಯಿತು. ಆನಂತರ ಒಂದು ವಸ್ತುವನ್ನು ಹೊರ ತೆಗೆದು ನನ್ನ ಮುಂದೆ ಅಲುಗಾಡಿಸತೊಡಗಿದ. ಮಬ್ಬು ಬೆಳಕಿನಲ್ಲಿ ನನಗೆ ಸರಿಯಾಗಿ ಅರ್ಥವಾಗಲಿಲ್ಲ. ಅದು ಬೆಕ್ಕಿನ ಮರಿಯಂತೆ ಕಾಣಿಸಿತು. ಒಣಗಿತ್ತು, ಕಣ್ಣುಗಳು ಹೊರ ಬರುತ್ತಿರುವಂತೆ ಕಾಣಿಸುತ್ತಿತ್ತು. ಕಣ್ಣಿನ ಗುಡ್ಡೆಗಳಲ್ಲಿ ಕಾಂತಿಯೇ ಇರಲಿಲ್ಲ. ಮುಂದೆ ಚಾಚಿದ ಕೈಯನ್ನು ಹಿಂದಕ್ಕೆ ಎಳೆದುಕೊಂಡೆ. ಆತ ನಗುತ್ತಿದ್ದ "ನೋಡಿದೆಯಾ ಈಗ ನೀನೂ ಇದನ್ನು ಇಷ್ಟಪಡುವುದಿಲ್ಲ, ಅದನ್ನು ಮುಟ್ಟಲೂ ಹೆದರುತ್ತಿದ್ದಿ. ಇದನ್ನು ಹೇಗೆ ಬದುಕಿಸುತ್ತಿ?" ಆನಂತರ ಆತ ವಿಚಿತ್ರ ಜೀವವನ್ನು ತನ್ನ ನಿಲುವಂಗಿಯೊಳಗೆ ಹುದುಗಿಸಿಟ್ಟುಕೊಂಡು ನುಡಿದ "ಇರಲಿ ಅದು ನನ್ನ ಹತ್ತಿರವೇ ಇರಲಿ." ನಾನು ಕಣ್ಣು ಮಿಟುಕಿಸದೆ ಹೆದರುತ್ತ ಆತನತ್ತ ನೋಡಿ ಪ್ರಶ್ನಿಸಿದೆ "ನೀನು ಯಾರು ?"

ಆತ ನನ್ನ ಮಾತಿಗೆ ಉತ್ತರವನ್ನೇ ಕೊಡದೆ ಹಿಂದೆ ಹಿಂದೆ ಸರಿಯತೊಡಗಿದ. ಆತನ ನಿಲುವಂಗಿ ನರ್ತಿಸುತ್ತಿತ್ತು. ನರ್ತಿಸಿ ನರ್ತಿಸಿ ರಾತ್ರಿಯ ಅಂಧಕಾರದಲ್ಲಿ ವಿಲೀನವಾಗಿ ಹೋಯಿತು. ಆತ ಎಲ್ಲೂ ಕಾಣಬರಲಿಲ್ಲ. ಆಗ ನನಗೆ ಅರ್ಥವಾಯಿತು ಆತನ ಹೆಸರು 'ಕಾಲ'. ಅಂದು ಆ ಕಾಲದಲ್ಲಿ ಆಗ....

ಒಂದು ಪೈಸೆಯ ಕಡಲೆಕಾಯಲ್ಲಿ ಅರ್ಧವೇ ತಿನ್ನುತ್ತಾ ಗ್ಯಾಸ್ ಕಂಬಗಳಿಗೆ ತಗುಲಿಹಾಕಿದ್ದ ಪ್ರಕಟಣೆಗಳಲ್ಲಿ ಮನೆ ಬಾಡಿಗೆ ಇರುವ ವಿಷಯ, ನೌಕರ ಬೇಕಾಗಿದೆ, ಹುಡುಗ–ಹುಡುಗಿ ಬೇಕಾಗಿದೆ, ಅಲ್ಲದೆ ಕಾಣೆಯಾಗಿರುವ ಹುಡುಗ–ಹುಡುಗಿಯರ ಸಮಾಚಾರ ಇರುತ್ತಿತ್ತು. ಆಗಲೇ ದಯಾರ್ದ್ರ ತಾಯಿ ಹಾಗೂ ಆ ಭಿಕಾರಿ ಹುಡುಗಿ.....

'ಕಾಲ' ನನಗೆ ಆ ಬೆಳಕಿನಲ್ಲಿ ಎಲ್ಲವನ್ನೂ ಸ್ಪಷ್ಟಪಡಿಸಿತ್ತು. ಆದ್ದರಿಂದಲೇ ಆ ಸಂಪೂರ್ಣ ಘಟನೆಗಳು ಕೂದಲು ಉದುರಿದ ಬೆಕ್ಕಿನ ಮರಿಯಂತೆ ತೋರಿತು. ಆತ ಒಂದು ವೇಳೆ ತನ್ನ ನಿಲುವಂಗಿಯ ಒಳಗೆ ಇಣಿಕಿ ನೋಡಲು ಅನುಮತಿ ಇತ್ತರೆ, ಆ ಹಿಂದಿನ ಕಾಲದ ಕಣ್ಣು, ವಯಸ್ಸು, ಮನಸ್ಸು ಹಾಗೂ ಪ್ರಕಾಶ, ಆ

ಸಮಯದಲ್ಲಿದ್ದ ಸುಗಂಧ ಹಾಗೂ ಮೋಹ ಈ ಎಲ್ಲವನ್ನೂ ಹಿಂತಿರುಗಿ ಪಡೆಯಬಲ್ಲನಾದರೆ ನಾನು ಆ ಸುಂದರ ಲಜ್ಜಾ ಶೂನ್ಯ ಭಿಕಾರಿ ಹೆಣ್ಣನ್ನು ಸಜೀವ ಮಾಡಲು ಶಕ್ಯವಿತ್ತು. ಆ ನಿಲುವಂಗಿ ಒಳಗೆ ಎಲ್ಲವೂ ಸಜೀವವಿತ್ತು. ಆದರಿಂದ ಹೊರಗೆಳೆದರೆ ಎಲ್ಲವೂ ನಿರ್ಜೀವ.

"ಆನಂತರ ಏನಾಯಿತು ಸರ್‌ಜಿಜ್ ?"

ಇದಾದನಂತರ ಬಿಜು ಮಾಮಿ ಬಹು ಕೋಮಲ ಸ್ವರದಲ್ಲಿ ನನಗೆ ಹೇಳಿದಳು "ಬಾ."

ನಾನು ಟ್ಯಾಕ್ಸಿಯ ಬಾಡಿಗೆ ನೀಡಿ ಕೆಳಗೆ ಇಳಿದು ಬಂದೆ. ಕೊಳಕು ಕಾಲುವೆಗಳನ್ನು ದಾಟಲು ಒಳ್ಳೆ ಕ್ರಮದಿಂದಲೇ ಎಗರಿದೆ. ಆದರೂ ಶಾರ್ಕ್‌ಸ್ಕಿನ್‌ನ ಪ್ಯಾಂಟಿಗೆ ಕೆಸರು ಹಾರಿತು.

ಈ ಗಲ್ಲಿಗಳನ್ನು ಈ ಟ್ಯಾಕ್ಸಿಯ ಆಳತೆಗೇ ಮಾಡಿದಂತಿತ್ತು. ಬೆಂಕಿಪೊಟ್ಟಣದ ಮೇಲಿನ ಡಬ್ಬ ಒಳಗಿನ ಭಾಗ ಇವೆರಡೂ ಕರಾರುವಾಕ್ಕಾಗಿ ಮಾಡಲಾಗಿರುತ್ತದೆ. ಆ ಗಲ್ಲಿಯಲ್ಲಿ ಪ್ರವೇಶಿಸಿದೊಡನೆ ನನಗೆ ಆ ಜಾಗಗಳು ಪರಿಚಿತ ಅನಿಸಿತು. ಆ ವಾಸನೆಯಂತೂ ನನಗೆ ಹೆಚ್ಚು ಪರಿಚಿತ. ಹಿಂದೆಂದೋ ಒಮ್ಮೆ ಖಂಡಿತಾ ಇಲ್ಲಿಗೆ ಬಂದಿದ್ದೆ. ಇದ್ದಕ್ಕಿದ್ದಂತೆಯೇ ಹಿಂದಿನ ಪ್ರೇಮಿಯ ಕೊಠಡಿಯನ್ನು ಹೊಕ್ಕಾಗ ಆಗುವಂತೆ, ಸ್ವಲ್ಪ ನಾಚಿಕೆ, ಸ್ವಲ್ಪ ಸಂಕೋಚ, ಜೊತೆಯಲ್ಲಿ ಕೊಂಚ ಪರಿಚಯ ಭಾವನೆ ಮೂಡಿತು. ಶರೀರದ ಒಂದೊಂದು ಭಂಗಿ, ಮೈ ಮುರಿಯುವ ರೀತಿ, ಕೂದಲಿಗೆ ಹಿಂದೆ ಉಪಯೋಗಿಸುತ್ತಿದ್ದ ಸುಗಂಧ, ಈಗ ಉಪಯೋಗಿಸಲು ಅಸಮರ್ಥವಾಗಿರಬಹುದು. ಇವೆಲ್ಲವೂ ವಿಚಿತ್ರವಾಗಿ ತೋರುತ್ತವೆ. ಎದುರು ಬದುರು ಇದ್ದರೂ ಒಬ್ಬರಿಗೊಬ್ಬರು ಹತ್ತಿರ ಹೋಗಲಾರರು. ಸ್ವಲ್ಪ ಅಂತರ ಇದ್ದೇ ಇರುತ್ತದೆ. ಇದಕ್ಕೆ ಕಾರಣವೇನು ? ನನ್ನ ವಯಸ್ಸು ? ನನ್ನ ಹವಾಯಿ ಶರ್ಟ್‌ನ ಒಳಗೆ ಇಟ್ಟಿರುವ ನೋಟುಗಳ ಕಂತೆ ? ನನ್ನ ಶೂ ಸ್ವಲ್ಪ ಕಡಿಮೆ ಹೊಳೆಯುತ್ತಿದ್ದರೆ ಚೆನ್ನಿತ್ತು.

ಬಿಜು ಮಾಮಿ ಒಂದು ಲಾಟೀನು ಹಿಡಿದು ಹೊರಬಂದಳು. ನಾನು ನುಡಿದೆ "ಇದರ ಅಗತ್ಯವಿರಲಿಲ್ಲ, ನಾನು ಸರಿಯಾಗೇ ನಡೆದುಬರುತ್ತಿದ್ದೆ. ಪರಿಮಲ್ ಹೇಗಿದ್ದಾನೆ ಮಾಮಿ ?"

ಕೇಳುತ್ತಾ ಕೇಳುತ್ತಾ ನಾನು ಒಳಹೊಕ್ಕ ಕೊಠಡಿ ಹೇಗಿತ್ತೆಂದರೆ, ಅಲ್ಲಿ ಜ್ವರದ ವ್ಯಕ್ತಿ ಒಳಗೆ ಹೋದರೆ ಬೆವತು ಕೆಲ ನಿಮಿಷಗಳಲ್ಲೆ ಜ್ವರ ಇಳಿದು ಹೋಗುತ್ತಿತ್ತು. ಬಾಗಿಲು ಇದ್ದಿರಲೇಬೇಕು, ಇಲ್ಲದಿದ್ದರೆ ನಾನು ಒಳಗೆ ಹೇಗೆ ಬರುತ್ತಿದ್ದೆ ? ಕಿಟಕಿ ಎಂದು ಹೇಳಬಹುದಾದದ್ದು ಎಲ್ಲೂ ಕಣ್ಣಿಗೆ ಬೀಳಲಿಲ್ಲ. "ಪರಿಮಲ್ ಹೇಗಿದ್ದಾನೆ ಮಾಮಿ ?"

ಮಾಮಿಯ ಗಂಭೀರ ಹಾಗೂ ಕಳೆಹೀನ ಮುಖ ನೋಡೇ ನಾನು ಅರಿತುಕೊಳ್ಳಬೇಕಾಗಿದ್ದು ನನ್ನ ಪ್ರಶ್ನೆ ನಿರರ್ಥಕವಾದ್ದು ಅಂತಾ.

ಮಾಮಿ ಒಳಗಿನ ಒಂದು ಕೊಠಡಿಯತ್ತ ಬೆರಳು ತೋರಿದಳು. ಅಲ್ಲಿ ಒಂದು ಸ್ಟೂಲ್ ಇತ್ತು. ಆದರ ಮೇಲೆ ಕುಳಿತುಬಿಟ್ಟೆ. ನನ್ನ ಹೊಟ್ಟೆಯ ಮಾಂಸಖಂಡಗಳು

ಎಳೆದಂತಾಗುತ್ತಿತ್ತು. ನನ್ನ ಯೋಚನೆಗಳು ಪ್ರಾರಂಭವಾಗಿದ್ದವು. ನಾನು ಷರಟಿನ ಗುಂಡಿಯನ್ನು ಬಿಚ್ಚಲೇ ಬೇಡವೇ ?, ಶೂ ಧರಿಸಿ ಒಳಗೆ ಹೋಗುವುದು ಸರಿಯೇ ತಪ್ಪೇ ? ನಾಲ್ಕು ಕಡೆ ದೃಷ್ಟಿ ಹರಿಸಿದೆ. ಎಲ್ಲೂ ಹಳೆಯ ಚಪ್ಪಲಿ, ಅಥವಾ ಶೂ ಕಂಡು ಬರಲಿಲ್ಲ.

"ಚಹ ತರಲೇ ?"

ನಾನು ಎಚ್ಚರಗೊಂಡೆ, ನೋಡಿದೆ. ಬಿಜು ಮಾಮಿ ನನ್ನನ್ನೇ ಪ್ರಶ್ನಿಸಿದಳು. ನಾನು ನುಡಿದೆ "ಹೂಂ.... ತನ್ನಿ."

ಕೊಠಡಿಯ ಮೂಲೆಯಲ್ಲಿರಿಸಿದ್ದ ಚಹದ ಬಟ್ಟಲನ್ನು ಇರುವೆಗಳು ಮುತ್ತಿದ್ದವು. ಎರಡು ಜಿರಲೆಗಳು ಒಳಗೆ ಕುಳಿತು ತಮ್ಮ ಮೂತಿಯನ್ನು ಅಲ್ಲಾಡಿಸಿ ಇಣಕಿ ನೋಡುತ್ತಿದ್ದವು. ಆ ಬಟ್ಟಲುಗಳನ್ನು ತೆಗೆದುಕೊಂಡು ಬಿಜು ಮಾಮಿ ಒಳ ಹೋಗುವುದನ್ನು ನೋಡಿದೆ.

(ಸರ್‌ಸಿಜ್, ಇದಾದ ನಂತರ ? ಏನನ್ನೂ ಮುಚ್ಚಿಡಬೇಡ)

"ಇಲ್ಲ, ಮುಚ್ಚಿಡುವುದಿಲ್ಲ ನೋಡು ನೀನು ಯಾರೋ ನನಗೆ ತಿಳಿಯದು. ನೀನು ನನ್ನ ಆತ್ಮ ಇರಬಹುದು, ನನ್ನ ವಿವೇಕವಾಗಿರಬಹುದು ? ಅಥವಾ 'ತಂದೆ ಕನ್‌ಫೆಸರ್.' ಎಲ್ಲವನ್ನೂ ಹೇಳಿ ಬಿಡುತ್ತೇನೆ. ಅದಕ್ಕೆ ನಿನ್ನನ್ನು ಕರೆಸಿರುವುದು. ನಿನ್ನ ಮುಂದೆ ಒಪ್ಪಿಕೊಳ್ಳುತ್ತಿದ್ದೇನೆ. ನಾನು ಚಹ ಕುಡಿಯಲು ಶಕ್ತನಾಗಿರಲಿಲ್ಲ, ಏನಾಯಿತು ಗೊತ್ತೆ ನಿನಗೆ ? ಚಹದ ಕಪ್ಪನ್ನು ನಾನು ತೆಗೆದುಕೊಳ್ಳುವಾಗ ಅದು ಜಾರಿ ಬಿದ್ದು ಹೋಯಿತು. ನನ್ನ ಬಿಳಿಯ ಶಾರ್ಕ್‌ಸ್ಕಿನ್ ಪ್ಯಾಂಟ್ ಮೇಲೂ ಒಂದೆರಡು ತೊಟ್ಟುಗಳು ಬಿದ್ದವು. ಬಿಜು ಮಾಮಿ ನಾಚಿ ನುಡಿದಳು "ಅರೇ."

ಇಷ್ಟು ಹೇಳಿ ಬೇರೆ ಬಟ್ಟಲು ತರಲು ಓಡಿದಳು. ನಾನು ನುಡಿದೆ "ಅರೇ ನಗುತ್ತಾ ಇದ್ದೀಯಾ, ನೀನು ಏನು ಮಾಡುತ್ತೀಯಾ ಎಂಬುದು ನನಗೆ ಗೊತ್ತಿದೆ."

ಏನು ನಾನು ಗ್ಲಾಸನ್ನು ಬೇಕೆಂದೇ ಉರುಳಿಸಿದ್ದೆನೆ ? ನನಗೆ ಅದು ಅರ್ಥವಾಗಿಲ್ಲ. ಇದಕ್ಕೆ ಸ್ವಲ್ಪ ಹೊತ್ತಿನ ಮುಂಚೆ ನಾನು ಆ ಗ್ಲಾಸಿನಲ್ಲಿ ಜಿರಲೆ ನೋಡಿದ್ದೆ. ಕೊಠಡಿ ಕೊಳಕು ಮಣ್ಣಿನಿಂದ ತೊಯ್ದಂತೆ ಕಾಣಿಸುತ್ತಿತ್ತು. ಅಂತಹ ವಿಚಿತ್ರ ದುರ್ಗಂಧ ತುಂಬಿದ ಕೊಠಡಿಯಲ್ಲಿ ಕುಳಿತು ನನ್ನ ಗಂಟಲಿನಲ್ಲಿ ಏನೂ ಇಳಿಯುವಂತಿರಲಿಲ್ಲ.

ಈ ವಿಷಯದಿಂದ ನನ್ನ ಮನಸ್ಸಿನಲ್ಲಿ ಪಶ್ಚಾತ್ತಾಪ ಉಂಟಾಗಲಿಲ್ಲವೆಂದು ಹೇಳಲಾರೆ. ನನ್ನ ವ್ಯವಹಾರ ಸರಿ ಇರಲಿಲ್ಲ. ಬಿಜು ಮಾಮಿ ಇದನ್ನು ಅರ್ಥಮಾಡಿಕೊಂಡಳೋ, ಇಲ್ಲವೋ ನನಗೆ ತಿಳಿಯದು. ಆದರೆ ನಾನೇನು ಮಾಡಲು ಶಕ್ಯವಿತ್ತು. ಎಲ್ಲರೂ ತಮ್ಮ ತಮ್ಮ ಇಚ್ಛೆಯ ಎದುರಿಗೇ ತಲೆ ತಗ್ಗಿಸುತ್ತಾರೆ. ನನಗೊಂದು ಬಾರಿ ವಾಂತಿ ಬಂದರೆ ಅದು ನನ್ನ ತಪ್ಪೆ ? ಆಕಳಿಸುವುದು, ಸೀನುವುದನ್ನು ತಡೆಯಲು ಸಾಧ್ಯವೇ ?

(ನಿನಗೆ ನೆನಪಿಲ್ಲವೇ ಕೇವಲ ಹತ್ತು ಹನ್ನೆರಡು ವರ್ಷಗಳ ಕೆಳಗೆ ನಿನ್ನ ಸ್ಥಿತಿ ಇದಕ್ಕಿಂತ ಕೆಳಗಿತ್ತು. ಇಂಥಹುದೇ ಗಲ್ಲಿಯಲ್ಲಿ, ಇಂಥಹುದೇ ಕೊಠಡಿಯಲ್ಲಿ ಸುಖವಾಗಿ ಉಸಿರಾಡುತ್ತಿದ್ದೆ.)

ಹೌದು ಉಸಿರಾಡುತ್ತಿದ್ದೆ. ಆದರೆ ಈಗ ಸಾಧ್ಯವಿಲ್ಲ. ಅಭ್ಯಾಸ ಒಂದರಿಂದ ಇನ್ನೊಂದಕ್ಕೆ ಜಿಗಿಯುತ್ತದೆ. ಆದರೆ ಇದು ಜನ್ಮಾಂತರದ್ದು ಅನಿಸುತ್ತದೆ. ಆಗ ನಾನು ಈ ಕತ್ತಲ ಗುಹೆಯೊಳಗೆ ಹೋಗುತ್ತಿದ್ದೆ. ಆದರೆ ಇಂದು ನಾನು ಆ ಸ್ಥಿತಿಯನ್ನು ಬಿಟ್ಟುಬಂದಿದ್ದೇನೆ ಎಂಬುದು ಅದಕ್ಕಿಂತಲೂ ಹೆಚ್ಚು ಸತ್ಯವಾದುದು. ವಾಸ್ತವಿಕತೆ ಸ್ಥಿತಿಯನ್ನು ನಿಷ್ಕಪಟ ಮನಸ್ಸಿನಿಂದ ಸ್ವೀಕಾರ ಮಾಡಲೇಬೇಕಾಗುತ್ತದೆ. ಹತ್ತು ವರ್ಷದವನಿಗೆ ಹೊಲಿಸಿದ ಅಂಗಿ ಇಪ್ಪತ್ತು ವರ್ಷದವನಿಗೆ ಸರಿಹೋಗಲಿಲ್ಲವೆಂದರೆ ಈ ತಪ್ಪು ಯಾರದು ? ದೇಹ ಶರೀರವೂ ಅಲ್ಲ ಕಾಲದ್ದು.

ಬದಿಯ ಕೋಣೆಯಿಂದ ದಡ್ ದಡ್ ಶಬ್ದ ಕೇಳಿ ಬರುತ್ತಿತ್ತು. ನಾನು ಸಂಶಯಾತ್ಮಕವಾಗಿ ಅತ್ತ ದೃಷ್ಟಿ ಹರಿಸಿದೆ.

ಅವನು ಪರಿಮಲ್! ಎದೆಯಲ್ಲಿ ಕಫ ಕಟ್ಟಿದೆ. ಉಸಿರಾಡಲು ತೊಂದರೆ ಆಗುತ್ತಿದೆ. ಅದಕ್ಕೆ ಯಾವಾಗಲೂ ಧಡ್ ಧಡ್ ಶಬ್ದ ಬರುತ್ತಿರುತ್ತದೆ. ಸಧ್ಯ, ಈಗ ಮಲಗಿದ್ದಾನೆ. ಆದರೂ ಈ ಶಬ್ದ! ಮನೆಯ ನೆಲ ಬಹಳ ವರ್ಷಗಳದ್ದು. ಹಾವಸೆ ಕಟ್ಟಿ ಹೋಗಿತ್ತು. ಆ ನೆಲ ಹೊರಗಿನ ಬೀದಿಗಿಂತ ಕೆಳಗಿದ್ದುದರಿಂದ ಒಣಗಿದ ನೀರಿನ ತೊಟ್ಟಿಯಂತಿತ್ತು.

(ಸರ್‌ಸಿಜ್, ಇನ್ನು ನೀನು ಮತ್ತೇನನ್ನೂ ಹೇಳಬೇಕಾಗಿಲ್ಲ. ಇದಾದ ನಂತರ ನೀನು ಏನು ಹೇಳುವೆ ನನಗೆ ಗೊತ್ತು. ಸೂರಿನ ಕಂಬಗಳಿಗೆ ಗೆದ್ದಲು ಹತ್ತಿದೆ, ಹರಿದ ಹಾಸಿಗೆ, ಬಾಗಿಲ ಮೂಲೆಯಲ್ಲಿ ಜೇಡ, ಇಷ್ಟೇ ಅಲ್ಲವೇ ? ನೀನು ಹೇಳುವುದೇನು ತಪ್ಪಿಲ್ಲ ಆದರೆ ಇದರಲ್ಲಿ ಜೀವವಿಲ್ಲ. ಯಾವ ಜೀವದ ಮೇಲೆ ನಿನಗೆ ಆಸಕ್ತಿ ಇಲ್ಲವೊ, ಅದರ ಚಿತ್ರ ಬಿಡಿಸಲು ಯತ್ನಿಸಬೇಡ.)

ಲಾಟೀನು ಇನ್ನೇನು ಆರುವುದರಲ್ಲಿತ್ತು. ಆ ಕಡೆ ನೋಡುತ್ತಾ ನಾನು ಪ್ರಶ್ನಿಸಿದೆ "ಪರಿಮಲ್ ಯಾವಾಗಲಿಂದ ಕಾಯಿಲೆ ಇದ್ದಾನೆ, ಮಾಮಿ ?"

"ಸುಮಾರು ಇಪ್ಪತ್ತೊಂದು ದಿನಗಳಿಂದ."

"ಡಾಕ್ಟರು ಏನು ಹೇಳುತ್ತಾರೆ ?"

"ಡಾಕ್ಟರಿಗೆ ಸರಿಯಾಗಿ ತೋರಿಸಿದ್ದರೆ ತಾನೇ ಅವರು ಹೇಳುವುದು. ಅಭಾಗಿನಿಯ ಕೈಯಲ್ಲೂ ಏನೂ ಇಲ್ಲ. ಕತ್ತಿನಲ್ಲಿಲ್ಲ ಕೈಯಲ್ಲಿಲ್ಲ, ಅವಳತ್ತ ನೋಡಿದರೆ ಅಯ್ಯೋ ಅನಿಸುತ್ತದೆ; ಸರ್‌ಸಿಜ್. ಮದುವೆಯಲ್ಲಿ ದೊರೆತಿದ್ದ ಮೂರು ನಾಲ್ಕು ತೊಲೆ ಚಿನ್ನವೂ ಈ ದಿನಗಳಲ್ಲಿ ಬಿಕರಿಯಾಗಿ ಹೋಗಿವೆ."

"ಮಾಮಿ, ನೀವು ಇಲ್ಲಿಗೆ ಯಾವಾಗ ಬಂದಿರಿ ?"

"ಹಿಂದಿನ ಬುಧವಾರ ಬಂದೆ. ಇಂದು ಬುಧವಾರ, ಸರಿಯಾಗಿ ಎಂಟು ದಿನಗಳಾದವು ಅಂದುಕೋ. ಎಷ್ಟಾದರೂ ನನ್ನ ಮಗಳು, ನಾನು ಹೊತ್ತು ಸಾಕಿದ್ದು. ವಿಷಯ ತಿಳಿದು ಸುಮ್ಮನೆ ಇರಲಾದೆ. ಸರಸಿಜ್ ನಿನಗೆ ಗೊತ್ತೇ ಇದೆ, ಮುನ್ನಿ ನನಗೆ ಎಷ್ಟು ಬೇಕಾದೋಳು ಅಂತಾ!"

"ಗೊತ್ತಿದೆ ಮಾಮಿ."

"ಕೈಲಿ ಇದ್ದುದನ್ನು ಅಲ್ಲೇ ಎಸೆದು ಓಡಿಬಂದೆ. ಅಲ್ಲಿಯ ಸ್ಥಿತೀನೂ ನಿಂಗೆ

ಗೊತ್ತಿದ್ದೆ ಇಲ್ಲ. ಟುಕು ಈ ಸಾರಿ ಪರೀಕ್ಷೆಗೆ ಕೂಡ್ತಾಳೆ. ಫೀಜು ಇನ್ನೂ ಕೊಟ್ಟಿಲ್ಲ.''

''ನನಗೆ ಎಲ್ಲಾ ಗೊತ್ತಿದೆ ಮಾಮಿ.''

ಕಣ್ಣಿಗೆ ಸೆರಗು ಒತ್ತಿ, ಬಿಜು ಮಾಮಿ ತನ್ನ ಸೀರೆಯ ಹರಿದ ಭಾಗವನ್ನು ತೋರಿಸಿದಳು.

''ಸರ್‌ಸಿಜ್, ಹುಡುಗಿಯರ ಫ್ರಾಕ್ ಹರಿದಿವೆ. ಎರಡು ತಿಂಗಳಿಂದ ಮನೆ ಬಾಡಿಗೆ ಬಾಕಿ ಇದೆ. ಇಪ್ಪಾತ್ತರ್ಲ ಎರಡು ಅಂದರೆ ಐವತ್ತೆರಡು! ಒಂದು ಹೊತ್ತು ಅನ್ನ, ಇನ್ನೊಂದು ಹೊತ್ತು ರೊಟ್ಟಿ.... ತಿಂಗಳ ರೇಷನ್ ಸಹ ಪೂರ್ತಿ ತರೋದಿಕ್ಕೆ ಸಾಧ್ಯವಿಲ್ಲ. ಆದರೆ ಈ ಸಮಾಚಾರ ತಿಳಿದ ತಕ್ಷಣ ಇದ್ದುದ್ದನ್ನೇ ತೆಗೆದುಕೊಂಡು ಬರಲೇಬೇಕಾಯಿತು. ಪರಮಲ್‌ನ ಜೀವ ಎಲ್ಲದಕ್ಕೂ ಹೆಚ್ಚು, ಉಳಿದದ್ದು ಅನಂತರ ನೋಡೋಣ ಅಂತ.''

ಸೆರಗಿನ ಗಂಟು ಬಿಚ್ಚಿ, ಬಿಜು ಮಾಮಿ ಹಳೆಯ, ಮುದುಡಿದ ಒಂದು ನೋಟನ್ನು ತೆಗೆದಳು. ಅನಂತರ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟುಕೊಂಡು ನನ್ನ ಬಳಿ ಬಂದಳು. ನಾನು ಹಿಂದೆ ಹಿಂದೆ ಸರಿಯುತ್ತಿದ್ದೆ. ಅವಳ ಕಣ್ಣುಗಳು ಸ್ಥಿರವಾಗಿದ್ದವು. ಬಿಜುಮಾಮಿ ಆ ರೂಪಾಯನ್ನು ನನ್ನ ಕೈಯಲ್ಲಿ ತುರುಕುತ್ತಾಳೆ ಅನ್ನಿಸಿತ್ತು, ಕೊಟ್ಟಳು. ಅವಳ ಕೈ ಕಂಪಿಸುತ್ತಿತ್ತು, ಕೊರಳೂ ಉಬ್ಬಿ ಬಂದಿತ್ತು.

''ನನ್ನ ಕೈಯಲ್ಲಿ ಮತ್ತೇನೂ ಇಲ್ಲ ಸರ್‌ಸಿಜ್, ನೋಡು ಪರಿಮಲ್‌ನ ಇಂಜಕ್ಷನ್ ಇದಕ್ಕೆ ಬರುತ್ತೇನೋ, ಬಾಳ ಕಷ್ಟದಿಂದ ಹಿಂತಿರುಗೋಕೆ ಹಣ ಉಳಿಸ್ಕೊಂಡಿದ್ದೆ.''

ರೂಪಾಯಿಗಳನ್ನು ನಾನು ಇಸಿದುಕೊಂಡಿರಲಿಲ್ಲ. ಇಸಿದುಕೊಳ್ಳುವುದೂ ಸಾಧ್ಯವಿರಲಿಲ್ಲ. ನಾನು ಅಲ್ಲಿಂದ ಬಂದು ಬಿಟ್ಟೆ. ಇದೇನೂ ಅಷ್ಟು ದೊಡ್ಡ ವಿಷಯವಲ್ಲ. ನನಗೆ ಈ ಕಥೆ ನೆನಪು ಬಂತು. 'ಕ್ರೋಧಪತ್ರ' ಆ ಭಿಕಾರಿ ಹೆಂಗಸು ತನ್ನ ಬಟ್ಟೆಯನ್ನು ತೆಗೆದು ಮಗುವಿಗೆ ಹೊದಿಸಿದ್ದಳು. (ಮುನ್ನಿ ಅಂದರೆ ಉಷಾಳ ಜೊತೆಯಲ್ಲಿ ನಿನ್ನ ಭೇಟಿ ಆಗಿರಲಿಲ್ಲ ಅಲ್ಲವೇ ಸರಸಿಜ್) ಆಗಿತ್ತು, ಲಾಟೀನು ತೆಗೆದುಕೊಂಡು ಉಷಾಳೇ ನನ್ನನ್ನು ಗಲ್ಲಿಯ ಕೊನೆಯ ತನಕ ಬಿಡಲು ಬಂದಿದ್ದಳು. ಅಲ್ಲಿಗೆ ಬಂದ ನಂತರ ನಾನು ತಿರುಗಿ ನೋಡಿದ್ದೆ. ಅವಳ ಶರೀರವನ್ನು ಕಾಡಿಗೆಯ ಕಪ್ಪು ಹಾಗೂ ಲಾಟೀನಿನ ಬೆಳಕು ಹಂಚಿಕೊಂಡಿದ್ದವು.

''ಇದೇನು ಅವಸ್ಥೆ ನಿಂದು ಉಷಾ?''

ಮಾತು ಕೇಳಿಸಿಕೊಂಡ ಉಷಾ ಪಕ್ಕಕ್ಕೆ ಮುಖ ತಿರುಗಿಸಿಕೊಂಡಳು.

ನುಡಿದಳು ''ಕಾಯಿಲೆಯಿಂದ ನಾನು ಇದೇ ತಾನೇ ಎದ್ದಿದ್ದೇನೆ. ಈಗ ಅವರ ಕಾಯಿಲೆ, ಪ್ರತಿದಿನ ರಾತ್ರಿ ಎದ್ದಿರಬೇಕಾಗುತ್ತೆ.''

ಉಷಾಳ ತಲೆಯ ಮೇಲೆ ಸೆರಗು ಇರಲಿಲ್ಲ. ಇವಳ ಕೂದಲು ಹಾರಾಡುತ್ತಿದ್ದವು. ಲಾಟೀನಿನ ಬತ್ತಿಯ ಬೆಳಕು ನರ್ತಿಸಿ ಅವಳ ಶರೀರ, ಮುಖ, ಕೆನ್ನೆಯ ಮೇಲೆ ಬೆಳಕು ಬೀರಿ ಬೆಳಕು ನೆರಳಿನ ಆಟವಾಡುತ್ತಿತ್ತು.

ಉಷಾ ಮುಗುಳ್ನಕ್ಕಳು. ''ಏನು ನೋಡುತ್ತಾ ಇದ್ದೀರಿ ಈ ಪಿಶಾಚಿಯನ್ನು? ಈ ಕೆಲವರ್ಷಗಳಲ್ಲಿ ನಾನು ಪಿಶಾಚಿಯೇ ಆಗಿದ್ದೇನೆ.''

ನಾನು ಹೇಳಬೇಕಾಗಿದ್ದು 'ನೀನು ಹಾಗೆ ಇಲ್ಲ.' ಆದರೆ ಸುಮ್ಮನಿದ್ದೆ. ಉಷಾ ತುಟಿ ಕಚ್ಚಿಕೊಂಡು ನಕ್ಕು ನುಡಿದಳು "ನೀವು ಮೊದಲಿಗಿಂತಲೂ ಚೆನ್ನಾಗಿ ಆಗಿದ್ದೀರಿ."

'ನೀವು ಇನ್ನೂ ದಪ್ಪವಾಗಿದ್ದೀರಿ' ಉಷಾ ಇದನ್ನು ಹೇಳಬಯಸಿದ್ದಳೊ ಇಲ್ಲವೋ ? ನಾನು ಏನೂ ತಿಳಿಯಲಾರದೆ ಕರವಸ್ತ್ರದಿಂದ ಮುಖ ಒರೆಸಿಕೊಂಡೆ. ನನ್ನ ಶಾರ್ಕ್‌ಸ್ಕಿನ್ ಪ್ಯಾಂಟ್, ಹವಾಯಿ ಷರ್ಟ್ ಆಗ ನನ್ನನ್ನು ಚುಚ್ಚುತ್ತಿದ್ದುವು.

ಉಷಾ ಹೇಳುತ್ತಿದ್ದುದನ್ನು ಕೇಳಿಸಿಕೊಂಡೆ "ನಮ್ಮ ಈ ಗಲ್ಲಿಯಲ್ಲಿ ನಿಮಗೆ ಟ್ಯಾಕ್ಸಿ ಸಿಕ್ಕುವುದಿಲ್ಲ. ದಿನವೆಲ್ಲಾ ನಿಂತಿದ್ದರೂ ಸಿಕ್ಕುವುದಿಲ್ಲ."

ನನಗೆ ಗಾಬರಿ ಆಯಿತು. ಅವಳ ಸಂಕೇತ ನನಗೆ ಅರ್ಥವಾಯಿತು. ಅದಕ್ಕೆ ಕೂಡಲೇ ರಸ್ತೆಗೆ ಇಳಿದೆ.

"ಬರ್ತೀನಿ ನಾಳೆ ಬರ್ತೀನಿ" ಅಸ್ಪಷ್ಟವಾಗಿ ಇಂತಹುದೇ ಏನೋ ಮಾತನ್ನು ಹೇಳಿದೆ.

ಅವಳು ಹೇಳಿದಳು "ತಟ್ಟೆ ಮುಚ್ಚಿದ ಊಟ ಹಾಗೆ ಇದೆ. ನೀವು ಮುಟ್ಟಿ ಸಹಾ ನೋಡಿಲ್ಲ."

ನಾನು ನುಡಿದೆ "ಇಲ್ಲ, ಈ ಅಂಗಳದಲ್ಲಿ ಕುಳಿತು ಸಿಗರೇಟು ಸೇದಲು ಬಿಡು."

ಅವಳ ನಕ್ಕಳು. ಅನಂತರ ಇದ್ದಕ್ಕಿದ್ದಂತೆಯೇ ಹಿಂದಿನಿಂದ ನನ್ನನ್ನು ಬಾಚಿ ತಬ್ಬಿಕೊಂಡಳು. ಅಂಧಕಾರದಲ್ಲಿ ಆ ಬಾಹುಗಳು ನನ್ನ ಕತ್ತನ್ನು ಸುತ್ತಿದ್ದವು. ಅದೊಂದು ಹೊಸ ರೀತಿ.

ಅವಳ ಮುಖ ನನಗೆ ಕಾಣಿಸುತ್ತಿರಲಿಲ್ಲ. ಅವಳು ನನ್ನನ್ನು ಅಪ್ಪಿಯೇ ನಿಂತಿದ್ದಳು. ಅವಳು ಹೇಳುತ್ತಿದ್ದಳು, "ಸಿಗರೇಟು ಸೇದುವುದರಿಂದ ಏನಾಗುತ್ತದೆ ? ಸ್ವಲ್ಪ ಹೊಗೆ, ಸ್ವಲ್ಪ ಬೂದಿ ! ಈ ಎರಡು ಗಂಟೆಯಲ್ಲಿ ನೀವು ಈಗಾಗಲೇ ಎಷ್ಟು ಸಿಗರೇಟು ಸುಟ್ಟಿದ್ದೀರಿ, ಹೇಳಿ ? ಇದಕ್ಕೆ ಬದಲಾಗಿ ಊಟಕ್ಕೆ ಕೂಡಿ ಮೇಲಿನ ತಟ್ಟೆ ತೆಗೆಯಿರಿ, ಹೊಟ್ಟೆಗೆ ಸ್ವಲ್ಪ ಹಾಕಿಕೊಳ್ಳಿ."

"ನಾನು ಹೇಳಲಿಲ್ಲವೆ, ನನಗೆ ಹೊಟ್ಟೆ ಹಸಿವಿಲ್ಲ."

"ಏಕಿಲ್ಲ ?"

"ನಂಗೇನು ಗೊತ್ತು ? ನನ್ನ ಮನಸ್ಸು ಉದಾಸವಾಗಿದೆ. ಇವತ್ತು ನಾನು ಉಷಾಳನ್ನು ನೋಡಿ ಬಂದಿದ್ದೇನೆ. ಅವಳ ಅವಸ್ಥೆಯನ್ನು ನೀನು ಕಂಡರೂ ಅತ್ತುಬಿಡುತ್ತಿ. ನಿನಗೆ ಗೊತ್ತೆ ? ಉಷಾಳ ಗಂಡ ಪರಿಮಲ್ ಕಾಯಿಲೆ ಇದ್ದಾನೆ. ಬದುಕುವ ಆಸೆಯೇ ಇಲ್ಲ. ಉಷಾಳ ಹತ್ತಿರ ಹಣವೂ ಇಲ್ಲ, ಕೈಯಲ್ಲಿ ಒಂದು ಬಳೆ ಸಹ ಇಲ್ಲ."

ಅವಳು ನುಡಿದಳು "ನಾನು ಎಲ್ಲಾ ಕೇಳಿದ್ದೇನೆ ಸರ್‌ಸಿಜ್, ಅದಕ್ಕೇ ನಿನ್ನ ಮನಸ್ಸು ಕೆಟ್ಟಿದೆ."

ಅವಳು ಹೇಳುವ ರೀತಿಯೇ ಡೊಂಕಾಗಿತ್ತು.

ನಾನು ನುಡಿದೆ "ಇದನ್ನು ಹೇಳುವಾಗ ನನಗೆ ಕಷ್ಟವಾಗುತ್ತಿದೆ. ಉಷಾ

ನನಗೇನಾಗಬೇಕು? ನಿನಗೆ ಗೊತ್ತಿಲ್ಲ, ಅದಕ್ಕೆ ಹೀಗೆಲ್ಲಾ ಮಾತನಾಡುತ್ತಿದ್ದಿ. ಏನಾಗಬಹುದಿತ್ತು? ಒಂದು ತಪ್ಪು ಮಾಡಿ ಅದರ ಫಲ ಅನುಭವಿಸುತ್ತಿದ್ದಾಳೆ."

ಅವಳು ಗಹಗಹಿಸಿದಳು. ಅವಳ ನಗು ಒಡೆದ ಗ್ಲಾಸಿನ ನೂರಾರು ತುಂಡುಗಳಲ್ಲಿ ಅಣಕಿಸತೊಡಗಿತು. ನಗುವನ್ನು ತಡೆದುಕೊಂಡು ಅವಳು ನುಡಿದಳು "ಎದೆಯ ಮೇಲೆ ಕೈ ಇಟ್ಟುಕೊಂಡು ಹೇಳು ಸರ್‌ಸಿಜ್, ನಿನ್ನ ಮನಸ್ಸು ನಿಜವಾಗಿ ಕೆಟ್ಟಿದೆಯೆ? ಉಷಾ ನಿನ್ನನ್ನು ನಿರ್ಲಕ್ಷಿಸಿ ಪರಿಮಲ್‌ನನ್ನು ಮದುವೆ ಆದಳು. ಅವಳಿಗೆ ಸಂತೋಷ ಲಭಿಸಲಿಲ್ಲ. ಕತ್ತಲ ಕೋಣೆಯಲ್ಲಿ ಉಸಿರು ಕಟ್ಟಿ ಜೀವಿಸುತ್ತಿದ್ದಾಳೆ. ಇದರಿಂದ ಸಂತೋಷವಾಗಿಲ್ಲವೆ?"

ನಾನು ಏನೂ ಉತ್ತರವನ್ನು ಕೊಡಲಿಲ್ಲ. ಉತ್ತರ ಕೊಡುವುದರಿಂದೇನು ಪ್ರಯೋಜನ? ಅವಳದು ನೀಚ ಮನಸ್ಸು. ಯಾವುದರಲ್ಲೂ ಆಕೆಗೆ ವಿಶ್ವಾಸ ಬಾರದು. ಉಷಾಳನ್ನು ಅವಳು ಅರ್ಥಮಾಡಿಕೊಳ್ಳಲಿಲ್ಲ. ಬಿಜು ಮಾಮಿಯ ಮಾತನ್ನು ಅವಳಿಗೆ ಹೇಳಿದರೆ ಅರ್ಥವಾಗುವುದೆ?

ಬಿಜು ಮಾಮಿಯ ಆ ಪ್ರೀತಿ, ಕೊನೆಯ ಹತ್ತು ರೂಪಾಯಿ ನೋಟು ಕೊಟ್ಟ ವಿಷಯ ಕೇಳಿಯೂ ಬಹುಶಃ ಅವಳು ಅಹಹಾ ಎಂದೇ ನಗುತ್ತಾಳೆ.

(ಸರ್‌ಸಿಜ್, ಮಾರನೇ ದಿನ ಬೆಳಿಗ್ಗೆ ನೀನು ಪುನಃ ಅಲ್ಲಿಗೆ ಹೋಗಿದ್ದೆ?)

ಹೌದು ಹೋಗಿದ್ದೆ. ಈ ಬಾರಿ ನಾನು ಟ್ಯಾಕ್ಸಿಯನ್ನು ಗಲ್ಲಿಯ ಹೊರಗೆ ಬಿಟ್ಟು ಹೋಗಿದ್ದೆ. ಕೈಯಲ್ಲಿ ಔಷಧಿ, ತಟ್ಟೆಯಲ್ಲಿ ಹಣ್ಣು, ಹಿಡಿದು ಪಂಚೆಯನ್ನು ಸಂಭಾಳಿಸಿಕೊಂಡು ಉಷಾಳ ಮನೆಯ ಬಾಗಿಲು ತಲುಪಿದೆ. ಸುತ್ತಲೂ ಮನೆಗಳಲ್ಲಿ ಇದ್ದಲಿನ ಒಲೆಗಳು ಉರಿಯುತ್ತಿದ್ದವು.

ಬಾಗಿಲು ತೆರೆದು ಇಂದೂ ಬಿಜು ಮಾಮಿಯೇ ಎದುರಿಗೆ ನಿಂತಳು.

"ಪರಿಮಲ್ ಹೇಗಿದ್ದಾನೆ ಮಾಮಿ?"

"ಹಾಗೇ ಇದ್ದಾನೆ, ಒಳಗೆ ಬಾ." ಒಳಗೆ ನುಗ್ಗಿದ ಆ ಬೆಳಕಿನಲ್ಲಿ ಒಳಗಿನ ಬಡತನ ಚೆನ್ನಾಗಿ ಕಂಡುಬರುತ್ತಿತ್ತು. ಅದರ ವರ್ಣನೆ ಮಾಡದಿರುವುದೇ ಮೇಲು. ಹಳೆಯ ಟವಲು, ಹರಿದ ಲುಂಗಿ, ಗೋಡೆಗಳ ಮೇಲೆಲ್ಲಾ ಕಲೆಗಳು, ಕೊಳಕು ಹಾಸಿಗೆ, ನಾಲ್ಕೂ ಕಡೆ ಗೊಂಯ್ ಗುಟ್ಟುತ್ತಿರುವ ನೊಣಗಳು, ಇವುಗಳೆಲ್ಲಾ ಇರಲೇಬೇಕಿತ್ತು. ಹಿಂದಿನ ದಿನ ನಾನು ಕುಳಿತಿದ್ದ ಸ್ಟೂಲ್ ನನಗೆ ಸಿಕ್ಕಿತು. ಇಂದು ಪಂಚೆ, ಷರಟು ತೊಟ್ಟು ಬಂದಿದ್ದುದರಿಂದ ಅದರ ಮೇಲೆ ಕೂಡಲು ತೊಂದರೆ ಆಗಲಿಲ್ಲ.

ನಾನು ಔಷಧಿ ಹಾಗೂ ಹಣ್ಣನ್ನು ಬಿಜು ಮಾಮಿಯ ಕೈಯಲ್ಲಿರಿಸಿದೆ. ಬಿಜು ಮಾಮಿಯ ಮುಖದಲ್ಲಿ ಹುದುಗಿದ್ದ ನಗು ಸ್ವಲ್ಪ ಅರಳಿತು. ಅವಳು ಅದನ್ನು ಮುಚ್ಚಿಡುವ ಪ್ರಯಾಸವನ್ನೂ ಮಾಡಲಿಲ್ಲ. ಪಕ್ಕದ ಕೊಠಡಿಯಿಂದ ಧಡ್ ಧಡ್ ಶಬ್ದ ಅವರತ್ತ ಕೇಳಿ ಬರುತ್ತಿತ್ತು. ನನ್ನ ಕಿವಿ ಆಲಿಸುತ್ತಿದೆ ಎಂಬುದನ್ನು ಗಮನಿಸಿ ಬಿಜು ಮಾಮಿ ನುಡಿದಳು "ನಿನ್ನೆ ರಾತ್ರಿ ಇದೇ ಅವಸ್ಥೆಯಲ್ಲಿ ಕಳೆಯಿತು. ತಾಯಿ ಮಗಳು ಒಬ್ಬರಾದ ಮೇಲೆ ಒಬ್ಬರು ಸರದಿಯ ಮೇಲೆ ರಾತ್ರಿಯೆಲ್ಲಾ ಎಚ್ಚರವಿದ್ದೆವು. ಮಗಳನ್ನು ಹೊರಗೆ ಕಳುಹಿಸಿ, ದೇವರಲ್ಲಿ ಪ್ರಾರ್ಥಿಸಿದೆ. ಹೇಗಾದರೂ ಇದೊಂದು

ರಾತ್ರಿ ಕಳೆದರೆ ಸಾಕು. ಆ ಕೊಠಡಿಯಲ್ಲಿ ಅವಳು ತಲೆ ಚಚ್ಚಿಕೊಂಡು ಒಂದೇ ಸಮನಾಗಿ ಅಳುತ್ತಿದ್ದಳು. ಇನ್ನೊಂದು ಕೊಠಡಿಯಲ್ಲಿ ರೋಗಿಯ ಆರ್ತನಾದ! ಎಂತಹ ಭೀಕರ ರಾತ್ರಿ! ಇದನ್ನು ನಿನಗೆ ವಿವರಿಸುವುದು ಕಷ್ಟ ಮಗು."

ಬಿಜು ಮಾಮಿ ಇಷ್ಟು ಹೇಳಿ ಸುಮ್ಮನಾದಳು.

"ಮಧ್ಯೆ ಮಧ್ಯೆ ಮುನ್ನಿ ತನ್ನ ಕೊಠಡಿಯಿಂದ ಓಡಿ ಬರುತ್ತಿದ್ದಳು. ಅವಳತ್ತ ನೋಡುವುದೇ ಕಷ್ಟವಾಗಿತ್ತು. ಕಣ್ಣುಗಳು ಬಹುಶಃ ಉರಿಯುತ್ತಿದ್ದವು. ನಿನ್ನೆ ನೀನೇ ಅವಳನ್ನು ನೋಡಿದ್ದಿ. ಕೆನ್ನೆಯಲ್ಲಿ ರಕ್ತ ಬತ್ತಿ ಹೋಗಿದೆ. ನಾನೇ ಪರಿಮಲನಿಗೆ ಸ್ನಾನ ಮಾಡಿಸಿದೆ. ಮೈ ಸವರಿದೆ, ಬೆಡ್ ಪ್ಯಾನ್ ನೀಡಿದೆ, ಮುನ್ನಿಯನ್ನು ರೋಗಿಯ ಬಳಿ ಹೆಚ್ಚು ಹೊತ್ತು ಕೂಡಲು ಬಿಡಲಿಲ್ಲ. ಅವಳ ಸ್ಥಿತಿಯನ್ನು ನೀನು ನೋಡುತ್ತಿದ್ದಿ. ಅಸ್ಥಿಪಂಜರ ಆಗಿಬಿಟ್ಟಿದ್ದಾಳೆ. ಹಣೆಯಲ್ಲಿ ಬರೆದಿದ್ದನ್ನು ತಪ್ಪಿಸುವವರಾರು? ಆದರೂ ಆಕೆ ನನ್ನ ಕಣ್ಣೆದುರಿಗೆ ಇರುವ ತನಕ ಅವಳನ್ನು ನೋಡಿಕೊಳ್ಳಬೇಕಲ್ಲಾ, ಸರ್‌ಸಿಜ್ ಏನೇ ಆಗಲಿ, ನಾನು ಎಷ್ಟಾದರೂ ತಾಯಿ ತಾನೇ."

ನನ್ನ ರೋಮಗಳು ಸೆಟೆದು ನಿಂತವು. ಮಾಮಿಯ ಕಣ್ಣಿನ ಕೆಳಗೆ ಕಪ್ಪಾಗಿತ್ತು. ತಲೆಯ ಕೂದಲು ಸುಣ್ಣದಲ್ಲಿ ಅದ್ದಿದಂತೆ ಕಾಣುತ್ತಿತ್ತು. ನಾನು ನುಡಿದೆ "ನೀವು ಆರೋಗ್ಯವಾಗಿ ಕಾಣಿಸುತ್ತಿಲ್ಲ. ಇದೇ ತರಹ ನೀವೂ ರಾತ್ರಿಯೆಲ್ಲಾ ಇದ್ದಿದ್ದರೆ ಕಾಯಿಲು ಬೀಳುವುದು ಶತಸಿದ್ಧ."

ಬಿಜು ಮಾಮಿ ನಕ್ಕಳು. ಅವಳ ಮುಖದಲ್ಲಿ ಕಣ್ಣೀರು ಹಾಗೂ ಮುಗುಳ್ನಗೆ ವಿಚಿತ್ರವಾಗಿ ಮೇಳಗೊಂಡು ಒಂದು ವಿಚಿತ್ರ ಬಣ್ಣವನ್ನು ತಂದಿತ್ತು. ನುಡಿದಳು "ನನ್ನ ಮಾತು ಬಿಡು, ನಾನಂತೂ ಎಣಿಕೆಯಲ್ಲೇ ಇಲ್ಲ. ಕರೆ ಇಂದು ಬರಬಹುದು ಅಥವಾ ನಾಳೆ. ಒಂದು ವೇಳೆ ಇನ್ನೂ ಹೆದರುವ ಕಾರಣವಿಲ್ಲ ಎಂದಾದರೂ ಮನದಟ್ಟಾಗುವುದಾದರೆ ಇಂದೇ ಕರೆ ಬರಲಿ. ಅಭಾಗಿನಿಯ ಸರ್ವನಾಶಕ್ಕೆ ಇನ್ನು ಉಳಿದಿರುವುದಾದರೂ ಏನು?"

(ಸರ್‌ಸಿಜ್, ನೀನು ಬಿಜು ಮಾಮಿಯನ್ನು ಈ ಮಾತಿನಿಂದ, ಹೊಸ ಬೆಳಕಿನಲ್ಲಿ ನೋಡಲು ಸಾಧ್ಯವಿಲ್ಲವೇ?)

ಹಾ! ಇದು ಸತ್ಯ, ಆ ಕ್ಷಣ ನನಗೆ ಬಿಜು ಮಾಮಿ ಬಡವಳಾಗಿ ಕಾಣಿಸಲಿಲ್ಲ. ದುರದೃಷ್ಟದಿಂದ, ಅಭಾವದ ಸೆಳೆತದಿಂದಾಗಿ ಬಿಜು ಮಾಮಿ ತನ್ನೆಲ್ಲವನ್ನೂ ಕಳೆದುಕೊಂಡಿದ್ದಳು. ಆದರೂ ಏನನ್ನು ಅವಳು ಉಳಿಸಿಕೊಳ್ಳಲು ಸಮರ್ಥಳಾಗಿದ್ದಳೋ ಅದರ ಬೆಲೆ ಏನೂ ಕಡಿಮೆಯಿದ್ದಿರಲಿಲ್ಲ. ಇದೊಂದು ತರಹ ಜೀವನವಾಗಿತ್ತು. ಬಹಳ ತೆಳುವಾದ, ಹಗುರವಾದೆರಡು ಇಸ್ಪೀಟು ಎಲೆಗಳು ಒಂದರ ಆಸರೆ ಇನ್ನೊಂದು ಪಡೆದು ನಿಲ್ಲಲು ಸಮರ್ಥವಾಗುತ್ತವಂತೆ. ಇಲ್ಲಿ ಪ್ರತಿಯೊಬ್ಬನೂ ಇನ್ನೊಬ್ಬನ ಭುಜ ಹಿಡಿದು ಆಸರೆ ಪಡೆದೇ ಜೀವಿಸುತ್ತಿದ್ದಾನೆ.

ರೋಗಿಯ ಆರೈಕೆಗಾಗಿ ಒಬ್ಬ ಆಯಾಳನ್ನು ಇವರು ನೇಮಿಸಲು ಶಕ್ತರಾಗಿರಲಿಲ್ಲ. ಒಂದು ವೇಳೆ ಶಕ್ತಿ ಇದ್ದಿದ್ದರೂ ನೇಮಿಸುತ್ತಿರಲಿಲ್ಲ. ಈ ಜೀವನವನ್ನು ನಾನು ಹಿಂದೆಯೇ ಅರಿತಿದ್ದೆ. ಇಂದು ಮತ್ತೆ ಪರಿಚಯವಾಯಿತು.

ನಾನು ಸ್ವರ ಏರಿಯೇ ಪ್ರಶ್ನಿಸಿದೆ "ಉಷಾ ಎಲ್ಲಿ, ಮಾಮಿ ?"

ಬಿಜು ಮಾಮಿ ನುಡಿದಳು "ಮಲಗಿದ್ದಾಳೆ. ರಾತ್ರಿಯೆಲ್ಲಾ ಈ ಕೊಠಡಿಯಿಂದ ಆ ಕೊಠಡಿಗೆ ಸುತ್ತುತ್ತಿದ್ದಳು. ಒದ್ದಾಡಿಕೊಂಡು ಈಗ ಕೆಲವೇ ನಿಮಿಷಗಳ ಕೆಳಗೆ ಕಣ್ಣುಮುಚ್ಚಿದ್ದಾಳೆ. ನಾನು ಅವಳನ್ನು ಎಬ್ಬಿಸಲಿಲ್ಲ. ಪಾಪ ಮಲಗಿರಲಿ, ಜೀವನ ಪರ್ಯಂತ ಸುಖ ನಿದ್ದೆಯನ್ನು ಅವಳಿಂದ ವಿಧಿ ಕಸಿದುಕೊಂಡು ಬಿಟ್ಟಿದ್ದಾನೆ."

ಬೀದಿಯ ಆ ಕೊನೆಯಲ್ಲಿ ನಾಯಿಯೊಂದು ಬಹಳ ಹೊತ್ತಿನಿಂದ ಅಳುತ್ತಿತ್ತು. ಬೆರಳನ್ನು ಅತ್ತ ತೋರಿಸುತ್ತಾ ಬಿಜು ಮಾಮಿ ನುಡಿದಳು "ಕೇಳು, ಅದು ಪ್ರತಿದಿನವೂ ಹೀಗೆ ಅಳುತ್ತಿರುತ್ತದೆ. ಬೆಳಗ್ಗೆ, ಮಧ್ಯಾಹ್ನ, ಮಧ್ಯರಾತ್ರಿ ಸಹ. ಒಮ್ಮೊಮ್ಮೆ ಬಾಗಿಲ ಬಳಿಗೇ ಬಂದು ಅಳುತ್ತದೆ. ಅದರ ಈ ಅಳು ನನಗೆ ಬಹಳ ಅಶುಭವಾಗಿ ತೋರುತ್ತದೆ. ಬಹುಶಃ ಪರಿಮಲ್ ಇನ್ನು ಹೆಚ್ಚು ದಿನ ಬದುಕಿರಲ್ಲ ಮಗು."

ಇದ್ದಕ್ಕಿದ್ದಂತೆ ನನಗೆ ಏನಾಯಿತೋ ತಿಳಿಯದು. ಇದೊಂದು ಮಾತು ನನ್ನನ್ನು ಕೆಲಸಕ್ಕೆ ಬಾರದವನು, ಅಸಹಾಯನನ್ನಾಗಿಸಿತು. ಬಹಳ ಕಷ್ಟಪಟ್ಟು ಎದ್ದುನಿಂತು ಗಂಟಲಿನಲ್ಲಿ ಶರೀರದ ಶಕ್ತಿಯನ್ನೆಲ್ಲಾ ಶೇಖರಿಸಿ, ನುಡಿದೆ "ಬದುಕೇ ಬದುಕುತ್ತಾನೆ ಮಾಮಿ, ನಾವು ಅವನನ್ನು ಉಳಿಸಿಕೊಳ್ಳುತ್ತೇವೆ."

ಬಿಜು ಮಾಮಿಗೆ ಬಹುಶಃ ನನ್ನ ಮಾತು ಸರಿಯಾಗಿ ಅರ್ಥವಾಗಲಿಲ್ಲ. ಕಣ್ಣಿ ರೆಪ್ಪೆ ಅಲುಗಾಡಿಸದೆ ನನ್ನನ್ನು ನಿರುಕಿಸಿದಳು.

ನಾನು ನುಡಿದೆ "ಜೀವಿಸುತ್ತಾನೆ ಮಾಮಿ, ನಮ್ಮಲ್ಲಿ ಎಷ್ಟು ಶಕ್ತಿ ಇದೆಯೋ ಅಷ್ಟನ್ನೂ ಮಾಡೋಣ."

ಅನಂತರ ಸ್ವಲ್ಪ ಕೆಮ್ಮಿ ಗಂಟಲನ್ನು ಸರಿಪಡಿಸಿಕೊಂಡು, ನಾಚಿಕೆಯನ್ನು ಬಿಟ್ಟು ನುಡಿದೆ, "ಮಾಮಿ ನನ್ನನ್ನು ತಪ್ಪಾಗಿ ತಿಳಿಯಬೇಡ, ನನ್ನ ಕೈಯಲ್ಲೂ ಹೆಚ್ಚು ಇಲ್ಲ. ನಿನಗೇ ಗೊತ್ತಿದೆ. ಈ ನಡುವೆ ನಾನು ವಾಸಿಸುತ್ತಿರುವುದು ಲಕ್ನೋದಲ್ಲಿ. ಈಗ ಕೆಲವು ದಿನಗಳಿಂದ ಹೊಟೇಲಿಗಾಗಿ ಬಹಳ ಖರ್ಚಾಗಿದೆ. ಆದರೂ ಆತನ ಔಷಧಕ್ಕಾಗಿ ಅಷ್ಟೋ ಇಷ್ಟೋ ಕೊಟ್ಟು ಹೋಗುತ್ತೇನೆ."

ನಾನು ನನ್ನ ಜೇಬಿನೊಳಗೆ ಕೈ ಇರಿಸುವವನಿದ್ದೆ, ಅಷ್ಟರಲ್ಲಿ ಬಿಜು ಮಾಮಿ ನನ್ನನ್ನು ತಡೆದಳು. ಬಹುಶಃ ಅವಳು ಭಾವಪರವಶವಾಗಿದ್ದಳು. ಅವಳ ಕಣ್ಣುಗಳು ಹನಿದುಂಬಿದ್ದವು. ನುಡಿದಳು "ತಾಳು ಮಗು, ನನಗೆ ಬೇಡ, ಮುನ್ನಿಯನ್ನು ಕರೆಯುತ್ತೇನೆ. ನೀನು ಏನು ಕೊಡಬೇಕೆಂದಿದ್ದೀಯೋ ಅದನ್ನು ನಿನ್ನ ಕೈಯಿಂದಲೇ ಅವಳಿಗೆ ಕೊಡು. ಕೊನೆಯ ಪಕ್ಷ ಅವಳಿಗಾದರೂ ಅರ್ಥವಾಗಲಿ, ತಾನು ಒಬ್ಬಂಟಿಯಾಗುಳಿದಿಲ್ಲ, ಅವಳ ದುಃಖದಲ್ಲಿ ನೆರವೀಯಲು ಅವಳ ಮಿತ್ರನೊಬ್ಬನು ಇದ್ದಾನೆಂದು."

ಬಿಜು ಮಾಮಿ ಒಳಗೆ ಓಡುತ್ತಿದ್ದವಳು ಸರ್ರನೆ ಬೆಚ್ಚಿ ನಿಂತಳು. ಇದ್ದಕ್ಕಿದ್ದಂತೆಯೇ ಅವಳ ಮುಖದಲ್ಲಿ ಹಲವು ಗೆರೆಗಳು ಮೂಡಿದವು. ಇದಾದ ನಂತರ ನನ್ನ ಕಡೆ ದೃಷ್ಟಿ ಹರಿಸಿದಳು. ಅವಳು ಏನೋ ಹೇಳಬಯಸುತ್ತಾಳೆ ಎಂಬುದು ಸ್ಪಷ್ಟವಾಗಿ ಆ ನೋಟದಿಂದ ಗೋಚರಿಸುತ್ತಿತ್ತು. ಹೇಳುವ ಮಾತು ತುಟಿಯ ತನಕ ಬಂದು ಅಲ್ಲೇ

ಒಣಗಿ ನಿಂತುಹೋಗಿತ್ತು.

ಬಿಜು ಮಾಮಿ ಎಷ್ಟು ಹತ್ತಿರ ಬರಬಹುದೋ ಅಷ್ಟೂ ಹತ್ತಿರ ಬಂದು ನಿಂತಳು. ನುಡಿದಳು "ಸರ್‌ಸಿಜ್." (ಮಾಮಿ ಪಿಸು ನುಡಿದಳು) "ಸರ್‌ಸಿಜ್... ಸರ್‌ಸಿಜ್."

ಮೊದಲು ನನಗೆ ಅರ್ಥವೇ ಆಗಲಿಲ್ಲ. ಆದರೆ ಬಿಜು ಮಾಮಿ ಪುನಃ ಅದೇ ಸ್ವರದಲ್ಲಿ ಪ್ರಶ್ನಿಸಿದಳು "ಎಷ್ಟು ?" ತಕ್ಷಣ ನನಗೆ ಎಲ್ಲವೂ ಅರ್ಥವಾಯಿತು. ಆ ನಾಯಿ ಹೊರಗಡೆ ಇನ್ನೂ ಅಳುತ್ತಲೇ ಇತ್ತು. ತೆಳು ಷರಟಿನ ಜೇಬಿನಿಂದ ನಾನು ನೋಟು ಹೊರತೆಗೆದೆ. ಅದು ನೂರು ರೂಪಾಯಿಗಳ ನೋಟು. ನಾನು ಹೇಳಲು ಬಯಸಿದ್ದೆ "ಮಾಮಿ, ಸಧ್ಯಕ್ಕೆ" ಮಾತು ಅಂತ್ಯಗೊಳ್ಳಲೇ ಇಲ್ಲ.

"ಒಂದು ನೂರು ರೂಪಾಯಿ !" ಬಿಜು ಮಾಮಿಯ ದನಿ ಗದ್ಗದಗೊಂಡಿತ್ತು. ಪುನಃ ಮಾತು ಪ್ರಾರಂಭಿಸಿದಳು. "ಹಣ ಅವಳಿಗೆ ಕೊಡುವೆಯಾ ಮಗು ? ಇದನ್ನು ಮುರಿಸಿದ್ದರೆ ಚೆನ್ನಿತ್ತು. ನನಗೆ ಏನೂ ಕೊಡುವುದಿಲ್ಲವೆ ?"

ಬೆಂಕಿಯ ಕಾವಿನಿಂದ ಕಾಗದ ಮುದುಡಿ ಹೋಗುವಂತೆ ಬಿಜು ಮಾಮಿಯ ಮುಖವೂ ಲೋಭದಿಂದ ಮುದುಡತೊಡಗಿತ್ತು. ಒಂದು ನೂರು ರೂಪಾಯಿ – ಇದೊಂದು ಮಾತು ನದಿಯ ನೀರನ್ನು ಸೀಳುತ್ತಾ ಹೋಗುವ ಸ್ಟೀಮರಿನಂತೆ ಒಂದು ಗೆರೆ ಮೂಡಿಸಿತ್ತು. ಒಂದು ಕಡೆ ಉಷಾ ಇದ್ದಳು. ಅವಳ ಕೊಳಕು ಮನೆ, ಮರಣಾವಸ್ಥೆಯಲ್ಲಿರುವ ಗಂಡ, ಮನೆಯಲ್ಲಿ ತಾಂಡವವಾಡುತ್ತಿರುವ ಬಡತನ, ಹಾಗೂ ವೈಧವ್ಯ; ಮತ್ತೊಂದೆಡೆ ಬಿಜು ಮಾಮಿಯ ಸಂಸಾರ, ಬಾಕಿ ಉಳಿದಿರುವ ಬಾಡಿಗೆ, ಹೆಣ್ಣು ಮಕ್ಕಳಿಗೆ ಕೊಳ್ಳಬೇಕಾಗಿದ್ದ ಫ್ರಾಕ್ ಬಟ್ಟೆ, ರೇಷನ್ ಸಾಮಾನುಗಳ ಅಗತ್ಯ ಎದ್ದುನಿಂತವು. ಸಂಸಾರದ ಈ ಅಗತ್ಯಗಳು ಬಿಜು ಮಾಮಿಯ ಮಮತೆಯಡಿ ಹುದುಗಿ ಹೋಗಿದ್ದವು. ಈಗ ಇವೆರಡು ಎರಡು ಭಾಗಗಳಾಗಿ ಸ್ಪಷ್ಟವಾಗಿ ಗೋಚರಿಸಹತ್ತಿದ್ದವು.

('ಕ್ರೋಡ್ ಪತ್ರ' ಹೆಸರಿನ ಕಥೆಯಲ್ಲಿ ಮೂಡಿ ಬಂದಿದ್ದ ಭಿಕಾರಿ ಪಾತ್ರವಿರುವ ಆ ಕಥೆ ಸಿಕ್ಕಿದರೆ ಈಗ ಏನು ಮಾಡುತ್ತಿ ?)

"ಹರಿದು ಹಾಕುತ್ತೇನೆ."

ಆಕೆ ನುಡಿದಳು "ಹ್ಹಾ."

ಆತ ಬಹು ಹೊತ್ತು ಸುಮ್ಮನಿದ್ದನು. ಅವನ ಮುಖದಲ್ಲಿ ರಹಸ್ಯಮಯ ನಗು ಅಳಿಸಿಹೋಗಿತ್ತು. ಅನಂತರ ಮೆಲು ದನಿಯಲ್ಲಿ ಆತ ನುಡಿದ "ಸರ್‌ಸಿಜ್, ನೀನು ಕೇವಲ ಬಿಜು ಮಾಮಿಯನ್ನು ಮಾತ್ರ ಕಂಡಿದ್ದಿ. ನೀನು ಆ ಮನೆಯಲ್ಲಿ, ಆ ಕೊಠಡಿಯನ್ನು ಕಂಡಿಲ್ಲ. ಮನೆಯ ನಿಜಸಂಪತ್ತು ಅಡಗಿರುವುದೇ ಅಲ್ಲಿ. ಒಂದು ಮಂಚ ಹಾಕಿದರೆ ಭರ್ತಿಯಾಗುವ ಕೊಠಡಿಯಲ್ಲಿ ಎಷ್ಟು ದೊಡ್ಡ ಗಾತ್ರ ಮನಸ್ಸು ಇದೆ ಎಂಬುದು ನಿನಗೆ ಅರಿವಿದೆಯೇ ? ಇದನ್ನು ನೀನು ಊಹಿಸದಿದ್ದರೆ ಈ ಕಥೆಯನ್ನು ಬರೆಯುವ ಪ್ರಯತ್ನವನ್ನೇ ಮಾಡಬೇಡ."

# ಒಂದು ವೃಕ್ಷ

*ಜ್ಯೋತಿರಿಂದ್ರ ನಂದಿ*

ಒಂದು ವೃಕ್ಷ ಬಹಳ ಹಳೆಯದು. ಆ ವೃಕ್ಷ ಸುಂದರವಾಗಿದೆಯೋ ಇಲ್ಲವೇ ಈ ವಿಚಾರ ಯಾರ ಮನಸ್ಸಿಗೂ ಬಾರದು. ವೃಕ್ಷ ತಾನಾಗಿಯೇ ನಿಂತಿದೆ. ಈ ವೃಕ್ಷದ ಅಗತ್ಯವಿದೆಯೋ ಇಲ್ಲವೇ ಈ ಬಗ್ಗೆ ಯಾರೂ ತಲೆಕೆಡಿಸಿಕೊಳ್ಳುವುದಿಲ್ಲ. ಯಾವ ರೀತಿ ಜನಗಳು ತಲೆಯ ಮೇಲಿರುವ ಆಕಾಶ, ಮೋಡ, ಕಾಲ ಕೆಳಗಿರುವ ಭೂಮಿ, ಹುಲ್ಲು ನೋಡುತ್ತಾರೋ ಹಾಗೆಯೇ ಎದುರಿಗೆ ನಿಂತಿರುವ ಆ ವೃಕ್ಷವನ್ನು ನೋಡುತ್ತಾರೆ. ಸಂಜೆ ನೋಡುತ್ತಾರೆ, ಮಧ್ಯಾಹ್ನ ನೋಡುತ್ತಾರೆ. ಮತ್ತೆ ಬೆಳಿಗ್ಗೆ ನೋಡುತ್ತಾರೆ. ಸುಮ್ಮನೆ ಕಣ್ಣು ಅಗಲಿಸಿ ನೋಡುತ್ತಾರೆ, ನೋಡಿದ ಯಾರೂ ಹೃದಯ ಅಗಲಿಸಿ ಆಗಲಿ, ಅನುಭವಿಸಿ ಆಗಲಿ ಅದನ್ನು ಅರ್ಥ ಮಾಡಿಕೊಳ್ಳುವುದಿಲ್ಲ.

ಯಾವುದೋ ಒಂದು ಮರವನ್ನು ಈ ರೀತಿ ಅರಿತುಕೊಳ್ಳಬೇಕು ಎಂಬ ವಿಷಯ ಯಾರ ಮನಸ್ಸಿನಲ್ಲೂ ಮೂಡಿಬರಲಿಲ್ಲ. ದಿನಗಳು ಕಳೆಯುತ್ತವೆ, ಋತುಗಳು ಬದಲಾಗುತ್ತವೆ, ವರ್ಷಗಳು ಗತಿಸಿ ಹೋಗುತ್ತವೆ, ಆದರೆ ವೃಕ್ಷ ತಾನೇ ತಾನಾಗಿ ನಿಂತಿರುತ್ತದೆ.

ಮಳೆಗಾಲದ ದಿನಗಳಲ್ಲಿ ಎಲೆಗಳು ದೊಡ್ಡದಾಗುತ್ತವೆ, ಬಲಿಯುತ್ತವೆ. ಶರತ್ ಋತುವಿನಲ್ಲಿ ಎಲೆಗಳು ಮತ್ತಷ್ಟು ವಿಶಾಲವಾಗುತ್ತವೆ, ದಪ್ಪವಾಗುತ್ತವೆ. ಎಲೆಯ ಹಸಿರು ಬಲಿತು ಕಪ್ಪಾಗಿ ಕಾಣಹತ್ತುತ್ತವೆ. ಹೇಮಂತ ಋತುವಿನಲ್ಲಿ ಇದ್ದಕ್ಕಿದ್ದಂತೆಯೇ ಎಲೆಯ ದಟ್ಟ ಹಸಿರು ಕಂದು ಬಣ್ಣ ತಾಳಿರುತ್ತದೆ. ಅನಂತರ ಶೀತ ಕಾಲ ಬರುತ್ತಲೇ ಅವು ರಕ್ತಹೀನತೆಯಿಂದ ಗರ್ಭವತಿಯು ಬಿಳಿಚಿಕೊಳ್ಳುವಂತೆ, ಹಳದಿಯಾಗುತ್ತವೆ, ಕಳಚಿ ಬೀಳುತ್ತವೆ, ವಿರಕ್ತ ವೃಕ್ಷ ಸಿಟ್ಟಾಗುವುದಿಲ್ಲ, ಆಗಲೂ ಮರ ಮರವಾಗಿಯೇ ಉಳಿಯುತ್ತದೆ.

ವೃಕ್ಷದ ಕಟ್ಟಿಗೆಯೇ ಅದರ ಮುಖ. ಚಿಕ್ಕ ಕಟ್ಟಿಗೆ, ಕೊಯ್ದು ಕಟ್ಟಿಗೆ, ಅಗಲ ಕಟ್ಟಿಗೆ, ತೆಳ್ಳಗೆ ಸೀಳಿದ ಕಟ್ಟಿಗೆ ಇತ್ಯಾದಿ. ಮನುಷ್ಯನ ಬೆರಳುಗಳಂತೆ ಹರಡಿ ನಿಂತಿರುವ ಕಟ್ಟಿಗೆ – ಮರ ಗಿಡ ಒಂದೂ ಅಲ್ಲ. ಕೇವಲ ಕಟ್ಟಿಗೆಯ ಬೊಂಬೆಯಾಗಿ ನಿಂತಿರುತ್ತದೆ.

ಇದರಿಂದ ಯಾರಾದರೂ ಮರದ ಮೇಲೆ ಸಿಟ್ಟಾಗುತ್ತಾರೆಯೆ? ಇಲ್ಲ.

ಏತಕ್ಕೆಂದರೆ ಕಪ್ಪುಮೋಡಗಳಿಂದ ಆಚ್ಛಾದಿತವಾಗಿರುವ ಆಕಾಶದ ಕೆಳಗೆ ಅರಣ್ಯದ ರೂಪ ಧರಿಸಿ ಈ ವೃಕ್ಷ ನಿಂತಿರುತ್ತದೆ. ಇದನ್ನು ಮನುಷ್ಯ ಹೇಗೆ ನೋಡುತ್ತಾನೆಯೋ ಹಾಗೆಯೇ ಚಳಿಗಾಲದಲ್ಲಿ ಒಣಗಿದ ಆಕಾಶದ ಕೆಳಗೆ ಸಣ್ಣ ದೊಡ್ಡ ಅಗಣಿತ ಕೊಂಬೆಗಳ ಭಾರದಿಂದ ಜಗ್ಗುತ್ತಾ ನಿಂತಿರುವ ವೃಕ್ಷವನ್ನು ನೋಡುತ್ತಾನೆ. ಅದಕ್ಕೇ ನಾನು ಹೇಳುತ್ತಿದ್ದುದು ಜನರು ಹೊರಗೆ ಮಾತ್ರ ನೋಡುತ್ತಾರೆ. ಮನಸ್ಸಿನ ಕಣ್ಣು ತೆರೆದು ನೋಡುವುದಿಲ್ಲ, ಅರಿತುಕೊಳ್ಳುವುದಿಲ್ಲ. ಫಾಲ್ಗುಣ ತಿಂಗಳಲ್ಲಿ ಎಲೆಗಳು ಹಸಿರು ಬೆರೆತ ಕೆಂಪು ಬಣ್ಣ ತಳೆದಾಗ ಈ ಸಂಭ್ರಮವನ್ನು ನೋಡಿ ಮನುಷ್ಯ ಸಂತೋಷದಿಂದ ತೂಗುತ್ತಾನೆ ಅಥವಾ ವೈಶಾಖದಲ್ಲಿ ಅಸಂಖ್ಯ ಮಾಂದಳಿರು ಹಾಗೂ ವಿಚಿತ್ರವಾಗಿ ಕೆಂಪಾಗಿ ಆಕಾಶವನ್ನೇ ಕೆಂಪಾಗಿಸುವ ವೃಕ್ಷದ ಈ ಕಾರ್ಯ ಕಂಡು ಮನುಷ್ಯ ಹರ್ಷದಿಂದ ಚೀತ್ಕರಿಸುತ್ತಾನೆ. ಆದರೆ ಹೀಗೆ ಮಾಡಲು ಯಾರಿಗೂ ಸಾಧ್ಯವಿಲ್ಲ. ಇಲ್ಲಿಯವರೆಗೂ ಹೀಗೆ ಯಾರೂ ಮಾಡಿದುದಿಲ್ಲ.

ಎರಡು ಮೂರು ಮನೆಗಳ ಮಧ್ಯೆ ಒಂದು ಚೂರು ಬೀಳು ಜಮೀನಿದೆ. ಅದರಲ್ಲಿ ದೊಡ್ಡ ದೊಡ್ಡ ರೆಂಬೆಗಳ ಒಂದು ಮರವಿದೆ. ಇದು ಜನಗಳಿಗೆ ಸುಖ ಕೊಡುತ್ತದೆ. ಇಷ್ಟೇ ಆ ಜನ ಅರಿತಿರುವುದು. ಆ ಮನೆಯ ಜನರೂ ಇದನ್ನೇ ತಿಳಿದಿದ್ದಾರೆ. ಈ ಮನೆಯ ಜನರಿಗೂ ಇಷ್ಟೇ ತಿಳಿದಿರುವುದು. ಅಕ್ಕಪಕ್ಕದ ಜನರು ತಮ್ಮ ಅನುಕೂಲಕ್ಕೋಸ್ಕರ ಆ ಮರದ ಬಳಿಗೆ ಹೋಗುತ್ತಾರೆ. ಬೆಳಗಿನ ಸಮಯ ನಾಲ್ಕೈದು ಮುದುಕರು ಆ ಮರದ ಕೆಳಗೆ ಕುಳಿತು ವೃತ್ತಪತ್ರಿಕೆ ಓದುತ್ತಾರೆ. ಸಮಾಜನೀತಿ, ಅರ್ಥನೀತಿ, ರಾಜನೀತಿ ಕುರಿತು ಚರ್ಚಿಸುತ್ತಾರೆ. ಮಧ್ಯಾಹ್ನ ಆ ಮನೆಯ ಮುದುಕಿ, ಈ ಮನೆಯ ಮುದುಕಿ, ಆ ಮನೆಯ ಸೊಸೆ, ಈ ಮನೆಯ ಮಗಳ ಜೊತೆಯಲ್ಲಿ ಮರದ ಕೆಳಗಿನ ಹಸಿರು ಹುಲ್ಲು ಹಾಸಿಗೆಯ ಮೇಲೆ ಕಾಲು ಚಾಚಿ ಕುಳಿತು ಅಡಿಗೆ, ಹೊಲಿಗೆ ಬಗ್ಗೆ ಮಾತನಾಡುವುದಲ್ಲದೆ ಮಗು ಆಗುವ, ಮಗು ಆಗುವುದನ್ನು ತಡೆಯುವ ಮಾತೂ ಆಡಿ ಸಮಯ ಕಳೆಯುತ್ತಾರೆ. ಸಂಜೆ ಆಗುತ್ತಲೇ ಹುಡುಗರ ಗುಂಪೊಂದು ಮರದ ನಾಲ್ಕು ಕಡೆ ಸೇರಿ ಓಡಿ, ಕುಣಿದು ಗಲಾಟೆ ಮಾಡುತ್ತದೆ. ಮಕ್ಕಳು ಮರ ಹತ್ತಿ ಕೊಂಬೆ ಹಾಗೂ ಎಲೆಗಳನ್ನು ಮುರಿಯುತ್ತಾರೆ. ಒಮ್ಮೊಮ್ಮೆ ಮರದ ಕೊಂಬೆಗೆ ಉಯ್ಯಾಲೆ ಕಟ್ಟಿ ತೂಗಾಡುತ್ತಾರೆ.

ಚಳಿ ದಿನಗಳಲ್ಲಿ ಮಧ್ಯಾಹ್ನದ ಹೊತ್ತು ಮರದ ನೆರಳಿನಲ್ಲಿ ತಲೆ ಇಟ್ಟು ಬಿಸಿಲಿನಲ್ಲಿ ಶರೀರವನ್ನಿಟ್ಟು ಕಥೆ ಪುಸ್ತಕಗಳನ್ನು ಕೆಲವರು ಓದುತ್ತಿರುತ್ತಾರೆ. ಬೇಸಿಗೆ ದಿನಗಳ ರಾತ್ರಿಯಲ್ಲಿ ಇದೇ ಮರದ ಕೆಳಗೆ ತಣ್ಣನೆಯ ಚಾಪೆ ಹಾಸಿ ಮೊಹಲ್ಲಾದ ಐದಾರು ಜನ ಇಸ್ಪೀಟು ಆಡುವುದು ಕಂಡುಬಂದಿದೆ.

ಆ ಮರದ ಕೊಂಬೆಗಳ ಮೇಲೆ ವಿವಿಧ ಪ್ರಕಾರದ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿರುತ್ತವೆ, ಕೂಗುತ್ತಿರುತ್ತವೆ, ರೆಕ್ಕೆ ಬಡಿಯುತ್ತಿರುತ್ತವೆ. ಇದಲ್ಲದೆ ಕೊಕ್ಕು ಕೊಕ್ಕಿಗೆ ಅವು ತಿಕ್ಕುವ ಶಬ್ದವೂ ಕೇಳಿ ಬರುತ್ತದೆ. ಗಾಳಿಯಿಂದಾಗಿ ಎಲೆಗಳು ಅಲುಗಾಡುತ್ತವೆ, ಕೊಂಬೆಗಳು ತುಯ್ಯಲಾಡುತ್ತವೆ. ಒಂದೊಂದು ಸಾರಿ ಈ ಮರದ ಮೇಲೆ ಒಂದೂ ಪಕ್ಷಿ ಇರುವುದಿಲ್ಲ. ಗಾಳಿಯೂ ಬೀಸುವುದಿಲ್ಲ. ಆಗಲೂ ಈ ಮರ

ಹೀಗೆ ಸ್ಥಿರವಾಗಿ ಮೂಕನಾಗಿ ನಿಂತಿರುತ್ತದೆ. ಆ ಬೀಳು ಜಮೀನಿನಲ್ಲಿ ದಟ್ಟವಾದ ನೆರಳನ್ನು ಕೆಡುವುತ್ತಾ ಅನಂತ ಕಾಲದ ಸಾಕ್ಷಿಯಾಗಿ ಆ ಮರ ಯುಗ ಯುಗಗಳಿಂದ ನಿಂತಂತಿದೆ. ಒಮ್ಮೊಮ್ಮೆ ಅದು ದಾರ್ಶನಿಕನಂತೆ ಕಾಣುತ್ತದೆ. ಸುಮ್ಮನೆ ನಿಶ್ಚಲವಾಗಿ ನಿಂತು ಸಮಸ್ತ ವಿಶ್ವವನ್ನು ನೋಡುತ್ತಿರುತ್ತದೆ. ಪ್ರಪಂಚದಲ್ಲಿನ ಹುಟ್ಟುಸಾವುಗಳನ್ನು ಗಮನಿಸುತ್ತಿರುತ್ತದೆ. ಪಾಪದ ವಿಜಯ, ಪುಣ್ಯದ ಸೋಲು ನೋಡಿ ದಿಗ್ಭ್ರಮೆಗೊಂಡು ಮೂಕವಾಗಿ ನಿಂತಿರುತ್ತದೆ.

ಆ ವೃಕ್ಷ ಒಮ್ಮೊಮ್ಮೆ ಚಿಂತಾಶೀಲ ವ್ಯಕ್ತಿಯಂತೆ ಕಾಣಿಸುತ್ತದೆ. ಆಗ ಅಕ್ಕಪಕ್ಕದ ಜನ ಹಾಗೂ ಪಶುಪಕ್ಷಿಗಳ ಚಂಚಲ ಸ್ವಭಾವ ವಿಚಿತ್ರವಾಗಿ ತೋರುತ್ತದೆ.

ಇದೇ ರೀತಿಯಲ್ಲಿ ಆ ವೃಕ್ಷವನ್ನು ಯಾರೋ ನೋಡುತ್ತಿದ್ದಿರಬಹುದು, ಯೋಚಿಸುತ್ತಿದ್ದಿರಬಹುದು. ಇಲ್ಲಿಯವರೆಗೆ ಯಾರಿಗೂ ಗೊತ್ತಿರಲಿಲ್ಲ. ಏನು ಈ ವೃಕ್ಷಕ್ಕೂ ಅಂತರದೃಷ್ಟಿ ಉಂಟೆ? ಪೂರ್ವದ ಆ ಮನೆಯ ಹಸಿರು ಕಿಟಕಿಯಲ್ಲಿ ಕುಳಿತು ಯಾರೋ ಬಹಳ ತೀಕ್ಷ್ಣವಾಗಿ ತನ್ನನ್ನೇ ನೋಡುತ್ತಿರುವಂತೆ ಆ ವೃಕ್ಷಕ್ಕೆ ಅನಿಸುತ್ತಿತ್ತು. ಇಲ್ಲಿ ಆ ವ್ಯಕ್ತಿ ಬಹುಶಃ ಎಲ್ಲಾ ಜನರಂತೆ, ಸಾದಾ ಕಣ್ಣಿನಿಂದ ಎಲೆ ಉದುರುತ್ತಿದ್ದುದನ್ನು, ಅನಂತರ ಹೊಸ ಎಲೆಗಳು ಚಿಗುರುವುದನ್ನು ನೋಡಿರಬಹುದು. ಈಗ ಆ ಕಣ್ಣುಗಳು ಸಾದಾ ಕಣ್ಣುಗಳಲ್ಲ. ಕಪ್ಪು ಹಚ್ಚಿ ಆ ಕಣ್ಣುಗಳು ಈಗ ಕಪ್ಪಾಗಿವೆ. ಅವುಗಳಲ್ಲಿ ತೀಕ್ಷ್ಣತೆ ಬಂದಿದೆ. ಈಗ ಅವಳು ಚಿಕ್ಕಜಡೆಯನ್ನು ಇಳಿಬಿಟ್ಟು ಫ್ರಾಕ್‌ನ ನೆರಿಗೆಯನ್ನು ಅಲೆಯಂತೆ ಚಿಮ್ಮುತ್ತಾ ಆ ಬೀಳು ಜಮೀನಿನಲ್ಲಿ ನಿಂತು ಈ ವೃಕ್ಷವನ್ನು ಮೇಲ್ನೋಟದಿಂದ ಬಿದಿರಿನ ಕೊಳಲೆಂದು ಈಗ ತಿಳಿಯುವುದಿಲ್ಲ. ಈಗ ಅವಳು ಶಾಂತ ರೀತಿಯಿಂದ ಗಂಭೀರ ದೃಷ್ಟಿ ಬೀರುತ್ತಾಳೆ, ಎಳೆದು ಕಟ್ಟಿದ ಕೂದಲಿನಂತೆ ಅವಳ ಮನಸ್ಸು ಜಾಗೃತಗೊಂಡಿದೆ; ನಿಗ್ರಹಿಸಲ್ಪಟ್ಟಿದೆ, ತನ್ನತನ ಅರಿತು ಸ್ಥಿರಗೊಂಡಿದೆ. ಇನ್ನೂ ಹೆಚ್ಚಿನ ಗಹನ ಮನಸ್ಸಿನಿಂದ ಜಾಗೃತ ದೃಷ್ಟಿಯನ್ನು ಸದಾ ಆ ಮರದತ್ತಲೇ ಹರಿಸಿರುತ್ತಾಳೆ. ವೃಕ್ಷದ ಬಗ್ಗೆ ಯೋಚಿಸುತ್ತಾಳೆ. ಯೋಚಿಸುತ್ತಾ ಯೋಚಿಸುತ್ತಾ ಒಂದು ದಿನ ಅವಳ ದೃಷ್ಟಿಯಲ್ಲಿ ಭಯ ಕಾಣಿಸಿತು, ಕಂಪಿಸಿದಳು. ಕಣ್ಣು ರೆಪ್ಪೆ ಆಡಿಸುವುದನ್ನು ಮರೆತಳು, ಕರಿಗುಡ್ಡೆಗಳು ಕಲ್ಲಿನಂತೆ ನಿಶ್ಚಲಗೊಂಡವು. ಆಕೆ ಯಾವುದೋ ಭಯಂಕರ ಚಿಂತೆಯಲ್ಲಿ ಮುಳುಗಿದ್ದಾಳೆ ಎಂದು ಮರ ಯೋಚಿಸಿತು. ಕಪ್ಪು ರೆಪ್ಪೆಗಳಿಂದ ಆವೃತಗೊಂಡ ಕಣ್ಣಿನಲ್ಲೇ ಭಯ ಮಾತ್ರ ಕಾಣಿಸುತ್ತಿರಲಿಲ್ಲ. ವಿದ್ವೇಷವು ಮುಸುಕಿತ್ತು. ವೃಕ್ಷಕ್ಕೆ ಹೆದರಿಕೆ ಆಯಿತು. ದಿನದ ಬೆಳಕಿನಲ್ಲಿ ಮಾತ್ರವಲ್ಲ ರಾತ್ರಿಯ ಅಂಧಕಾರದಲ್ಲೂ ಎರಡು ಕಣ್ಣುಗಳು ಕಿಟಕಿಯಲ್ಲಿ ಸ್ಥಿರವಾಗಿ ಇತ್ತಲೇ ನೋಡುತ್ತಾ ನಿಂತಿವೆ. ನಿರಾಕಾರ, ಅಸ್ಪಷ್ಟ, ಛಾಯೆಯ ರೂಪ ಧರಿಸಿದ್ದರೂ ರಾತ್ರಿಯ ಆ ಕತ್ತಲಿನಲ್ಲಿ ವೃಕ್ಷದ ದೃಷ್ಟಿಯ ಮುಂದೆ ಆಕೆ ತಪ್ಪಿಸಿಕೊಳ್ಳದಾಗಿದ್ದಳು. ಆತಂಕದ ಜೊತೆಗೆ ವಿಪುಲ ತಿರಸ್ಕಾರ ಆಕೆಯತ್ತ ಹರಿದು ಬರುತ್ತಿತ್ತು.

ಇದಾದ ನಂತರ ಮಾತು ಹರಡಿತು. ಬಹುಶಃ ಆಕೆ ಕಿಟಕಿಯ ಬಳಿ ಕುಳಿತೇ ಸಮಾಚಾರ ಹರಡಿದ್ದಾಳೆ. ಇದು ದುಷ್ಟ ಮರ, ದುರಾಚಾರಿ, ಇದನ್ನು ಇಲ್ಲಿಂದ

ಮೊದಲು ತೊಲಗಿಸಿಬಿಡಬೇಕು.

ಈ ಬೀಳು ಜಮೀನಿನ ಅಕ್ಕಪಕ್ಕದ ಜನರು ಜಾಗ್ರತರಾದರು. ಮನುಷ್ಯರಂತೆ ಆ ಮರವೂ ಮೂರ್ಖತನ ತಾಳಿ ಮನುಷ್ಯರ ಮಧ್ಯೆ ಬೆರೆತುಹೋಗಿದೆ ಎಂಬುದನ್ನು ಮೊದಲ ಬಾರಿಗೆ ಅಲ್ಲಿನ ಜನ ಅರಿತರು.

ಆಗಲೇ ಜನರು ಯೋಚಿಸಿದ್ದು. ಹಳೆಯ ಮರದ ಕೆಳಗೆ ಕುಳಿತು ಜನರು ರಾಜಕೀಯ ಮಾತನಾಡುತ್ತಾರೆ. ಮುದುಕಿಯರು ಹುಡುಗಿಯರ ಜೊತೆ ಕುಳಿತು ಮಕ್ಕಳಾಗುವ, ಮಕ್ಕಳಾಗದಿರುವ ಬಗ್ಗೆ ಚರ್ಚಿಸುತ್ತಾರೆ. ಮಕ್ಕಳು ಆ ಮರದ ಸುತ್ತು ಆಟವಾಡುತ್ತಿರುತ್ತಾರೆ. ಒಂದು ವೇಳೆ ಈ ಮರ ಒಳ್ಳೆಯದಾಗಿರದೆ ಇದ್ದರೆ, ಇದರಲ್ಲಿ ದುರ್ಬುದ್ಧಿ ಇದ್ದರೆ;

ಇದನ್ನು ಕತ್ತರಿಸಿ ಹಾಕಬೇಕು, ಸುಟ್ಟು ಬಿಡಬೇಕು, ಬುಡ ಸಮೇತ ಕಿತ್ತು ಬಿಸುಡಬೇಕು. ಬಿಳಿಯ ಹೂವನ್ನು ಸುತ್ತಿದ್ದ ಜಡೆಯನ್ನು ಅಲ್ಲಾಡಿಸುತ್ತಾ ಕಿಟಕಿಯ ಬಳಿ ಕುಳಿತಿದ್ದ ಆ ಹುಡುಗಿ ನುಡಿದಳು "ಯಾರಿಗ್ಗೊತ್ತು, ಈ ಮರದಿಂದ ಯಾರ್ಯಾರಿಗೆ ಏನೇನು ವಿಪತ್ತು ಬರುತ್ತೋ ?"

ಎಲ್ಲರೂ ಕೇಳಿಸಿಕೊಂಡರು, ಎಲ್ಲರಿಗೂ ಅರ್ಥವಾಯಿತು, ಮಕ್ಕಳು ಆಡುತ್ತಿರುತ್ತಾರೆ. ಆಡುವಾಗ ಈ ಮರದ ಒಂದು ಕೊಂಬೆ ಮುರಿದು ಬೀಳುವ ಸಂಭವವಿಲ್ಲವೆ ? ಈ ಮರಕ್ಕೆ ಸಿಡಿಲು ಬಡಿಯಬಹುದು. ಆಗ ಕೆಳಗೆ ಯಾರೇ ಇರಲಿ ಅವರಿಗೆ ಸಾವು ಖಂಡಿತಾ. ಅಂದರೆ ಸಿಡಿಲಿಗೆ ಆಮಂತ್ರಣ ನೀಡುವುದು ಈ ಮರವೇ. ಈ ದುಷ್ಟ ಮರ ಏನು ಮಾಡಲಾರದು ? ಇದನ್ನು ಕೇಳಿ ಜನಗಳು ಗಾಬರಿಯಾದರು.

ಹಸಿರು ಕಿಟಕಿಯ ಬಳಿ ಕೂಡುವ ಆ ಹುಡುಗಿ ಸುಮ್ಮನಿರಲಿಲ್ಲ. ಮರದ ಬಗ್ಗೆ ನಿರಾಸಕ್ತರಾಗಿದ್ದವರು ಇನ್ನೂ ಒಂದು ಭಯಂಕರ ಸುದ್ದಿಯನ್ನು ಕೇಳಿದರು.

ಸಿಡಿಲೊಂದೇ ಏಕೆ, ಆ ಮರದ ಮೇಲಿರೋ ಪಿಶಾಚಿ ಯಾರನ್ನು ಬೇಕಾದರೂ ತನ್ನ ಹತ್ತಿರ ಸೆಳೆದುಕೊಳ್ಳಬಹುದು.

ಬೆಳಿಗ್ಗೆ ಎದ್ದು ನೋಡುವಾಗ ಆ ಮನುಷ್ಯ ಆ ಮರದ ಒಂದು ಕೊಂಬೆಯಲ್ಲಿ ನೇತಾಡುತ್ತಿರುತ್ತಾನೆ.

ಕತ್ತಿಗೆ ಕುಣಿಕೆ ಹಾಕಿಕೊಂಡು ನೇಣು ಹಾಕಿಕೊಳ್ಳಲು ಈ ಮರ ಒಂದು ಒಳ್ಳೆಯ ಆಸರೆ. ಈ ಮಾತು ಹೊಸ ವಿಷಯವೆಂಬಂತೆ ಜನರಿಗೆ ನೆನಪು ಬಂತು. ಇಂತಹ ಮರವನ್ನು ಸುಟ್ಟು ಹಾಕಬೇಕು, ಕಡಿದು ಹಾಕಬೇಕು, ಬುಡ ಸಹಿತ ಕಿತ್ತೆಸೆಯಬೇಕು.

ವೃಕ್ಷಕ್ಕೆ ಬಹುಶಃ ಗೊತ್ತಿರಲಾರದು. ಈ ಬೀಳು ಜಮೀನಿನ ಪಶ್ಚಿಮದ ಕಡೆ ಇರುವ ಒಂದು ಮನೆಯ ಕೆಂಪು ಬಣ್ಣದ ಕಿಟಕಿಯ ಬಳಿ ಕುಳಿತಿರುವ ವ್ಯಕ್ತಿಯೊಂದು ಹರಿತವಾದ ದೃಷ್ಟಿಯನ್ನು ತನ್ನತ್ತ ಹರಿಸಿದ್ದಾನೆ ಎಂದು. ಆ ದೃಷ್ಟಿ ಬಿದ್ದೊಡನೆ ವೃಕ್ಷ ಕಂಪಿಸಿತು. ಸಂತೋಷವೂ ಆಯಿತು. ಆತನ ಕಣ್ಣುಗಳು ಬಹಳ ಚೆಂದವಾಗಿದ್ದವು. ಆತನ ಕಣ್ಣುಗಳಲ್ಲಿ ಭಯ, ಆತಂಕ, ತಿರಸ್ಕಾರ, ವಿದ್ವೇಷ ಒಂದೂ ಕಾಣಿಸುತ್ತಿರಲಿಲ್ಲ. ಸ್ನೇಹ, ಮಮತೆ, ಪ್ರೇಮ ಹಾಗೂ ಸಹಾನುಭೂತಿಗಳು ಇದ್ದವು. ಇದನ್ನು ಕಂಡು

ವೃಕ್ಷ ಸ್ತಂಭಿತಗೊಂಡಿತು. ಏತಕ್ಕೆಂದರೆ ಕೊಂಚ ದಿನಗಳ ಹಿಂದೆ ಆ ಕಣ್ಣುಗಳು ಅಶಾಂತವಾಗಿದ್ದವು. ಅವುಗಳಲ್ಲಿ ಚಂಚಲತೆ ಇತ್ತು. ಸಿಕ್ಕದ್ದು ಧರಿಸಿ ಯಾವ ಹೊತ್ತಿನಲ್ಲಿ ಅಂದರೆ ಆ ಹೊತ್ತಿನಲ್ಲಿ ಆ ಮರದ ಬಳಿಗೆ ಬಂದು ಬಿಡುತ್ತಿದ್ದ. ಕೊಂಬೆಗೆ, ಎಲೆಗಳಿಗೆ ಕಲ್ಲು ಎಸೆಯುತ್ತಿದ್ದ. ಎಲೆಗಳ ಮರೆಯಲ್ಲಿರುತ್ತಿದ್ದ ಹಕ್ಕಿಗೂಡುಗಳನ್ನು ಹುಡುಕಿ ಹುಡುಕಿ ಒಡೆದು ಹಾಕುತ್ತಿದ್ದ. ಕೊಂಬೆಗೆ ಉಯ್ಯಾಲೆ ಕಟ್ಟಿ ಆಡುತ್ತಿದ್ದ ಆ ಹುಡುಗ ಈಗ ಸಭ್ಯನಾಗಿದ್ದಾನೆ, ಗಂಭೀರನಾಗಿದ್ದಾನೆ, ಸುಂದರನೂ ಆಗಿದ್ದಾನೆ. ಮಲ್‌ಮಲ್ ಪಂಚೆ ಕೊನೆಯನ್ನು ಸುತ್ತಿ ಹಿಡಿದು ಎರಡು ಕೈಗಳನ್ನು ಗಲ್ಲದ ಮೇಲಿರಿಸಿಕೊಂಡು ಕಿಟಕಿಯ ಸನಿಹದಲ್ಲಿರಿಸಿರುವ ಟೇಬಲ್ ಬಳಿ ಕುಳಿತುಕೊಂಡು ಮರವನ್ನೇ ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿರುತ್ತಾನೆ, ಹೀಗೆ ಯೋಚಿಸುತ್ತಾ ಟೇಬಲ್ ಮೇಲಿರುವ ಹೂದಾನಿಯಿಂದ ಒಂದು ಗುಲಾಬಿಯನ್ನು ಕೈಲಿ ಹಿಡಿದು ಸುಗಂಧವನ್ನು ಆಘ್ರಾಣಿಸುತ್ತಾನೆ. ಮನದ ಭಾವನೆಗಳೊಡನೆ ಹೂವಿನ ಸುಗಂಧವನ್ನು ವಿಚಿತ್ರ ರೀತಿಯಲ್ಲಿ ಮೇಳೈಸುತ್ತಾನೆ.

ವೃಕ್ಷದ ಮನಸ್ಸಿನಲ್ಲಿ ಈಗ ಒಂದು ನಿಶ್ಚಿಂತೆ ಮೂಡಿತು. ಮನದ ಭಾರ ಹೊರಟುಹೋಯಿತು. ಕೆಂಪು ಕಿಟಕಿಯಲ್ಲಿ ಕುಳಿತ ಹುಡುಗನಿಂದ ಜನ ಇನ್ನೊಂದು ಮಾತು ಕೇಳಿದರು.

ಈ ವೃಕ್ಷ ಈಶ್ವರನ ವರದಾನದಂತೆ ನಮ್ಮಗಳ ಮಧ್ಯದಲ್ಲಿದೆ. ಇದನ್ನು ಸದಾ ಜೀವಂತ ಇಟ್ಟಿರಬೇಕು. ಈ ಮರದ ಕೆಳಗೆ ಬೆಳಿಗ್ಗೆ, ಸಾಯಂಕಾಲ ಜನ ಸೇರುತ್ತಾರೆ. ಈ ಮರ ಒಬ್ಬ ಮನುಷ್ಯನನ್ನು ಇನ್ನೊಬ್ಬರ ಹತ್ತಿರ ತರುತ್ತದೆ. ಅಂದರೆ ಈ ಮರ ನಮಗೆ ಸಾಮೂಹಿಕ ಜೀವನ ಕಲಿಸುತ್ತಿದೆ. ಇಲ್ಲಿ ಮರವಿದೆ ಅದಕ್ಕೆ ಮಕ್ಕಳು ಆಟವಾಡುತ್ತಾರೆ. ನೆಲದ ಮೇಲೆ ನಿಂತು ಈ ಮರ ತಾಯಿಯ ಸ್ನೇಹ ಹಾಗೂ ಸಂತೋಷವನ್ನು ಹರಡುತ್ತಿದೆ.

ನಿಜವಾಗಿಯೂ ಇದು ಸುಂದರವಾಗಿದೆ, ರೆಂಬೆಗಳೂ ಸುಂದರ, ಅದಕ್ಕೆ ಹಲವು ಹಕ್ಕಿಗಳು ಇಲ್ಲಿ ಗೂಡು ಕಟ್ಟಿಕೊಂಡು ಈ ಮರದ ಆಶ್ರಯ ಪಡೆದು ಕೀಚ್ ಕೀಚ್ ಅನ್ನುತ್ತಿರುತ್ತವೆ, ಚಿಟ್ಟೆಗಳು ಅದರ ನಾಲ್ಕೂ ಕಡೆ ಸುತ್ತುತ್ತಿರುತ್ತದೆ.

ಮೊಹಲ್ಲಾದ ಜನ ಹೊಸ ರೀತಿಯಲ್ಲಿ ಯೋಚಿಸಲು ಪ್ರಾರಂಭಿಸಿದರು. ಪಶ್ಚಿಮ ದಿಕ್ಕಿನ ಆ ಕೆಂಪು ಕಿಟಕಿಯಲ್ಲಿ ಆ ಹುಡುಗ ಹೆಚ್ಚು ಕುಳಿತಿರದಾದ.

ಇಟ್ಟಿಗೆ, ಕಬ್ಬಿಣ, ಸಿಮೆಂಟ್ ಮುಂತಾದವುಗಳ ಮಧ್ಯ ಇದ್ದು ನಾವು ಬಹಳ ಬಳಲಿದ್ದೇವೆ. ನಮ್ಮ ಕಣ್ಣ ಮುಂದೆ ಹಸಿರು ತುಂಬಿದ ಈ ವೃಕ್ಷ ಪ್ರಕೃತಿಯ ನೆನಪು ತರುತ್ತಾ ನಿಂತಿದೆ. ಈ ವೃಕ್ಷದ ದಯೆಯಿಂದಲೇ ನಮ್ಮ ಜೀವನ ಸಂಪೂರ್ಣವಾಗಿ ಕೃತ್ರಿಮವಾಗಿಲ್ಲ. ಈ ವೃಕ್ಷ ಇರುತ್ತದೆ, ನಮ್ಮ ಈ ಸೋತ ಜೀವನದಲ್ಲಿ ಇದು ಒಂದು ಕವಿತೆಯಂತಿರುತ್ತದೆ.

'ಏನು ಕೆಂಪು ಕಿಟಕಿಯಲ್ಲಿ ಕುಳಿತಿರುವ ಈ ಹುಡುಗ ಕವಿಯೇ ?' ವೃಕ್ಷ ಯೋಚಿಸಿತು. ರಾತ್ರಿಯಲ್ಲಿ ಕಿಟಕಿಯ ಸನಿಹ ಕುಳಿತು ಆತ ಕಾಗದದ ಮೇಲೆ ಏನೇನೋ ಬರೆಯುತ್ತಿರುತ್ತಾನೆ. ಯಾವಾಗ ಬರೆಯುತ್ತಿರುವುದಿಲ್ಲವೋ ಆಗ ಆತ

ಸುಮ್ಮನೆ ವೃಕ್ಷ ನೋಡುತ್ತಾ ಕುಳಿತಿರುತ್ತಾನೆ.

ಕೆಟ್ಟ ಮಾತು ಹೇಳಿದಾಗ ಹೇಗೆ ಜನ ಚಂಚಲರಾಗುತ್ತಾರೋ ಹಾಗೆ ಒಳ್ಳೆ ಮಾತನ್ನು ಕೇಳಿದಾಗ ಜನ ನಿಶ್ಚಿಂತೆಯ ಉಸಿರನ್ನು ಬಿಡುತ್ತಾರೆ, ಸಂತೋಷಗೊಳ್ಳುತ್ತಾರೆ.

ಆದ್ದರಿಂದಲೇ ಯಾರಾದರೂ ವೃಕ್ಷದ ಬಗ್ಗೆ ಏನಾದರೂ ತಪ್ಪು ತಪ್ಪಾಗಿ ಮಾತನಾಡಿದರೆ ಒಬ್ಬ ಮನುಷ್ಯ ವಿಕ್ಷುಬ್ಧಗೊಳ್ಳುತ್ತಿದ್ದ. ಆದರೆ ಯಾರಾದರೂ ಈ ವೃಕ್ಷದ ಬಗ್ಗೆ ಒಳ್ಳೆಯ ಮಾತನಾಡಿದರೆ ಆತ ಶಾಂತವಾಗುತ್ತಿದ್ದ. ಆದ್ದರಿಂದಲೇ ಜನರು ಈ ವೃಕ್ಷದ ಬಗ್ಗೆ ಯೋಚಿಸುವುದನ್ನೇ ನಿಲ್ಲಿಸಿದರು. ವೃಕ್ಷ ತನ್ನ ರೀತಿಯಲ್ಲೇ ನಿಂತಿತ್ತು. ಆದರೆ ಪೂರ್ವ ದಿಕ್ಕಿನ ಕಿಟಕಿಯಲ್ಲಿ ಕುಳಿತುಕೊಳ್ಳುವ ಆಕೆ ಸುಮ್ಮನಿರಲಿಲ್ಲ. ಆಕೆ ಹಲ್ಲು ಕಚ್ಚಿ ಯಾರಾದರೂ ಸಹಾಯ ಮಾಡಲಿ ಬಿಡಲಿ ತಾನಂತೂ ಕೊಡಲಿ ತೆಗೆದುಕೊಂಡು ಅದನ್ನು ಕಡಿದು ಹಾಕುತ್ತೇನೆಂದು ಪ್ರತಿಜ್ಞೆ ಮಾಡಿದಳು. ಇದನ್ನು ವೃಕ್ಷ ಕೇಳಿಸಿಕೊಂಡಿತು. ಈ ಮರದ ಇರುವಿಕೆಯನ್ನೇ ಆಕೆ ಸಹಿಸದಾಗಿದ್ದಳು. ಈ ಪಿಶಾಚಿಯನ್ನು ಹೇಗಾದರೂ ಕಣ್ಣು ಮುಂದಿಂದ ತೊಲಗಿಸಬೇಕೆಂಬುದು ಆಕೆಯ ಇಚ್ಛೆ.

ಇದನ್ನು ಕೇಳಿ ವೃಕ್ಷಕ್ಕೆ ನೋವಾಯಿತು. ಅದು ಮನಸ್ಸಿನಲ್ಲೇ ನಕ್ಕಿತು. ಅದರ ಮನಸ್ಸು ಆ ಪೂರ್ವದ ಕಿಟಕಿಯ ಹುಡುಗಿಯನ್ನು ಕರೆದು ಮಾತನಾಡಲು ಸೂಚಿಸಿತು. "ನಿನ್ನ ಜಡೆಯಲ್ಲಿ ಹೂ ಮಾಲೆ ಶೋಭಿಸುತ್ತದೆ, ಕಣ್ಣಿನಲ್ಲಿ ಕಪ್ಪು, ಹಣೆಯಲ್ಲಿ ಕುಂಕುಮ ಬೊಟ್ಟು ಸಹ ಸುಂದರವಾಗಿ ಕಾಣಿಸುತ್ತದೆ. ನಿನ್ನ ಕೈಯ ಬೆರಳುಗಳು ಚಂಪಾ ಪುಷ್ಪದಂತೆ ಸುಂದರವಾಗಿವೆ. ಇಷ್ಟು ಸುಂದರ, ಮೃದುವಾದ ಬೆರಳುಗಳಲ್ಲಿ ಕೊಡಲಿ ಹಿಡಿಯಲು ಸಾಧ್ಯವೆ ?"

ವೃಕ್ಷದ ಮನಸ್ಸಿನ ಮಾತು ಪಶ್ಚಿಮದ ಕಿಟಕಿಯ ಆ ಹುಡುಗನಿಗೆ ಹೇಗೋ ತಲುಪಿಬಿಟ್ಟಿತ್ತು. ಆತನ ಸುಂದರ ಬೆರಳುಗಳು ನೆಟ್ಟಗೆ ನಿಂತವು. ವೃಕ್ಷಕ್ಕೆ ಚೆನ್ನಾಗಿ ಅರಿವಿತ್ತು. ಆ ಕೈ ಹಾಗೂ ಆ ಕೈಗಳಲ್ಲಿನ ಬೆರಳುಗಳು ಅಗತ್ಯ ಬಿದ್ದಂತೆ ಕಬ್ಬಿಣದಂತೆ ದೃಢವಾಗಿ ನಿಲ್ಲುತ್ತವೆ. ಈಗ ಸಧ್ಯಕ್ಕೆ ಆ ಕೈಯಿಂದ ಕವಿತೆ ಬರೆಯುತ್ತಿದ್ದಾನೆ. ಗುಲಾಬಿ ಹೂವನ್ನು ಪ್ರೀತಿಸುತ್ತಾನೆ. ಆದರೆ ಇದೇ ಕೈಗಳಿಂದ ಆತ ಕಲ್ಲು ಎಸೆದು ಪಕ್ಷಿಗಳ ಗೂಡುಗಳನ್ನು ನಾಶಪಡಿಸಿದ್ದು. ವೃಕ್ಷದ ರೆಂಬೆಗಳನ್ನು ಕಡಿದಿದ್ದು, ಎಲೆಗಳನ್ನು ಕಿತ್ತಿದ್ದು. ಅದೇ ಒರಟು ಕೈಗಳಿಂದ ಉಯ್ಯಾಲೆಯ ಹಗ್ಗ ಹಿಡಿದು ರಾಕ್ಷಸರ ಮಕ್ಕಳಂತೆ ಆಟವಾಡಿದ್ದ. ಬಹುಶಃ ಇದೇ ಬಲಿಷ್ಠವಾದ ಕೈಗಳ ಬಲದಿಂದ ಆ ಮರವನ್ನು ಉಳಿಸುವ ಪ್ರತಿಜ್ಞೆ ಮಾಡಿದ್ದಾನೆ. ಯಾರಾದರೂ ಇದನ್ನು ನಾಶಪಡಿಸಲು ಬಯಸಿದರೆ ಆತನನ್ನು ಇವನು ಖಂಡಿತಾ ಕ್ಷಮಿಸುವುದಿಲ್ಲ. ವೃಕ್ಷದ ಮೇಲೆ ಆತ ಬರೆದಿರುವ ಕವಿತೆಯನ್ನು ಜೀವನದಿಂದ ಯಾರೂ ಕಸಿದುಕೊಳ್ಳಲಾರರು. ಯಾರಾದರೂ ಆ ಮರದ ಮೇಲೆ ಕೈ ಇರಿಸಿದರೆ ಸಾಕು ಆತನ ರಕ್ತ ಕುದಿಯ ಹತ್ತುತ್ತಿತ್ತು. ರಕ್ತದ ಕೊನೆಯ ಕಣ ಇರುವವರೆಗೂ ಅದನ್ನು ತಡೆಯಲು ಆತ ಸಿದ್ಧ. ವೃಕ್ಷಕ್ಕೆ ಯಾವ ತರಹದ ಆಘಾತ ಆಗುವುದನ್ನೂ ಆತ ಸಹಿಸಲಾರ.

ವೃಕ್ಷ ತನ್ನ ಹೊಸ ಚಿಗುರು ಕಂಡು ನಾಚಿತು. ಯಾವುದೊ ಕುರಿಯೊಂದು ತನ್ನೆರಡು ಮರಿಗಳೊಂದಿಗೆ ವೃಕ್ಷದ ನೆರಳಿನಲ್ಲಿ ಹುಲುಸಾಗಿ ಬೆಳೆದಿದ್ದ ಹಸಿರನ್ನು ತಿನ್ನುತ್ತಿತ್ತು. ಸಂಜೆ ಆಗುತ್ತಲೇ ಹುಡುಗರ ಗುಂಪೊಂದು ಆಡಲು ಅಲ್ಲಿ ಸೇರಿತು. ಅಸಂಖ್ಯಾತ ಪಕ್ಷಿಗಳು ಕಲರವ ಮಾಡಿ ಮತ್ತೆ ಸುಮ್ಮನಾದವು, ರಾತ್ರಿಯಾಯಿತು. ಮೋಡರಹಿತ ಆಕಾಶದಲ್ಲಿ ಅಗಣಿತ ತಾರೆಗಳು ಮೂಡಿದವು. ತಂಪುಗಾಳಿ ಬೀಸುತ್ತಿತ್ತು, ದಿನನಿತ್ಯದಂತೆ ಎಲೆಗಳು ಅಲೆಗಳಂತೆ ಮೇಲೆ ಕೆಳಗೆ ಚಲಿಸುತ್ತಿದ್ದವು. ಮೈದಾನದ ಸುತ್ತಲೂ ಇದ್ದ ಮನೆಗಳಿಂದ ವಿಚಿತ್ರ ಶಬ್ದಗಳು ಕೇಳಿ ಬರುತ್ತಿದ್ದವು, ದೀಪಗಳು ಉರಿಯುತ್ತಿದ್ದವು, ನಿಧಾನವಾಗಿ ರಾತ್ರಿ ಗಾಢವಾಗಹತ್ತಿತು. ಒಂದೊಂದಾಗಿ ಮನೆಗಳು ಶಾಂತವಾದವು. ದೀಪಗಳು ಆರಿದವು, ಅನಂತರ ನಿಧಾನವಾಗಿ ಅಂಧಕಾರ ಆವರಿಸಿತು. ಅಂಧಕಾರ ಹಾಗೂ ನೀರವತೆ ತಲೆಯ ಸಹಸ್ರಾರು ನಕ್ಷತ್ರಗಳನ್ನು ಹೊತ್ತು ನಿಂತಿದೆ ಈ ವೃಕ್ಷ. ಒಂದು ಸಮಯ ಬೀಸುವ ಗಾಳಿ ನಿಂತುಹೋಗಿ, ಎಲೆ ಉದುರುವುದು ನಿಂತು ಹೋದರೆ ಅಂತಹ ಅಂಧಕಾರ ತುಂಬಿದ ರಾತ್ರಿಯಲ್ಲಿ ಬೆಳಕಿನಂತೆ ನಿಂತ ಆ ವೃಕ್ಷ ನಿಚ್ಚಳವಾಗಿ ಎಲ್ಲವನ್ನು ನೋಡುತ್ತಿತ್ತು. ವೃಕ್ಷ ನೋಡಿತು, ಪೂರ್ವ ದಿಕ್ಕಿನಲ್ಲಿ ಆಕೆ ಬರುತ್ತಿದ್ದಳು, ಸೆರಗನ್ನು ಸೊಂಟಕ್ಕೆ ಸುತ್ತಿಕೊಂಡಿದ್ದಳು, ಜಡೆಯಿಂದ ಹೂ ಮಾಲೆಯನ್ನು ತೆಗೆದಿರಿಸಿದ್ದಳು, ಹೊಡೆದಾಡಲು ಬರುವಂತಿದ್ದಳು, ಹೂಮಾಲೆ ಹಾಗಿರಲಿ, ಕೈಯಲ್ಲಿ ಹರಿತವಾದ ಕೊಡಲಿ ನೋಡಿ ವೃಕ್ಷ ನಡುಗಿತು.

ಆದರೆ ಇನ್ನೊಂದು ದಿಕ್ಕಿನಲ್ಲಿ ಮನುಷ್ಯನ ನಡಿಗೆಯ ಶಬ್ದ ಕೇಳಿ ಬಂತು. ಮರ ಅತ್ತ ತಿರುಗಿ ನೋಡಿತು. ಅದಕ್ಕೆ ನಿಶ್ಚಿಂತೆಯಾಯಿತು. ಆತ ಬರುತ್ತಿದ್ದ, ಪಶ್ಚಿಮದ ಕಿಟಕಿಯ 'ಅವನು' ಬರುತ್ತಿದ್ದ. ಆತನ ಕೈಯಲ್ಲಿ ಈಗ ಲೇಖನಿ ಇರಲಿಲ್ಲ, ಒಂದು ಲಾಠಿ ಇತ್ತು. ಇಂದು ಆತ ಮಲ್‌ಮಲ್‌ನ ಪಂಚೆಯನ್ನು ಉಟ್ಟಿರಲಿಲ್ಲ. ತೋಳಿಲ್ಲದ ಬನೀನು ತೊಟ್ಟಿದ್ದ, ಅವನ ಎಲುಬುಗಳು ಬಲವಾಗಿದ್ದವು, ಕಣ್ಣುಗಳು ನಿಷ್ಠುರವಾಗಿದ್ದು ಭಯಂಕರವಾಗಿ ಅರಚುವಂತಿದ್ದವು.

ವೃಕ್ಷ ಕಿವಿ ಅರಳಿಸಿ ನಿಂತಿತ್ತು.

ವಿಚಿತ್ರ ರೀತಿಯ ನಿಶ್ಯಬ್ದ ಆವರಿಸಿತ್ತು. ಅನಿಶ್ಚಯತೆ ತಾಂಡವವಾಡುತ್ತಿತ್ತು. ಮರದ ಮೇಲೊಂದು ಪಕ್ಷಿಯ ಮರಿ ಚಿಲಿಪಿಲಿಗುಟ್ಟುತ್ತಿತ್ತು. ಯಾವುದೋ ಮೂಲೆಯಿಂದ ಅಜ್ಞಾತ ಹೂವಿನ ವಾಸನೆ ಬರುತ್ತಿತ್ತು, ಆಕಾಶದಿಂದ ಒಂದು ನಕ್ಷತ್ರ ಕೆಳಗೆ ಬೀಳುತ್ತಿತ್ತು. ನಿಧಾನವಾಗಿ ಗಾಳಿ ಬೀಸುತ್ತಿತ್ತು, ತೆಳವು ರೆಂಬೆಗಳು ತುಯ್ಯಲಾರಂಭಿಸಿದವು, ವೃಕ್ಷಕ್ಕೆ ಮನದಲ್ಲೇ ಒಂದು ರೀತಿಯ ಸಮಾಧಾನವಿತ್ತು. ಆದ್ದರಿಂದಲೇ ಮುಂದಾಗುವುದರ ಬಗ್ಗೆ ಅದು ಗಾಬರಿಗೊಳ್ಳಲಿಲ್ಲ.

ಸೀರೆ ಸುತ್ತಿದ್ದ ಹುಡುಗಿಯ ತುಟಿಗಳ ಮಧ್ಯೆ ಕಿರುನಗೆ ಅರಳಿತು. ಪಶ್ಚಿಮದ ಕಿಟಕಿಯ ಹುಡುಗನ ಮೂಳೆ ಮೃದುವಾದವು. ನಿಶ್ಯಬ್ದ. ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ಅವರಿಬ್ಬರು ಎಷ್ಟು ಹತ್ತಿರ ನಿಂತಿದ್ದರೆಂದರೆ ಆ ನಿಬಿಡ ಅಂಧಕಾರದಲ್ಲೂ ಒಬ್ಬರ ಮುಖ ಇನ್ನೊಬ್ಬರಿಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಒಬ್ಬರ

ಉಸಿರು ಇನ್ನೊಬ್ಬರಿಗೆ ಕೇಳಿಸುತ್ತಿತ್ತು.

"ಕೈಯಲ್ಲಿ ಕೊಡಲಿ ಏಕೆ ?"

"ಮರವನ್ನು ಕಡಿದು ಹಾಕುತ್ತೇನೆ"

"ಏನು ಉಪಯೋಗ ?"

"ಈ ಮರ ಒಂದು ಪಿಶಾಚಿ."

"ಈ ಮರ ಒಂದು ದೇವತೆ."

"ಪಿಶಾಚಿಯನ್ನು ದೇವರೆನ್ನುವವನು ನಿಜವಾಗಿ -ಮೂರ್ಖ."

"ದೇವತೆಯನ್ನು ಯಾರು ಪಿಶಾಚಿಯ ದೃಷ್ಟಿಯಿಂದ ನೋಡುತ್ತಾರೋ ಅವರು ಪಾಪಿಗಳು. ಅವರ ಮನಸ್ಸಿನಲ್ಲಿ ಪಾಪ ತುಂಬಿದೆ. ಅವರ ಮನಸ್ಸಿನಲ್ಲಿ ದ್ವೇಷವಿದೆ, ಅದಕ್ಕೆ ಅವರು ಬಿಳುಪನ್ನು ಕಪ್ಪೆಂದು ತಿಳಿಯುವುದು. ಎದುರಿಗೆ ಬೆಳಕಿದ್ದರೂ ಅವರ ಕಣ್ಣೆದುರಿಗೆ ಅಂಧಕಾರವೇ ಕಾಣಿಸುತ್ತದೆ."

"ಅಂದರೆ ಈ ಪ್ರಪಂಚದಲ್ಲಿ ಅಂಧಕಾರವೇ ಇಲ್ಲವೇ ? ಕಪ್ಪು ಏನು ಅಲ್ಲವೇ ?"

"ಅಲ್ಲ."

"ಇದು ಹೇಗೆ ಸಾಧ್ಯ ?"

ಆಕೆಯ ಕೈಯಲ್ಲಿದ್ದ ಕೊಡಲಿ ಬಿದ್ದುಹೋಯಿತು. ಆಕೆ ಯೋಚಿಸತೊಡಗಿದಳು. ಮರಕ್ಕೆ ಸಂತೋಷವಾಯಿತು, ಮರ ನೋಡಿತು, ಒಬ್ಬಳು ಕೊಡಲಿ ಎಸೆದದ್ದೆ ತಡ ಇನ್ನೊಬ್ಬ ಲಾಠಿಯನ್ನು ಎಸೆದ.

"ಇದು ಹೇಗೆ ಸಾಧ್ಯ ?"

ಯೋಚಿಸುತ್ತಾ, ಯೋಚಿಸುತ್ತಾ ಪೂರ್ವದ ಆ ಹುಡುಗಿ ತಲೆಯನ್ನು ಎತ್ತಿ ಎಲೆಗಳ ಮರೆಯಲ್ಲಿ ಜಗಮಗಿಸುತ್ತಿದ್ದ ತಾರೆಗಳನ್ನು ನಿರುಕಿಸಿದಳು. ಅನಂತರ ತುಟಿಗಳ ಮಧ್ಯೆ ಈ ಮಾತುಗಳು ಉರುಳಿ ಬಂದವು "ಎಲ್ಲವೂ ಸುಂದರ, ಯಾವುದೂ ಕಪ್ಪಲ್ಲ, ಎಲ್ಲೂ ಅಂಧಕಾರವಿಲ್ಲ, ಹೀಗಿರಲೂ ಸಾಧ್ಯವೇ ?"

"ಅಂತರ್ಯದ ಪ್ರಕಾಶ ಜಾಗ್ರತಗೊಂಡಾಗ ಎಲ್ಲವೂ ಹೀಗೆ ಆಗುತ್ತದೆ."

"ಅದು ಎಂತಹ ಪ್ರಕಾಶ ?"

"ಪ್ರೇಮ."

ಹುಡುಗಿಯ ಕಣ್ಣಿನ ರೆಪ್ಪೆಗಳು ಪಟಪಟ ಹೊಡೆದುಕೊಂಡವು. ಆಕೆ ನೀಳ ಉಸಿರನ್ನು ತೆಗೆದುಕೊಂಡಳು. ಅವಳ ಕೊರಳು ಉಬ್ಬಿ ಬಂತು. ಸ್ವರ ಗದ್ಗದಿತವಾಯಿತು.

"ನನ್ನಲ್ಲಿನ ಪ್ರೇಮ ಎಂದೂ ಹೋಗುವುದಿಲ್ಲವೇ ?"

"ಈ ಅಭ್ಯಾಸವನ್ನು ಮಾಡಬೇಕು, ಅದನ್ನು ರೂಡಿಸಿಕೊಳ್ಳಬೇಕು"

ಹುಡುಗ ಬಹಳ ಸುಂದರವಾಗಿ ಮುಗುಳ್ನಕ್ಕು ನುಡಿದ "ಪ್ರೇಮಿಸುವುದನ್ನು ಕಲಿಯಬೇಕು."

"ನೀನ ನನಗೆ ಕಲಿಸು."

ಮರ ಕಣ್ಣುಗಳನ್ನು ಮುಚ್ಚಿಕೊಂಡಿತು. ಅದಕ್ಕೆ ನಿದ್ದೆ ಬರುತ್ತಿತ್ತು, ಮರ ನಿದ್ದೆ

ಹೋಯಿತು. ಎಷ್ಟೋ ರಾತ್ರಿಗಳು ಅನೇಕ ಚಿಂತೆಗಳಿಂದ ಸುತ್ತುವರಿದು ಅದು ನಿದ್ರಿಸಲು ಸಾಧ್ಯವಾಗಿರಲಿಲ್ಲ. ಈಗ ಅದು ತಿಳಿದೂ ತಿಳಿದೂ ಕೆಳಗೆ ನೋಡಲು ಇಚ್ಛಿಸದಾಗಿತ್ತು. ಹೇಗೆ ಕೆಲವೊಮ್ಮೆ ಮನುಷ್ಯ ಮರದ ವಿರುದ್ಧ ಹೇಗೆ ಉದಾಸೀನನಾಗುತ್ತಾನೋ ಹಾಗೇ ಸಮಯಕ್ಕೆ ಸರಿಯಾಗಿ ಮನುಷ್ಯರ ವಿರುದ್ಧ ಮರವೂ ಉದಾಸೀನ ತಳೆಯುತ್ತದೆ. ಈ ಮಾತನ್ನು ಆ ಅನುಭವಿ ವೃಕ್ಷ ಯಾರಿಂದಲೂ ಕಲಿಯಬೇಕಾಗಿರಲಿಲ್ಲ.

# ಪ್ರಾಣ ಪಿಪಾಸೆ

*ಸಮರೇಶ್ ಬಸು*

ದುರ್ಘಟನೆಗಳಿಂದ ತುಂಬಿದ ಕೃಷ್ಣಪಕ್ಷದಲ್ಲಿನ ಒಂದು ರಾತ್ರಿಯ ಮಾತನ್ನು ಹೇಳುತ್ತಿದ್ದೇನೆ. ಇದು ಗುಡುಗಿನ ಆರ್ಭಟದಿಂದ, ಸಿಡಿಲಿನ ಸಿಡಿತದಿಂದ, ಅಥವಾ ಧಾರಾಕಾರ ಮಳೆಯಿಂದಾಗಿ ಒದಗುವ ದುರ್ಘಟನೆಯಂತೆ ಇರಲಿಲ್ಲ. ಒಂದೇ ಸ್ವರದಲ್ಲಿ ನರಳುವ ರೋಗಿಯ ನರಳಾಟದಂತೆ ಶಬ್ದ ಮಾಡುತ್ತಾ ಕೆಲವು ದಿನಗಳಿಂದ ಧಾರಾಕಾರವಾಗಿ ಮಳೆ ಸುರಿಯುತ್ತಿತ್ತು. ಇದರ ಮೇಲೆ ಬಿರುಗಾಳಿಯಂತೆ ಬೀಸುತ್ತಿರುವ ಮೂಡಣ ಗಾಳಿ. ನಗರದ ಬೀದಿಗಳೆಲ್ಲಾ ಕೆಸರಿನಿಂದ ತುಂಬಿ ಕೊಳೆಯ ನಾಲೆಗಳಾಗಿವೆ. ಕೊಳೆತ ಕಸಕಡ್ಡಿಯಿಂದ ದುರ್ಗಂಧ ತುಂಬಿದೆ. ಅಗಣಿತ ಮನೆಗಳು ಒಂದರೊಡನೊಂದು ಜಡೆ ಹೆಣೆದುಕೊಂಡಿವೆ.

ರೈಲ್ವೆ ಹಳಿಗಳ ಬದಿಯ ಮೈದಾನದಲ್ಲಿ ಇರುವ ಒಂದು ಕಾಲುದಾರಿ ಹಿಡಿದು ನಾನು ಹೋಗುತ್ತಿದ್ದೆ. ಆದರೆ ಮಳೆಯಲ್ಲಿ ನಾನು ಪೂರ್ಣ ನೆಂದು ಮೈ ಕಾವೇ ಆರಿ ಹೋಗಿತ್ತು. ಮೈದಾನದಲ್ಲಿ ಬೀಸುತ್ತಿದ್ದ ಗಾಳಿ ನೇರವಾಗಿ ಬಂದು ಶರೀರವನ್ನು ಭೇದಿಸುತ್ತಿತ್ತು. ಹಲ್ಲಿಗೆ ಹಲ್ಲು ಮಸೆಯುತ್ತಿದ್ದವು. ಇಲ್ಲಿನ ಸ್ಥಿತಿ ಹದಗೆಟ್ಟಿರುವುದು ಕಂಡು ಬಲ ಬದಿಗೆ ತಿರುಗಿ ನಗರದಲ್ಲಿ ನುಸುಳಿದೆ. ಇಲ್ಲಿ ಕೊನೆಯ ಪಕ್ಷ ಗಾಳಿಯ ಹೊಡೆತವಾದರೂ ಕಡಿಮೆ ಇರುತ್ತದೆ.

ಈ ಸೆಣಬು ಮಿಲ್‌ನ ನಗರ ತೂಕಡಿಸುವಂತಿತ್ತು. ವಿಚಿತ್ರ ಮೌನ ಆವರಿಸಿತ್ತು. ಇನ್ನೆಂದಾದರೂ ಆಗಿದ್ದರೆ ಬಹುಶಃ ನಾಯಿಗಳು ಬೊಗಳುತ್ತಾ ಓಡಿಬರುತ್ತಿರುವುದು ಕಣ್ಣಿಗೆ ಬೀಳುತ್ತಿತ್ತು. ಇಂದು ಒಂದೇ ಒಂದು ನಾಯಿ ಅನೇಕ ಬಾರಿ ಗೊರ್ ಗೊರ್ ಎಂದು ತನ್ನ ಮೈಯ ನೀರನ್ನು ಕೊಡವಿಕೊಳ್ಳಲು ಯತ್ನಿಸುತ್ತಿತ್ತು. ಸಂಸಾರಸ್ಥರು ಯಾರೂ ಕಣ್ಣಿಗೆ ಬೀಳಲಿಲ್ಲ. ಯಾವುದೇ ಕಿಟಕಿ ಅಥವಾ ಬಾಗಿಲಿಂದ ಬೆಳಕು ಕಂಡುಬರುತ್ತಿರಲಿಲ್ಲ. ಬೀದಿಯ ದೀಪಗಳು ಒಕ್ಕಣ್ಣು ಪ್ರಾಣಿಯ ಕಾಂತಿಕುಂದಿದ ಕಣ್ಣಿನಂತೆ ಕಾಣುತ್ತಿದ್ದುವು. ಅಂಧಕಾರವು ಈ ಬೆಳಕಿನಿಂದ ಕೊಂಚವೂ ಹಿಂಜದಿರಲಿಲ್ಲ.

ರಸ್ತೆ ಅಸ್ಪಷ್ಟವಾಗಿತ್ತು. ಆದರೆ ನಾನು ಉತ್ತರದ ಕಡೆ ಸಾಗುತ್ತಿದ್ದೇನೆ ಎಂಬುದು ಅರ್ಥವಾಗುತ್ತಿತ್ತು. ರಸ್ತೆಯ ಅಂಚಿನಲ್ಲಿ ನಾನು ಸಾಗುತ್ತಿದ್ದೆ. ರಸ್ತೆ ಕೆಳಗಿತ್ತು. ಆದರಲ್ಲಿ

ನೀರು ತುಂಬಿಕೊಂಡಿತ್ತು. ಯಾವುದಾದರೂ ವರಾಂಡದಲ್ಲಿ ರಾತ್ರಿ ಮಲಗಿದ್ದು ಕಳೆಯೋಣಾ ಎಂದುಕೊಂಡರೆ ವರಾಂಡ ಅನ್ನುವ ಜಾಗ ಎಲ್ಲೂ ಕಂಡುಬರಲಿಲ್ಲ. ಆ ಕೇರಿಯ ಸ್ಥಿತಿಯನ್ನು ನೋಡಿದರೇ ಅಲ್ಲಿ ಒಣಗಿರುವ ಒಂದು ಕೊಠಡಿಯೂ ಎಲ್ಲಿಯೂ ಇರಲಾರದು ಅನ್ನಿಸುತ್ತಿತ್ತು. ಈ ಯಾವುದೇ ಒಂದು ಕೊಠಡಿಯಲ್ಲಿ ಒಂದು ವೇಳೆ ಮಲಗಿದರೆ ಜನ ಹಲವಾರು ತರಹದಲ್ಲಿ ಮಾತನಾಡುತ್ತಾರೆಂಬುದೂ ನನಗೆ ಗೊತ್ತಿತ್ತು. ಪೋಲೀಸರು ಸಹ ಅವಿನಯದಿಂದಲೇ ಮಾತನಾಡುತ್ತಾರೆ.

ನಾನು ನೈಹಾಟಿನಲ್ಲಿನ ರೈಲ್ವೆ ಕಾಲೋನಿಯಲ್ಲಿ ಒಬ್ಬ ಸ್ನೇಹಿತನ ಮನೆಗೆ ಹೋಗುವುದಿತ್ತು. ಅಲ್ಲಿ ಕೊನೆಯ ಪಕ್ಷ ಕೆಲದಿನಗಳು, ಕೊಂಚ ಬಟ್ಟೆ, ಹಾಗೂ ಈ ತಂಪಾದ ದಿನಗಳಲ್ಲಿ ಮಲಗುವ ಕೊಂಚ ಜಾಗವಂತೂ ಖಂಡಿತ ಸಿಗುತ್ತಿತ್ತು. ಆದರೆ ಈಗ ಅನಿಸುತ್ತಿತ್ತು, ನಾನು ನನ್ನ ಬಿಡದಿ ಬಿಟ್ಟು ಬಂದು ಬಹಳ ದೊಡ್ಡ ತಪ್ಪು ಮಾಡಿದ್ದೇನೆ. ಆದರೆ ನನ್ನ ಮುಂದೆ ಬೇರೆ ದಾರಿಯೇ ಇರಲಿಲ್ಲ. ಮುಖ್ಯವಾಗಿ ಕೇರಿಯಲ್ಲಿನ ನನ್ನ ಆಪ್ತ ಗೆಳೆಯನೊಬ್ಬ ಮರಣಿಸಿದಾಗಿಂದ ನಾನು ಯೋಚಿಸುತ್ತಿದ್ದೇನೆ. ಸ್ವಲ್ಪ ಉಸಿರಾಡಲು ಅನುಕೂಲವಾಗುವಂತಹ ಸ್ಥಳಕ್ಕೆ ಹೊರಟುಹೋಗಬೇಕು. ಸ್ನೇಹಿತನ ಮರಣ ಬಹುಶಃ ಸರಿಯಾಗೇ ಇದೆ. ಇದಲ್ಲದೆ ಬೇರೆ ಏನಾಗಲು ಸಾಧ್ಯವಿತ್ತು ? ಮತ್ತೇನೂ ನನಗೆ ತೋಚುತ್ತಲೇ ಇಲ್ಲ. ಬದುಕಲು ಬೇಕಾಗುವ ಒಂದು ವಸ್ತುವೂ ಆತನ ಬಳಿ ಇರಲಿಲ್ಲ. ಆದರೆ ಎದೆಯಲ್ಲಿ ಹೂಂ, ಬಿಡಿ ಇದೇನು ಮಾತು ! ಆದರೆ ಆತ ನನಗೊಂದು ವಸ್ತು ನೀಡಿ ಹೋಗಿದ್ದ. ಚಿಕ್ಕವಸ್ತು ಆದರೆ ಭಾರ ಪರ್ವತದಷ್ಟು. ಅದು ನಿಜವಾಗಿ ಹೊರೆಯಾಗಿತ್ತು. ಗಾಳಿ ಶರೀರದ ಬೆನ್ನು ಮೂಳೆಯನ್ನೇ ಮುರಿಯುತ್ತಿತ್ತು. ಇದ್ದಕ್ಕಿದ್ದಂತೆಯೇ ಮಳೆಯೂ ತೀಕ್ಷ್ಣವಾಯಿತು. ಬಹಳ ಹೊತ್ತಿನ ನಂತರ ಆಕಾಶದಲ್ಲಿ ಗುಡುಗಲೂ ಪ್ರಾರಂಭಿಸಿತ್ತು. ಈಗ ಹಲ್ಲುಗಳೇ ಅಲ್ಲ ಮೈಯ ಮೂಳೆಗಳೂ ಕಂಪಿಸಲು ಪ್ರಾರಂಭಿಸಿದ್ದವು. ಒಣಗಿದ ಮರದ ಬೇರುಗಳಂತೆ ಬಟ್ಟೆಯೂ ಹಿಗ್ಗಿ ದೊಗಲೆಯಾಗಿತ್ತು. ಸೆಣಬಿನ ಕಾರ್ಖಾನೆಯ ಸಾಮಾನುಗಳನ್ನು ರೈಲ್ವೆ ಸೈಡಿಂಗ್‌ನಿಂದ ಸಾಗಿಸಲಾಗುತ್ತಿತ್ತು. ಅದೇ ಚೌಕದ ಬಳಿ ಬಂದು ನಾನು ನಿಂತೆ. ಜನಶೂನ್ಯ ಸ್ಥಳ. ಹತ್ತಿರದಲ್ಲಿ ಎಮ್ಮೆಗಳ ಒಂದು ದೊಡ್ಡಿ ಇತ್ತು. ಅಲ್ಲಿ ನುಗ್ಗಲೇ ಬೇಡವೆ ಯೋಚಿಸುತ್ತಿದ್ದೆ. ಹಿಂದಿನಿಂದ ಕೇಳಿಸಿತು "ಏ ಇಲ್ಲಿ ನೋಡು."

ಭೂತ ಪ್ರೇತಗಳಲ್ಲಿ ನನಗೆ ನಂಬಿಕೆ ಇಲ್ಲದಿದ್ದಾಗ್ಯೂ ನಾನು ತಕ್ಷಣ ಬೆಚ್ಚಿದೆ. ಯಾರಾದರೂ ನನ್ನನ್ನು ಕರೆಯುತ್ತಿದ್ದಾರೆಯೇ ? ಆ ಭಯಂಕರ ಮಳೆಯಲ್ಲಿ ಕೂಗಿದ್ದು ಯಾರೆಂದು ಅರಸಹತ್ತಿದೆ. ಎಡಗಡೆ ದಿಕ್ಕನ್ನು ಮಂಕಾಗಿ ಮಿಣಗುತ್ತಿದ್ದ ಒಂದು ದೀಪ ಕಾಣಿಸಿತು. ಅರ್ಧ ಮುಚ್ಚಿದ್ದ ಬಾಗಿಲಲ್ಲಿ ಒಂದು ಮೂರ್ತಿ ಕಂಡಂತೆ ಆಯಿತು. ಅವಳೊಬ್ಬಳು ಹೆಂಗಸು, ಆಕೆ ನನ್ನನ್ನು ಕರೆಯುತ್ತಿರುವುದು ! ನಾನು ಪುನಃ ಮುಂದೆ ನಡೆಯಹತ್ತಿದೆ. ಆಗ ಪುನಃ ಕೂಗಿದ್ದು ಕೇಳಿಸಿತು. "ಎಲ್ಲಿ ಹೋಗ್ತೀರಾ ? ಇಲ್ಲಿಗೇ ಬನ್ನಿರಲ್ಲಾ."

ನಾನು ನಿಂತೆ. ಪ್ರಶ್ನಿಸಿದೆ "ನೀವು ನಂಗೇ ಹೇಳ್ತಾ ಇದ್ದೀರಾ ?"

ಉತ್ತರ ಬಂತು "ನೀವಲ್ದೆ ಇಲ್ಲಿ ರಸ್ತೇಲಿ ಇನ್ನು ಯಾರು ಇದ್ದಾರೆ?"

ಅವಳು ಆಡುತ್ತಿದ್ದ ಮಾತಿನ ರೀತಿ ಕಂಡೇ ನನಗೆ ಆಶ್ಚರ್ಯವಾಯಿತು. ಓಹ್! ಈಗ ನನಗೆ ಅರ್ಥವಾಯಿತು, ಆ ರಸ್ತೆಯೇ ಕೆಟ್ಟದ್ದಿತ್ತು. ಆದರೆ ಅದೇನು ವೇಶ್ಯೆಯರ ಬೀದಿಯೂ ಆಗಿರಲಿಲ್ಲ. ಆದರೆ ಇದೂ ಅಂತಹುದೇ ಒಂದು ಗಲ್ಲಿ. ಹತ್ತಿರ ಕೆಲಸಗಾರರ ಬೀದಿ ಇತ್ತು.

ಮನದಲ್ಲೇ ನಾನು ನಕ್ಕೆ. ಒಳ್ಳೆಯ ಗಿರಾಕಿಯನ್ನೇ ಆಕೆ ಕರೆಯುತ್ತಿದ್ದಾಳೆ. ಆಕೆ ನನ್ನ ಬಗ್ಗೆಯೂ ಹಾಗೇ ಯೋಚಿಸಬಹುದು. ಆದರೆ ಸತ್ಯವಾಗಿ ನಾನು ಒಂದು ಕ್ಷಣ ಆಕೆಯ ಬಾಗಿಲ ಬಳಿ ನಿಲ್ಲಲು ಶಕ್ತನಾದರೂ ಮುಂದೆ ಹೋಗದಾಗಿದ್ದೆ. ಹುಡುಗಿ ಕಂಡವಳು "ಅರೇ ಬಾಬಾ ನೀನೇನು ಒಕ್ಕಣ್ಣನೆ?"

ಮನದಲ್ಲಿ ನಾನು ನಕ್ಕೆ, ಯೋಚಿಸಿದೆ "ಏಕೆ ಹೋಗಬಾರದು? ನನ್ನ ಸ್ಥಿತಿ ನೋಡಿ ಆಕೆಯೇ ನನ್ನನ್ನು ಹೊರಹಾಕುತ್ತಾಳೆ, ಹೇಗೋ ಮಳೆ ನಿಲ್ಲುವ ತನಕ ಒಂದು ಸೂರು ಸಿಕ್ಕಿದರೆ ಕೆಟ್ಟದ್ದೇನು? ಮತ್ತೇ ಹೇಗಿದ್ದರೂ ನೈಹಾಟಿ ಇನ್ನು ಬಹಳ ದೂರದಲ್ಲಿದೆ. ನಾನು ಎಮ್ಮೆಗಳ ಕೊಟ್ಟಿಗೆಯಿಂದ ಮುಂದೆ ಹೋಗಿರಲಿಲ್ಲ." 'ಜೀವ ಉಳಿದರೆ ಲಕ್ಷ ಗಳಿಸಿದ ಹಾಗೆ' ಈ ಮಾತಿನಲ್ಲಿ ಯಾರಿಗೆ ನಂಬಿಕೆ ಇಲ್ಲ? ಇಂತಹ ಪರಿಸ್ಥಿತಿ ಎದುರಿಸುವ ಪ್ರಸಂಗವೇ ಬರಲಿಲ್ಲ ಎಂದುಕೊಳ್ಳಬಹುದು. ನಾನು ಆ ಹೆಂಗಸಿನ ಮನೆಯತ್ತ ನಡೆದೆ. ನನ್ನ ಜೀವನ ಸಂಸ್ಕಾರ ನನ್ನನ್ನು ತಡೆಯುತ್ತಿತ್ತು. ನಾನು ಪ್ರಶ್ನಿಸಿದೆ "ಏನು ಕರೆಯುತ್ತಿದ್ದೀರಾ?"

'ನೀನೆಂತಹ ಮನುಷ್ಯ' ಮುಗುಳ್ನಗೆ ಜೊತೆಯಲ್ಲಿ ಕೊಂಚ ಕೋಪವನ್ನು ಸೇರಿಸಿ ಅವಳು ನುಡಿದಳು "ಒಳಗೆ ಬಾ."

ನಾನು ಒಳಗೆ ಹೋದೊಡನೆಯೇ ಆಕೆ ಬಾಗಿಲನ್ನು ಹಾಕಿಬಿಟ್ಟಳು. ಮಳೆಯ ಆರ್ಭಟ ಈಗ ಸ್ವಲ್ಪ ಕಡಿಮೆ ಕೇಳಿಸಿತು. ಗಾಳಿ ಒಳಗೆ ಬರುವ ದಾರಿಯೂ ಇರಲಿಲ್ಲ. ನಾನು ನೋಡಿದೆ ಹೆಂಚಿನ ಸೂರಿನಿಂದ ಬಿದ್ದ ನೀರು ಕೆಳಗಿನ ಗಾರೆ ನೆಲವನ್ನು ನೆನಸುತ್ತಿತ್ತು. ಆದರೆ ಜಗುಲಿಯ ಮೇಲೆ ಹಾಸಿದ್ದ ಹಾಸಿಗೆ ನೆಂದಿರಲಿಲ್ಲ. ಕೊಠಡಿಯಲ್ಲಿ ನಾಲ್ಕಾರು ಮಾಮೂಲಿ ಸಾಮಾನುಗಳಿದ್ದುವು. ತಟ್ಟೆ, ಲೋಟ, ನೀರಿನ ಮಡಿಕೆ ಇತ್ಯಾದಿ. "ಎಲ್ಲಿ ಸಾಯಲು ಹೋಗುತ್ತಿದ್ದೆ ಪ್ರಪಂಚ ತಲೆ ಮೇಲೆ ಬಿತ್ತು ಅನ್ನೋ ಹಾಗೆ?" ನಾನು ಅವಳಿಗೆ ಬಹಳ ವರ್ಷಗಳ ಪರಿಚಯ ಅನ್ನುವಂತೆ ನುಡಿದಳು.

ನಾನು ನುಡಿದೆ "ನಾನು ಬಹಳ ದೂರದಿಂದ ಬರುತ್ತಿದ್ದೇನೆ, ಆದರೆ "ಗೊತ್ತಾಯ್ತು" ತುಟಿಕಚ್ಚಿ ಅವಳು ನಕ್ಕಳು, ಪುನಃ ನುಡಿದಳು "ಮನೆಯೆಲ್ಲಾ ಕೆಸರು ಮಾಡ್ಬಿಟ್ಟೆ ಬೇಗ ಒದ್ದೆ ಬಟ್ಟೆ ತೆಗ್ದು ಹಾಕು. ಹೂಂ ಬೇಗ ಮೈಮೇಲಿನ ಥಂಡಿ, ಅದರ ಮೇಲೆ ಈ ಆಕಸ್ಮಿಕ ಪರಸ್ಥಿತಿಯಲ್ಲಿ ಸಿಲುಕಿಕೊಂಡು ಹಿಮದಂತೆ ಹೆಪ್ಪಿ ಕಟ್ಟಿ ಹೋಗಿದ್ದೆ." ನಾನು ನುಡಿದೆ "ಆದರೆ ನನ್ನ ಬಳಿ...."

ಆಕೆ ನುಡಿದಳು "ನಿಂಗೆ ತೊಟ್ಟುಕೊಳ್ಳೊದಿಕ್ಕೆ ನಾನೇನು ಕೊಡ್ಲಿ ಮಣ್ಣು? ಒದ್ದೆ ಬಟ್ಟೆ ತೆಗ್ದುಹಾಕು. "ತೆಗೆಯಲು ಶಕ್ತನಾಗಿದ್ದರೆ ಒಳ್ಳೆಯದೇ ಆಗುತ್ತಿತ್ತು. ಆದರೆ

ಸುಮ್ಮಸುಮ್ಮನೆ ನನ್ನನ್ನು ಕರೆದಿ. ನನ್ನ ಜೇಬು ಖಾಲಿ.'' ಜೋರಾದ ಸ್ವರದಲ್ಲಿ ನುಡಿದೆ.

ಈ ಮಾತು ಕೇಳಿ ಆ ಹುಡುಗಿ ನಾಚಿದ್ದಳು. ಅವಳು ಯೋಚಿಸಿದ್ದು ಬಹಳ ಸರಿ ಇತ್ತು. ನನ್ನನ್ನು ದುರುಗುಟ್ಟಿಕೊಂಡು ನೋಡಿದಳು. ನನ್ನ ಮಾತಿನಲ್ಲಿ ಆಕೆಗೆ ನಂಬಿಕೆಯೇ ಬಂದಿರಲಿಲ್ಲ. ಪ್ರಶ್ನಿಸಿದಳು ''ಏನೂ ಇಲ್ಲವೇ ?'' ಅವಳೆಲ್ಲಾ ಆಸೆಯ ಮೇಲೂ ನೀರು ಎರಚಿದಂತಾಗಿತ್ತು. ಅವಳ ಮುಖವೇ ಇದನ್ನು ಪ್ರದರ್ಶಿಸಿತ್ತು. ನಾನು ನುಡಿದೆ ''ಹಾಗಿಲ್ಲದೆ ಇದ್ದರೆ ನಾನೇಕೆ ಈ ಬಿರುಗಾಳಿಯ ರಾತ್ರಿಯಲ್ಲಿ ರಸ್ತೆಯಲ್ಲಿ ಸುತ್ತಬೇಕಾಗಿತ್ತು. ?''

ಹುಡುಗಿ ಅಸಹಾಯಕಳಾಗಿ ಸುಮ್ಮನೆ ನಿಂತಿದ್ದಳು. ನನಗೆ ಮುಂಚೆಯೇ ಅರ್ಥವಾಗಿತ್ತು. ಈ ಹುಡುಗಿ ಇಲ್ಲಿ ವ್ಯಾಪಾರ ಮಾಡಲು ಕುಳಿತಿದ್ದಳು. ಭಿಕ್ಷೆ ಬೇಡಿಲ್ಲ. ನಾನು ಬಾಗಿಲನ್ನು ತೆರೆಯಲು ನಡೆದೆ, ಆಕೆ ಹಿಂದೆ ಪ್ರಶ್ನಿಸಿದಳು ''ಈ ಮಳೆಯಲ್ಲಿ ಎಲ್ಲಿ ಹೋಗ್ತಿ ?''

ನಾನು ''ಎಮ್ಮೆ ದೊಡ್ಡಿಯೊಳಗೆ'' ಎಂದು ನುಡಿಯುತ್ತಾ ಬಾಗಿಲು ತೆರೆದೆ.

ಓಹ್ ! ಗಾಳಿ ನನ್ನನ್ನು ಹೊತ್ತು ಸಾಗುತ್ತದೆ ಅನಿಸಿತು, ಆದರೂ ನಾನು ಹೊರಗೆ ಕಾಲಿರಿಸಿದೆ. ಹೆಂಗಸು ಹಿಂದಿನಿಂದ ಕರೆದಳು ''ಎಲ್ಲಿದ್ದೀಯಾ ಸ್ವಲ್ಪ ಕೇಳಿಸ್ಕೊ ಕರೆದ್ಮೇಲೆ ರಾತ್ರಿಯೆಲ್ಲಾ ಇಲ್ಲೇ ಇದ್ಬಿಡು.'' ನೀಳ ಉಸಿರನ್ನು ಬಿಡುತ್ತಾ ಮತ್ತೆ ನುಡಿದಳು ''ನನ್ನ ಅದೃಷ್ಟವೋ ಖೋಟಾ.'' ನಾನು ನುಡಿದೆ ''ನಿನ್ನ ಅದೃಷ್ಟ ಒಳ್ಳೇದಾಗಿಯೇ ಇರ್ಲಿ ನಾನು ಕೊಟ್ಟಿಗೆಯಲ್ಲೇ ಇರ್ತೀನಿ.''

''ನಿನ್ನ ಇಚ್ಛೆ'' ಹೇಳುತ್ತಾ ಆಕೆ ಕಟ್ಟೆಯ ಮೇಲೆ ಹೋಗಿ ಕುಳಿತಳು. ಅನಂತರ ಗೊಣಗಿದಳು ''ಇವತ್ತು ಇನ್ನೇನೂ ಆಸೆ ಇಲ್ಲ.''

ನಾನು ಯೋಚಿಸಿದೆ ''ಅವಳ ಮಾತು ಸರಿ, ಈ ಬಿರುಗಾಳಿ ಮಳೆಯಲ್ಲಿ ತಂಗಲು ಸ್ಥಳ ಸಿಕ್ಕಿದಾಗ ಅದನ್ನೂ ಏಕೆ ಕಳೆದುಕೊಳ್ಳಲಿ ? ಆದರೆ ಆ ಹೆಂಗಸಿನ ಜೊತೆ ಇರುವುದು ಮಾತ್ರ ವಿಚಿತ್ರವೆನಿಸುತ್ತಿದೆ. ಇದು ನನಗೆ ಹೊಸತು. ನಿಜವಾಗಿ ಸಾಮಾನ್ಯ ಜನರಿಗಿಂತ ಹತ್ತು ಪಾಲು ಮಿಗಿಲಾಗಿ ನಾನು ಹೆಂಗಸರ ಬಗ್ಗೆ ಆಸಕ್ತಿ ಹೊಂದಿದ್ದೆ. ಆದರೂ ಇಲ್ಲ ಛೇ ಛೇ ಇದು ನನ್ನ ಕೈಯಲ್ಲಿ ಸಾಧ್ಯವಿಲ್ಲ. ಒಂದು ಮಾತು ಸಾಧ್ಯ, ಆಕೆಯ ಜೊತೆಯಲ್ಲಿ ಮಲಗದೇ ರಾತ್ರಿಯನ್ನು ಕಳೆಯಬಹುದಿತ್ತು. ಇದನ್ನು ಯೋಚಿಸಿ ನಾನು ಕೊಠಡಿಯೊಳಗೆ ಬಂದು ಬಾಗಿಲನ್ನು ಭದ್ರಪಡಿಸಿದೆ. ಅವಳದು ನೀಳ ತೆಳು ಶರೀರ, ಶುಭ್ರ ಕಂದು ಬಣ್ಣ, ಎರಡು ಕೆನ್ನೆಗಳೂ ಹುದುಗಿ ಹೋಗಿದ್ದವು. ಹಸಿರು ಹುಲ್ಲು ಅರಸುತ್ತಿರುವ ಹಸುವಿನಂತಿದ್ದವು ಆಕೆಯ ಅಗಲ ಕಣ್ಣುಗಳು. ದಪ್ಪ ತುಟಿಗಳ ಮೇಲಿದ್ದ ಮೂಗು ಆಕಾಶ ನೋಡುತ್ತಿತ್ತು. ಅಲ್ಲಿ ಇಲ್ಲಿ ಅರಸಿ ಆಕೆ ನನಗೆ ಒಂದು ಹಳೆಯ ಲಂಗವನ್ನು ಉಡಲು ಕೊಟ್ಟು ನುಡಿದಳು ''ಇದನ್ನು ಬಿಟ್ಟು ನನ್ನ ಬಳಿ ಇನ್ನೇನೂ ಇಲ್ಲ.''

ಲಂಗ, ನನಗೆ ನಗು ಬಂತು, ಒಳ್ಳೆಯದು ಸಧ್ಯಕ್ಕೆ ಇಲ್ಲಿ ನೋಡಲು ಯಾರೂ ಬರುವುದಿಲ್ಲ. ಆದರೂ....

ನನ್ನ ಹೃದಯ ಕಂಪಿಸಿತು, ನಾನು ನನ್ನ ಜೇಬನ್ನು ಒತ್ತಿ ಹಿಡಿದೆ, ಸಾಯುವಾಗ ನನ್ನ ಸ್ನೇಹಿತ ನನಗೆ ಶಾಶ್ವತ ಸಮಾನ ಹೊರೆ ಹೊರಿಸಿದ್ದ. ಅದು ಯಥಾಸ್ಥಾನದಲ್ಲಿದೆಯೋ ಇಲ್ಲವೋ ಮುಟ್ಟಿ ನೋಡಿಕೊಂಡೆ. ಅದು ಯಾವುದೇ ವಸ್ತುವಾಗಿರಲಿಲ್ಲ. ರಕ್ತದ ಉಂಡೆಯಾಗಿತ್ತು. ಹೌದು, ರಕ್ತದ ಉಂಡೆ. ನನ್ನ ಮನಸ್ಸು ಸಂಶಯದಿಂದ ಡೋಲಾಯಮಾನವಾಯಿತು. ನಾನು ತೀಕ್ಷ್ಣ ದೃಷ್ಟಿಯನ್ನು ಹುಡುಗಿಯತ್ತ ಹರಿಸಿದೆ. ಆಕೆ ಹಿಂದೆ ತಿರುಗಿ ಬ್ಲೌಸ್ ಒಳಗಿನಿಂದ ಬ್ರೇಸಿಯರ್ ತೆರೆಯುತ್ತಿದ್ದಳು.

ನಾನು ನುಡಿದೆ "ನನ್ನ ಬಳಿ ಏನೂ ಇಲ್ಲ. ನಾನು ಆಗಲೇ ಹೇಳಿದ್ದೇನೆ." "ಎಷ್ಟು ಬಾರಿ ಹೇಳ್ತಿ? ಹೇಳಿದ್ದೇ ಹೇಳ್ತಾ ಇದ್ದಿ" ಅವಳು ನಿರಾಶಳಾಗಿ ನುಡಿದಳು. ಆಕೆ ತನ್ನ ಹಸುವಿನಂತಹ ದೃಷ್ಟಿಯನ್ನು ನನ್ನತ್ತ ಹರಿಸಿದಳು: ನುಡಿದಳು, "ನನ್ನಾಣೆಗೂ ನಿಂಗೆ ಬಲವಂತ ಮಾಡ್ತಾ ಇಲ್ಲ." ಅವಳು ಸರಿಯಾಗೇ ನುಡಿದಿದ್ದಳು. ನಾನು ಪೆಟಿಕೋಟ್ ಧರಿಸಿದೆ. ಆದರೆ ತೆರೆದ ಎದೆಯಲ್ಲಿ ಚಳಿ ನಡುಕ ಹುಟ್ಟಿಸುತ್ತಿತ್ತು. ಬಾಗಿಲ ಮೇಲೆ ಗಾಳಿ ಹಾಗೂ ಮಳೆ ಬಡಿಯುತ್ತಿದ್ದವು.

ಆ ಹೆಂಗಸು ಬಾಯಿಗೆ ಬಟ್ಟೆ ತುರುಕಿಕೊಳ್ಳುತ್ತಾ ನಕ್ಕಳು; ಅನಂತರ ಒಂದು ಹಳೆಯ ಸೀರೆಯನ್ನು ನನ್ನತ್ತಿರ ಎಸೆದು ನುಡಿದಳು "ಇದನ್ನು ಎದೆಗೆ ಸುತ್ತಿಕೊಂಡು ಮಲಗಿಕೊ."

ಇದನ್ನು ಹೇಳಿ ಅವಳು ನನ್ನ ಬಟ್ಟೆಗಳನ್ನು ಹಗ್ಗದ ಮೇಲೆ ಒಣಗಿ ಹಾಕಿದಳು. ನುಡಿದಳು "ಸ್ವಲ್ಪ ಒಣಗಿಕೊಳ್ಳಲಿ."

ವಿಶ್ರಾಂತಿ ಕೂಡ ಬಹಳ ಕೆಟ್ಟದು. ನಾನಿದ್ದ ದುರವಸ್ಥೆಯಲ್ಲಿ ನಾನೊಂದು ಸೂಳೆಯ ಮನೆಯಲ್ಲಿದ್ದೇನೆ ಎಂಬುದನ್ನು ಮರೆತುಬಿಟ್ಟಿದ್ದೆ. ನಾನು ನುಡಿದೆ "ಎರಡು ದಿನಗಳಿಂದ ಹೊಟ್ಟೆ ಸಂಪೂರ್ಣವಾಗಿ ಖಾಲಿ, ಅದಕ್ಕೇ ಮಳೆ ನನ್ನನ್ನು ಇಷ್ಟು ಸುಸ್ತು ಮಾಡಿದೆ." ಅವಳು ಉತ್ತರಿಸಲಿಲ್ಲ. ಮಂಡಿಗಳ ಮಧ್ಯೆ ತಲೆ ಇಟ್ಟು ಕುಳಿತಿದ್ದಳು. ನಾನು ಪ್ರಶ್ನಿಸಿದೆ "ಸರಿ ಹಾಗಾದ್ರೆ ಮಲಗಬಹುದು ತಾನೆ?" ಅವಳು ತಲೆ ಎತ್ತಿದಳು. ಅವಳ ಮುಖ ನೋವಿನಿಂದ ವ್ಯಾಕುಲಗೊಂಡಿತ್ತು. ಅವಳ ಎದೆಯ ಎಲುಬುಗಳು ಉಸಿರಾಡುವಾಗ ಏರಿ ಇಳಿಯುತ್ತಿದ್ದವು. ನುಡಿದಳು "ಊಟ ಮಾಡ್ತಿಯಾ? ಅನ್ನ ಹಾಗೂ ಸ್ವಲ್ಪ ಪಲ್ಯ ಇದೆ." ಅನ್ನ ಹಾಗೂ ಪಲ್ಯ ನಿರೀಕ್ಷೆಗೆ ಮೀರಿದುದಾಗಿತ್ತು. ಅನ್ನದ ವಾಸನೆಯಿಂದಲೇ ಯಾರ ಹೊಟ್ಟೆ ಅರ್ಧ ತುಂಬುತ್ತಿತ್ತೊ ಅವರನ್ನು ಈ ಅನ್ನದ ಬಗ್ಗೆ ಕೇಳುವುದೇನು? ನಾಲಿಗೆ ನೀರಾಡಿತು. ಹೊಟ್ಟೆಯೇ ಒಂದು ಪ್ರತ್ಯೇಕ ನಾಲಿಗೆಯಂತಾಯಿತು. ಅನ್ನದ ಹೆಸರು ಕೇಳುತ್ತಲೇ ನನ್ನಲ್ಲಿ ಆಂತರ್ಯ ಕಂಪಿಸಿತ್ತು. ಆದರೆ....?

ಅಷ್ಟು ಹೊತ್ತಿಗಾಗಲೇ ಆಕೆ ಕಲಾಯಿ ಮಾಡಿದ ತಟ್ಟೆಯೊಂದರಲ್ಲಿ ಊಟ ಬಡಿಸಿದಳು. ಇದನ್ನು ನೋಡಿ ನನ್ನ ಮನಸ್ಸಿನ ಸಂಶಯ ಜಾಗೃತಗೊಂಡಿತು. ಹಗ್ಗದ ಮೇಲಿದ್ದ ನನ್ನ ಬಟ್ಟೆಗಳನ್ನು ತೆಗೆದುಕೊಂಡೆ. ಅಲ್ಲಿನ ಸ್ಥಿತಿ ನನಗೇಕೋ ಸರಿ ಕಾಣುತ್ತಿರಲಿಲ್ಲ. ನಾನು ಹೆದರಿಕೊಂಡೇ ನುಡಿದೆ "ಅನ್ನಕ್ಕೂ ಕೊಡಲು ನನ್ನ ಬಳಿ

ಹಣ ಇಲ್ಲ."

ಆ ಹಸುವಿನ ಕಣ್ಣಲ್ಲಿ ಕೋಪ ಕಾಣಿಸಿಕೊಂಡಿತು. ನುಡಿದಳು "ನಿನಗೆ ಎಮ್ಮೆಗಳ ಕೊಟ್ಟಿಗೆಯೇ ಸರಿಯಾದ ಸ್ಥಳ. ಒಂದೇ ಮಾತು ಎಷ್ಟು ಸಾರಿ ಹೇಳ್ತಿ?" ಸುಖ ಸಿಕ್ಕಿದರೂ ಶಾಂತಿ ಎಲ್ಲಿ? ಅದೃಷ್ಟಹೀನ ಸಾಯುವ ಮುನ್ನ ಅದನ್ನು ನನ್ನ ತಲೆಗೆ ಕಟ್ಟಿ ಹೋಗಿದ್ದ. ಅದನ್ನು ಹೊತ್ತು ಸಾಗುವುದು ನನಗೆ ಬಹಳ ಕಷ್ಟದ ಕೆಲಸವಾಗಿತ್ತು. ಇಟ್ಟುಕೊಳ್ಳುವುದೂ ಸಹ ವಿಷ ಇಟ್ಟುಕೊಂಡಂತೆ. ಇದು ಇಲ್ಲದೆ ಇದ್ದಿದ್ದರೆ ಯೋಚನೆ ಇಲ್ಲದೆ ಹಂಗೆಲ್ಲಾದರೂ ಬಿದ್ದುಕೊಂಡಿರಬಹುದಾಗಿತ್ತು.

ಆಕೆ ಪುನಃ ಪ್ರಶ್ನಿಸಿದಳು "ನೀನೇನು ಇಲ್ಲೀವರ್ಗೆ ಮನುಷ್ಯರ ಜೊತೇಲಿ ವಾಸಿಸಿಯೇ ಇಲ್ವೆ ?"

ಕೇಳಿ ಎಷ್ಟು ವಿಚಿತ್ರವಾಗಿದೆ, ಅವಳ ಮಾತು. ನನ್ನನ್ನು ಪ್ರಶ್ನಿಸುವವರು ಯಾರು ? ಒಬ್ಬ ಮಾರುಕಟ್ಟೆಯ ಹೆಂಗಸು ! ನಾನು ನುಡಿದೆ "ನಾನು ವಾಸಿಸ್ದೆ ಏನು ? ಆದರೆ ನಿನ್ನಂತೋಳ ಜೊತೇಲಲ್ಲ. ಸ್ವಲ್ಪ ಹೊತ್ತು ಆಕೆ ನನ್ನನ್ನು ನೋಡುತ್ತಿದ್ದಳು. ಆ ನಂತರ ನುಡಿದಳು "ಊಟ ಬಡಿಸಿದ ಮೇಲೆ ಊಟ ಮಾಡು, ಇಲ್ದೆ ಇದ್ರೆ ಹಾಳಾಗುತ್ತೆ."

ಇದರಲ್ಲಿ ತೊಂದರೆ ಏನು ? ನಾನು ಯೋಚಿಸಿದೆ. ಹಣವಿಲ್ಲದೆ ಊಟ ಸಿಗುತ್ತಿದೆ. ಅಲ್ಲದೆ ಇಲ್ಲಿ ನೋಡುವವರೂ ಯಾರೂ ಇಲ್ಲ, ನಾನು ಗಬಗಬನೆ ಅನ್ನ ತಿಂದುಬಿಟ್ಟೆ, ಇದರ ಮೇಲೆ ಒಂದು ಲೋಟ ನೀರು ಬೇರೆ. ಬಡಿಸಿದ ಕಾಟ ಮುಗಿಸಿದ ಮೇಲೆ ನಾನು ನವಾಬಗಿರಿ ಮಾಡುತ್ತಿದ್ದೇನೇಯೇ ಅನಿಸಿತು. ಇದಕ್ಕೆ ನನ್ನ ಮನಸ್ಸಿನ ಸಂಶಯ ವೃದ್ಧಿಸಿತು.

ಇದಾದ ನಂತರ ಮಲಗುವುದಿತ್ತು. ಅದೂ ರಗಳೆಯ ಕೆಲಸ. ಅಂತೂ ನಾನು ಮಲಗಿದೆ. ಅನಂತರ ಪ್ರಶ್ನಿಸಿದೆ "ನೀನು ಎಲ್ಲಿ ಮಲಗುತ್ತಿ?" ಅವಳು ನಿರುತ್ತರಳಾಗಿ ನನ್ನನ್ನು ನೋಡುತ್ತಿದ್ದಳು. ಮುಖದ ಮೇಲಿನ ಹೊದಿಕೆಯನ್ನು ಕೊಂಚ ಸರಿಸಿಕೊಂಡಳು. ನಾನು ಎದ್ದು ಕುಳಿತೆ.

ನನ್ನ ಕಾಲ ಬಳಿ ಕುಳಿತಿದ್ದಳು. ಅವಳು ನುಡಿದಳು "ನಾನು ದಿನವೂ ನಿದ್ದೆ ಮಾಡುತ್ತೇನೆ. ಇಂದು ನೀನು ಮಲಗು, ಒಂದು ದಿನದ ಮಾತು ಅಷ್ಟೇ. ನಾನು ನಿನ್ನನ್ನು ಕರೆದ ಮೇಲೆ..."

ಹೇಳುತ್ತಾ ಆಕೆ ನನ್ನ ಕೈಲಿ ಷರಟನ್ನು ಕಂಡು ಹಗ್ಗದತ್ತ ದೃಷ್ಟಿ ಹರಿಸಿದಳು, ಅನಂತರ ಪುನಃ ನನ್ನತ್ತ. ನಾನು ಅವಳನ್ನೇ ನೋಡುತ್ತಿದ್ದೆ, ನುಡಿದಳು "ಇನ್ನೂ ಷರಟು ಒದ್ದೆ ಅಲ್ಲವೇ ?" "ಇರಲಿ ಬಿಡು ನಿಂಗೇನು ?" ಅವಳು ಸುಮ್ಮನಾದಳು. ನನ್ನ ಶರೀರಕ್ಕೆ ವಿಶ್ರಾಂತಿ ಸಿಕ್ಕಿತು ಅನಿಸಿತು. ಸ್ವಾಭಾವಿಕವಾಗಿಯೇ ನರಗಳನ್ನು ಬಿಸಿ ಮಾಡಿತು. ನನಗೆ ತ್ರಾಸ ಕೊಡುತ್ತಿದ್ದ ಹೊರಗಿನ ಬಿರುಗಾಳಿ – ಮಳೆಯ ಶಬ್ದ, ಈಗ ನನಗೆ ಲಾಲಿಯ ಮಧುರ ಗಾನವಾಗಿತ್ತು. ಕಣ್ಣಲ್ಲಿ ನಿದ್ದೆ ಆವರಿಸಿತು.

ನಾನು ಅವಳತ್ತ ನೋಡಿದೆ. ಅವಳು ಹಾಗೇ ಸುಮ್ಮನೆ ಕುಳಿತಿದ್ದಳು. ದೃಷ್ಟಿ ಯಾವ ಕಡೆಗಿತ್ತು ತಿಳಿಯಲಿಲ್ಲ. ಆದರೂ ಅವಳು ಬಳಲಿದ್ದಳು. ಅವಳಿಗೆ ಹಿಡಿದಿದ್ದ

ನಿದ್ದೆಯು ಅವಳ ಮುಖ ಹಾಗೂ ಕಣ್ಣಲ್ಲಿ ಇಣುಕುತ್ತಿತ್ತು. ಅವಳ ವಯ್ಯಾರಕ್ಕೆ ಕೊನೆಯಲ್ಲಿ? ಏನು ಉದ್ದೇಶವಿದೆಯೋ? ಯಾರಿಗೆ ಗೊತ್ತು? ನಾನು ನಿದ್ದೆ ಮಾಡಲಿ ಅನಂತರ... ಉಫ್! ಆ ಭಾಗ್ಯಹೀನನ ವಸ್ತುವನ್ನು ನಾನು ಹೇಗಾದರೂ ಕಾಪಾಡಲೇಬೇಕು. ಇದನ್ನು ಸಂಭಾಳಿಸುವುದು ಏಕೆ ಬೇಕಿತ್ತು? ಒಂದು ರಕ್ತದ ಉಂಡೆ, ಒಂದು ರಕ್ತದ ಉಂಡೆ! ಹೌದು, ರಕ್ತದ ಉಂಡೇ ಆಗಿತ್ತು. ಬೆವರಿನ ವಾಸನೆ ಬರುತ್ತಿದ್ದ ಬಟ್ಟೆಯ ಚಿಂದಿಯ ಪೊಟ್ಟಣ ಅದಾಗಿತ್ತು. ಯಾರೋ ರಾಕ್ಷಸನ ಆಕಾಂಕ್ಷೆಯಂತಿತ್ತು. ಸಾಯುವಾಗ ಆತನ ಮುಖದಿಂದ ರಕ್ತ ಸೋರುತ್ತಿತ್ತು. ಆದರೂ ಅವನು ನುಡಿದಿದ್ದ "ಇದನ್ನು ನೀನು ಇಟ್ಟುಕೋ."

ಹೂಂ, ಹೋಗಲಿ ಬಿಡಿ, ಆ ಮಾತುಗಳನ್ನು. ಆ ನುಡಿದಿದ್ದ ರೀತಿ ನೆನೆದರೆ ಎದೆ ನಡುಗುತ್ತದೆ.

ಆ ಹುಡುಗಿ ಇನ್ನೂ ಹಾಗೇ ಕುಳಿತಿದ್ದಳು. ನೋಡಿ ಇದ್ದಕ್ಕಿದ್ದಂತೆಯೇ ನುಡಿದೆ "ಸ್ವಲ್ಪ ಜಾಗ ಬಿಟ್ಟು ಮಲಗು."

ಅವಳು ಪುನಃ ಕೊಂಚ ಹೊತ್ತು ನನ್ನ ನೋಡುತ್ತಿದ್ದಳು. ಅನಂತರ ನುಡಿದಳು "ನೀನೆಂಥಹ ವಿಚಿತ್ರ ಮನುಷ್ಯ! ಓಹ್!" ಅನಂತರ ಅವಳು ನಿದ್ದೆ ಹೋದಳು. ಇಷ್ಟುಹೊತ್ತಿಗೆ ನನ್ನ ಮನಸ್ಸು, ಶರೀರ ಸಡಿಲಗೊಂಡಿತ್ತು, ಯಾವುದೇ ಹೆಣ್ಣಿನ ಶರೀರ ಅಷ್ಟು ದೂರದಲ್ಲಿದ್ದರೂ ಇಷ್ಟು ಬಿಸಿಯಾಗಿರುತ್ತದೆ ಎಂದು ಅನುಭವವಾಯಿತು. ಎಷ್ಟು ವಿಚಿತ್ರ ರಾತ್ರಿ. ಎಷ್ಟು ಅದ್ಭುತ ವಾತಾವರಣ. ಯಾರಾದರೂ ನೋಡಿದರೆ ಏನು ಹೇಳುತ್ತಾರೆ, ಛಿ.ಛಿ. ಆದರೂ ಎಷ್ಟೆಂದರೂ ವಿಶ್ರಾಂತಿ. ನನ್ನ ಬಳಲಿದ ಶರೀರಕ್ಕೆ ಇದಕ್ಕೆ ಹೆಚ್ಚು ವಿಶ್ರಾಂತಿ ಹಿಂದೆ ಎಂದಾದರೂ ದೊರಕಿತ್ತೆ? ನೆನಪಿಲ್ಲ. ನಿದ್ದೆಯಿಂದ ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದುವು, ಆದರೆ, ಇಲ್ಲ ಹೀಗಾಗಲಾರದು. ನಾನು ನನ್ನ ಸ್ನೇಹಿತನ ಬಗ್ಗೆ ಹೇಳುತ್ತಿದ್ದೆ. ಆ ಭಾಗ್ಯಹೀನ ಸಾಯುವ ಮುನ್ನ ಹೇಳಿದ್ದ "ಈ ಗಂಟೆ... ನನ್ನ ರಕ್ತ." ನಾನು ಪ್ರಶ್ನಿಸಿದ್ದೆ "ಯಾರ ರಕ್ತ?" ಕಣ್ಣೀರು ಹಾಗೂ ಮುಖದ ರಕ್ತ ಒರೆಸಿಕೊಳ್ಳುತ್ತಾ ಆತ ಹೇಳಿದ "ನನ್ನ ಎದೆಯ ರಕ್ತ ನಾನು ಉಣ್ಣದೆ ದಿನವೂ..."

ಹೇಳುತ್ತಾ ಹೇಳುತ್ತಾ ಆತ ರಕ್ತಸಿಕ್ತ ಬೆರಳುಗಳಿಂದ ಏನೊ ಹುಡುಕಲು ಪ್ರಾರಂಭಿಸಿದ್ದ. ನಾನು ನನ್ನ ಸಿಟ್ಟನ್ನು ಹತ್ತಿಕ್ಕದಾಗಿದ್ದೆ. ಪ್ರಶ್ನಿಸಿದ್ದೆ "ಏನೋ ಅದು ?" ನುಡಿದಿದ್ದ "ಮನೆ ಕಟ್ಟೋ ಆಸೆ ಅಂಥ......"

ಅವನು ಈ ಮಾತುಗಳನ್ನು ನನ್ನನ್ನು ಬಯ್ಯುತ್ತಿರುವಂತೆ ನುಡಿದಿದ್ದ.

ಹೋಗಲಿ, ಈ ಮಾತುಗಳನ್ನು ಬಿಡಿರಿ. ಆ ಹೆಂಗಸಿನ ಮುಖದಿಂದ ಒಂದು ಉಸಿರು ಹೊರಬಿತ್ತು. ನಾನು ಪ್ರಶ್ನಿಸಿದ್ದೆ "ಏನಾಯ್ತು?"

ಆಕೆ ನೋಡಿದಳು. ಎರಡು ಕಣ್ಣುಗಳೂ ಯಾವುದೋ ನೋವಿನಿಂದ ಕೆಂಪಾಗಿದ್ದವು. ಅಳಬಹುದೆಂದೆನಿಸಿತು. ಆದರೆ ನುಡಿದಳು "ಏನು ಇಲ್ಲ."

ಅವಳು ಬಿಡುತ್ತಿದ್ದ ಬಿಸಿ ಉಸಿರಿನಿಂದ ನನಗೆ ಶರೀರಕ್ಕೆ ಸುಖ ಲಭಿಸಿತ್ತು. ಚಳಿಯಲ್ಲಿ ಹಿಮುಗಟ್ಟಿದ್ದ ಶರೀರಕ್ಕೆ ಕಾವು ತಗಲುತ್ತಿತ್ತು. ಒಮ್ಮೆಗೇ ನನಗೆನಿಸಿತು. ಅವಳು ನೋಡಲು ಅಷ್ಟೇನು ಕೆಟ್ಟದಾಗಿಲ್ಲ. ತುಟಿ ಹಾಗೂ ಮೂಗು ಅಷ್ಟು

ಮಾಟವಾಗಿಲ್ಲ. ಕಣ್ಣಲ್ಲಿ ಕಳೆ ಸತ್ತಿತ್ತು. ಮಡಿಸಿದ್ದ ಎರಡು ಕೈಗಳು ಎದೆಯ ಮೇಲಿದ್ದವು. ಅವಳ ಮೃದು ಎದೆ ನನ್ನ ಮನದಲ್ಲಿ ಒಂದು ವಿಚಿತ್ರ ಸಂದೇಹವನ್ನು ಜಾಗೃತಗೊಳಿಸಿತ್ತು. ಅವಳು ಪ್ರಶ್ನಿಸಿದಳು "ನಿನಗೆ ನಿದ್ದೆ ಬರುತ್ತಿಲ್ಲವೆ ?" "ನಾನು ನಿದ್ರಿಸುವುದಿಲ್ಲ" ಎಂದು ನುಡಿದೆ. ಅನಂತರ ಮನದಲ್ಲೇ ಯೋಚಿಸಿದೆ. ನಾನು ನಿದ್ದೆ ಮಾಡಿದರೆ ನಿನಗೆ ಅನುಕೂಲವಾಗಬಹುದು. ಹಾಗೆ ನಾನು ಮಾಡುವುದಿಲ್ಲ. ಮತ್ತೊಂದು ಆಶ್ಚರ್ಯವೆಂದರೆ ನಾನು ಮಾತನಾಡುತ್ತಿದ್ದಂತೆ ನನ್ನ ಸಂಶಯ ವೃದ್ಧಿಸುತ್ತಿತ್ತು. ಇದಕ್ಕೆ ಅವಳು ಸುಮ್ಮನಿರುವುದೇ ಒಳಿತಿತ್ತು.

ಹೊರಗಡೆ ಇನ್ನೂ ಮಳೆಯ ತಾಂಡವ ನಡೆದಿತ್ತು. ಸೂರಿನಿಂದ ನೀರು ಸೀದಾ ಕೆಳಗೆ ತೊಟ್ಟಿಕ್ಕುತ್ತಿತ್ತು. ಅದರಿಂದ ಟಪ್ ಟಪ್ ಶಬ್ದ ಕೇಳಿ ಬರುತ್ತಿತ್ತು. ಇಲಿಗಳು ಸಹ ಓಡಾಡುತ್ತಿದ್ದುವು.

ಅವಳು ಯಾವುದೋ ನೋವಿನಿಂದ ನರಳಿದ್ದಳು. "ಏನಾಗಿದೆ ನಿನಗೆ ?" ಕೇಳಿದೆ ಸ್ವಲ್ಪ ಹೊತ್ತು ಸುಮ್ಮನಿದ್ದು ನುಡಿದಳು "ಕಾಯಿಲೆ."

"ಕಾಯಿಲೆ ! ಎಂತಹ ಕಾಯಿಲೆ ?"

ಆಕೆ ಸುಮ್ಮನಿದ್ದಳು. "ಹೇಳು ಮತ್ತೆ." ಈ ಸಾರಿಯೂ ಸುಮ್ಮನಿದ್ದಳು.

ನನಗೆ ಸಿಟ್ಟು ಬಂತು. ಕೂಗಿದೆ "ಹೇಳು ಅದೇನು ಕಾಯಿಲೆ ?" ಟಿ.ಬಿ. ಅಥವಾ ಕಾಲರಾ ಆಗಿದ್ದರೆ ತತ್‌ಕ್ಷಣ ಓಡೋಣ ಅನ್ನಿಸುತ್ತೆ. ಯಾವ ಕಾಯಿಲೆ ಕಂಡರೂ ನನಗೆ ಇಷ್ಟವಿಲ್ಲ. ಇದ್ದಕ್ಕಿದ್ದಂತೆಯೇ ಅವಳು ಸಿಟ್ಟಾದಳು. ನುಡಿದಳು "ನಿಂಗೆ ಯಾರನ್ನು ಕಂಡರೆ ಇಷ್ಟ, ಸ್ವಲ್ಪ ಹೇಳು ನೋಡೋಣ ?"

ಅವಳು ಸರಿಯಾಗೇ ಹೇಳುತ್ತಿದ್ದಳು. ಇಷ್ಟದ ಮಾತೆಲ್ಲಿ ಬಂತು ಇಲ್ಲಿ, ನಾನು ನುಡಿದೆ "ಹೇಳು ನಿಂಗೆ ಏನು ಕಾಯಿಲೆ ಮೊದಲು ?"

"ಈ ದಾರಿಯಲ್ಲಿ ನಡೆದಾಗ ಸಾಮಾನ್ಯವಾಗಿ ಬರುವ ಕಾಯಿಲೆ" ಅವಳು ನುಡಿದಳು "ಈ ದಾರಿಯಲ್ಲಿ ಸರ್ವನಾಶ." ನನಗೆ ಬಹಳ ಸಂಕೋಚವಾಯಿತು. ಭಯ ಹಾಗೂ ತಿರಸ್ಕಾರದಿಂದ ಪ್ರಶ್ನಿಸಿದೆ.

"ಹಾಗಿದ್ದು ಸಂಜೆ ನೀನು !" "ಹೌದು ಐದು ಜನ" ಅವಳು ನುಡಿದಳು.

"ಎಷ್ಟು ಭಯಂಕರ. ಚಿಕಿತ್ಸೆ ಯಾಕೆ ಮಾಡಿಸ್ಕೊಳ್ಳೋದಿಲ್ಲ ?"

"ಹಣ ಎಲ್ಲಿಂದ ಬರುತ್ತೆ ?"

"ಏಕೆ, ನಿನ್ನ ಸಂಪಾದನೆಯಿಂದ,"

"ಅದು ಯಜಮಾನರಿಗೆ ಸೇರಿದ್ದು."

"ಯಜಮಾನ ! ನೀನೇನು ನೌಕರಳೇ ?"

"ಅಷ್ಟಲ್ಲದೆ ಮತ್ತೇನು ? ವ್ಯಾಪಾರ ಯಜಮಾನಂದು. ಕೊಠಡಿ ಮುಂತಾದ್ದು ಎಲ್ಲಾ. ನಾವು ಸುಮ್ಮನೆ ಇಲ್ಲಿ ಇರೋಕ್ಕೆ ಬರ್ತೀವಿ ಅಷ್ಟೆ."

ಇದನ್ನು ಕೇಳಿ ನನ್ನ ಮನಸ್ಸಿಗೆ ಬಹಳ ಆಳವಾದ ಗಾಯವಾಯಿತು. ಅಂದರೆ ಇವರು ಸುಖದ ಜೀವನ ನಡೆಸುತ್ತಿಲ್ಲ. ಇದು ಒಂದು ಕೆಲಸವೇ ಆಯಿತು. ನಾನು ನುಡಿದೆ "ಯಜಮಾನ ಅವನೆಂಥಾ ಮನುಷ್ಯ. ಚಿಕಿತ್ಸೆ ಯಾಕೆ ಮಾಡಿಸ್ಬಾರ್ದು."

"ಅವನಿಗೆ ಮನಸ್ಸು ಬಂದಾಗ ಮಾಡಿಸ್ತಾನೆ. ಅಲ್ಲದೆ ಕಾರ್ಖಾನೆಯಲ್ಲಿ ಪ್ರತಿನಿತ್ಯ ಎಷ್ಟು ಜನ ಸಾಯ್ತಾರೆ, ಯಜಮಾನ ಅವರ ಚಿಕಿತ್ಸೆ ನಡಿಸ್ತಾನಾ ?"

ಅವಳು ಹೇಳಿದ ಮಾತೂ ಒಂದು ರೀತಿಯಲ್ಲಿ ಸರಿ. ಅವಳು ನೋವು ತುಂಬಿದ ತಂಪು ಕಣ್ಣಿನ ದೃಷ್ಟಿ ಹರಿಸಿ ನನ್ನನ್ನು ನಿಷ್ಕ್ರಿಯಗೊಳಿಸಿದಳು. ಯುದ್ಧರಂಗದಲ್ಲಿ ಸೈನಿಕ ತನ್ನ ಜೀವ ಕಳೆದುಕೊಳ್ಳುತ್ತಾನೆ. ಆದರೆ ಇದು ಜೀವನ ಎದುರಿಸುವ ವಿಧಾನ ? ನಾನು ನುಡಿದೆ "ಅದೇನೋ ಸರಿ...."

ಅವಳು ನುಡಿದಳು "ಮತ್ತೇನು ? ಯಜಮಾನನ ಕಣ್ಣು ತಪ್ಪಿಸಿ ನಾನು ಏನು ಸಂಪಾದನೆ ಮಾಡ್ತಿನೋ ಅದ್ರಲ್ಲೇ ಚಿಕಿತ್ಸೆ ಮಾಡಿಸ್ಕೊಂತೀನಿ."

"ಏಕೆ ? ಜೀವಿಸಲೇ ?" ನನಗೆ ನಗಬೇಕೆನಿಸಿತು. ಆದರೆ ಮುಖ ವಿಕಾರವಾಯಿತು.

"ಜೀವಿಸಲು ಎಲ್ಲರೂ ಆಸೆ ಪಡ್ತಾರೆ." ನೋವಿನಿಂದ ತುಟಿ ಕಚ್ಚುತ್ತಾ ಅವಳು ನುಡಿದಳು. ಅದೇನೋ ಸರಿ, ಕಾಡಿನಲ್ಲಿ ಸಿಂಹ ಇರುತ್ತದೆ. ಇದನ್ನು ಅರಿತೂ ಇದರ ಅಕ್ಕಪಕ್ಕದಲ್ಲೇ ಮನುಷ್ಯ ತನ್ನ ಬಿಡದಿ ನಿರ್ಮಿಸುತ್ತಾನೆ. ಪ್ರವಾಹ, ಬಿರುಗಾಳಿ ಹಸಿವು ಏನಿಲ್ಲ ? ಆತನೂ ಸಹ ನನ್ನದೇ ಸಂಸಾರ ನಡೆಸಲು ಆಶಿಸಿದ್ದ. ಆದರೆ ಈ ಗಂಟಿನಲ್ಲಿರುವ ಒಂದೊಂದು ಕಾಸಿನಲ್ಲೂ ರಕ್ತದ ವಾಸನೆ ಇದೆ. ಅದು ರಕ್ತದ ಗುಂಡಿರುವ ಪೊಟ್ಟಣ.

ಅವಳು ಪ್ರಶ್ನಿಸಿದಳು "ಇನ್ನೂ ಮಲಗೊಲ್ವೆ ?"

"ಇಲ್ಲ ಕಣ್ಣಿಗೆ ನಿದ್ದೆಯೇ ಹತ್ತುತ್ತಿಲ್ಲ." ಅವಳು ಬಿಡುತ್ತಿದ್ದ ಉಸಿರು ನನಗೆ ತಗಲುತ್ತಿತ್ತು. ನೋವಿನ ಆ ಬಿಸಿ ಉಸಿರು, ಸಿಹಿಬಿಸಿ ಧಗಧಗಿಸುತ್ತಿರುವ ಬೆಂಕಿಯಂತೆ ಭಾಸವಾಗುತ್ತಿತ್ತು. ನಾನು ಕೈಯಿಂದ ಆ ಗಂಟು ಹಾಗೂ ಷರಟನ್ನು ಬಿಗಿಯಾಗಿ ಹಿಡಿದುಕೊಂಡು ಎದ್ದು ನಿಂತೆ. ಈಗಲೂ ಹೊರಗೆ ಬಿರುಗಾಳಿ ಬೀಸುತ್ತಿತ್ತು. ಮಳೆ ಹನಿಯುತ್ತಿತ್ತು. ರಾತ್ರಿ ಇನ್ನೇನು ಅಂತ್ಯಗೊಳ್ಳುವುದರಲ್ಲಿ ನಾನು ನನ್ನ ಬಟ್ಟೆಗಳನ್ನು ಧರಿಸಿದ್ದೆ.

ಅವಳು ಎದ್ದು ನಿಂತಳು. ನಗಲು ಪ್ರಯತ್ನಿಸಿದಳು. ನುಡಿದಳು "ಹೂಂ.... ಹೋಗ್ತಾ ಇದ್ದಿಯಾ ?" ನಾನು ಜೇಬಿನಲ್ಲಿ ತೂರಿಸಿ ಗಂಟನ್ನು ಭದ್ರವಾಗಿ ಹಿಡಿದುಕೊಂಡು ನುಡಿದೆ "ಹೂಂ." ತುಟಿಯ ಕೊನೆಯಲ್ಲಿ ರಕ್ತವನ್ನು ನಾಲಿಗೆಯಿಂದ ನೆಕ್ಕುತ್ತಾ ಆ ಭಾಗ್ಯಹೀನ ಸಾಯುವ ಮುನ್ನ ನುಡಿದಿದ್ದ "ಇದನ್ನು ನೀನು ಇಟ್ಟುಕೊ..... ಏತಕ್ಕೆ ? ಕೊನೆಗ್ಯಾಕೆ ?"

ಮಾತು ಹೊರಬರಲು ಕಷ್ಟಪಡುತ್ತಿತ್ತು. ಆ ಹುಡುಗಿ ನುಡಿದಿದ್ದಳು "ಮತ್ತೆ ಬಾ." ಎಂತಹ ಕಣ್ಣು ಆ ಹುಡುಗಿಯದು. ಅವಳ ಮುಖದ ತುಂಬಾ ಕಳಂಕದ ಕಲೆ ತುಂಬಿತ್ತು. ದಪ್ಪ ತುಟಿಗಳು ಆಕಾಶದ ಕಡೆ ತಿರುಗಿರಲಿಲ್ಲ. ಅಂತಹ ಮುಖವನ್ನು ಹಿಂದೆಂದೂ ನಾನು ನೋಡಿರಲಿಲ್ಲ.

ಜೋರಾಗಿ ನಡೆದು ಅವಳ ಕೈಯಲ್ಲಿ ಆ ಗಂಟನ್ನು ತುರುಕಿಬಿಟ್ಟೆ. ಅವಳು ಬಿಡುತ್ತಿದ್ದ ಉಸಿರು ನನಗೆ ಬಡಿಯುತ್ತಿತ್ತು. ಒಂದು ಕ್ಷಣ ತಲೆ ತಗ್ಗಿಸಿಕೊಂಡು

ಅಶಾಂತಗೊಂಡಿದ್ದ ಕೋಪವನ್ನು ಅದುಮಿ ಹಿಡಿದುಕೊಂಡೆ. ಗಾಳಿಯಲ್ಲಿ ತೇಲಿ ಹೋಯಿತು ಆ ಮಾತುಗಳು. ನುಡಿದೆ "ಹಿಂದಿನಿಂದ ಕೂಗಬೇಡ."

ಹೊರೆಯಿಂದ ವಿಮುಕ್ತಿ ಪಡೆದು ನಾನು ಹೊರಗೆ ನಡೆದೆ. ವಾನಪ್ರಸ್ಥಕ್ಕಲ್ಲ, ನನ್ನ ಸ್ನೇಹಿತನ ಮನೆಯತ್ತ. ಮೂಡಣಗಾಳಿ ನನ್ನನ್ನು ಪಶ್ಚಿಮ ತಟದತ್ತ ತಳ್ಳುತ್ತಿತ್ತು. ಆದರೆ ಅದು ಅಸಫಲಗೊಂಡಿತು.

# ಸ್ನೇಹಿತನ ಪುಸ್ತಕಕ್ಕೆ ಪೀಠಿಕೆ

*ಬಿಮಲ್ ಕರ್*

ನನ್ನ ಸ್ನೇಹಿತ, ಸ್ವರ್ಗೀಯ ವಸುಧಾ ಮುಖೋಪಾಧ್ಯಾಯರು ಒಬ್ಬ ಅಖ್ಯಾತ ಹಾಗೂ ಅಜಾತ ಲೇಖಕರು. ಇದು ಇಪ್ಪತ್ತು – ಇಪ್ಪತ್ತೈದು ವರ್ಷಗಳ ಹಿಂದಿನ ಮಾತು, ಅವರು ಬರೆದಿದ್ದ ಒಂದು ಪುಸ್ತಕವನ್ನು ನಾವು ಮೂರು ಜನ ಸ್ನೇಹಿತರು ಸೇರಿ ಮುದ್ರಿಸಿದ್ದೆವು. ಅಂದು ವಸುಧಾ ನಮ್ಮೊಡನಿದ್ದರು. ಆ ಪುಸ್ತಕ ಮಾಮೂಲಿನಂತೆ ಗೋಯಾ ಬಾಗನ್‌ನ ಒಂದು ಮುದ್ರಣಾಲಯದಲ್ಲಿ ಬಹಳ ದಿನಗಳು ಬಿದ್ದಿದ್ದುದರಿಂದ ಹಾಳಾಗಿ ಹೋಗಿತ್ತು. ಫುಟ್‌ಪಾತ್ ಮೇಲೆ ನಾವು ನಾಲ್ಕು ಐದು ಪುಸ್ತಕಗಳನ್ನು ಮಾರಲು ಸಮರ್ಥರಾಗಿದ್ದೆವು. ಆದರೆ ಪುಸ್ತಕಗಳನ್ನು ಕೊಂಡು ಓದುವವರ ಬಗ್ಗೆ ನಮಗೇನೂ ನಂಬಿಕೆ ಇಲ್ಲ.

ವಸುಧಾರವರ ಅದೇ ಪುಸ್ತಕ ಇಷ್ಟು ದಿನಗಳ ನಂತರ ಪುನಃ ಮರು ಮುದ್ರಣಗೊಳ್ಳಲಿದೆ. ಭುವನ್ ಮುದ್ರಿಸುತ್ತಿದ್ದಾನೆ. ಭುವನ್ ನನ್ನ ಹಾಗೂ ವಸುಧಾರ ಸ್ನೇಹಿತ. ಪ್ರಥಮ ಬಾರಿ ಮುದ್ರಣಗೊಂಡಾಗಲೂ ಭುವನ್ ಸಹಕರಿಸಿದ್ದ.

'ನರಕದ ಯಾತ್ರೆ' ಇದೇ ಹೆಸರಿನಿಂದಲೇ ಆ ಪುಸ್ತಕ ಪ್ರಥಮ ಬಾರಿ ಮುದ್ರಣಗೊಂಡಿತ್ತು. ಈ ಸಾರಿಯೂ ಅದೇ ಹೆಸರನ್ನು ಇರಿಸಿದೆ. ಹಿಂದಿನ ಪುಸ್ತಕದಲ್ಲಿ ಮೂರು ಕಥೆಗಳಿದ್ದವು. ಈ ಸಾರಿ ಇನ್ನೆರಡು ಕಥೆಗಳನ್ನು ಸೇರಿಸಿದೆ. ವಸುಧಾ ಸತ್ತ ಆಸ್ಪತ್ರೆಗೆ ನಾವು ಹೋಗುವುದಾಗಲಿ ಆತ ಬರೆದಿದ್ದ ಕೊನೆಯ ಲೇಖನ (ಆತ ಬರೆದಿದ್ದರೆ) ವನ್ನು ಸಂಗ್ರಹಿಸುವುದಾಗಲಿ ಸಂಭವವಿರಲಿಲ್ಲ. ನಮಗೆ ತಿಳಿದಿದ್ದಂತೆ ಆತನ ಲೇಖನಗಳಿಂದಲೇ ಆರಿಸಿ ಈ ಪುಸ್ತಕ ಪ್ರಕಟಿಸುತ್ತಿದ್ದೇವೆ.

ಮೊದಲೇ ಓದುಗರನ್ನು ಪ್ರಾರ್ಥಿಸುತ್ತೇನೆ. ನಾನು ಲೇಖಕನಲ್ಲ. ಪೀಠಿಕೆ ಹೇಗೆ ಬರೆಯಬೇಕು ನನಗೆ ತಿಳಿಯದು. ಪೀಠಿಕೆ ಬರೆಯಲು ನನ್ನ ಭಾಷೆಯೂ ಸೂಕ್ತವಿಲ್ಲ. ಆದರೆ ಭುವನ್ ಈ ಜವಾಬ್ದಾರಿಯನ್ನು ನನಗೆ ವಹಿಸಿದ್ದಾನೆ. ಯೌವನದಲ್ಲಿ ವಸುಧಾ ಜೊತೆಯಲ್ಲಿ ನಾನೂ ಕೂಡ ಬರೆಯುವ ಪ್ರಯತ್ನ ನಡೆಸಿದ್ದೆ. ಆದ್ದರಿಂದ ಈ ಕೆಲಸಕ್ಕೆ ನಾನೇ ಸರಿ ಎಂದು ಆತ ಯೋಚಿಸಿದ್ದಿರಬಹುದು. ವಸುಧಾ ಬಗ್ಗೆ ನಾನು ಹೆಚ್ಚು ತಿಳಿದಿದ್ದೇನೆಂದೂ ಭುವನನ ಅನಿಸಿಕೆ. ಬಹುಶಃ ಇದು ಸರಿಯಲ್ಲ. ಲೇಖನಿ ಹಿಡಿಯದೆ ಇದ್ದರೂ ಭುವನ್, ವಸುಧಾನನ್ನು ಕಡಿಮೆ ಮೆಚ್ಚಿದ್ದ ಎಂದಾಗಲಿ ಆತನ

ಗುಣಕ್ಕೆ ಮಾರು ಹೋಗಿಲ್ಲ ಎಂದಾಗಲಿ, ಆಪ್ತ ಸ್ನೇಹಿತನಲ್ಲವೆಂದಾಗಲಿ ನಾನು ತಿಳಿಯಲು ಸಾಧ್ಯವಿಲ್ಲ. ಆದರೂ ವಸುಧಾನ ಪುಸ್ತಕಕ್ಕೆ ನಾನೇ ಪೀಠಿಕೆ ಬರೆಯಬೇಕಾಗಿದೆ.

ಇಪ್ಪತ್ತು ಇಪ್ಪತ್ತೆರಡು ವರ್ಷಗಳ ದೀರ್ಘ ಕಾಲಾನಂತರ ಹೆಸರುವಾಸಿಯಲ್ಲದ ಹೆಚ್ಚು ಪರಿಚಿತನಲ್ಲದ ವಸುಧಾನಂತಹ ಲೇಖಕನೊಬ್ಬನ ಓದದ, ಓದಿದ್ದರೂ ಮರೆತಿರುವ, ಪುಸ್ತಕವೊಂದನ್ನು ನಾವು ಈಗ ಪ್ರಕಟಿಸುತ್ತಿರುವುದಕ್ಕೆ ಏನಾದರೂ ಕಾರಣವಿದ್ದಿರಲೇಬೇಕು. ಮಿತ್ರತ್ವ ಬಿಟ್ಟು ಮತ್ತೇನೂ ಕಾರಣ ಇದಕ್ಕೆ ಇರಬಾರದು. ಮೃತ ಬಂಧುವಿನ ಬಗ್ಗೆ ಅನುರಾಗ ಪ್ರದರ್ಶಿಸುವುದರಿಂದ ವ್ಯಕ್ತಿಗತ ಸಮಾಧಾನವಂತೂ ಲಭಿಸುತ್ತಿತ್ತು. ಆದರೆ ಇದಕ್ಕೆ ಇನ್ನೊಂದು ಕಾರಣವೂ ಇದೆ. ಅದು ಬೇರೆ ರೀತಿಯದು.

ನಾಲ್ಕು – ಐದು ತಿಂಗಳ ಕೆಳಗೆ ಭುವನ್ ಒಂದು ಬಾರಿ ಬನಾರಸ್‌ಗೆ ಹೋಗಿದ್ದ. ಬನಾರಸ್ಸಿನ ರಾಮಪುರದಲ್ಲಿ ಈತನಿಗೆ ಒಬ್ಬ ಸಜ್ಜನನ ಪರಿಚಯವಾಯಿತು. ಅವರು ಮುದುಕರಿದ್ದರು. ಒಂದು ದಿನ ಅವರ ಮನೆಯೊಳಗೆ ಕುಳಿತು ಅವರೊಡನೆ ಮಾತನಾಡುತ್ತಿದ್ದನು. ಆಗ ಒಬ್ಬ ಹುಡುಗ ಅಲ್ಲಿಗೆ ಬಂದು ಕಟ್ಟು ಹಾಕಿದ ಒಂದು ಫೋಟೊವನ್ನು ಆ ಸಜ್ಜನನಿಗೆ ನೀಡಿದ. ಕೆಲದಿನಗಳ ಹಿಂದೆ ಮನೆಯಲ್ಲಿ ಜೇಡನನ್ನು ತೆಗೆಯುತ್ತಿದ್ದಾಗ ಆ ಚಿತ್ರ ಕೆಳಗೆ ಬಿದ್ದು ಅದರ ಗಾಜು ಒಡೆದುಹೋಗಿತ್ತು. ಅದಕ್ಕೆ ಹೊಸ ಗಾಜನ್ನು ಹಾಕಿಸಿ ಅಂದೇ ಅದನ್ನು ತಂದಿದ್ದರು.

ಹಳೆಯ, ಕೊಳೆಯಾದ ಆ ಚಿತ್ರವನ್ನು ನಿರೀಕ್ಷಿಸಿದ ಭುವನ್ ವಸುಧಾನತ್ತ ದೃಷ್ಟಿ ಹರಿಸಿದ. ಚಿತ್ರದಲ್ಲಿದ್ದ ಮೂರು ಮೂರ್ತಿಗಳಲ್ಲಿ ಒಂದು ವಸುಧಾ – ಇನ್ನೊಂದು ಆದೇ ವೃದ್ಧ, ಮೂರನೆಯದು ಆತನ ಮಗಳದ್ದು. ಭುವನ್ ನುಡಿದ ‘‘ಇವನನ್ನು ನಾನು ಗುರುತಿಸುತ್ತೇನೆ, ಇವನು ನನ್ನ ಸ್ನೇಹಿತ ವಸುಧಾ.’’ ಇಷ್ಟು ಹೇಳಿ ಭುವನ ವಸುಧಾನ ಇತರ ವಿವರ ನೀಡಿದ ಮತ್ತೆ ನುಡಿದ ‘‘ಇವನು ಒಬ್ಬ ಲೇಖಕ ಸಹ.’’

ವೃದ್ಧ ನುಡಿದರು ‘‘ನನ್ನ ಮಗಳು ಅದನ್ನೇ ಹೇಳುತ್ತಿರುತ್ತಾಳೆ. ಆತ ಬರೆಯುತ್ತಿದ್ದ ಅಂತಾ. ಆದರೆ ನಾನು ಒಂದನ್ನೂ ನೋಡಿಲ್ಲ. ಹಾಂ, ಹರಿದ್ವಾರದಲ್ಲಿ ಒಮ್ಮೆ ಒಬ್ಬ ಕ್ಷಯ ರೋಗಿಯ ಸೇವೆ ಮಾಡುತ್ತಿದ್ದುದನ್ನು ನೋಡಿದ್ದೇನೆ. ಈ ಚಿತ್ರ ಕೂಡಾ ಹರಿದ್ವಾರದ್ದೇ. ಹುಡುಗ ಬಹಳ ಸಾಧು ಸ್ವಭಾವದವನು. ನಿನಗೇನಾದರೂ ಈತನ ಬಗ್ಗೆ ಗೊತ್ತೆ?’’

ಏನು ಯೋಚಿಸಿ ಭುವನ್ ವಸುಧಾನ ಸಾವಿನ ಬಗ್ಗೆ ಹೇಳಲಿಲ್ಲವೊ ತಿಳಿಯದು. ‘‘ನಂಗೇನೂ ತಿಳಿಯದು’’ ನುಡಿದ.

ಬನಾರಸ್ಸಿನಿಂದ ಹಿಂತಿರುಗಿದ ನಂತರ ಭುವನ್‌ನ ಮನಸ್ಸಿನಲ್ಲಿ ವಸುಧಾನ ಈ ಪುಸ್ತಕ ಪ್ರಕಟಿಸುವ ಹುಚ್ಚು ಹತ್ತಿತ್ತು. ನಾನು ಬಹಳ ಸಾರಿ ಪ್ರಶ್ನಿಸಿದೆ ‘‘ಏತಕ್ಕೆ?’’

ಭುವನ್ ಇಷ್ಟೇ ಹೇಳಿದ ‘‘ನಾನು ಮುದ್ರಿಸುತ್ತೇನೆ, ಅದನ್ನು ಮುದ್ರಿಸಲೇಬೇಕು. ವಸುಧಾಗೆ ನಾನು ಹಿಂದಿನಿಂದ ಹೇಳುತ್ತಲೇ ಇದ್ದೆ. ನನ್ನ ಬಳಿ ಹಣವಿದ್ದರೆ ಖಂಡಿತಾ ನಿನ್ನ ಪುಸ್ತಕ ಮುದ್ರಿಸುತ್ತಿದ್ದೆ ಅಂತ. ನನ್ನ ಸ್ಥಿತಿ ಈಗ ಸುಧಾರಿಸಿದೆ. ಆದಕ್ಕೆ ಆತನ

ಪುಸ್ತಕ ಅಚ್ಚು ಹಾಕುತ್ತಿದ್ದೇನೆ."

ಭುವನ್ ನಲವತ್ತಾರು-ನಲವತ್ತೇಳನೆ ವಯಸ್ಸಿನಲ್ಲೂ ಭಾವುಕನಾಗಿದ್ದುದಲ್ಲದೆ ಉತ್ಸಾಹಿಯೂ ಆಗಿದ್ದ. ಆದರೆ ಅದು ನನಗೆ ಸಾಧ್ಯವಾಗಿರಲಿಲ್ಲ. ಆದರೆ ನನಗೆ ಈಗ ಸಮಾಧಾನವಾಗಿತ್ತು. ನಾನು ವಸುಧಾಗೋಸ್ಕರ ಒಂದು ಪೀಠಿಕೆ ಬರೆಯುತ್ತಿದ್ದೇನೆ. ಓದುಗರು ದಯವಿಟ್ಟು ನನ್ನ ಉದ್ಧಟತನವನ್ನು ಕ್ಷಮಿಸಬೇಕು.

ವಸುಧಾ ಪಶ್ಚಿಮ ಬಂಗಾಳದಲ್ಲಿ ಜನಿಸಿದ್ದನು. ಮೊದಲ ವಿಶ್ವ ಸಮರದ ವರ್ಷ ಅಂದರೆ 1918ರಲ್ಲಿ ಅವನ ಜನನ. ತಿಂಗಳು ಬಹುಶಃ ಮಾರ್ಗಶಿರ. ಆತನ ತಂದೆ ಪೋಸ್ಟ್ ಮಾಸ್ಟರ್. ವರ್ಗವಾಗುವ ಕೆಲಸವಾದುದರಿಂದ ಅವರ ಪರಿವಾರ ಹಲವು ಸ್ಥಳಗಳ ನೀರು ಕುಡಿದಿತ್ತು.

ಅವರ ವರ್ಗ ಬಂಗಾಳ ಹಾಗೂ ಬಿಹಾರ ರಾಜ್ಯಗಳ ಮಧ್ಯದಲ್ಲಿ ಆಗುತ್ತಿತ್ತು. ವಸುಧಾನ ತಾಯಿಯದು ಬಹು ಮೃದು ಸ್ವಭಾವ. ಶಾಂತ ಹಾಗೂ ಧರ್ಮ ಬುದ್ಧಿಯ ಹೆಂಗಸು. ಅವರಿಗೆ ಒಬ್ಬ ಅಕ್ಕ ಇದ್ದಳು. ಆ ಅಕ್ಕನ ಸಾವು ವಸುಧಾ ಕಾಲೇಜನ್ನು ಓದುತ್ತಿದ್ದಾಗಲೇ ಆಕೆಯ ಪತಿಯ ಮನೆಯಲ್ಲೇ ಸಂಭವಿಸಿತ್ತು. ವಸುಧಾಗೆ ಇರುವ ಮತ್ತಾವ ಸಂಬಂಧಿಕರ ಬಗ್ಗೆ ನನಗೆ ತಿಳಿಯದು.

ವಸುಧಾ ಕಲ್ಕತ್ತಾದ ಕಾಲೇಜಿಗೆ ಓದಲು ಬಂದಾಗಲೇ ಅವನ, ನಮ್ಮ ಪರಿಚಯವಾದದ್ದು. ಅವನೇನು ಅಷ್ಟು ಚುರುಕು ವಿದ್ಯಾರ್ಥಿಯಾಗಿರಲಿಲ್ಲ. ಸುಂದರನೂ ಅಲ್ಲ, ಆತನ ಕಂಠ ಕೂಡ ಒಡೆದಿತ್ತು. ಆದರೆ ಸ್ನೇಹಿತನ ದೃಷ್ಟಿಯಲ್ಲಿ ಆತ ದುರ್ಲಭ ವ್ಯಕ್ತಿಯಾಗಿದ್ದ. ಆತ ಓದುತ್ತಿದ್ದುದಕ್ಕಿಂತ ಹತ್ತರ ಪಾಲು ಮನದಲ್ಲೇ ಆ ಬಗ್ಗೆ ಯೋಚಿಸುತ್ತಿದ್ದ. ಅವನು ಯಾವುದೇ ವಿಷಯವನ್ನು ನಮಗೆ ತಿಳಿಸಿ ಹೇಳಬಂದರೂ, ಆತನ ಒಡೆದ ಕಂಠದಿಂದ ಹೊರಡುತ್ತಿದ್ದ ಸ್ವರ ಒಂದು ತರಹ ವಿಚಿತ್ರ ಮಾಧುರ್ಯ ಹೊಂದಿರುತ್ತಿತ್ತು. ಆತನ ಕಣ್ಣುಗಳು ಆತ ಇತರರಿಗಿಂತ ಹೆಚ್ಚು ಭಾವುಕನೆಂದು ಸಾರಿ ಹೇಳುತ್ತಿದ್ದವು. ಆತನದು ಸ್ವಲ್ಪ ಕೋಲುಮುಖ. ಸ್ವಲ್ಪ ನೀಳವಾದ ತೆಳುವಾದ ಮೂಗು. ಇದರ ಅಳತೆಯಲ್ಲಿ ಆತನ ಕಣ್ಣುಗಳು ಸಣ್ಣವಾಗಿ ಕಾಣುತ್ತಿದ್ದವು. ಆದರೆ ಹೊಳೆಯುತ್ತಿದ್ದವು. ತೋಳುಗಳು ದಪ್ಪಗಿದ್ದವು. ಆತನ ಬಣ್ಣ ಸಹ ಸಾಧಾರಣ ಬಿಳುಪು. ಗುಂಗುರು ತಲೆಕೂದಲು, ಆತನ ಮುಖದಲ್ಲಿ ಅಂತಹದೇನು ಆಕರ್ಷಣೆ ಇರಲಿಲ್ಲ. ಸಾಧಾರಣ ಬಂಗಾಳ ವಿದ್ಯಾರ್ಥಿಗಳಿಗಿಂತ ಆತನು ಬೇರೆಯೇನೂ ಆಗಿರಲಿಲ್ಲ. ಆದರೆ ನಾವುಗಳು ಅಂದರೆ ಆತನ ಸ್ನೇಹಿತರು ಮಾತ್ರ, ಆತ ನಮ್ಮಂತೆ ಅಲ್ಲ ಎಂಬುದನ್ನು ಅರಿತಿದ್ದೆವು. ಆತನಲ್ಲಿ ಏನೋ ಒಂದು ಪ್ರತ್ಯೇಕ ಆಕರ್ಷಣೆ ಇತ್ತು.

ಬಿ.ಎ. ಓದಿದ ನಂತರ ವಸುಧಾ ಬರೆಯಲು ಪ್ರಾರಂಭಿಸಿದ್ದ. ಬಹುಶಃ ಇದಕ್ಕೆ ಮುಂಚೆ ಆತ ಬರೆಯುತ್ತಿದ್ದಿರಬಹುದು. ಆದರೆ ಅದು ನಮಗೆ ಗೊತ್ತಿರಲಿಲ್ಲ. ವಸುಧಾ ರಚಿಸಿದ ಪ್ರಥಮ ಕಥೆ ನಮ್ಮ ಸ್ನೇಹಿತರಲ್ಲೇ ಒಬ್ಬರ ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಆ ಪತ್ರಿಕೆ ಹಾಗೂ ಈ ಕಥೆ, ಎರಡೂ ಈಗ ಎಲ್ಲೋ ಕಳೆದು ಹೋಗಿದೆ. ಕಲ್ಕತ್ತೆಯಲ್ಲಿ ಆ ದಿನಗಳಲ್ಲಿ ಬಾಂಬು ಬೀಳುತ್ತಿದ್ದವು. ಜನಗಳು ಭಯ

ಹಾಗೂ ಆತಂಕದಿಂದ ಉದ್ವಿಗ್ನಗೊಂಡಿದ್ದರು. ಆಗಿನ ಅಸ್ಥಿರ ವಾತಾವರಣಕ್ಕೆ ಅನುಗುಣವಾಗಿ ಇತರೆ ಜನರು ಹೇಗೆ ಬರೆಯುತ್ತಿದ್ದರೋ ಹಾಗೆ ವಸುಧಾನೂ ಒಂದು ಕಥೆ ಬರೆದಿದ್ದ. ಸಂಪೂರ್ಣವಾಗಿ ಸಾಧಾರಣ ಶೈಲಿ, ಆದರೆ ಆ ದಿನಗಳಲ್ಲಿ ನಾವು ಆ ಕಥೆಯನ್ನು ಬಹಳ ಹೊಗಳಿದ್ದೆವು. ಆದರೆ ಸತ್ಯವಾಗಿ ಅದು ಎಷ್ಟು ಮಾಮೂಲಿ ಕಥೆಯೆಂದರೆ ನನಗೆ ಇಂದು ಕಿಂಚಿತ್ತು ನೆನಪಿಲ್ಲ.

ನನಗೆ ಚೆನ್ನಾಗಿ ಗೊತ್ತು, ನನ್ನ ಗ್ರಹಿಕೆಯಂತೆ ಆತನು ಬರೆಯುವುದನ್ನು ತನ್ನ ನಲವತ್ತಮೂರನೇ ವಯಸ್ಸಿನ ಹೊತ್ತಿಗಾಗಲೇ ಪ್ರಾರಂಭಿಸಿದ್ದ. ಅಷ್ಟು ಹೊತ್ತಿಗಾಗಲೇ ನಾವೆಲ್ಲಾ ಕೆಲಸ ಮಾಡುತ್ತಿದ್ದೆವು. ವಸುಧಾ 'ಸಿವಿಲ್‌ಸಪ್ಲೈ ವಿಭಾಗದಲ್ಲಿ ನೌಕರಿಯಲ್ಲಿದ್ದ. ನಾನು ಮತ್ತು ಭುವನ್ ಒಂದೇ ಆಫೀಸಿನಲ್ಲಿದ್ದೆವು. ಮೆಸ್‌ನಲ್ಲಿ ನಮ್ಮಿಬ್ಬರ ಭೇಟಿ ನಡೆಯುತ್ತಿತ್ತು. ವಸುಧಾ ಬಹುಬಜಾರ್‌ನ ಒಂದು ಮೆಸ್‌ನಲ್ಲಿ ವಾಸಿಸುತ್ತಿದ್ದ. ಸ್ನೇಹಿತರು ಎಂದು ಹೇಳಿಕೊಳ್ಳುವ ಮಟ್ಟದಲ್ಲಿ ಇದ್ದವರೆಂದರೆ ನಾವಿಬ್ಬರೇ. ಮೆಸ್‌ನ ಒಳಗಡೆ ಸಾಯಂಕಾಲ ನಮ್ಮ ಸಭೆ ಸೇರುತ್ತಿತ್ತು. ಅಲ್ಲಿ ವಸುಧಾ ತನ್ನ ಬರವಣಿಗೆ ಬಗ್ಗೆ ಏನಾದರೂ ಹೇಳುತ್ತಿದ್ದ, ಏನಾದರೂ ಬರೆದಿದ್ದರೆ ಅದನ್ನು ಓದುತ್ತಿದ್ದ. ಆತನ ಮನಸ್ಸು ಅಸ್ಥಿರಗೊಂಡಿರುತ್ತಿತ್ತು. ಯಾವಾಗಲೂ ಆತ ಒಂದನ್ನೂ ಪೂರ್ತಿ ಬರೆಯದಾಗಿದ್ದ. ಇವತ್ತು ಸ್ವಲ್ಪ ಬರೆದರೆ ನಾಳೆ ಏನು ಇಲ್ಲ. ಇದೇ ರೀತಿ ಅವನು ಅನೇಕ ಕಥೆಗಳನ್ನು ಪ್ರಾರಂಭಿಸಿ ಮಧ್ಯದಲ್ಲೇ ಬಿಟ್ಟು ಬಿಡುತ್ತಿದ್ದ. ತಿಂಗಳುಗಟ್ಟಲೆ ಬರೆಯುವ ಬಗ್ಗೆ ಮಾತನಾಡುತ್ತಿದ್ದ. ಆದರೆ ಒಂದು ಅಕ್ಷರವೂ ಬರೆಯುತ್ತಿರಲಿಲ್ಲ.

ಈ ಪುಸ್ತಕದ ಪ್ರಥಮ ಕಥೆ 'ವಿನೋದಿನಿಯ ದುಃಖ'. ಇದು ಆ ದಿನದಲ್ಲಿದ್ದ ಒಂದು ಮಾಸಿಕ ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಆ ಕಥೆಯಲ್ಲಿ ವಸುಧಾ ತನ್ನದೇ ಆದ ಕೆಲ ಅಂಶಗಳನ್ನು ಹೇಳಬೇಕೆಂದಿರುವ ವಿಷಯ ಸ್ಪಷ್ಟವಾಗಿದೆ. ವಿನೋದಿನಿಯ ಮದುವೆ ಆಕೆಯ ಹದಿನೈದನೆ ವರ್ಷದಲ್ಲೇ ನಡೆದಿರುತ್ತದೆ. ಪತಿಯ ವಯಸ್ಸು ಆಗ ಹದಿನೆಂಟು. ವಿನೋದಿನಿಗೆ ಕೆಂಪು ಅಂಚಿನ ದಪ್ಪ ಸೀರೆಯನ್ನು ಸಂಭಾಳಿಸುವುದಕ್ಕೆ ಆಗುತ್ತಿರಲಿಲ್ಲ. ಸೊಂಟದ ಮೇಲೆ ಒಂದು ಮೊಂಕರಿ ಕಟ್ಟಿದಂತೆ ಅವಳು ಬಟ್ಟೆ ತೊಡುತ್ತಿದ್ದಳು. ಆಕೆಯ ಪತಿ ಗಂಗಾಪತ್ ತನ್ನ ಪತ್ನಿಗೋಸ್ಕರ ಸ್ಟೀಮರ್ ಘಾಟ್‌ನಿಂದ ಮಣ್ಣಿನ ಬೊಂಬೆ, ಗಾಜಿನ ಬಳೆ, ಹೊಳೆಯುವ ಬಿಂದು, ಸಿಂಧೂರ, ಸೀಬೆಕಾಯಿ, ನೇರಳೆ ಹಣ್ಣು ಮುಂತಾದವುಗಳನ್ನು ಮುಚ್ಚಿಟ್ಟು ತಂದು ತನ್ನ ಪ್ರೀತಿಯ ಹೊಸ ಹೆಂಡತಿಗೆ ನೀಡುತ್ತಿದ್ದ. ರಾತ್ರಿ ಮಂಚದ ಕೆಳಗೆ ಮುಚ್ಚಿಟ್ಟುದುದನ್ನು ಹೊರ ತೆಗೆದು ವಿನೋದಿನಿ ಆಟವಾಡುತ್ತಿದ್ದಳು. ಒಮ್ಮೊಮ್ಮೆ ರಾತ್ರಿಯೇ ಸೀಬೇಕಾಯನ್ನು ತಿನ್ನುತ್ತಿದ್ದಳು. ಗಂಗಾಪತ್‌ನಿಗೆ ಸ್ಟೀಮರ್ ಘಾಟ್‌ನಲ್ಲಿ ಕೆಲಸ ಸಿಕ್ಕಿದಾಗ ಅವನು ವಿನೋದಿನಿಗೋಸ್ಕರ ಚೈತನ್ಯದೇವನ ಒಂದು ಗಾಜಿನ ಮೂರ್ತಿಯನ್ನು ಕೊಂಡು ತಂದುಕೊಟ್ಟ. ಅಂದಿನಿಂದ ವಿನೋದಿನಿ ಚೈತನ್ಯದೇವನ ಭಕ್ತೆಯಾಗಿದ್ದಾಳೆ. ಇದೇ ರೀತಿಯಲ್ಲಿ ವಿನೋದಿನಿ ಯುವತಿಯಾದಳು. ಗಂಡು-ಹೆಣ್ಣು ಮಕ್ಕಳ ತಾಯಿಯಾದಳು. ಯೌವನಾವಸ್ಥೆಯೂ ಕಳೆಯಿತು.

ಅವಳಿಗೆ ವಾರ್ಧಕ್ಯದ ಸ್ಪರ್ಶವಾಗತೊಡಗಿತು. ಆಗಲೇ ಅವಳ ಪತಿ ಸ್ವರ್ಗಸ್ಥನಾದ. ಪತಿಯ ಮರಣದ ನಂತರ ವಿನೋದಿನಿ ಗೃಹಸ್ಥ ಜೀವನದ ಜಂಜಾಟದಲ್ಲಿ ತನ್ನನ್ನೇ ತೊಡಗಿಸಿಕೊಂಡಳು. ನಲವತ್ತೈದು ವರ್ಷಕ್ಕೂ ಹೆಚ್ಚು ಕಾಲ ಅವಳು ತನ್ನ ಗಂಡನ ಜೊತೆಯಲ್ಲಿದ್ದಳು. ಅವಳು ಹಾಗೂ ಅವಳ ಪತಿ ಜೊತೆಯಾಗಿ, ಗೃಹಸ್ಥಜೀವನದ ಒಂದು ದಾರಿ ನಿರ್ಮಿಸಿದ್ದರು. ಗಂಡನ ಸಾವಿನಿಂದ ಮಾರ್ಗ ಬದಲಾಯಿತು. ವಿನೋದಿನಿಯ ಜೀವನ ಈಗ ಸಂಪೂರ್ಣವಾಗಿ ಶೂನ್ಯವಾಗಿತ್ತು, ಅರ್ಥಹೀನವಾಗಿತ್ತು. ಚಲಿಸುತ್ತಿದ್ದ ನದಿ ಒಮ್ಮೆಗೇ ನಿಂತಂತೆಸಿಸಿತ್ತು. ಪ್ರವಾಹವೇ ಮುಗಿದು ಹೋದಂತೆನಿಸಿತ್ತು. ವಿನೋದಿನಿಯ ಮನಸ್ಸಿನ ಸ್ಥಿತಿ ಈ ರೀತಿಯಾಗಿತ್ತು. ಯಾವ ಬಣ್ಣದಿಂದ ವಿಧಾತ ಪ್ರಪಂಚದ ಒಂದು ಚಿಕ್ಕ ಚಿತ್ರವನ್ನು ನಿರ್ಮಿಸಿದ್ದನೋ ಆ ಚಿತ್ರದ ಅರ್ಧಭಾಗ ಅಳಿಸಿ ಹೋಗಿತ್ತು. ಉಳಿದರ್ಧಭಾಗ ಕಪ್ಪಾಗಿತ್ತು. ಈಗ ವಿನೋದಿನಿ ಒಂದು ಪೂರ್ಣ ಚಿತ್ರವಾಗಿರಲಿಲ್ಲ. ಅಲ್ಲದೆ ಆ ಚಿತ್ರ ಪೂರ್ಣಗೊಳ್ಳುವ ಆಸೆಯೂ ಇರಲಿಲ್ಲ.

ತನ್ನ ಜೀವನದ ಈ ಶೂನ್ಯತೆಯನ್ನು ತೊಲಗಿಸಲು ತನ್ನ ಮಗನ ಸಹಾಯ ಪಡೆಯಲು ವಿನೋದಿನಿ ಒಮ್ಮೆ ಬಯಸಿದಳು. ಆದರೆ ಮನಸ್ಸು ಇದನ್ನು ಸ್ವೀಕರಿಸಲಿಲ್ಲ. ದೇವ, ದೇವತೆಗಳ ಪೂಜೆಯಲ್ಲೇ ನಿರತಳಾಗಿರುತ್ತಿದ್ದಳು. ವಿನೋದಿನಿ ಬಹಳ ಭಕ್ತಿಯಿಂದ ಯಾವ ಚೈತನ್ಯ ಮೂರ್ತಿಯನ್ನು ನಲವತ್ತೈದು ವರ್ಷಕ್ಕೂ ಹೆಚ್ಚು ಕಾಲ ಪೂಜಿಸಿದ್ದಳು. ಅದು, ಆಕೆಯ ಗಂಡನ ಮರಣದ ನಂತರ ಕೇವಲ ಗಾಜಿನ ಮೂರ್ತಿಯಾಗಿ ಉಳಿದಿತ್ತು. ಇದ್ದಕ್ಕಿದ್ದಂತೆಯೇ ವಿನೋದಿನಿಗೆ ಜ್ಞಾನೋದಯವಾಯಿತು. ಮಣ್ಣಿನಲ್ಲಿ ನಿರ್ಮಿತ ಮೂರ್ತಿಗಳನ್ನು ಅಲಂಕರಿಸಿ ಪೂಜಿಸಿ ಅನಂತರ ವಿಸರ್ಜನೆ ಮಾಡುತ್ತಾರೆ. ಅವು ಅಲಂಕಾರವಿಲ್ಲದ ನೀರಿನಲ್ಲಿ ಕರಗಿಹೋಗುತ್ತದೆ. ಅದೇ ರೀತಿ ಮನುಷ್ಯನ ಜೀವನ ಸಹ ವಿಸರ್ಜಿತಗೊಳ್ಳಲೇಬೇಕಾಗುತ್ತದೆ. ಗಂಗಾಪದ ಮತ್ತು ವಿನೋದಿನಿಯರನ್ನು ಯಾರೋ ವಿಸರ್ಜನೆಗೋಸ್ಕರ ಬಾಜಾಭಜಂತ್ರಿಯೊಡನೆ ಕರೆತಂದಂತೆ, ಪತಿ ನದಿಯಲ್ಲಿ ವಿಸರ್ಜನೆಗೊಂಡು, ಈಕೆ ನದಿಯ ನೀರಿನ ನಿರೀಕ್ಷೆಯಲ್ಲಿ ನಿಂತಂತೆ ಭಾಸವಾಯಿತು. ಒಂದೇ ನದಿಯ ನೀರಿನಲ್ಲಿ ಎರಡೂ ಮೂರ್ತಿಗಳು ಕರಗಿ ಹೋಗುತ್ತವೆ. ಇದನ್ನು ಯೋಚಿಸಿ ವಿನೋದಿನಿ ದೇವರ ಮುಂದೆ ಕೈ ಜೋಡಿಸಿದಳು.

'ವಿನೋದಿನಿಯ ದುಃಖ' ಕಥೆಯನ್ನು ವಸುಧಾ ತನ್ನ ತಾಯಿಯನ್ನು ದೃಷ್ಟಿಯಲ್ಲಿರಿಸಿಕೊಂಡು ಬರೆದಿದ್ದ. ಅವನ ತಾಯಿ ಮತ್ತು ವಿನೋದಿನಿಯರ ಮಧ್ಯೆ ಏನೂ ವ್ಯತ್ಯಾಸವಿರಲಿಲ್ಲ. ಆಕೆ ಧರ್ಮಪಾರಾಯಣಳಾಗಿದ್ದರೂ ಆಕೆ ತನ್ನ ಪತಿಯ ಮರಣದ ನಂತರ ತನ್ನ ಮಗ ವಸುಧಾನ ಆಸರೆ ಪಡೆದು ತನ್ನನ್ನೇ ತಾನು ನಿಯಂತ್ರಿಸಿಕೊಳ್ಳಲು ಸಮರ್ಥಳಾಗಿದ್ದಳು. ವಸುಧಾ ಹೇಳುತ್ತಿದ್ದ "ತಾಯಿ ಪರಲೋಕವನ್ನು ನಂಬುವುದಿಲ್ಲ. ಅವಳು ಮೃತ್ಯುವಿನಲ್ಲಿ ಮಾತ್ರ ನಂಬಿಕೆ ಇರಿಸಿಕೊಂಡಿದ್ದಾಳೆ. ನನಗೆ ಏನು ಮಾಡಬೇಕೆಂಬುದೇ ಅರ್ಥವಾಗುತ್ತಿಲ್ಲ."

ತಾಯಿಯ ಮರಣದ ಕೆಲದಿನಗಳ ನಂತರ ವಸುಧಾ ಇನ್ನೊಂದು ಕಥೆಯನ್ನು

ಬರೆದ. ಕಥೆಯ ಹೆಸರು 'ದುಃಖ ವಿಮೋಚನೆ'. ಈ ಪುಸ್ತಕದ ಎರಡನೆ ಕಥೆ. ಈ ಕಥೆ ಹೆಚ್ಚು ಪ್ರಸಾರವಿಲ್ಲದ ಒಂದು ಪತ್ರಿಕೆಯಲ್ಲಿ ಮುದ್ರಿತಗೊಂಡಿತ್ತು. 'ವಿನೋದಿನಿಯ ದುಃಖ' ಸಾಹಿತ್ಯ ಭಾಷೆಯಲ್ಲಿ ರಚಿತಗೊಂಡಿತ್ತು. ಪ್ರಾರಂಭದಲ್ಲಿ ವಸುಧಾ ಹಾಗೆಯೇ ಬರೆಯುತ್ತಿದ್ದ. ಆದರೆ 'ದುಃಖ ವಿಮೋಚನೆ' ಯನ್ನು ಪ್ರಚಲಿತ ಆಡು ಭಾಷೆಯಲ್ಲಿ ಬರೆದಿದ್ದ.

'ವಿನೋದಿನಿಯ ದುಃಖ' ಕಥೆಯಲ್ಲಿ ಆಕೆಯು ಗಳಿಸಿದ ಕೊನೆಯ ಸ್ವಾತಂತ್ರ್ಯ ಮೃತ್ಯುವಾಗಿತ್ತು. ಮೃತ್ಯುವನ್ನು ವಿನೋದಿನಿ ದುಃಖದ ಅಂತಿಮ ಪರಿಧಿಯನ್ನಾಗಿ ಪರಿಗಣಿಸಿದ್ದಳು. ಇದನ್ನು ನಾನು ಸರಿಯಾಗಿ ಹೇಳಲಾರೆ. ಮೃತ್ಯುವಿನಲ್ಲಿ ವಿನೋದಿನಿ ಒಂದು ತರಹದ ಪುನರ್ ಮಿಲನದ ಆಸೆಯನ್ನು ಇರಿಸಿಕೊಂಡಿದ್ದಳು ಎಂದು ಹೇಳುವುದೇ ಸರಿ ಎನಿಸುತ್ತದೆ. 'ದುಃಖ ವಿಮೋಚನೆ'ಯಲ್ಲಿ ಇದೇ ಮೃತ್ಯುವನ್ನು ಹೆಚ್ಚು ಪರೀಕ್ಷಿಸಲು ಪ್ರಯತ್ನ ನಡೆಸಿದ್ದಳು.

ನಾನು ಮೊದಲೇ ಹೇಳಿದ್ದೇನೆ. ಈ ಕಥೆಯನ್ನು ವಸುಧಾ ತಾಯಿಯ ಮರಣದ ಕೆಲ ದಿನಗಳ ನಂತರ ಬರೆದಿದ್ದು. ಆತನ ತಾಯಿ ಸಾಯುವ ಹೊತ್ತಿಗೆ ಈತನ ಪರಿಚಯ ಒಬ್ಬ ಹುಡುಗಿಯ ಜೊತೆಯಲ್ಲಿ ಆಗಿತ್ತು. ಅವಳ ನಿಜ ಹೆಸರನ್ನು ನಾನು ಹೇಳಬಯಸುವುದಿಲ್ಲ. ನಮ್ಮ ಅನುಕೂಲಕ್ಕಾಗಿ ಆಕೆಯ ಹೆಸರು 'ನಿರೂ' ಅಥವಾ 'ನಿರುಪಮಾ' ಎಂದು ಹೇಳುವಾ. ವಸುಧಾ ತಾಯಿಯ ಕಾಯಿಲೆಯ ವಾರ್ತೆ ಕೇಳಿ ತನ್ನ ಊರಿಗೆ ಹಿಂತಿರುಗಿದ್ದ, ಆಕೆಯ ಸಾವಿನ ತನಕ ಜೊತೆಯಲ್ಲೆ ಇದ್ದ. ನಾವು ಅಂದರೆ ನಾನು ಮತ್ತು ಭುವನ್ ವಸುಧಾನ ತಾಯಿಯ ಶ್ರಾದ್ಧ ಆಗುವ ತನಕ ಆತನ ಜೊತೆಯಲ್ಲೇ, ಹಳ್ಳಿಯಲ್ಲಿ ಇದ್ದೆವು. ಆಗಲೇ ವಸುಧಾ ನಮಗೆ ಒಂದು ವಿಚಿತ್ರ ವಿಷಯ ತಿಳಿಸಿದ. ನದಿಯ ದಡದ ಸ್ಮಶಾನದಲ್ಲಿ ತಾಯಿಯ ಚಿತೆ ಉರಿಯುತ್ತಿದ್ದಾಗ ಈತ ಒಂದು ನೇರಳೆ ಮರದ ಕೆಳಗೆ ಕುಳಿತು ಅಲ್ಲಿದ್ದಷ್ಟು ಸಮಯವನ್ನು 'ನಿರೂ' ಬಗ್ಗೆ ಯೋಚಿಸುವುದರಲ್ಲೇ ಕಳೆದಿದ್ದ. ಅನಂತರ ಕೆಲದಿನಗಳು ಈ ಶೋಕದಲ್ಲೇ ಕಳೆದವು. ಆದರೂ ಈ ದಿನಗಳಲ್ಲಿ ಆತ ತಾಯಿಯ ಬಗ್ಗೆ ಕಡಿಮೆಯೇ ಯೋಚಿಸಿದ್ದ. ನಿರೂವಿನ ಬಗ್ಗೆಯೇ ಹೆಚ್ಚು ಯೋಚಿಸುತ್ತಿದ್ದ. ಆದರೆ ಏಕೆ ?

ಮಾತು ಮಾತಿಗೆ ಏಕೆ ? ಅನ್ನುವುದು ವಸುಧಾಗೆ ಅಭ್ಯಾಸವಾಗಿ ಹೋಗಿತ್ತು. ತಾಯಿಗೋಸ್ಕರ ಆತ ಎಷ್ಟು ದುಃಖಿಸಬೇಕಾಗಿತ್ತೊ, ಎಷ್ಟು ದುಃಖ ಅನುಭವಿಸುವುದು ಕರ್ತವ್ಯವಾಗಿತ್ತೊ ಅಷ್ಟು ದುಃಖ ಆತನಿಗೆ ಆಗಿರಲಿಲ್ಲ. ಆದರೆ ಬಾಹ್ಯರೂಪದಲ್ಲಿ ಆತ ನಿರೂಪನ ಬಗ್ಗೆಯೇ ಯೋಚಿಸಹತ್ತಿದ್ದ. ಈ ಅನುಭವ ಆತನನ್ನು ಬಹುದಿನಗಳ ತನಕ ದುಃಖಿತನಾಗಿಯೇ ಇಟ್ಟಿತ್ತು. ತಾನು ಏನೊ ಒಬ್ಬ ಅಪರಾಧಿಯಂತೆ ಏನೋ ಮಾಡಬಾರದ ತಪ್ಪನ್ನು ಮಾಡಿರುವಂತೆ ಅನ್ನಿಸುತ್ತಿತ್ತು. ಕಾರಣವಿಲ್ಲದೆ ಮನಸ್ಸಿಗೆ ಹಚ್ಚಿಕೊಂಡು ತನ್ನನ್ನೇ ತಾನು ದಂಡಿಸಿಕೊಳ್ಳುತ್ತಿದ್ದಿಯೆಂದು ಆತನಿಗೆ ನಾವು ಸಮಾಧಾನ ಮಾಡಲು ಅಸಮರ್ಥರಾಗಿದ್ದೆವು.

ವಸುಧಾ ಹೀಗೆ ಕೆಲದಿನಗಳು ಉದಾಸೀನನಾಗಿದ್ದು ಆತ್ಮಗ್ಲಾನಿಯಲ್ಲೆ ದಿವಗಳನ್ನು

ಕಳೆದು ಇವೆಲ್ಲಕ್ಕೂ ಮನದಲ್ಲೇ ಒಂದು ಉತ್ತರವನ್ನು ಕಂಡುಹಿಡಿದ ಮೇಲೆಯೇ ಆತ ದುಃಖ ವಿಮೋಚನೆ ಕಥೆಯನ್ನು ಬರೆದಿದ್ದು.

'ವಿನೋದಿನಿಯ ದುಃಖ' ಕಥೆಯಲ್ಲೇ ವಿನೋದಿನಿ ಮೃತ್ಯುವಿನೊಡನೆ ತನ್ನ ಕಷ್ಟಗಳಿಗೆ ಒಂದು ಸಮಾಧಾನವನ್ನು ಕಂಡುಕೊಂಡಿದ್ದಳು. ದುಃಖ ವಿಮೋಚನೆ ಕಥೆಯಲ್ಲಿ ಸುಖೇಂದು ಮೃತ್ಯುವನ್ನು ನಿಷ್ಕ್ರಿಯ ಜಡತ್ವ ಎಂದು ಪರಿಗಣಿಸಿದ್ದಾನೆ.

ಜೀವನ ತನ್ನ ದಾರಿಯನ್ನು ಸೃಷ್ಟಿಸಬಲ್ಲದು. ಮೃತ್ಯು ದಾರಿಯನ್ನು ಸೃಷ್ಟಿಸಲಾರದು. ನೇರವಾಗಿ ಹೇಳಬೇಕೆಂದರೆ ವಿನೋದಿನಿ ಮೃತ್ಯುವನ್ನು ಅಪ್ಪಿ ಶಾಂತಿಯನ್ನು ಗಳಿಸಿದ್ದಳು. ಆದರೆ ಸುಖೇಂದು ಜೀವದಿಂದಿದ್ದು ಸಜೀವವಾಗುಳಿದು ಶಾಂತಿ ಗಳಿಸಲು ಇಚ್ಛಿಸಿದ್ದ.

ಸುಖೇಂದು 'ದುಃಖ ವಿಮೋಚನೆ' ಕಥೆಯ ನಾಯಕ. ಆತನ ವಯಸ್ಸನ್ನು ನಿಜವಯಸ್ಸಿಗಿಂತ ಹೆಚ್ಚಾಗಿ ತೋರಿಸಿದೆ. ಕಥೆಯ ಮೂಲದ್ರವ ಪ್ರೇಮವೆಂದೇ ತೋರುತ್ತದೆ. ಆದರೆ ಮೂಲ ವಿಷಯ, ಜೀವನ ಮತ್ತು ಮೃತ್ಯುವಿನ ಮಧ್ಯದ ದ್ವಂದ್ವ. ಸುಖೇಂದು ಒಂದು ವಿಚಿತ್ರ ರೀತಿಯ ದ್ವಂದ್ವದಲ್ಲಿ ದುಃಖಿತನಾಗಿ ಜೀವನ ಕಳೆಯುತ್ತಿರುವುದನ್ನು ಕಥೆಯ ಪ್ರಾರಂಭದಲ್ಲೇ ಕಾಣುತ್ತೇವೆ. ಅವನು ರೇಣು ಎಂಬ ಹೆಸರಿನ ಹುಡುಗಿಯನ್ನು ಪ್ರೀತಿಸುತ್ತಿದ್ದ. ಆದರೆ ತಾಯಿಯ ನೆನಪು ಆತನನ್ನು ಸಂಪೂರ್ಣವಾಗಿ ಅವಳಿಗೆ ಅರ್ಪಿಸಿಕೊಳ್ಳಲು ಅಡ್ಡಿಬರುತ್ತಿತ್ತು. ಅವನ ಮನಸ್ಸಿನಲ್ಲಿ ಅನ್ಯಾಯದ ಭಯವಿತ್ತು. ವಿವೇಕದ ಪಶ್ಚಾತ್ತಾಪ ಅದನ್ನು ಅನವರತ ಕೆದರುತ್ತಿದೆ. ತಾಯಿಯ ಶಾಪದಡಿಯಲ್ಲೇ ತಾನು ಜೀವಿಸುತ್ತಿರುವಂತೆ ಭಾಸವಾಗುತ್ತಿತ್ತು. ಆದರೂ ಇಷ್ಟುಮಾತ್ರ ಚೆನ್ನಾಗಿ ಅರಿವಿದೆ. ತಾಯಿಯ ಪ್ರತಿ ತಾನು ಸರಿಯಾಗಿ ಕರ್ತವ್ಯ ನಿರ್ವಹಿಸಲಿಲ್ಲ.

ಮನದ ಈ ದ್ವಂದ್ವದಿಂದ ಸುಖೇಂದುವಿಗೆ ಮುಕ್ತಿಯೇ ಇಲ್ಲವೆಂದು ಈ ಬಗ್ಗೆ ಆಸೆಯನ್ನು ನಾವು ಬಿಟ್ಟಾಗ ಜರುಗಿದ ಒಂದು ಘಟನೆ ಈ ದ್ವಂದ್ವವನ್ನೆಲ್ಲಾ ಅಳಿಸಿಹಾಕಿಬಿಟ್ಟಿತು. ಕಥೆಯ ಕೊನೆಯಲ್ಲಿನ ಆ ಲೌಕಿಕ ಘಟನೆಯ ಉಲ್ಲೇಖ ನಾನು ಇದಕ್ಕಾಗಿಯೇ ಮಾಡುತ್ತಿದ್ದೇನೆ. ಮಾಗಿಯ ಕಾಲದ ಪ್ರಾರಂಭದ ದಿನಗಳು ಒಂದು ಸಂಜೆ ರೇಣು ಹಾಗೂ ಸುಖೇಂದು ರೇಣುವಿನ ಮಹಡಿಯ ಮೇಲೆ ಕುಳಿತು ಹರಟೆ ಹೊಡೆಯುತ್ತಿದ್ದರು. ಕಲ್ಕತ್ತೆಯ ಗಲ್ಲಿಗಳು, ಹೊಗೆ, ಇಬ್ಬನಿ, ಗ್ಯಾಸ್ ದೀಪದ ಬತ್ತಿ ಮತ್ತು ಕೊಂಚ ಬೆಳದಿಂಗಳು ಇವುಗಳ ಮಧ್ಯೆಯೇ ಹರಟೆ ಸುತ್ತಾಡುತ್ತಿತ್ತು. ಈ ಹರಟೆಯ ಮಧ್ಯದಲ್ಲೇ ಇದ್ದಕ್ಕಿದ್ದಂತೆಯೇ ರೇಣು ಎದ್ದು ನಿಂತಳು, ಸುಖೇಂದು ಇನ್ನು ಕುಳಿತೇ ಇದ್ದ. ಇದ್ದಕ್ಕಿದ್ದಂತೆಯೇ ತನಗೆ ತನ್ನ ಜೊತೆಯಲ್ಲಿ ಇನ್ನು ಯಾರೋ ಕುಳಿತಿದ್ದಾರೆ ಎನಿಸಿತು. ಹೊಗೆ ಮಂಜುಗಳ ಮಧ್ಯೆ ಅಸ್ಪಷ್ಟ ಬೆಳದಿಂಗಳಲ್ಲಿ ಆ ಮೂರ್ತಿಯನ್ನು ಗುರುತಿಸದಾದ. ಮೂರ್ತಿ ಒಂದು ಬಿಳಿಯ ನೆರಳಾಗಿ ಕಾಣುತ್ತಿತ್ತು. ಹೆಚ್ಚು ಗಮನವಿಟ್ಟಾಗಲೇ ಅರಿವಾದದ್ದು, ಆ ಮೂರ್ತಿ ತನ್ನ ತಾಯಿಯದೆಂದು. ಮೊದಲು ಗಾಬರಿಯಾಯಿತು. ಅನಂತರ ತಾಯಿ ಏತಕ್ಕೆ ಬಂದಿದ್ದಾಳೆ ಎಂಬುದು ಅರ್ಥವಾಯಿತು. ತನ್ನ ಸ್ವರ್ಗೀಯ ತಾಯಿಯ ಬಗ್ಗೆ ಆತನಿಗೆ ಕರುಣೆ ಉಕ್ಕಿಬಂತು.

ತಾಯಿಗಾಗಿ ಮನಸ್ಸು ದುಃಖಿಸಿತು. ಒಂದು ರೀತಿಯ ವಿಚಿತ್ರ ಅನುಭವ ಆತನ ಮನಸ್ಸಿನಲ್ಲಿ ತುಂಬುತ್ತಿತ್ತು. ಆತ ತಾಯಿಗೆ ಏನೋ ಹೇಳುವವನಿದ್ದ. ಅಷ್ಟರಲ್ಲಿ ಅವಳ ಮೂಗಿನಿಂದ ಒಂದು ವಾಸನೆ ಹೊಮ್ಮಿತು. ಅದು ಯಾವುದು ವಾಸನೆ ? ಆತ ಚಂಚಲನಾಗಿ ತಲೆ ತಗ್ಗಿಸಿದ. ತನ್ನ ಜೇಬಿನಿಂದ ಹೂವಿನ ಸುವಾಸನೆ ಬಂತು. ಆತನಿಗೆ ಜ್ಞಾಪಕ ಬಂತು. ಕೆಲನಿಮಿಷಗಳಷ್ಟೇ ಹಿಂದೆ ರೇಣು ಆತನ ಜೇಬಿನಲ್ಲಿ ಒಂದು ಗುಲಾಬಿಯನ್ನು ಇರಿಸಿದ್ದಳು. ಆ ಹೂವಿನ ಸುಗಂಧ ಎಷ್ಟು ಜೀವಂತವಾಗಿತ್ತು! ಮನೋಹರವಾಗಿತ್ತು! ಸ್ಪರ್ಶಯೋಗ್ಯವಾಗಿತ್ತು! ರೇಣುವಿನ ಶರೀರ, ಅವಳ ಮನಸ್ಸು, ಅವಳ ನೀತಿ ಎಲ್ಲವೂ ಒಂದು ಕ್ಷಣದಲ್ಲಿ ಒಂದು ದೊಡ್ಡ ಅಲೆಯಂತೆ ಸುಖೇಂದುವನ್ನು ತೇಲಿಸಿತ್ತು. ಇದೇ ಅವಸ್ಥೆಯಲ್ಲೇ ಸುಖೇಂದು ತನ್ನ ತಾಯಿಗೆ ಹೇಳಲು ಶಕ್ತನಾದ "ಅಮ್ಮಾ ಪುನಃ ನೀನು ಬರ್ಬೇಡಾ."

ವಸುಧಾ ಸ್ವತಃ ಯಾವ ದುಃಖವನ್ನು ಅನುಭವಿಸಿದ್ದಳೋ ಈತ ಅದರಿಂದ ಸುಖೇಂದುವನ್ನು ಮುಕ್ತಗೊಳಿಸಲು ಶಕ್ತನಾಗಿದ್ದ. ನಿರೂಪಿನ ಬಗ್ಗೆಯೇ ತನ್ನ ಮನಸ್ಸು ತುಂಬಿದ್ದುದರಿಂದ ಸತ್ತ ತಾಯಿಯ ಬಗ್ಗೆ ಈತನಿಗೆ ಆಳವಾದ ದುಃಖ ಜನ್ಮ ತಾಳಿತ್ತು. ಬಹಳ ದಿನಗಳ ನಂತರ ದುಃಖದಿಂದ ವಿಮೋಚನೆ ಪಡೆಯಲು ಸಾಧ್ಯವಾಗಿತ್ತು. ನಿರು ಜೀವಿಸಿದ್ದಳು. ಅದಕ್ಕೆ ಅವಳ ಆಕರ್ಷಣೆ ಅಧಿಕವಾಗಿತ್ತು. ನಿರು ಜೀವಿಸಿದ್ದಳು, ಅದಕ್ಕೆ ಅವಳ ಅವಶ್ಯಕತೆ ಇವನಿಗಿತ್ತು. ಅಂದರೆ ಪ್ರೇಮವೇ ಜೀವನ.

'ದುಃಖ ವಿಮೋಚನೆ' ನಿಜವಾಗಿ ಪ್ರೇಮಕಥೆಯಲ್ಲ. ಪ್ರೇಮ ಈ ಕಥೆಯ ಮುಖ್ಯ ಅಂಶವೂ ಅಲ್ಲ. ಎಲ್ಲರಿಗೂ ಜೀವನದಲ್ಲಿ ಆಸಕ್ತಿ ಇದ್ದೇ ಇರುತ್ತದೆ. ಈ ಆಸಕ್ತಿ ಇಲ್ಲದೆ ಯಾರೂ ಜೀವಿಸಿರಲಾರರು. ವಸುಧಾ ತನ್ನ ಈ ಕಥೆಯಲ್ಲಿ ಇದನ್ನೇ ಹೇಳಬಯಸಿದ್ದಾನೆ.

ವೈಯಕ್ತಿಕವಾಗಿ ಹೇಳುವುದಾದರೆ ವಸುಧಾನ ಈ ಕಥೆ ಅವನಿಗೆ ಪ್ರಾಮಾಣಿಕವಾಗೇ ಕಂಡಿದೆ. ಏತಕ್ಕೆಂದರೆ ಸುಖೇಂದು ಇದರಲ್ಲಿ ಒಂದು ಪಾತ್ರ ಮಾತ್ರ.

ಈ ಪುಸ್ತಕದ ಮೂರನೆ ಕಥೆ 'ನರಕದ ಯಾತ್ರೆ', ನಾನು ಮೊದಲೇ ಹೇಳಿದ್ದೆ. ಈಗ ಪುನಃ ಹೇಳುತ್ತಿದ್ದೇನೆ. ಮೊದಲ ಬಾರಿಗೆ ಈ ಪುಸ್ತಕ ಪ್ರಕಟವಾಗಿದ್ದುದೂ ಇದೇ ಹೆಸರಿನಿಂದಲೇ. ಈ ಸಾರಿಯೂ ಈ ಪುಸ್ತಕಕ್ಕೂ ಅದೇ ಹೆಸರನ್ನು ಇಡಲಾಗಿದೆ. 'ದುಃಖ ವಿಮೋಚನೆ' ಕಥೆ ಬರೆದ ಸುಮಾರು ಒಂದು ವರ್ಷದ ನಂತರ ಈ ಕಥೆ ಬರೆದಿದ್ದ. ಈ ಕಥೆಯನ್ನು ಪ್ರೇಮಕಥೆಯೆಂದು ಕರೆಯಬಹುದು. ಆದರೆ ಈ ಪ್ರೇಮ ಕಥೆಯ ಶೀರ್ಷಿಕೆ 'ನರಕದ ಯಾತ್ರೆ' ಕಿವಿಗೆ ಕಠೋರವೆನಿಸುತ್ತದೆ.

'ನರಕದ ಯಾತ್ರೆ'ಯಲ್ಲಿ ಒಬ್ಬ ಯುವಕನ ಪ್ರೀತಿಯ ದಾಹ ಆತನ ಪ್ರೇಮ ಹಾಗೂ ಅದರ ವ್ಯರ್ಥತೆಯ ಮಾತು ಹೇಳಿದೆ. ಈ ಕಥೆಯ ನಾಯಕ ಸ್ವಯಂ ವಸುಧಾ. ಆದರೆ ಬರೆಯುವಾಗ ನಾಯಕನ ಹೆಸರನ್ನು ಪರಿಮಲ್ ಎಂದು ಹೇಳಿದೆ. ಇಲ್ಲಿಯ ನಾಯಕಿ ನಿಜವಾಗಿ ನಿರುಪಮಾಳೇ ಆಗಿದ್ದಳು. ಕಲ್ಕತ್ತಾದ ಸದಾನಂದ

ಚೌದರಿ ಗಲ್ಲಿಯ ಯಾವ ಮನೆಯಲ್ಲಿ ನಿರುಪಮಾ ವಾಸಮಾಡಿದ್ದಳೋ ಆ ಮನೆಯ ಕೆಳ ಮಹಡಿಯಲ್ಲಿ ಪರಿಮಲನ ಒಬ್ಬ ಸ್ನೇಹಿತ ವಾಸವಾಗಿದ್ದ. ಪರಿಮಲ ಆಗಾಗ್ಯೆ ಈ ಸ್ನೇಹಿತನ ಮನೆಗೆ ಬಂದು ಹೋಗುತ್ತಿದ್ದ. ಈ ಸೂತ್ರದಿಂದಲೇ ನಿರುಪಮ ಜೊತೆ ಈತನ ಪರಿಚಯುವಾಯಿತು. ಈ ಪರಿಚಯ ಬಲಿತು ಗಾಢವಾಗಬೇಕಾದರೆ ಸ್ವಲ್ಪ ಕಾಲ ತೆಗೆದುಕೊಂಡಿತು. ಆದರೆ ಒಂದು ಮಾತು ಸ್ಪಷ್ಟ. ಪರಿಮಲ ಮೊದಲ ನೋಟದಲ್ಲೇ ನಿರುಪಮಾಳತ್ತ ಆಕರ್ಷಿತಗೊಂಡಿದ್ದ. ಪ್ರೀತಿಯನ್ನು ದೇವಿ ನೀಡಿದ ಶಕ್ತಿ ಎಂದು ನಂಬುವ ಜನರ ಗುಂಪಿಗೆ ಸೇರಿದ ಯುವಕನಾಗಿದ್ದ. ಪ್ರೇಮದಲ್ಲಿ ಮನುಷ್ಯನ ಹೃದಯ ಪಲ್ಲದಿಸುತ್ತದೆ ಎಂಬುದು ಆತನ ನಂಬಿಕೆ. ಅಂಜು ಅಂಜುವ, ನಾಚಿಕೆ ಸ್ವಭಾವದ, ಭಾವುಕ ಮನುಷ್ಯ ಅವನು. ಸಾಧಾರಣ ಸ್ಥಿತಿಯ ಹುಡುಗಿ ನಿರುಪಮಾಳಿಗೆ ಈತ ಇಷ್ಟವಾಗಿದುದಕ್ಕೆ ಹಲವಾರು ಕಾರಣಗಳಿದ್ದುವು. ನಿರುಪಮಾ ಸ್ವಭಾವತಃ ಮಾಮೂಲಿ ಗುಂಪಿಗೆ ಸೇರಿದ ಹುಡುಗಿಯಾಗಿದ್ದಳು. ಕಥೆಯ ಪ್ರಾರಂಭದ ಭಾಗದಲ್ಲಿ ಪರಿಮಲ ಹಾಗೂ ನಿರುಪಮಾರವರ ಪ್ರೇಮ ಹೇಗೆ ನಿಧಾನವಾಗಿ ಘನಿಷ್ಟಗೊಂಡಿತ್ತು ಎಂಬುದನ್ನು ಹೇಳಲಾಗಿದೆ. ಎರಡನೆ ಭಾಗದಲ್ಲಿ ಅವರ ಪ್ರೇಮದ ಬಗ್ಗೆ ಹೇಳಲಾಗಿದೆ. ಈ ಪ್ರೇಮ ಪರಿಮಲನ ದೃಷ್ಟಿಯಲ್ಲಿ ಬಹಳ ಗಂಭೀರವಾದುದು; ಹಾಗೂ ಆಂತರಿಕವಾದುದು ಎಂದು ಹೇಳಲು ಯಾವ ತೊಂದರೆಯೂ ಇರಲಿಲ್ಲ. ಈ ಪ್ರೇಮವೇ ತನ್ನ ಅಸ್ತಿತ್ವವನ್ನು ಸಾರ್ಥಕಗೊಳಿಸಿದೆ. ತನ್ನ ಜೀವನಕ್ಕೆ ಸ್ಪಷ್ಟ ದಾರಿ ತೋರಿಸಿದೆ ಎಂದೇ ಪರಿಮಲ ಯೋಚಿಸುತ್ತಿದ್ದ. ನಿರುಪಮಾ ಹೀಗೆಲ್ಲಾ ಯೋಚಿಸುತ್ತಿರಲಿಲ್ಲ, ಯೋಚಿಸಲು ಕಾರಣವಿದೆ ಎಂದೂ ಆಕೆ ತಿಳಿದಿರಲಿಲ್ಲ. ಬಹುಶಃ ಆಕೆಗೆ ಯೋಚಿಸುವುದೇ ಗೊತ್ತಿರಲಿಲ್ಲ. ಎಲ್ಲಾ ಯುವತಿಯರಂತೆ ಪ್ರೇಮವೆಂದರೆ ಈಕೆಯೂ ರೋಮಾಂಚನಗೊಳ್ಳುತ್ತಿದ್ದಳು.

ಒಂದು ದಿನ ಈ ಪ್ರೇಮ ಭಂಗಗೊಂಡಿತು. ಏತಕ್ಕೆ ಇದು ಭಗ್ನಗೊಂಡಿತು ? ಇದನ್ನು ಅರಿಯಬೇಕು. ನಿರುಪಮಾಳ ಮನೆಯ ಕೆಳಗಿದ್ದ ಬಾಡಿಗೆದಾರ 'ಮನ್ಮಥ' ಪರಿಮಲನ ಸ್ನೇಹಿತ, ಆತನ ಬಾಲಕಿತನ ಮತ್ತು ನೀಚತನದಿಂದಲೇ ಅವರ ಪ್ರೇಮ ಭಂಗಗೊಂಡಿತು ಎಂದೇ ಆಗಾಗ್ಯೆ ಅನ್ನಿಸುತ್ತಿತ್ತು. ಆದರೆ ಒಮ್ಮೆ ಅನಿಸುತ್ತದೆ, ಇದಕ್ಕೆ ಮೂಲಕಾರಣ ಪರಿಮಲ ಒಬ್ಬನೇ ಎಂದು. ಇದೆಲ್ಲದರ ದೋಷವನ್ನು ನಿರುಪಮಾಳ ಹಣೆಗೆ ಕಟ್ಟಬೇಕೆಂದು ಇನ್ನೊಮ್ಮೆ ಅನಿಸುತ್ತದೆ. ಮನ್ಮಥ, ಪರಿಮಲನ ಪ್ರತಿದ್ವಂದ್ವಿ ರೂಪದಲ್ಲಿ ನಿರುಪಮಾಳನ್ನು ಹೊಂದಲು ಪ್ರಯತ್ನಿಸಿದ. ಏತಕ್ಕೆಂದರೆ ಆತ ಅತಿ ಚತುರನಾಗಿದ್ದ. ಆದರೆ ಎದುರಿಗೆ ನಿಂತು ಎಂದೂ ಪ್ರತಿಸ್ಪರ್ಧಿಯಂತೆ ಮಾತಾಡಿರಲಿಲ್ಲ. ಈ ದೃಷ್ಟಿಯಿಂದ ಮನ್ಮಥನೇ ಪ್ರೇಮಭಂಗಕ್ಕೆ ಮೂಲ ಕಾರಣ ಎಂದು ಒಪ್ಪಬಹುದು. ಆತ ಸಾಂಸಾರಿಕ ರಸ್ತೆಯಲ್ಲಿ ಸೀದಾ ನಡೆದು ವಂಚಿಸಿದ. ಆತ ನಿರುಪಮಾಳ ತಾಯನ್ನು ಪೂರ್ಣವಾಗಿ ತನ್ನ ವಶಪಡಿಸಿಕೊಂಡದ್ದಲ್ಲದೆ ಭಾಗಶಃ ನಿರುಪಮಳನ್ನೂ ವಶಪಡಿಸಿಕೊಂಡಿದ್ದ. ನಿರುಪಮಳ ತಾಯಿ ಸಾಂಸಾರಿಕ ಮಾತುಗಳನ್ನು ಮಾತ್ರ ಅರ್ಥಮಾಡಿಕೊಳ್ಳುತ್ತಿದ್ದಳು. ಹುಡುಗಿಯ ಸುಖಶಾಂತಿಯೇ ಅವಳಿಗೆ ಮುಖ್ಯವಾಗಿತ್ತು. ಅದಕ್ಕೆ ಈ ಬಗ್ಗೆ ಮಾತ್ರ ಯೋಚಿಸುತ್ತಿದ್ದಳು. ಪ್ರೇಮ

ಪ್ರೀತಿಯ ಮಾತುಗಳು ಆಕೆಗೆ ಅರ್ಥವೇ ಆಗುತ್ತಿರಲಿಲ್ಲ. ನಿರುಪಮಾ ಸಹ ತಪ್ಪುಮಾಡಿಬಿಟ್ಟಳು. ಮನ್ಮಥನ ಚತುರತೆ ಹಾಗೂ ಸದೃಢ ಪೌರುಷತ್ವ ಆಕೆಯನ್ನು ಹೆಚ್ಚು ಮೋಹಗೊಳಿಸಿದುವು. ಇದೇ ಅಲ್ಲದೆ ಪರಿಮಲನನ್ನು ಒಪ್ಪಲು ತಾಯಿಯೂ ಅಡ್ಡಿಯಾಗಿದ್ದಳು.

ನಿರುಪಮಾಳಿಗೆ ಬಾಲ್ಯದಿಂದಲೂ ಅಸ್ವಸ್ಥತೆ ಕಂಡರೆ ಒಂದು ತರಹ ಭಯ, ಒಂದು ತರಹ ಜಿಗುಪ್ಸೆ. ಪರಿಮಲನನ್ನೂ ಆಕೆ ಅಸ್ವಸ್ಥನೆಂದೇ ನಂಬಿದ್ದಳು. ಆಕೆ ಪರಿಮಲನನ್ನು ಪ್ರೇಮಿಯ ದೃಷ್ಟಿಯಿಂದ ನೋಡಲು ಹಲವು ಬಾರಿ ಪ್ರಯತ್ನಿಸಿದಳು. ಆದರೆ ಪ್ರೇಮವನ್ನು ವ್ಯವಹಾರದ ಒಂದು ವಸ್ತುವನ್ನಾಗಿ ಪರಿಗಣಿಸಿದರೆ ಶಾಂತಿ ಅಥವಾ ಸುಖದ ರೂಪದಲ್ಲಿ ನಿರುಪಮಾಳಿಗೆ ಏನು ಸಿಗುತ್ತದೆ ? ಎಂಬುದನ್ನು ಆಕೆ ಯೋಚಿಸದಾಗಿದ್ದಳು. ಅವಳಿಗೆ ಅನ್ನಿಸಿತ್ತು, ಪರಿಮಲ ತನಗೆ ಮನೆ ಮಠದ ಸುಖವನ್ನು ನೀಡಲಾರ ಎಂದು.

ಪರಿಮಲನ ಅಪರಾಧಗಳ ಬಗ್ಗೆ ಯೋಚಿಸತೊಡಗಿದರೆ ಆತ ಸಾಕಷ್ಟು ದೂರ ಅನಾಯಾಸವಾಗಿ ನಡೆದ ಮೇಲೆ ಇದ್ದಕ್ಕಿದ್ದಂತೆಯೇ ನಾಚಿ ನಿಂತುಬಿಟ್ಟಿದ್ದ. ಏಕೆ ನಿಂತುಬಿಟ್ಟ ? ಇದನ್ನು ತಮಗೆ ಹೇಳಲೇಬೇಕು. ಬಹುಶಃ ಆತ ಪ್ರೇಮದಲ್ಲಿ ಏನನ್ನು ಗಳಿಸಬಹುದಿತ್ತು ಅದನ್ನು ಗಳಿಸಿದ್ದಿರಬಹುದು, ಆನಂತರ ಆತ ಪ್ರೇಮದ ಇನ್ನೊಂದು ಮುಖ ವಿಷಾದ ಹಾಗೂ ಅಸಂಪೂರ್ಣತೆಯ ಬಗ್ಗೆ ಆಕರ್ಷಣೆ ಬೆಳೆಸಿಕೊಂಡಿರಬಹುದು. ಪ್ರೇಮದ ಕ್ಷಣಿಕ ಸಂಬಂಧದ ಬಗ್ಗೆ ಯೋಚಿಸುತ್ತಾ, ಪರಿಮಲ್ ಪ್ರೇಮದಲ್ಲಿ ಸ್ಥಿರತೆ ಇಲ್ಲ, ಈಗ ಇದ್ದಂತೆ ಮುಂದೆ ಯಾವಾಗಲೂ ಇರುವುದಿಲ್ಲ, ಎಂಬುದನ್ನು ಮನಗಂಡಿರಬೇಕು. ಪ್ರೇಮದಲ್ಲಿರುವ ಅಪೂರ್ಣತೆ, ದುಃಖ ಇತರ ಎಲ್ಲಾ ವಸ್ತುಗಳಲ್ಲೂ ಇವೆ. ಎಲ್ಲಾ ಸುಂದರ ವಸ್ತುಗಳಲ್ಲೂ ಪರಿವರ್ತನ ಹಾಗೂ ನಾಶ ಇದ್ದೇ ಇರುತ್ತದೆ. ಪರಿಮಲನಿಗೆ ನಾಶವಿಲ್ಲದ ಪ್ರೇಮ, ಬದಲಾಗದ ಪ್ರೇಮದ ಆಕಾಂಕ್ಷೆ ಇತ್ತು. ಆದರೆ ಇವು ಈ ಪ್ರಪಂಚದಲ್ಲಿ ದುರ್ಲಭ.

ನಿರುಪಮಾ ಒಬ್ಬ ಸಾಧಾರಣ ಹುಡುಗಿಯಾಗಿದ್ದಳು. ಅದೇ ಅವಳ ಅಪರಾಧ. ಕೇವಲ ಈ ಸಾಧಾರಣ ದೃಷ್ಟಿಕೋನದಿಂದಲೇ ಅವಳು ಪ್ರೇಮ ಮತ್ತು ಗೃಹಸ್ಥ ಜೀವನದ ಸೌಖ್ಯವನ್ನು ಕಾಣಲು ಬಯಸಿದಳು. ಪರಿಮಲನನ್ನು ಸ್ವೀಕರಿಸಲು ಅವಳ ಮನಸ್ಸು ದ್ವಂದ್ವದಲ್ಲಿ ತೊಳಲಾಡಿತು. ಈ ದ್ವಂದ್ವ ಮನ್ಮಥನ ಕಾರಣದಿಂದ ಬಂದುದು ಒಂದು ಅಂಶವಾದರೆ ಸಾಧಾರಣ ಇಚ್ಛೆಯಿಂದ ಬಂದುದು ಇನ್ನೊಂದಂಶವಾಗಿತ್ತು.

'ನರಕದ ಯಾತ್ರೆ' ವಸುಧಾನ ತನ್ನದೇ ಆದ ಕಥೆ. ನಿರುವಿನ ಮೇಲಿನ ಪ್ರೇಮ ಆತನಿಗೆ ಕೊನೆಯವರೆಗೂ ಶಾಂತಿ ನೀಡಲಿಲ್ಲ. ನಿಜವಾಗಿ ಆತನ ಸ್ನೇಹಿತರೇ ನಿರು ಒಡನೆ ಮದುವೆ ಮಾಡಿಕೊಂಡು ಬಿಟ್ಟಿದ್ದ. ಪ್ರೇಮದ ಈ ವ್ಯರ್ಥತೆಯನ್ನು ನಾವು ಹೇಗೆ ಸ್ವೀಕರಿಸುತ್ತೇವೆಯೋ ಹಾಗೆ ವಸುಧಾ ಮಾಡಲಿಲ್ಲ. ಆತ ಹೇಳುತ್ತಿದ್ದ, ನಮ್ಮ ಪ್ರೇಮ ಪ್ರಪಂಚ ಬಹಳ ಚಿಕ್ಕದು, ನಮ್ಮ ಪ್ರೇಮ ಕೇವಲ ಒಂದು ವ್ಯಕ್ತಿಯನ್ನು ಅವಲಂಬಿಸಿರುತ್ತದೆ. ಆದ್ದರಿಂದಲೇ ಅದನ್ನು ತ್ಯಜಿಸಿದಾಗ ಮನಸ್ಸು

ದುಃಖಿತಗೊಳ್ಳುತ್ತದೆ; ಚಡಪಡಿಸುತ್ತದೆ, ಉದ್ವಿಗ್ನಗೊಳ್ಳುತ್ತದೆ. ಆದರೆ ಹೀಗೇಕಾಗುತ್ತದೆ ?

ಏಕೆ ? ಈ ಭೂತ ವಸುಧಾನ ಭುಜ ಬಿಟ್ಟು ಇಳಿಯಲೇ ಇಲ್ಲ. ಇದು ಹೇಳಬಾರದು, ಆದರೆ ವಸುಧಾ ನಮ್ಮ ಜನಗಳ ಚಿಕ್ಕ, ಪುಟ್ಟ, ಪ್ರೇಮ ವ್ಯವಹಾರಗಳನ್ನು ಎಂದೂ ಒಪ್ಪುತ್ತಿರಲಿಲ್ಲ. ಇಂತಹ ಪ್ರೇಮವನ್ನು ಆತ ಅಸ್ವೀಕಾರ ಮಾಡಿಬಿಟ್ಟಿದ್ದ. ನಮ್ಮ ಈ ಪ್ರಪಂಚದಲ್ಲಿ ಸಹಸ್ರಾರು ಬಗೆಯ ದುಃಖ, ತಿರಸ್ಕಾರ, ಧೂರ್ತತೆ ಅಲ್ಲದೆ ಪಡೆಯುವ ಬಯಕೆ ಮುಂತಾದವುಗಳಿಂದ ನಮ್ಮ ಆತ್ಮದ ದೀನತೆ ಹೆಚ್ಚಿ ಇನ್ನಷ್ಟು ದೀನರಾಗುವಂತೆ ಮಾಡಿಬಿಟ್ಟಿದೆ. ನಮ್ಮ ಈ ದೈನ್ಯತೆಯಿಂದಲೇ ನಾವು ನರಕವಾಸಿಗಳಾಗುತ್ತಿದ್ದೇವೆ; ಎಂಬುದು ಆತನ ನಿಲುವು. ಈ ನರಕವನ್ನು ದಾಟುವ ಇಚ್ಛೆಯಿಂದಲೇ ಆತ 'ನರಕದ ಯಾತ್ರೆ' ಯನ್ನು ರಚಿಸಿದ್ದ. ಈ ವೈಯಕ್ತಿಕ ಪ್ರೇಮ ಮತ್ತು ಅದರ ಪ್ರಾಪ್ತಿಯ ವಿಷಯದಿಂದಲೇ ಬಹುಶಃ ಆತ ದೂರ ಹೋಗಲು ಪ್ರಯತ್ನಿಸಿರಬಹುದು.

ವಸುಧಾ ಕಲ್ಕತ್ತಾ ಬಿಟ್ಟ ವರುಷವೇ ನನ್ನ ಮದುವೆ ಆಯಿತು. ನನ್ನ ಪತ್ನಿ ವಸುಧಾನ ಕತೆಗಳನ್ನು ಇಷ್ಟಪಡುತ್ತಾಳೋ ಇಲ್ಲವೋ ತಿಳಿಯದು. ಆದರೆ ಆಕೆಗೆ ವಸುಧಾ ಗೊತ್ತಿತ್ತು. ನನ್ನ ಮದುವೆ ಸಂದರ್ಭದಲ್ಲಿ ನಮ್ಮೊಡನಿರಲು ವಸುಧಾಗೆ ತಿಳಿಸಿದ್ದೆ. ಆದರೆ ಆತ ಇರಲಿಲ್ಲ, ಇದಕ್ಕೆ ಒಂದೆರಡು ತಿಂಗಳಷ್ಟು ಹಿಂದೆ ನಾವು ಆತನ ಪುಸ್ತಕ ಮುದ್ರಿಸಿದ್ದೆವು.

ವಸುಧಾ ಜೊತೆ ನಮ್ಮ ಭೇಟಿಯಾಗಲೀ ಅಥವಾ ಇನ್ನಾವುದೇ ವಿಧದ ವ್ಯವಹಾರ ಇರಲಿಲ್ಲ. ವರ್ಷಕ್ಕೊಂದೋ, ಎರಡೋ ಕಾಗದಗಳು ಆತನಿಂದ ಬರುತ್ತಿದ್ದವು. ಭುವನ್‌ಗೂ ಆಗಿಂದ್ದಾಗ್ಗೆ ಒಂದೋ ಅರ್ಧವೋ ಕಾಗದ ಬರುತ್ತಿತ್ತು. ವಸುಧಾನ ಪತ್ರದಿಂದ ನಮಗೆ ಅರ್ಥವಾಯಿತು. ಆತ ಈಗ ಯಾರಿಗೂ ಬೇಡದವನಾಗಿದ್ದಾನೆ, ಆನಂತರ ಅರ್ಥವಾಯಿತು. ಆತ ಆಸ್ತಿಕನೂ ಆಗಿ ಬಿಟ್ಟಿದ್ದಾನೆ. ಇನ್ನೂ ಕೊನೆಯಲ್ಲಿ ತಿಳಿಯಿತು, ಆತ ಈಶ್ವರನನ್ನು ಬಿಟ್ಟು ಮಾನವ ಸೇವಾ ಕಾರ್ಯವನ್ನು ಕೈಗೊಂಡಿದ್ದಾನೆ ಎಂದು.

ವಸುಧಾನ ಕೊನೆಯ ಎರಡು ಕಥೆಗಳ ಬಗ್ಗೆ ನನ್ನದೇನೂ ಹೇಳಿಕೆ ಇಲ್ಲ. ನಾನು ನರಕವಾಸಿ, ನರಕದಿಂದ ಹೊರ ಬಂದು ವಸುಧಾ ಯಾವ ರಸ್ತೆಯಲ್ಲಿ ತಿರುಗಲು ಪ್ರಯತ್ನಿಸಿದ್ದನೋ ಅದನ್ನು ನಾನು ಹುಡುಕದಾಗಿದ್ದೆ. ಆತನ ನಾಲ್ಕನೆ ಕಥೆ 'ಈಶ್ವರ್' ಮತ್ತು ಐದನೆಯ ಕೊನೆಯ ಕಥೆ 'ಆಶ್ರಯ' ಬಹುಶಃ ಆತನ ಜೀವನದ ಅಂತಿಮ ಭಾಗದ ಚರಿತ್ರೆಯನ್ನು ಹೇಳುತ್ತಿದ್ದಿರಬಹುದು. ಇವೇ ಈ ಎರಡು ಕಥೆಗಳನ್ನು ಭುವನ್ ಬನಾರಸ್ಸಿನಿಂದ ಹಿಂತಿರುಗುವಾಗ ಆ ಮುದುಕರ ಸಂಗ್ರಹದಿಂದ ತಂದಿದ್ದ. ಈ ಎರಡು ಕೃತಿಗಳ ಹಸ್ತಪ್ರತಿಯನ್ನು ನೋಡಿದಾಗ ಇವು ಅಪೂರ್ಣವೆಂದು ಅರ್ಥವಾಗುತ್ತದೆ. ಇವುಗಳನ್ನು ಓದಿದ ಮೇಲೆ ಓದುಗರಿಗೂ ಇದು ಅನುಭವವಾಗುತ್ತದೆ.

'ಈಶ್ವರ'ಕಥೆಯ ಶೈಲಿ ಸ್ವಾಭಾವಿಕವಾದುದಲ್ಲ, ಇದನ್ನು ಪ್ರತಿಮಾರೂಪಕ ಕಥೆ

ಎಂದು ಕರೆಯುಬಹುದು. ಇದನ್ನು ಓದಿದಾಗ ಅಸಾಧಾರಣ ರೀತಿಯು ಸರಳತನದ ಆಭ್ಯಾಸ ಕಾಣುತ್ತದೆ. ಆದರೆ ಅಂತ್ಯದ ತನಕ ಓದುವಾಗ ಮನಸ್ಸಿನಲ್ಲಿ ಒಂದು ತರಹ ಅಭಾವದ ಅನುಭವವಾಗುತ್ತದೆ. ಕಥೆಯು ಪ್ರಾರಂಭದಲ್ಲೆ ಅಸ್ವಾಭಾವಿಕತೆಯು ಹೊಳಪು ಕಾಣಿಸುತ್ತದೆ. ಯಾವನೊ ಒಬ್ಬ ದಾರಿಹೋಕ ಒಂದು ರಾತ್ರಿಯಲ್ಲಿ ಒಂದು ಮಂದಿರದಲ್ಲಿ ಆಶ್ರಯ ಪಡೆಯುತ್ತಾನೆ. ಆ ಕತ್ತಲೆಯಲ್ಲಿ ಅಲ್ಲಿ ಅವನಿಗೆ ಒಬ್ಬ ಸನ್ಯಾಸಿಯು ಭೇಟಿ ಆಗುತ್ತದೆ. ಮಾತನಾಡುತ್ತಿದ್ದಾಗ ಸನ್ಯಾಸಿ ತನ್ನ ಚೀಲದಲ್ಲಿ ಒಂದು ದೀಪವಿದೆಯೆಂದು ಅದನ್ನು ಬೆಳಗಿ ರಾತ್ರಿಯ ಯಾವ ಕಾಲದಲ್ಲಾದರೂ ಹೋಗಬೇಕಾದ ರಸ್ತೆ ನಿರ್ಧರಿಸಬಹುದೆಂದು ತಿಳಿಸಿದ. ದಾರಿಹೋಕ ಪ್ರಶ್ನಿಸಿದ "ನೀವೇಕೆ ಆ ದೀಪವನ್ನು ಬೆಳಗುತ್ತಿಲ್ಲ, ಈ ಕತ್ತಲಲ್ಲಿ ಏಕೆ ಕುಳಿತಿದ್ದೀರಿ ?" ಸನ್ಯಾಸಿ ನುಡಿದ "ನನ್ನ ಬಳಿ ಇದೇ ತರಹ ಮೂರು ದೀಪಗಳಿವೆ. ಅದರಲ್ಲಿ ಒಂದು ಮಾತ್ರ ಅಸಲಿ ಎರಡು ನಕಲಿ, ಈ ಕತ್ತಲಿನಲ್ಲಿ ನನಗೆ ಅಸಲಿ, ನಕಲಿಗಳ ಭೇದ ಗೊತ್ತಾಗುತ್ತಿಲ್ಲ."

ಇದನ್ನು ಕೇಳಿ ದಾರಿಹೋಕನ ಮನಸ್ಸಿನಲ್ಲಿ ಸಂಶಯು ತಲೆದೋರಿತು. ಇದು ನನ್ನ ಕೈ ಸೇರಿದರೆ ಎಷ್ಟು ಒಳ್ಳೆಯದು ಅನಿಸಿತು. ಸನ್ಯಾಸಿ ದಾರಿಹೋಕನ ಮನಸ್ಸನ್ನು ಅರ್ಥಮಾಡಿಕೊಂಡಂತೆ ನುಡಿದ "ನಿನ್ನ ಕೈಲಿ ಸಾಧ್ಯವಾದರೆ ಇವುಗಳಲ್ಲಿ ಅಸಲಿ ದೀಪ ಹುಡುಕು." ದಾರಿಹೋಕ ಸನ್ಯಾಸಿಯನ್ನು ದೀಪಗಳನ್ನು ತನ್ನ ಕೈಗೆ ಕೊಡಲು ಬೇಡಿದ. ಸನ್ಯಾಸಿ ಹಾಗೆ ಮಾಡಲಿಲ್ಲ. ಆ ಕತ್ತಲಲ್ಲಿ ದಾರಿಹೋಕನಿಗೆ ಆ ಮೂರು ದೀಪಗಳು ಏಕ ಸಮಾನವಾಗಿ ಗೋಚರಿಸಿದವು. ಅಸಲಿ ನಕಲಿಯ ಭೇದ ಗುರುತಿಸಲೇ ಅಸಾಧ್ಯವಾಗಿತ್ತು. ಸನ್ಯಾಸಿ ಪ್ರಶ್ನಿಸಿದ "ಸಾಧ್ಯವಾಗಲಿಲ್ಲವೇ ?"

ದಾರಿಹೋಕ ನುಡಿದ "ಇಲ್ಲ."

ಸನ್ಯಾಸಿ ದೀಪಗಳನ್ನು ಹಿಂತಿರುಗಿ ಪಡೆಯುತ್ತಾ ನುಡಿದ. ಇವುಗಳಲ್ಲಿ ಒಂದಂತೂ ಖಂಡಿತಾ ಉರಿಯುತ್ತದೆ. ಯಾರಿಗೆ ಉರಿಸಲೂ ಬರುತ್ತದೆಯೋ ಅವರ ಕೈಗೆ ಇದು ಹೋಗುತ್ತದೆ. ಆತ ಇದನ್ನು ತನ್ನ ಗುಣಗಳಿಂದ ಬೆಳಗಬಲ್ಲ.

ಕಥೆ ಇಲ್ಲೇ ಅಂತ್ಯಗೊಳ್ಳುತ್ತದೆ. ಆದರೆ ಈ ಹಸ್ತಪ್ರತಿಯನ್ನು ಓದಿದಾಗ ಭಾಸವಾಗುತ್ತದೆ, ವಸುಧಾ ಈ ಕಥೆಯಲ್ಲಿ ಅನೇಕ ಬಾರಿ ಇನ್ನೂ ಏನೋ ಹೇಳಲು ಹವಣಿಸುತ್ತಿದ್ದಾನೆ ಎಂದು. ಬಹುಶಃ ಈ ರಹಸ್ಯದ ಅರ್ಥವನ್ನು ತಿಳಿಯಲು ಪ್ರಯತ್ನ ನಡೆಸಿರಬಹುದು. ಆದರೆ ಅಸಮರ್ಥನಾಗಿದ್ದಾನೆ.

ಕೊನೆಯ ಕಥೆಯ ಹೆಸರು 'ಆಶ್ರಯ'. ಕಥೆ ಬನಾರಸ್ ನಗರದಲ್ಲಿ ನಡೆಯುತ್ತದೆ. ಕಥೆಯು ಪ್ರಾರಂಭವಿದೆ ಆದರೆ ಕೊನೆ ಇಲ್ಲ. ವಸುಧಾ ಇದರಲ್ಲಿ ಉತ್ತಮ ಪುರುಷದ ಶೈಲಿಯನ್ನು ಅಳವಡಿಸಿದ್ದಾನೆ. ಮಾಗಿ ಕಾಲದ ದಿನಗಳ ಪ್ರಾರಂಭದಲ್ಲಿ ಸಾಮಾನ್ಯವಾಗಿ ಬನಾರಸ್ಸಿನ ಹಳ್ಳಿಗಳಲ್ಲಿ ಮಹಾಮಾರಿ ಹರಡುತ್ತದೆ. ಈ ಸಾರಿಯೂ ಭಯಂಕರ ಮಹಾಮಾರಿ ಹರಡಿತು. ಜನಗಳು ಹಳ್ಳಿಯನ್ನು ಬಿಟ್ಟು ಓಡಿದರು. ಸರಕಾರಿ ಕೆಲಸಗಾರರೂ ಹಳ್ಳಿಗೆ ಹೋಗಲು ಹಿಂಜರಿಯುತ್ತಿದ್ದರು. ಗಂಗೆಯ ದಡದಲ್ಲಿ ನಿರಂತರ ಚಿತೆಗಳು ಉರಿಯುತ್ತಿದ್ದವು. ಕಥೆಯು ನಾಯಕ ಒಂದು ದಿನ ನಸುಕಿನಲ್ಲಿ

ಗಂಗಾಸ್ನಾನ ಮಾಡಿ ಹಿಂತಿರುಗುವ ಸಮಯದಲ್ಲಿ ದೂರದ ಹಳ್ಳಿಯವನೊಬ್ಬ ತನ್ನನ್ನು ಕರೆಯುತ್ತಿರುವಂತೆ ಅನಿಸಿತು. ಬಹುಶಃ ಆತ ಆತನ ಹಳ್ಳಿಯ ಸ್ನೇಹಿತನಾಗಿದ್ದ. ಅವನು ಆಗಾಗ್ಗೆ ಇವನಿಗಾಗಿ ಜನಪದ ಹಾಡುಗಳನ್ನು ಹಾಡುತ್ತಿದ್ದ.

ವಸುಧಾ ಈ ಹಾಡನ್ನು ಕೇಳಿಸಿಕೊಳ್ಳುತ್ತಿದ್ದ. ಹಾಡಿನ ಅರ್ಥ ಹೀಗಿತ್ತು. ನಾವು ಬಹಳ ದುಃಖಿಗಳು, ಬಹು ಚಂಚಲದ ನಮಗೆ ಮರದಂತಹ ಬೇರಿದೆ, ನಾವು ಒಂದೇ ಸ್ಥಳದಲ್ಲಿ ನಿಲ್ಲುವುದಿಲ್ಲ.

ವಸುಧಾ ಮನೆಗೆ ಹಿಂತಿರುಗಲಿಲ್ಲ. ಹಳ್ಳಿಯ ಕಡೆ ಮಹಾಮಾರಿ ಹರಡಿದ್ದ ಹಳ್ಳಿಯತ್ತ ಹೊರಟ.

ಕಥೆ ಇಲ್ಲಿಯವರೆಗೆ ಬಂದಿದೆ. ಮುಂದುವರಿದಿಲ್ಲ. ಭುವನ್ ನುಡಿದ, ಈ ಕಥೆಯನ್ನು ಬರೆದ ಮಾರನೆ ದಿನವೇ ವಸುಧಾ ಮರಣ ಹೊಂದಿದ. ಬನಾರಸ್ಸಿನ ಆ ಮುದುಕ ಸಜ್ಜನರಿಗೆ ಮತ್ತು ಅವರ ಮಗಳಿಗೆ ಈ ವಿಷಯ ಗೊತ್ತಿಲ್ಲ.

ಛೋಟಾ ನಾಗಪುರದ ಯಾವುದೋ ಹೆಸರಿಲ್ಲದ, ಯಾವುದೋ ಒಂದು ಮಿಶನರಿ ಆಸ್ಪತ್ರೆಯಲ್ಲಿ ವಸುಧಾ ಮರಣಿಸಿದ್ದ. ಆತನ ಮರಣ ವಾರ್ತೆ ನಮಗೆ ಬಹಳ ದಿನಗಳ ನಂತರ ತಿಳಿದು ಬಂತು. ಆಸ್ಪತ್ರೆಯಲ್ಲಿ ಬಹುಶಃ ಆತ ಏನನ್ನೂ ಬರೆದಂತಿಲ್ಲ. ಆತ ಬರೆಯುವ ಹುಮ್ಮಸ್ಸನ್ನು ಕಳೆದುಕೊಂಡಿದ್ದ.

ವಸುಧಾ ಬರೆದ ಕಥೆಗಳನ್ನು ನಾನು ಸ್ನೇಹಿತನಾಗಿ ಗುರುತಿಸಿದ್ದೇನೆ. ಇದರಲ್ಲಿ ನಾನು ತಪ್ಪು ಮಾಡಿರಬಹುದು. ನನಗೆ ಇದು ಸ್ವಾಭಾವಿಕ. ಓದುಗರು ದಯವಿಟ್ಟು ಕ್ಷಮಿಸಬೇಕು.

ಈ ಪುಸ್ತಕದ ಪ್ರಾರಂಭದಲ್ಲೆ ಒಂದು ತ್ಯಾಗ ಪತ್ರವಿದೆ. ಅದು ಮೊದಲ ಸಾರಿಯೂ ಇತ್ತು. ಹೇಳುವುದು ವ್ಯರ್ಥ, ಆ ತ್ಯಾಗ ಪತ್ರದಲ್ಲಿ ಉಲ್ಲೇಖಿತ ನಿರುಪಮಾ ಹೆಸರು ಹೆಂಡತಿಯದಲ್ಲ, ವಸುಧಾನ ಅದೇ ನಿರುಪಮಾ ಆಗಿದ್ದಳು.

# ಭಾರತವರ್ಷ

*ರಮಾಪದ್ ಚೌಧರಿ*

ಬಿ.ಎಫ್.ತ್ರಿ. ಥರ್ಟಿ–ಟು ಈ ಹೆಸರು ಸೈನಿಕ ಸಂಕೇತದಲ್ಲಿತ್ತು. ಇದೇನೂ ಯಾವ ರೈಲ್ವೆ ನಿಲ್ದಾಣವಾಗಿರಲಿಲ್ಲ. ಇಲ್ಲಿ ಯಾವುದೇ ಟಿಕೆಟ್ ಕೊಡುವ ಕಿಟಕಿಯಾಗಲಿ, ಪ್ಲಾಟ್‌ಫಾರಂ ಆಗಲಿ ಇರಲಿಲ್ಲ. ಇದ್ದಕ್ಕಿದ್ದಂತೆಯೇ ಒಂದು ದಿನ ರೈಲ್ವೆ ಹಳಿಗಳ ಬದಿಯ ಒಂದು ಸ್ಥಳವನ್ನು ಮುಳ್ಳು ತಂತಿಗಳಿಂದ ಸುತ್ತುಗಟ್ಟಿದ್ದರು. ಅಷ್ಟೇ ಆಗಿದ್ದುದು, ದಿನದಲ್ಲಿ ಅಲ್ಲಿ ಯಾವುದೇ ಬರುವ ಅಥವಾ ಹೋಗುವ ಟ್ರೈನು ನಿಲ್ಲುತ್ತಿರಲಿಲ್ಲ. ಆದರೆ ಒಂದು ಖಾಸಗಿ ಗಾಡಿ ಮಾತ್ರ ಅಲ್ಲಿ ನಿಲ್ಲುತ್ತಿತ್ತು. ಇದ್ದಕ್ಕಿದ್ದಂತೆಯೇ ಎಂದಾದರೊಂದು ಬೆಳಿಗ್ಗೆ ಬಂದು ಅದು ನಿಲ್ಲುತ್ತಿತ್ತು. ಎಂದು ಯಾವಾಗ ಇದು ಬರುತ್ತದೆ ಎಂಬುದು ನಮಗೆ ಮಾತ್ರ ಗೊತ್ತಿರುತ್ತಿತ್ತು. ಬಿಹಾರಿ ಬಟ್ಲರ್ ಮತ್ತು ಭಗವತಿಲಾಲ್‌ರು ಸೇರಿ ನಾವು ಅಲ್ಲಿ ಐದು ಜನರಿದ್ದೆವು.

ಸ್ಟೇಷನ್ ಇರಲಿಲ್ಲ, ಗಾಡಿಗಳು ನಿಲ್ಲುತ್ತಿರಲಿಲ್ಲ. ಆದರೂ ರೈಲ್ವೆ ಜನಗಳ ಬಾಯಲ್ಲಿ ಈ ಒಂದು ಹೆಸರು ಸಾಮಾನ್ಯವಾಗಿ ಹೋಗಿತ್ತು. ಇದನ್ನು ಕೇಳಿಸಿಕೊಂಡೇ ನಾವು ಇದನ್ನು 'ಮೊಟ್ಟೆ ನಿಲ್ದಾಣ' ಎಂದು ಕರೆಯುತ್ತಿದ್ದೆವು.

ಈ ಮೊಟ್ಟೆ ನಿಲ್ದಾಣದ ಹತ್ತಿರದಲ್ಲೆ ಎರಡು ಬೆಟ್ಟಗಳಿದ್ದವು. ಇವುಗಳ ಕೆಳಗೆ ಮಹತೊ ಗ್ರಾಮವಿತ್ತು. ಈ ಹಳ್ಳಿಯ ಮನೆಗಳಲ್ಲಿ ಕೋಳಿಗಳು ಕಾಳು ಕುಕ್ಕುತ್ತಾ ತಿರುಗಾಡುತ್ತಿದ್ದವು. ದೂರದ ಭುರ್‌ಕುಂಡಾದ ಸಂತೆಯಲ್ಲಿ ಹಳ್ಳಿಗರು ಈ ಮೊಟ್ಟೆಗಳನ್ನು ಮಾರಲು ಹೋಗುತ್ತಿದ್ದರು. ಆಗಾಗ್ಗೆ ಪ್ರೀತಿಯಿಂದ ಹುಂಜಗಳನ್ನು ಬಾಗಿಲಲ್ಲಿ ಇಟ್ಟುಕೊಂಡು ಹುಂಜ ಜಗಳ ನೋಡಲೂ ಹೋಗುತ್ತಿದ್ದರು. ಆದರೆ ಈ ಕಾರಣಕ್ಕಾಗಿಯೇ ಇದಕ್ಕೆ ಬಿ.ಎಫ್.ತ್ರಿ. ಥರ್ಟಿ–ಟೂ ಹೆಸರಾಗಿರಲಿಲ್ಲ.

ನಿಜ ಹೇಳಬೇಕೆಂದರೆ ನಮಗೆ ಮಹತೋ ಹಳ್ಳಿಯ ಮೊಟ್ಟೆಗಳಲ್ಲಿ ಯಾವ ತರಹ ಆಸಕ್ತಿಯೂ ಇರಲಿಲ್ಲ. ನಮ್ಮ ಗುತ್ತಿಗೆದಾರರು, ಹಾಗೂ ರೈಲ್ವೆ ಅಧಿಕಾರಿಗಳ ಮಧ್ಯೆ ಒಂದು ಒಪ್ಪಂದವಾಗಿತ್ತು. ಗುತ್ತಿಗೆದಾರನ ಬಳಿ ಒಂದು ಚಕ್ರಗಳ ಟ್ರಾಲಿ ಇತ್ತು. ಅದು ಕೆಂಪು ಬಾವುಟ ಹಾರಾಡಿಸುತ್ತ ರೈಲ್ವೆ ಹಳಿಯ ಮೇಲೆ ದಡದಡ ಶಬ್ದ ಮಾಡುತ್ತಾ ಬಂದು ಸಾಮಾನು–ಗಿಮಾನು ಇಳಿಸಿಕೊಂಡು ಹೊರಟು ಹೋಗುತ್ತಿತ್ತು.

ಅಸಂಖ್ಯ ಮೊಟ್ಟೆಗಳನ್ನು ಅದರಲ್ಲಿ ಇಡಲಾಗುತ್ತಿತ್ತು. ಬಿಹಾರಿ ಬಟ್ಲರ್ ಮತ್ತು ಭಗವತಿಲಾಲ್ ಹಿಂದಿನ ರಾತ್ರಿಯ ಮೊಟ್ಟೆಗಳನ್ನು ಬೇಯಿಸಿ ಇಡುತ್ತಿದ್ದರು.

ಈ ಕಾರಣದಿಂದಲೂ ಈ ಜಾಗಕ್ಕೆ 'ಮೊಟ್ಟೆ ನಿಲ್ದಾಣ' ವೆಂದು ಹೆಸರಾಗಿರಲಿಲ್ಲ. ನಿಲ್ದಾಣದ ಬದಿಯ ಆ ಮುಳ್ಳು ತಂತಿಯ ಹಿಂದೆ ಮೊಟ್ಟೆ ಸಿಪ್ಪೆಯ ಒಂದು ದೊಡ್ಡ ಬೆಟ್ಟವೇ ಸಿದ್ಧವಾಗಿತ್ತು. ಇದರಿಂದಾಗಿಯೇ ಇದಕ್ಕೆ ಈ ಹೆಸರು ಬಂದಿದ್ದುದು. ಸೈನಿಕ ಭಾಷೆಯ 'ಬಿ.ಎಫ್.ತ್ರಿ. ಥರ್ಟಿ–ಟೂ' ನ ಪ್ರಥಮ ಎರಡು ಅಕ್ಷರಕ್ಕೆ ಏನೂ ಸಂಕೇತ ಇಲ್ಲವೆಂದೂ ಅದು ಬ್ರೇಕ್‌ಫಾಸ್ಟ್ ಶಬ್ದದ ಸಂಕ್ಷಿಪ್ತ ರೂಪವೆಂದು ನಾವು ತಿಳಿದೆವು.

ರಾಮುಗಡದಲ್ಲಿ ಆ ದಿನಗಳಲ್ಲಿ ಪಿಒಡಬ್ಲೂ (ಯುದ್ಧ ಬಂಧಿಗಳ) ಕ್ಯಾಂಪ್ ಇತ್ತು. ಇಟಲಿಯ ಪದಾತಿ ಕೈದಿಗಳನ್ನು ಇಲ್ಲಿ ಮುಳ್ಳುಬೇಲಿ ಮತ್ತು ಬಂದೂಕುಗಳ ಮಧ್ಯೆ ಸೆರೆಹಿಡಿದಿಡಲಾಗಿತ್ತು. ಆಗಾಗ್ಗೆ ಇವರನ್ನು ಯಾವುದಾದರೂ ರೈಲು ಗಾಡಿಯಲ್ಲಿ ತುಂಬಿಕೊಂಡು ಹೋಗಿ ಎಲ್ಲೋ ಕರೆದುಕೊಂಡು ಹೋಗಿ ಬರುತ್ತಿದ್ದರು. ಎಲ್ಲಿಗೆ, ಏತಕ್ಕೆ ಇವರನ್ನು ಕರೆದೊಯ್ಯುತ್ತಾರೆ ಎಂಬುದು ನಮಗೆ ಗೊತ್ತಾಗುತ್ತಿರಲಿಲ್ಲ. ಬೆಳಿಗ್ಗೆ ಯಾವುದೊ ರೈಲುಗಾಡಿ ಬರಲಿದೆ ಎಂದು ಮಾತ್ರ ನಮಗೆ ತಿಳಿದು ಬರುತ್ತಿತ್ತು. ಗುತ್ತಿಗೆದಾರನಿಗೆ ಪತ್ರ ಬಂದೊಡನೆ ರೈಲು ಬರುವ ಒಂದು ದಿನ ಮುಂದೆ ಆತ ಬಂದು ಭಗವತಿಲಾಲ್ ಬಟ್ಲರ್‌ಗೆ ಮೊಟ್ಟೆಗಳ ಮಂಕರಿಗಳನ್ನು ತೋರಿಸಿ ಮುನ್ನೂರ ಮೂವತ್ತು ಬ್ರೇಕ್‌ಫಾಸ್ಟ್ ತಯಾರಿಸಲು ತಿಳಿಸುತ್ತಿದ್ದ.

ಭಗವತಿಲಾಲ್ ಆಯ್ದ ಆರುನೂರ ಅರವತ್ತು ಮೊಟ್ಟೆಗಳನ್ನು ಮೊದಲು ಎಣಿಸಿ, ಇವುಗಳಲ್ಲಿ ಯಾವುದಾದರೂ ಕೆಟ್ಟು ಹೋಗಿದ್ದರೆ ಎಂದು ಇನ್ನೂ ಇಪ್ಪತ್ತೈದು ಹೆಚ್ಚಿಗೆ ತೆಗೆದಿರಿಸಿಕೊಳ್ಳುತ್ತಿದ್ದ. ಅನಂತರ ಇವುಗಳನ್ನು ಚೆನ್ನಾಗಿ ಕುದಿಯುವ ನೀರಿನಲ್ಲಿ ಬೇಯಿಸಿ ಹೊರತೆಗೆದು ಕೂಲಿಯಾಳುಗಳಿಂದ ಅವುಗಳನ್ನು ಸುಲಿಸುತ್ತಿದ್ದ. ಮುಳ್ಳು ತಂತಿಯ ಹಿಂದೆ ಈ ಸಿಪ್ಪೆ ರಾಶಿ ಬೆಳೆಯುತ್ತಿತ್ತು.

ಬೆಳಿಗ್ಗೆಯೇ ಗಾಡಿ ಬಂದು ನಿಲ್ಲುತ್ತಿತ್ತು. ತಕ್ಷಣವೇ ಮಿಲಿಟರಿ ಸೈನಿಕರು ಇಳಿಯುತ್ತಿದ್ದರು. ರೈಲುಗಾಡಿಯ ಇಕ್ಕೆಡೆಯಲ್ಲೂ ರೈಫಲ್ ಹಿಡಿದು ಪಹರೆ ಮಾಡುತ್ತಾ ನಿಲ್ಲುತ್ತಿದ್ದರು. ಡೋರಿಯಾ ಪೋಷಾಕು ಧರಿಸಿದ ಕೈದಿಗಳು ಒಂದು ಮಗ್ (ದೊಡ್ಡ ಲೋಟ) ಮತ್ತು ಅಲ್ಯುಮಿನಿಯಂ ತಟ್ಟೆ ಹಿಡಿದು ರೈಲಿನಿಂದ ಇಳಿಯುತ್ತಿದ್ದರು.

ಎರಡು ದೊಡ್ಡ ದೊಡ್ಡ ಡ್ರಮ್‌ಗಳನ್ನು ಬೋರಲು ಹಾಕಿ ಅದರ ಮೇಲೆ ಆ ಮೂರು ಕೂಲಿಯವರು ನಿಲ್ಲುವರು. ಕೈದಿಗಳು ಸಾಲಾಗಿ ಬಂದು ತಮ್ಮ ತಮ್ಮ ನಾಶ್ತಾ ತೆಗೆದುಕೊಳ್ಳುತ್ತಿದ್ದರು. ಒಬ್ಬ ಕೂಲಿಯವನು ಮಗ್‌ನಲ್ಲಿ ಕಾಫಿಯನ್ನು ಸುರಿಯುತ್ತಿದ್ದ. ಇನ್ನೊಬ್ಬ ಎರಡು ಬ್ರೆಡ್ ಚೂರುಗಳನ್ನು ಮತ್ತೊಬ್ಬ ಕೂಲಿ ಎರಡೆರಡು ಮೊಟ್ಟೆಗಳನ್ನು ನೀಡುತ್ತಿದ್ದರು. ಇದಾದ ನಂತರ ಕೈದಿಗಳೆಲ್ಲಾ ಪುನಃ ರೈಲಿನ ಬೋಗಿಗಳಲ್ಲಿ ಹೋಗಿ ಕೂಡುತ್ತಿದ್ದರು. ಖಾಕಿ ಸಮವಸ್ತ್ರವನ್ನು ಧರಿಸಿದ ಪಹರೆ ಸಿಪಾಯಿಗಳು ಶಿಳ್ಳು ಹೊಡೆಯುತ್ತಿದ್ದರು, ಬಾವುಟ ಅಲ್ಲಾಡಿಸುತ್ತಿದ್ದರು, ಗಾಡಿ ಮುಂದೆ ಹೊರಡುತ್ತಿತ್ತು.

ಮಹತೊ ಹಳ್ಳಿಯ ಯಾರೂ ಅತ್ತ ಸುಳಿಯುತ್ತಿರಲಿಲ್ಲ. ದೂರದ ಹೊಲಗಳಲ್ಲಿ ಸೊಂಟ ನೆಟ್ಟಗೆ ಮಾಡಿಕೊಂಡು ನಿಂತು ಆಶ್ಚರ್ಯದಿಂದ ಇವೆಲ್ಲವನ್ನೂ ನೋಡುತ್ತಿದ್ದರು.

ಗಾಡಿ ಹೊರಟ ನಂತರ ಗುಡಾರವನ್ನು ಭಗವತಿಲಾಲ್‌ನ ವಶಕ್ಕೆ ಒಪ್ಪಿಸಿ ನಾವು ಒಮ್ಮೊಮ್ಮೆ ತರಕಾರಿಯನ್ನು ಅರಸುತ್ತಾ ಮಹತೊ ಹಳ್ಳಿಯತ್ತ ಹೊರಡುತ್ತಿದ್ದೆವು. ಬೆಟ್ಟದ ಕಲ್ಲು ತುಂಬಿದ ಆ ಇಳಿಜಾರಾದ ಭೂಮಿಯಲ್ಲಿ ಸಾಸಿವೆ, ಬದನೆ, ಹೀರೆಕಾಯಿ ಬೆಳೆಯುತ್ತಾರೆ.

ಒಂದು ದಿನ ರಾತ್ರೋ ರಾತ್ರಿ ಮೊಟ್ಟೆ ನಿಲ್ದಾಣ ಸ್ಥಿರ ನಿಲ್ದಾಣವಾಗಿ ಹೋಯಿತು. ಮುಳ್ಳು ಬೇಲಿ ಹಾಕಿದ್ದ ಜಾಗವನ್ನು ಪ್ಲಾಟ್‌ಫಾರಂಗಾಗಿ ಎತ್ತರಿಸಲಾಯಿತು. ಆಗಲಿಂದ ಅಲ್ಲಿ ಕೇವಲ ಪಿಓಡಬ್ಲೂ ಮಾತ್ರವಲ್ಲ, ಆಗಾಗ್ಗೆ ಮಿಲಿಟರಿ ಸ್ಪೆಷಲ್ ಗಾಡಿಗಳು ನಿಲ್ಲಲು ಪ್ರಾರಂಭಗೊಂಡವು. ಗ್ಯಾಬರ್‌ಡೀನ್ ಯೂನಿಫಾರಂ ಧರಿಸಿ, ಹಿಂದಿನ ಜೇಬಿನಲ್ಲಿ ರೂಪಾಯಿಯ ನೋಟುಗಳನ್ನು ತುರುಕಿಕೊಂಡು ಅಮೇರಿಕಾದ ಸೈನಿಕರು ಆ ಸ್ಟೇಷನ್‌ನಲ್ಲಿ ಬಂದು ನಿಲ್ಲುತ್ತಿದ್ದರು. ಪೋಲೀಸ್ ಜನಗಳು ಗಾಡಿಯಿಂದ ಇಳಿದು ಅಲ್ಲಿ ತಿರುಗಾಡುತ್ತಿದ್ದರು. ಒಮ್ಮೊಮ್ಮೆ ಹರಟೆ ಸಹ ಹೊಡೆಯುತ್ತಿದ್ದರು. ಸೈನಿಕರ ಗುಂಪು ಅದೇ ರೀತಿ ಇಳಿದು ಸಾಲಾಗಿ ನಿಂತು ಮಗ್, ತಟ್ಟೆ ಹಿಡಿದು ಬ್ರೆಡ್ ಮತ್ತು ಮೊಟ್ಟೆ ಪಡೆಯುತ್ತಿದ್ದರು. ಕಾಫಿ ಕುಡಿಯುತ್ತಿದ್ದರು. ಆನಂತರ ಎಲ್ಲರೂ ತಮ್ಮ ತಮ್ಮ ಬೋಗಿಗಳಲ್ಲಿ ಹೋಗಿ ಕುಳಿತು ಬಿಡುತ್ತಿದ್ದರು. ಖಾಕಿ ಬುಷ್ ಷರ್ಟ್ ಧರಿಸಿದ ಗಾರ್ಡ್ ಸೀಟಿ ಊದುತ್ತಿದ್ದ. ಬಾವುಟ ಅಲ್ಲಾಡಿಸುತ್ತಿದ್ದ, ಓಡುತ್ತಾ ಹೋಗಿ ಸಪ್ಲೈ ಫಾರಂನಲ್ಲಿ ಮೇಜರ್‌ನಿಂದ ಓ.ಕೆ. ಬರೆಸಿಕೊಳ್ಳುತ್ತಿದ್ದ.

ಗಾಡಿ ಹೊರಡುತ್ತಿತ್ತು, ಎತ್ತ ಕಡೆ, ಏಕೆ ಹೋಗುತ್ತದೆ? ನಮಗೆ ತಿಳಿಯದು. ಅಂದು ಇದೇ ತರಹ ಅಮೇರಿಕನ್ ಸೈನಿಕರ ಗಾಡಿ ಬಂದು ನಿಂತಿತು. ಮೂರು ಕೂಲಿಯವರು ಬ್ರೆಡ್, ಕಾಫಿ, ಮೊಟ್ಟೆಯನ್ನು ಹಂಚುತ್ತಿದ್ದರು. ಯಾರಾದರೂ ಮೊಟ್ಟೆ ಕೆಟ್ಟಿದೆಯೆಂದಾಗಲಿ ಬ್ರೆಡ್ ಚೆನ್ನಾಗಿಲ್ಲವೆಂದಾಗಲಿ ಎಸೆದಾರೆಂಬ ಭಯದಿಂದ ಮೇಲ್ವಿಚಾರಣೆ ನಡೆಸಿದ್ದೆನು. ಇದೇ ಸಮಯಕ್ಕೆ ಸರಿಯಾಗಿ ನಮ್ಮ ದೃಷ್ಟಿ ಮುಳ್ಳು ಬೇಲಿಯ ಆ ಕಡೆ ಹರಿಯಿತು. ಬೇಲಿಯ ಆ ಕಡೆ ಲಂಗೋಟಿ ಧರಿಸಿದ ಹಳ್ಳಿಯ ಹುಡುಗನೊಬ್ಬ ಇತ್ತಲೇ ನೆಟ್ಟ ದೃಷ್ಟಿ ಹರಿಸಿ ನಿಂತಿದ್ದ. ಸೊಂಟದ ಹಗ್ಗಕ್ಕೆ ಒಂದು ಚೂರು ಲೋಟವನ್ನು ಸಿಕ್ಕಿಸಿದ್ದ. ಆ ಹುಡುಗ ಒಂದು ದಿನ ಎಮ್ಮೆಯ ಮೇಲೆ ಸವಾರಿ ಮಾಡುತ್ತಿದ್ದುದನ್ನು ನೋಡಿದ್ದೆ.

ಆಶ್ಚರ್ಯ ಚಕಿತನಾಗಿ ಆ ಹುಡುಗ ರೈಲ್ವೆ ಗಾಡಿಯನ್ನು ಹಾಗೂ ಕೆಂಪು ಮುಖದ ಆ ಜನರನ್ನು ದಿಟ್ಟಿಸುತ್ತಿದ್ದ.

ಒಬ್ಬ ಸೈನಿಕನ ದೃಷ್ಟಿ ಆತನ ಮೇಲೆ ಬಿದ್ದೊಡನೆಯೇ ಆತ ಹೇ – ಹೇ ಎಂದು ಕೂಗಿದ. ಈ ಶಬ್ದ ಕೇಳಿದ್ದೇ ತಡ ಆ ಹುಡುಗ ಮಹತೋ ಹಳ್ಳಿಯತ್ತ ಭರದಿಂದ ಓಡಿದ.

ಹಿಂದೆ ಅನೇಕ ಬಿಳಿಯ ಸೈನಿಕರು ಗಹಗಹಿಸಿ ನಗಲಾರಂಭಿಸಿದ್ದರು. ಆ ಹುಡುಗ ಮತ್ತೆ ಆ ಕಡೆ ಬರುವುದಿಲ್ಲವೆಂದು ನಾನು ತಿಳಿದಿದ್ದೆ. ಮಹತೊ ಗ್ರಾಮಸ್ಥರಂತೂ ಯಾರೂ ಇತ್ತ ಬಂದಿರಲಿಲ್ಲ. ಬೇಸಾಯದ ದಿನಗಳಲ್ಲಿ ಆಗೊಮ್ಮೆ ಈಗೊಮ್ಮೆ ಯಾರಾದರೂ ಬೆನ್ನು ನೆಟ್ಟದಾಗಿ ಮಾಡಿಕೊಂಡು ಆಶ್ಚರ್ಯ ದೃಷ್ಟಿ ಇತ್ತ ಹರಿಸಿದುದುಂಟು.

ಆದರೆ ಒಂದು ದಿನ ಆ ರೈಲ್ವೆ ಗಾಡಿ ಬಂದು ನಿಂತಿತು. ಸೊಂಟದ ಬೆಲ್ಟ್‌ಗೆ ಲೋಹ ಸಿಕ್ಕಿಸಿದ್ದ ಆ ಹುಡುಗ ಮುಳ್ಳು ಬೇಲಿಯ ಆಚೆ ಕಡೆ ಬಂದು ನಿಂತುಕೊಂಡ. ಅಂದು ಆತನ ಸಂಗಡ ಇನ್ನೊಬ್ಬ ಹುಡುಗನೂ ಇದ್ದ. ಆತ ಈತನಿಗಿಂತ ಸ್ವಲ್ಪ ಎತ್ತರವಿದ್ದ. ಕತ್ತಿನ ಕೆಂಪು ದಾರಕ್ಕೆ ಲೋಹದ ಯಂತ್ರವನ್ನು ಕಟ್ಟಲಾಗಿತ್ತು.

ಇಬ್ಬರು ಹುಡುಗರು ತಂತಿ ಬೇಲಿಯ ಆಚೆ ಕಡೆ ನಿಂತು ಅಮೇರಿಕನ್ ಸೈನಿಕರನ್ನು ನೋಡುತ್ತಿದ್ದರು. ಮೊದಲ ದಿನ ಆ ಹುಡುಗರ ಆ ನೋಟದಲ್ಲಿ ಸ್ವಲ್ಪ ಭಯವಿತ್ತು. ಬಹುಶಃ ಅವರು ಇದಕ್ಕೆ ಸಿದ್ಧವಾಗಿಯೇ ಇದ್ದಂತಿತ್ತು. ಕಣ್ಣಿಂದ ಹೆದರಿಸಿದ್ದೇ ತಡ ಅವರು ಜಿಂಕೆ ಮರಿಯಾಗಿ ಓಡಿ ಬಿಡುತ್ತಿದ್ದರು.

ಕೈಯಲ್ಲಿ ಕಾಗದ ಹಿಡಿದು ನಾನು ಅಲ್ಲಿ ಇಲ್ಲಿ ಸುತ್ತುತ್ತಿದ್ದೆ. ಸಮಯ ದೊರೆತೊಡನೆ ಮೇಜರ್‌ನನ್ನು ಸಂತೋಷಗೊಳಿಸಲು ಪ್ರಯತ್ನ ನಡೆಸಿದ್ದೆ. ಒಬ್ಬ ಸೈನಿಕ ತನ್ನ ಕೊಠಡಿಯ ಬಾಗಿಲಲ್ಲಿ ನಿಂತು ಕಾಫಿ ಕುಡಿಯುತ್ತಾ ಆ ಇಬ್ಬರು ಹುಡುಗರನ್ನು ನೋಡುತ್ತಾ 'ಆಫುಲ್' ಎಂದು ಉದ್ಗರಿಸಿದ.

ನನಗಂತೂ ಎಂದೂ ಹೀಗೆ ಅನಿಸಿರಲಿಲ್ಲ. ಅವರುಗಳೂ ಸಂತೋಷದಿಂದಲೇ ಹೊಲಗಳಲ್ಲಿ ಕೆಲಸ ಮಾಡುತ್ತಾರೆ. ಬಿಲ್ಲು ಬಾಣ ಹಿಡಿದೇ ಶಿಕಾರಿ ಮಾಡುತ್ತಾರೆ. ನೌಟಾಂಕಿ ಹಾಡನ್ನು ಹಾಡುತ್ತಾರೆ. ಹೆಂಡ ಕುಡಿಯುತ್ತಾರೆ. ಬಿಲ್ಲಿನ ಬಾಣದಂತೆ ಒಮ್ಮೊಮ್ಮೆ ಸೆಟೆದು ನಿಲ್ಲುತ್ತಾರೆ. ಲಂಗೋಟಿ ಧರಿಸಿದ ಕಪ್ಪು ಶರೀರ ಅವರದು. ಆದರೆ ಆ ಅಮೇರಿಕನ್ ಸೈನಿಕರನ 'ಆಫುಲ್' ನನ್ನನ್ನು ಚಕಿತಗೊಳಿಸಿತ್ತು. ಆ ಹುಡುಗರ ಮೇಲೆ ನನಗೆ ಬಹಳ ಸಿಟ್ಟು ಬಂದಿತ್ತು.

ಸಿಪಾಯಿಗಳಲ್ಲಿ ಒಬ್ಬ ಎರಡು ಸಾಲು ಯಾವುದೋ ಹಾಡನ್ನು ಹಾಡಿದ. ಒಂದಿಬ್ಬರು ನಗುತ್ತಿದ್ದರು. ಒಬ್ಬ ಮಗ್‌ನಲ್ಲಿ ಒಂದು ಗುಟುಕು ಕಾಫಿಯನ್ನು ಕುಡಿದು, ಕಣ್ಣಿನಿಂದಲೇ ಕೂಲಿಗೆ ಸನ್ನೆ ಮಾಡಿ ಇನ್ನಷ್ಟು ಕಾಫಿಯನ್ನು ತುಂಬಲು ಆದೇಶ ನೀಡಿದ. ಗಾರ್ಡ್ ಮುಂದೆ ಹೋಗಿ ಹೊರಡಲು ಏಕೆ ತಡವಾಗುತ್ತಿದೆ ನೋಡುತ್ತಿದ್ದ. ಪಂಜಾಬಿ ಗಾರ್ಡ್ ಮೇಜರ್ ಜೊತೆ ಮಾತನಾಡಲು ಪ್ರಾರಂಭಿಸಿದ್ದ. ಮೂಗಿನಲ್ಲೇ ಏನನ್ನೋ ಹೇಳುತ್ತಿರುವಂತೆ ಕಾಣುತ್ತಿತ್ತು. ಅನಂತರ ಸೀಟಿ ಊದಿದ್ದು ಕೇಳಿಸಿತು. ಬಾವುಟ ಅಲ್ಲಾಡಿತು, ತಕ್ಷಣ ಎಲ್ಲರೂ ಗಾಡಿಯೊಳಗೆ ಹೋಗಿ ಕುಳಿತರು. ರಟ್ಟೆಗೆ ಅಗಲ ಕೆಂಪುಪಟ್ಟಿ ಕಟ್ಟಿಕೊಂಡಿದ್ದ ಮಿಲಿಟರಿಯವರು ಗಾಡಿಯಲ್ಲಿ ಹತ್ತಿ ಕುಳಿತರು.

ಗಾಡಿ ಹೊರಟು ಹೋದ ನಂತರ ಮತ್ತೆ ಅದೇ ಸ್ಮಶಾನ ಮೌನ. ಎಲ್ಲಿ ನೋಡಿದರೆ ಅಲ್ಲಿ ಮರಳು, ಅದೇ ಮಕ್ಕಳಲ್ಲಿ ಕಾಣುವ ಮುಳ್ಳು ಗಿಡಗಳಂತೆ ಸುತ್ತಲೂ ಮುಳ್ಳು

ಬೇಲಿ.

ಕೆಲವು ದಿನಗಳ ನಂತರ ಪುನಃ ಒಂದು ಗಾಡಿ ಬಂತು. ಅದು ಪಿಓಡಬ್ಲೂರವರ ಗಾಡಿಯಾಗಿತ್ತು. ಇಟಲಿಯ ಯುದ್ಧ ಬಂದಿಗಳನ್ನು ರಾಮಗಢದಿಂದ ಮತ್ತೆಲ್ಲಿಗೋ ಕರೆದೊಯ್ಯಲಾಗುತ್ತಿತ್ತು. ಎಲ್ಲಿಗೆ? ಅದು ನಮಗೆ ತಿಳಿದಿರಲಿಲ್ಲ. ತಿಳಿಯುವ ಇಚ್ಛೆಯೂ ಇರಲಿಲ್ಲ.

ಅವರ ಪೋಷಾಕು ಒಂದು ವಿಶೇಷ ರೀತಿಯದಾಗಿತ್ತು. ಮುಖದಲ್ಲಿ ನಗುವಿರಲಿಲ್ಲ, ಬಾರ್ ಮಾಡಿದ ಬಂದೂಕು ಹಿಡಿದು ಸದಾಕಾಲವೂ ಅವರನ್ನು ಕಾಯುವ ಮಿಲಿಟರಿಯವರು. ನಮ್ಮ ಮನಸ್ಸಿನಲ್ಲೂ ಒಂದು ರೀತಿಯ ಭಯ, ನಾವು ಭರಕುಂಡಾದ ಕಥೆ ಕೇಳಿದ್ದೆವು. ಧೋತಿ, ಕುರ್ತಾ ಧರಿಸಿದ ಒಬ್ಬ ಓಡಲು ಪ್ರಯತ್ನಿಸಿದ್ದ, ಆದರೆ ಓಡಲು ಶಕ್ತನಾಗಿರಲಿಲ್ಲ.

ಗಾಡಿ ಹೊರಟು ಹೋದ ನಂತರ ನೋಡಿದೆ. ಮುಳ್ಳು ಬೇಲಿಯ ಆ ಕಡೆ ಆ ಇಬ್ಬರು ಹುಡುಗರು, ಕೊಂಚವೇ ಬಟ್ಟೆ ತೊಟ್ಟಿದ್ದ ಹದಿನೈದು ವರ್ಷದ ಹುಡುಗಿ ಮತ್ತೆ ಇಬ್ಬರು ಗಂಡಸರು ಹೊಲದ ಕೆಲಸ ಬಿಟ್ಟು ಬಂದು ಅಲ್ಲಿ ನಿಂತಿದ್ದರು. ಗಾಡಿ ಹೊರಟು ಹೋದ ಮೇಲೆ ಅವರು ತಮ್ಮ ತಮ್ಮೊಳಗೆ ಏನೋ ಮಾತನಾಡಿಕೊಂಡರು. ನಕ್ಕರು, ಹಾಗೇ ನಗುತ್ತಲೇ ಮಹತೊ ಹಳ್ಳಿಯತ್ತ ನಡೆಯತೊಡಗಿದರು.

ಆ ದಿನದ ನಂತರ ಗಾಡಿ ಬಂದಾಗ ಒಂದು – ಎರಡು – ನಾಲ್ಕು – ಐದು ಹೀಗೆ ಜನ ಹೊಲಗಳಿಂದ ಇತ್ತ ಓಡಿ ಬರಲು ಪ್ರಾರಂಭಿಸುತ್ತಿದ್ದರು. ಗಾಡಿಯಲ್ಲಿ ಖಾಕಿ ಬಟ್ಟೆಯನ್ನು ಕಂಡೊಡನೆ ಅವರಿಗೆ ಅರ್ಥವಾಗುತ್ತಿತ್ತು. ಬೆಳಿಗ್ಗೆ ಎರಡು ಪ್ಯಾಸೆಂಜರ್ ಗಾಡಿಗಳೂ ಮೇಲ್ ಗಾಡಿಯಂತೆಯೇ ಭರ್ರನೆ ತೂರಿ ಹೋಗುತ್ತಿದ್ದುವು. ಒಂದೆರಡು ಗುಡ್ಸ್ ಗಾಡಿಗಳು ಟಕಟಕ ಅಂತಾ ಹೋಗುತ್ತಿದ್ದುವು. ಅವೂ ನಿಲ್ಲುತ್ತಿರಲಿಲ್ಲ. ಇದನ್ನು ತಿಳಿದಿದ್ದ ಮಹತೊ ಹಳ್ಳಿಯ ಜನ ಗುಂಪು ಸೇರುತ್ತಿರಲಿಲ್ಲ.

ಒಂದು ದಿನ ನಾನು ಹೋಗಿ ಮಹತೊ ಹಳ್ಳಿಯ ಮುದುಕನೊಡನೆ ಹೇಳಿದೆ, "ನೀವೂ ಗುಡಾರದೊಳಗೆ ಹೋಗಿ ಸಾಗು, ಪಲ್ಯ, ಮೀನು ಮುಂತಾದವುಗಳನ್ನು ಮಾರಾಟ ಮಾಡಿ."

ಮುದುಕ ನಗುತ್ತಾ ನುಡಿದ "ಹೊಲದ ಕೆಲಸ ಬಿಟ್ಟು ಬರಲಾರೆ." ನಾನು ಆಶ್ಚರ್ಯಚಕಿತವಾಗಿ ಕಪ್ಪು ಲಂಗೋಟಿ ಧರಿಸಿದ ಕಪ್ಪು ಮನುಷ್ಯರು ಹಾಗೂ ಕಡಿಮೆ ಬಟ್ಟೆ ಧರಿಸಿದ ಹುಡುಗಿಯರನ್ನು ನೋಡುತ್ತಿದ್ದೆ. ಮಹತೊದ ಮುದುಕನ ಎದೆಯು ನಗ್ನವಾಗಿತ್ತು. ಕಾಲಿನಲ್ಲಿ ಚಪ್ಪಲಿ ಮೆಟ್ಟಿದ್ದ, ಅದು ಬಹುಶಃ ಹಳ್ಳಿಯ ಚಮ್ಮಾರನೇ ತಯಾರಿಸಿದ್ದ ಚಪ್ಪಲಿ. ಈ ಎಲ್ಲರೂ ಮುಳ್ಳು ಬೇಲಿಯ ಆ ಕಡೆ ಬಂದು ನಿಲ್ಲುತ್ತಿದ್ದರು.

ಗಾಡಿ ಅದೇ ತಾನೇ ಬಂದು ನಿಂತಿತ್ತು. ಅಮೇರಿಕನ್ ಸಿಪಾಯಿಗಳು ಟಪ್ ಟಪ್ ಎಂದು ಗಾಡಿಯಿಂದಿಳಿದಿದ್ದರು. ಮಗ್, ತಟ್ಟೆ ಅವರ ಕೈಯಲ್ಲಿದ್ದವು. ಬಿ.ಎಫ್.ತ್ರಿ.

ಥರ್ಟಿ–ಟೂ ನ ಎರಡು ನೂರ ಹದಿನೆಂಟು ಜನರಿಗೆ ಬೆಳಗಿನ ಉಪಹಾರ ಸಿದ್ಧವಾಗಿತ್ತು. ಬಿ.ಎಫ್.ತ್ರಿ. ಥರ್ಟಿ–ಟೂ ನ ಅರ್ಥವೇ 'ಮೊಟ್ಟೆ ನಿಲ್ದಾಣ'.

ಆಗ ಚಳಿ ಹೆಚ್ಚಾಗಲು ಪ್ರಾರಂಭವಾಗಿತ್ತು. ದೂರದ ಬೆಟ್ಟ ಮಂಜಿನ ಹೊದಿಕೆ ಹೊದೆದಿತ್ತು. ಗಿಡ ಮರಗಳು ಮಿಂಚಿನಿಂದ ತೊಯ್ದು ಹಸುರಾಗಿ ಕಳಕಳಿಸುತ್ತಿದ್ದವು. ಒಬ್ಬ ಸೈನಿಕ ಜೋರಾಗಿ ಕೂಗಿ ತನ್ನ ಸಂತೋಷವನ್ನು ವ್ಯಕ್ತಪಡಿಸಿದ. ಇನ್ನೊಬ್ಬ ಸೈನಿಕ ರೈಲುಗಾಡಿಯ ಬೋಗಿಯಲ್ಲಿ ನಿಂತು ಮುಳ್ಳು ಬೇಲಿಯ ಹೊರಗೆ ದೃಷ್ಟಿ ಹರಿಸಿದ್ದ.

ಇದ್ದಕ್ಕಿದ್ದಂತೆಯೇ ಆತ ಕಾಫಿಯ ಮಗ್ ಅನ್ನು ಮೆಟ್ಟಿಲ ಮೇಲೆ ಇರಿಸಿ ತನ್ನ ಪ್ಯಾಂಟಿನ ಹಿಂದಿನ ಜೇಬಿಗೆ ಕೈ ಹಾಕಿದ. ಅದರಿಂದ ಎಂಟು ಆಣೆ ತೆಗೆದು ಮಹತೊ ಜನರತ್ತ ಎಸೆದ.

ಅವರು ಆಶ್ಚರ್ಯಚಕಿತರಾಗಿ ಸೈನಿಕರನ್ನು ದಿಟ್ಟಿಸುತ್ತಿದ್ದರು. ಮುಳ್ಳು ಬೇಲಿಯ ಒಳಗೇ ಶುಭ್ರ ನೆಲದ ಮೇಲೆ ಬಿದ್ದಿದ್ದ ಆ ಎಂಟು ಆಣೆಯನ್ನೇ ಅವರು ನೋಡುತ್ತಿದ್ದರು. ಗಾಡಿ ಹೊರಟ ನಂತರ ಈ ಜನರು ಸುಮ್ಮನೇ ಹೊರಟರು. ನಾನು ಕೂಗಿ ಹೇಳಿದೆ "ಸಾಹೇಬರು ಇನಾಮು ಕೊಟ್ಟಿದ್ದಾರೆ ಸ್ವೀಕರಿಸಿ." ಒಬ್ಬರು ಇನ್ನೊಬ್ಬರ ಮುಖವನ್ನು ನೋಡ ಹತ್ತಿದರು, ಆದರೆ ಯಾರೂ ಮುಂದೆ ಬರಲಿಲ್ಲ.

ಎಂಟಾಣೆ ತೆಗೆದುಕೊಂಡು ನಾನೇ ಮಹತೋದ ಮುದುಕನಿಗೆ ಕೊಟ್ಟೆ. ಆತನು ಬೇವ್‌ಕೂಫನಂತೆ ನನ್ನತ್ತ ನೋಡತೊಡಗಿದ, ಅನಂತರ ಎಲ್ಲರೂ ಸುಮ್ಮನೆ ಹೊರಟುಹೋದರು. ಯಾರ ಬಾಯಲ್ಲೂ ಏನೂ ಮಾತಿಲ್ಲ.

ಗುತ್ತಿಗೆದಾರನ ತ್ಯಾಪೇದಾರಿ ಕೆಲಸ ನನಗೆ ಕೊಂಚವೂ ಹಿಡಿಸುತ್ತಿರಲಿಲ್ಲ. ಯಾರಿಗೂ ಬೆಲೆ ಇಲ್ಲ, ಒಂದೂ ಪ್ಯಾಸೆಂಜರ್ ಗಾಡಿ ಅಲ್ಲಿ ನಿಲ್ಲುತ್ತಿರಲಿಲ್ಲ. ಗುಡಾರದಲ್ಲಿ ಭಗವತಿಲಾಲ್, ಮೂರು ಜನ ಕೂಲಿಗಳು ಮತ್ತು ನಾನು. ಬೇಜಾರು ಹಿಡಿಸುವ ಒಬ್ಬಂಟಿತನ. ಇಲ್ಲಿಯ ನೆಲ ಒಣಗಿತ್ತು, ಮಧ್ಯಾಹ್ನದ ಬಿಸಿಲು ತೀಕ್ಷ್ಣವಾಗಿತ್ತು. ಅಲ್ಲದೆ ನನ್ನ ಮನಸ್ಸು ಒಣಗಿತ್ತು.

ಮಹತೊ ಹಳ್ಳಿಯವರು ಯಾರೂ ಅಲ್ಲಿ ಸುಳಿಯುತ್ತಿರಲಿಲ್ಲ. ಆಗಾಗ್ಗೆ ನಾನು ಹಳ್ಳಿಗೆ ಹೋಗಿ ತರಕಾರಿ, ಮೀನು ಮುಂತಾದವುಗಳನ್ನು ಕೊಂಡು ತರುತ್ತಿದ್ದೆ. ಅವರು ಮಾರಲು ಬರುತ್ತಿರಲಿಲ್ಲ, ಆದರೆ ಮೂರು ಮೈಲಿ ದೂರವಿದ್ದ ಭುರ್‌ಕುಂಡಾ ಪೇಟೆಗೆ ನಡೆದು ಹೋಗುತ್ತಿದ್ದರು.

ಕೆಲದಿನಗಳಿಂದ ಯಾವ ಗಾಡಿಯ ಸಮಾಚಾರವೂ ಇರಲಿಲ್ಲ, ಎಲ್ಲವೂ ಸ್ತಬ್ಧವಾಗಿತ್ತು. ಇದ್ದಕ್ಕಿದ್ದಂತೆಯೇ ಒಂದು ದಿನ ಉಡಿದಾರಕ್ಕೆ ಲೋಹದ ತುಂಡನ್ನು ಕಟ್ಟಿದ್ದ ಆ ಹುಡುಗ ಬಂದು ನನ್ನನ್ನು ಪ್ರಶ್ನಿಸಿದ, "ಸಾರ್ ಗಾಡಿ ಬರುವುದಿಲ್ಲವೆ ?"

ನಾನು ನಕ್ಕುಬಿಟ್ಟೆ, ನುಡಿದೆ "ಬರುತ್ತದೆ."

ಹುಡುಗನೇದನು ತಪ್ಪು ? ಹಳ್ಳಿಗರಿಂದ ತುಂಬಿದ ಬಸ್ಸನ್ನು ನೋಡಲೇ ಆ ಜನರಿಗೆ ಎರಡು ಮೈಲಿ ದೂರ ಕಲ್ಲು, ಮುರಳಿನಲ್ಲಿ ನಡೆಯಬೇಕಾಗುತ್ತಿತ್ತು. ಬೆಳಗ್ಗೆ ಒಂದು ಪ್ಯಾಸೆಂಜರ್ ತನ್ನ ವೇಗವನ್ನು ಕಡಿಮೆ ಮಾಡಿಕೊಳ್ಳದೆ ಸರ್ರನೆ

ಹೊರಟುಹೋಯಿತು. ಸಂಜೆಗೆ ಬರುವ ಗಾಡಿಯು ಗತಿಯೂ ಇದೇ ಆಗಿತ್ತು. ಆದರೆ ಅಸ್ಪಷ್ಟವಾಗಿ ಕಾಣುತ್ತಿದ್ದ ಈ ಮುಖಗಳನ್ನು ನೋಡಲೆಂದೇ ನಾವು ಗುಡಾರದ ಹೊರಗೆ ಓಡುತ್ತಿದ್ದೆವು. ಮನುಷ್ಯರನ್ನೇ ನೋಡದೆ ಯಾರಾದರೂ ಮನುಷ್ಯರು ಕಂಡಾರೆಯೆ ಎಂದು ನಮ್ಮ ಮನಸ್ಸು ತವಕಗೊಂಡಿರುತ್ತಿತ್ತು.

ಆದ್ದರಿಂದಲೇ ಅಮೇರಿಕನ್ ಸೈನಿಕರ ಸ್ಪೆಷಲ್ ಗಾಡಿ ಬರುತ್ತಿರುವ ಸುದ್ದಿ ತಿಳಿದಾಗ ಆಗುತ್ತಿದ್ದ ಬೇಸರಕ್ಕಿಂತ ಜನರನ್ನು ನೋಡುವ ಉತ್ಸಾಹ ಹೆಚ್ಚಾಗಿರುತ್ತಿತ್ತು. ಕೆಲದಿನಗಳ ನಂತರ, ಮಾರನೆಯ ದಿನ ತುಂಬಾ ಮಿಲಿಟರಿ ಸ್ಪೆಷಲ್ ಗಾಡಿ ಬರುತ್ತಿದೆ ಎಂದು ಸುದ್ದಿ ಬಂತು. ಕೂಡಲೇ 'ಜಿಐ' ಜನರು ಬಂದಿಳಿದರು. ಸಾಲಾಗಿ ನಿಂತು ಮೊಟ್ಟೆ, ಬ್ರೆಡ್, ಕಾಫಿಯನ್ನು ಸ್ವೀಕರಿಸಿದರು.

ಇದ್ದಕ್ಕಿದ್ದಂತೆಯೇ ನನ್ನ ದೃಷ್ಟಿ ಮುಳ್ಳು ತಂತಿಯ ಹೊರಗೆ ಹರಿಯಿತು. ಮಹತೊ ಹಳ್ಳಿಯಿಂದ ಒಂದು ದೊಡ್ಡ ಗುಂಪು ಕಂಡು ಬಂತು. ಇಪ್ಪತ್ತು, ಮೂವತ್ತು ಮೀರಿ ಜನರಿದ್ದರು. ಚಿಕ್ಕ ಚಿಕ್ಕ ಮಕ್ಕಳೂ ಸಹ ಇದ್ದರು. ಚೂರು ಬಟ್ಟೆಯುಟ್ಟ ಹುಡುಗಿಯರೂ ಹತಾಶ ದೃಷ್ಟಿಯಿಂದ ನೋಡುತ್ತಿದ್ದರು. ಅವರನ್ನು ನೋಡಿದಾಗ ನನಗೇನೋ ಒಂದು ತರಹ ಹೆದರಿಕೆ ಆಯಿತು. ಭಗವತಿಲಾಲ್ ಹಾಗೂ ಮೂರು ಜನ ಕೂಲಿಗಳು ಮಹತೊ ಹಳ್ಳಿಯತ್ತ ಹೊರಟು ಹೋಗಿದ್ದರೆ ಮತ್ತಷ್ಟು ಭಯವಾಗುತ್ತಿತ್ತು.

ಪ್ಲಾಟ್‌ಫಾರಂ ಅನ್ನುವುದೇನು ಇರಲಿಲ್ಲ. ಇಳಿದು ಹತ್ತಲು ಅನುಕೂಲವಾಗುವಂತೆ ಮರದ ತೊಲೆಗಳನ್ನು ಹಾಕಿ ಎರಡು ನಾಲ್ಕು ಅಡಿ ಮಾತ್ರ ನಿಲ್ಲಿಸಲಾಗಿತ್ತು. ಮಿಕ್ಕೆಲ್ಲಾ ಭಾಗವನ್ನು ಎತ್ತರಿಸಲಾಗಿತ್ತು. ಅಮೇರಿಕನ್ ಸಿಪಾಯಿಗಳು ಅಲ್ಲಿ ಅಡ್ಡಾಡುತ್ತಾ ಕಾಫಿಯನ್ನು ಕುಡಿಯುತ್ತಿದ್ದರು. ಒಂದಿಬ್ಬರು ಸೈನಿಕರು ಕುತೂಹಲದಿಂದ ಮಹತೊ ಹಳ್ಳಿಯ ಆ ಗುಂಪನ್ನು ನೋಡುತ್ತಿದ್ದರು.

ಇದ್ದಕ್ಕಿದ್ದಂತೆಯೇ ಒಬ್ಬ ಸೈನಿಕ ಭಗವತಿಲಾಲ್‌ನತ್ತ ಹೋಗಿ ತನ್ನ ಜೇಬಿನಿಂದ ಪರ್ಸ್ ತೆಗೆದು ಎರಡು ರೂಪಾಯಿಯ ನೋಟನ್ನು ಹೊರತೆಗೆದು ಪ್ರಶ್ನಿಸಿದ, "ಚಿಲ್ಲರೆ ಇದೆಯೇ ?"

ಚಿಲ್ಲರೆಯನ್ನು ಸೈನಿಕರು ಇಡುವುದಿಲ್ಲ. ಅಂಗಡಿಯವನಿಗೆ, ಟ್ಯಾಕ್ಸಿಯವನಿಗೆ ಇವರು ಸಾಮಾನ್ಯವಾಗಿ ಚಿಲ್ಲರೆಯನ್ನು ನೀನೇ ಇಟ್ಟುಕೋ ಅನ್ನುತ್ತಾರೆ. ರಾಂಚಿಯಲ್ಲಿ ನಾನು ಹೀಗೆ ಪಡೆಯುತ್ತಿದ್ದುದನ್ನು ನೋಡಿದ್ದೆ. ಒಂದಾಣೆ, ಎರಡಾಣೆ, ನಾಲ್ಕಾಣೆಯಾಗಿ ಭಗವತಿಲಾಲ್ ಚಿಲ್ಲರೆಯನ್ನು ಎಣಿಸುತ್ತಿದ್ದ. ಇದ್ದಕ್ಕಿದ್ದಂತೆಯೇ ನಾನು ನೋಡಿದೆ, ಸೊಂಟದ ಹಗ್ಗಕ್ಕೆ ಲೋಹದ ತುಂಡನ್ನು ಕಟ್ಟಿಕೊಂಡಿದ್ದ ಹುಡುಗ ಮುಳ್ಳು ಬೇಲಿಯೊಳಗೆ ಕೈ ತೂರಿಸಿ ಏನೋ ಬೇಡುತ್ತಿದ್ದ, ಮುಖದಲ್ಲಿ ಮುಗುಳ್ನಗೆ ಇತ್ತು.

ಭಗವತಿಲಾಲ್‌ನಿಂದ ಪಡೆದ ಚಿಲ್ಲರೆಯನ್ನು ಆ ಅಮೇರಿಕನ್ ಸೈನಿಕ ಮಹತೊ ಹಳ್ಳಿಯ ಜನರತ್ತ ಎಸೆದುಬಿಟ್ಟ.

ನಾನು ಅಷ್ಟು ಹೊತ್ತಿಗೆ ಸಪ್ಲೈ ಫಾರಂಗೆ ಓ.ಕೆ. ಬರೆಸಿಕೊಂಡಿದ್ದೆ. ಗಾರ್ಡ್ ಆಗಲೇ

ಶಿಳ್ಳೆ ಊದಿದ್ದ.

ಗಾಡಿ ಹೊರಟಿತ್ತು. ನನ್ನ ದೃಷ್ಟಿ ಮಹತೊ ಜನಗಳತ್ತ ಹರಿಯಿತು. ಆ ಜನಗಳು ಈಗಲೂ ಸುಮ್ಮನೆ ನಿಂತಿದ್ದರು. ಇಣಿಕಿ ನೋಡುತ್ತಿದ್ದರು ಅನಂತರ ಇದ್ದಕ್ಕಿದ್ದಂತೆಯೆ ಆ ಜನ ಕೆಂಪು ಕಲ್ಲು ನೆಲದ ಮೇಲೆ ಬಿದ್ದಿದ್ದ ಚಿಲ್ಲರೆಯ ಮೇಲೆ ಮುಗಿಬಿದ್ದರು. ಸೊಂಟಕ್ಕೆ ಲೋಹದ ತುಂಡನ್ನು ಸಿಕ್ಕಿಸಿಕೊಂಡಿದ್ದ ಆ ಹುಡುಗ, ಹಾಗೂ ಹರಿದಾರಕ್ಕೆ ಸತುವಿನ ಯಂತ್ರ ಕಟ್ಟಿಕೊಂಡಿದ್ದ ಇನ್ನೊಬ್ಬ ಹುಡುಗ ಇಬ್ಬರೂ ಇದ್ದರು.

ಅದೇ ಸಮಯಕ್ಕೆ ಚಪ್ಪಲಿ ಮೆಟಿದ್ದ ಮುದುಕ ಕಿರುಚಿದ 'ಖಬರ್‌ದಾರ್ !'

ಆತ ಎಷ್ಟು ಜೋರಾಗಿ ಚೀರಿದನೆಂದರೆ ನಾನೂ ಬೆಚ್ಚಿ ಬಿದ್ದೆ. ಆದರೆ ಮಕ್ಕಳು ಇವನ ಮಾತನ್ನು ಕೇಳಲಿಲ್ಲ. ಅಷ್ಟು ಹೊತ್ತಿಗೆ ಯಾರ್ಯಾರಿಗೆ ಎಷ್ಟೆಷ್ಟು ಸಿಕ್ಕಿತೋ ಅಷ್ಟು ದಕ್ಕಿತ್ತು. ಒಂದಾಣೆ, ಎರಡಾಣೆ, ಅವರವರ ಅದೃಷ್ಟ. ಅವರ ಮುಖದ ಮೇಲಿದ್ದ ನಗು ಮುಸುಕು ತೆರೆದ ಜೋಳದ ತೆನೆಯಂತಿತ್ತು. ಹೆಂಗಸರು, ಗಂಡಸರು ಎಲ್ಲರೂ ನಗುತ್ತಿದ್ದರು.

ಚಪ್ಪಲಿ ಧರಿಸಿದ್ದ ಮಹತೊ ಮುದುಕ ನಿರಂತರ ಏನೋ ಹೇಳುತ್ತಿದ್ದ. ಜನಗಳು ಬಿದ್ದು ಬಿದ್ದು ನಗುತ್ತಿದ್ದರು. ಮಹತೋ ಮುದುಕ ಸಿಟ್ಟಿನಿಂದ ಗರ್ಜಿಸುತ್ತಾ ಹಳ್ಳಿಯತ್ತ ನಡೆಯುತ್ತಿದ್ದರು.

ಇವರೆಲ್ಲಾ ಹೊರಟು ಹೋದ ಮೇಲೆ ಮೊಟ್ಟೆ ನಿಲ್ದಾಣದಲ್ಲಿ ಅದೇ ಏಕಾಂತ ಅದೇ ಶೂನ್ಯತೆ ನೆಲೆಸಿತು. ಒಮ್ಮೊಮ್ಮೆ ನನ್ನ ಮನಸ್ಸು ಬಹು ಉದಾಸೀನಗೊಳ್ಳುತ್ತಿತ್ತು. ದೂರ ದೂರದಲ್ಲಿ ಬೆಟ್ಟಗಳಿದ್ದವು. ಮಧೂಕ ಮರಗಳ ವನವಿತ್ತು. ಕಾಚಿನ ಬಣ್ಣದ ಗಿಡಮರಗಳು ಇದ್ದವು. ಇನ್ನು ಇವೆಲ್ಲಕ್ಕೂ ಮುಂದೆ ಒಂದು ಸಣ್ಣ ನದಿ ಇತ್ತು. ಆ ನದಿಯಲ್ಲಿ ನೀರು ಜುಳುಜುಳು ಹರಿಯುತ್ತಿತ್ತು. ಇದಾದ ನಂತರ ಮಹತೋ ಹಳ್ಳಿಯ ಫಲವತ್ತಾದ ಭೂಮಿ, ಇದನ್ನು ಕಂಡು ಕಣ್ಣು ತೃಪ್ತಿಗೊಳ್ಳುತ್ತಿತ್ತು. ಅದೇ ಹಳ್ಳಿಯವರು ಆ ಲಂಗೋಟಿಧಾರಿ ಮನುಷ್ಯರು.

ಇಲ್ಲೇ ಆಗಾಗ್ಯೆ ಅಮೇರಿಕನ್ ಸಿಪಾಯಿಗಳ ಗಾಡಿ ಬಂದು ನಿಲ್ಲುತ್ತಿತ್ತು. ಮೊಟ್ಟೆ, ಬ್ರೆಡ್, ಕಾಫಿ ಕುಡಿದು ಅವರು ಹೋಗುತ್ತಿದ್ದರು. ಮಹತೋ ಹಳ್ಳಿಯ ಗುಂಪು ಸೇರುತ್ತಿತ್ತು. ಮುಳ್ಳು ತಂತಿಯ ಹೊರಗೆ ಸಾಲಾಗಿ ನಿಂತು ಇವರು ಕೂಗುತ್ತಿದ್ದರು "ಸಾಬ್ ಭಕ್ಷಿಸ್."

ಒಂದೇ ಸಾರಿಗೆ ನಾಲ್ಕಾರು ಹಳ್ಳಿಗರು ಕೂಗುತ್ತಿದ್ದರು. ಮೇಜರ್ ಸಾಬ್‌ನಿಂದ ಪತ್ರಕ್ಕೆ ಓಕೆ ಪಡೆಯುವಾಗ ಬೆದರಿ ಅತ್ತ ನೋಡಿದೆ. ಅಲ್ಲಿ ಅವರಿಬ್ಬರೇ ಹುಡುಗರಿರಲಿಲ್ಲ. ಕೆಲವು ಯುವಕರೂ ಇದ್ದರು, ಕೈ ಚಾಚುತ್ತಿದ್ದರು. ಚಿಂದಿಬಟ್ಟೆಯ ಒಬ್ಬ ಹುಡುಗಿಯೂ ಇದ್ದಳು. ಒಂದು ದಿನ ತರಕಾರಿ ಕೊಳ್ಳಲು ಹೋಗಿದ್ದೆ. ಆ ಹುಡುಗಿ ನಗುತ್ತಾ ಪ್ರಶ್ನಿಸಿದ್ದಳು "ಟಿರೇನ್ ಇಂದು ಬರುತ್ತದೆಯೋ ?" ಆಗಾಗ್ಯೆ ಈ ಜನ ಏನೋ ಕಾರಣವಿಲ್ಲದೆ ಗುಂಪುಗುಂಪಾಗಿ ಬಂದು ನಿಲ್ಲುತ್ತಿದ್ದರು, ಆನಂತರ ದಾರಿ ನೋಡಿ ನೋಡಿ ಹೋಗುತ್ತಿದ್ದರು.

ಮೂರು ನಾಲ್ಕು ಜನ ಅಮೇರಿಕನ್ನರು ಇಷ್ಟು ಹೊತ್ತಿಗೆ ತಮ್ಮ ಜೇಬಿನಿಂದ

ಎರಡಾಣೆ, ನಾಲ್ಕಾಣೆ ತೆಗೆದು ಅವರತ್ತ ಎಸೆಯುತ್ತಿದ್ದರು. ಗಾಡಿ ಹೊರಡುವ ತನಕವೂ ತಡೆಯುತ್ತಿರಲಿಲ್ಲ. ಈ ಜನ ಹೋದ ಮೇಲೆ ಬೀಳುತ್ತಿದ್ದರು ಮುಳ್ಳು ಬೇಲಿಗೆ ಯಾರದೊ ಕೈ, ಕಾಲು ತಗುಲಿ ಕಿತ್ತು ಬರುತ್ತಿತ್ತು. ಕೆಲವರ ಲಂಗೋಟಿ ಸಹ ಹರಿದು ಹೋಗುತ್ತಿತ್ತು.

ಗಾಡಿ ಹೊರಟುಹೋದ ನಂತರ ನಾನು ಅವರತ್ತ ಗಮನ ಹರಿಸಿದೆ. ನನಗನಿಸಿತು ಮಹತೊ ಹಳ್ಳಿಯ ಅರ್ಧದಷ್ಟಾದರೂ ಅಲ್ಲಿ ಸೇರಿದೆ. ಎಲ್ಲರ ಮುಖದಲ್ಲೂ ಮುಗುಳ್ನಗೆ ಹರಡಿತ್ತು. ಏತಕ್ಕೆಂದರೆ ಎಲ್ಲರಿಗೂ ಏನಾದರೂ ಹಣ ಸಿಕ್ಕೇ ಇತ್ತು. ಎಷ್ಟು ಸಾರಿ ಹುಡುಕಿದರೂ ಆ ಚಪ್ಪಲಿಧಾರಿ ಮುದುಕ ಮಾತ್ರ ಪುನಃ ಕಂಡುಬರಲಿಲ್ಲ. ಮಹತೋ ಮುದುಕ ಬಂದಿರಲಿಲ್ಲ. ಆ ದಿನ ಆತನ ಆಕ್ಷೇಪ, ಆತನ ಕೋಪ ಎಲ್ಲವನ್ನೂ ಸಹಿಸಿಕೊಂಡು ಹುಡುಗರು ಆಯ್ದ ಪೈಸೆಗಳನ್ನು ಎಸೆದಿರಲಿಲ್ಲ. ತೆಗೆದುಕೊಂಡಿದ್ದರು. ಇದಕ್ಕೆ ಬಹುಶಃ ಆ ಮುದುಕ ಕೋಪಗೊಂಡು ಬಂದಿರಲಾರ.

ಆ ಮುದುಕ ತಾನೊಬ್ಬನೆ ನೇಗಿಲು ಹಿಡಿದು ನೆಲವನ್ನು ಉಳುತ್ತಿರಬಹುದು ಎಂದು ಯೋಚಿಸುವುದರಲ್ಲೆ ನನಗೆ ಒಂದು ತರಹ ತೃಪ್ತಿ ಲಭಿಸಿತು.

ಭಗವತಿ ಲಾಲ್ ಸೇರಿದಂತೆ ನಾವು ಐದು ಜನ ಮೊಟ್ಟೆ ನಿಲ್ದಾಣದ ಗುಡಾರದಲ್ಲಿ ಹೇಗೋ ದಿನ ಕಳೆಯುತ್ತಿದ್ದೆವು. ಈ ಮಧ್ಯದಲ್ಲಿ ಸಿಪಾಯಿಗಳನ್ನು ತುಂಬಿದ ಗಾಡಿ ಬರುತ್ತಿತ್ತು, ನಿಲ್ಲುತ್ತಿತ್ತು, ಹೊರಟುಹೋಗುತ್ತಿತ್ತು. ಮಹತೋ ಹಳ್ಳಿಯ ಜನ ಮುಳ್ಳು ಬೇಲಿಯ ಹಿಂದೆ ನಿಂತು ಗುಂಪು ಸೇರುತ್ತಿದ್ದರು. ಕೈಚಾಚಿ ಕೂಗುತ್ತಿದ್ದರು "ಸಾಹೇಬ್ ಭಕ್ಷೀಸ್....."

ಆಕಸ್ಮಾತು ಒಂದು ದಿನ ಮಹತೋ ಮುದುಕನನ್ನು ನೋಡಿದೆ. ಇದೇ ತರಹ ಆತ ಆಗಾಗ್ಗೆ ಹೊಲದ ಕೆಲಸ ಬಿಟ್ಟು ತನ್ನ ಚಪ್ಪಲಿಯಿಂದ ಧೂಳು ಚಿಮ್ಮುತ್ತ ಜೋರಾಗಿ ನಡೆದು ಸಿಟ್ಟಿನಿಂದ ಅವರೆಲ್ಲರನ್ನು ಗದರಿಸುತ್ತಿದ್ದ, ಬೆದರಿಸುತ್ತಿದ್ದ. ಆದರೆ ಈತನ ಮಾತಿನತ್ತ ಯಾರೂ ಗಮನವನ್ನೇ ಹರಿಸುತ್ತಿರಲಿಲ್ಲ. ಆದ್ದರಿಂದ ಅಸಹಾಯಕ ದೃಷ್ಟಿಯನ್ನು ತನ್ನ ಹಳ್ಳಿಯ ಜನರತ್ತ ಬೀರುತ್ತಾ ನಿಂತುಬಿಡುತ್ತಿದ್ದ.

ಆದರೆ ಈತನತ್ತ ಯಾರೂ ತಿರುಗಿ ಸಹ ನೋಡುತ್ತಿರಲಿಲ್ಲ, ಸೈನಿಕರು ತಮ್ಮ ಹಿಂದಿನ ಜೇಬಿನಲ್ಲಿ ಕೈಇರಿಸಿ ಕೈಗೆ ಸಿಕ್ಕಿದಷ್ಟು ಚಿಲ್ಲರೆಯನ್ನು ಹೊರತೆಗೆದು ಆಹ್ಹ ಎಂದು ನಗುತ್ತಾ ಎಸೆಯುತ್ತಿದ್ದರು. ಮಹತೋ ಹಳ್ಳಿಯ ಜನ ಎದ್ದು ಬಿದ್ದು ಪೈಸೆಗಳನ್ನು ಆಯ್ದುಕೊಳ್ಳುತ್ತಿದ್ದರು. ತಮ್ಮತಮ್ಮಲ್ಲೇ ಜಗಳವಾಡುತ್ತಿದ್ದರು. ಒಬ್ಬರಿಂದ ಇನ್ನೊಬ್ಬರು ಕಿತ್ತುಕೊಳ್ಳುತ್ತಿದ್ದರು. ಇದನ್ನೆಲ್ಲಾ ನೋಡಿ ಸೈನಿಕರು ಗಹಗಹಿಸಿ ನಗುತ್ತಿದ್ದರು.

ಕೊನೆಯಲ್ಲಿ ಬಹಳ ದಿನ ಇದನ್ನೆಲ್ಲಾ ನೋಡಿದ ಮೇಲೆ ಚಪ್ಪಲಿ ಧರಿಸಿದ ಆ ಮುದುಕ ಅತ್ತ ಬರುವುದನ್ನೇ ನಿಲ್ಲಿಸಿದ. ಬೇರೆ ಜನರೂ ಮಹತೋ ಮುದುಕನ ಮೇಲೆ ಸಿಟ್ಟಾಗುವುದು, ಮಹತೋ ಮುದುಕ ಈ ಕಡೆ ಸುಳಿಯುವುದನ್ನೇ ಬಿಟ್ಟದ್ದು, ಈ ಎಲ್ಲಾ ಘಟನೆಗಳು ನನಗೆ ಮತ್ತು ಭಗವತಿ ಲಾಲ್‌ಗೆ ಕೆಟ್ಟದ್ದಾಗಿ ಕಾಣುತ್ತಿತ್ತು.

ಅಂತರ್ಯದಲ್ಲಿ ಅಂತಹ ಸಮಯದಲ್ಲಿ ಒಂದು ತರಹ ನಾಚಿಕೆ ಆಗೊತ್ತಿತ್ತು. ಈ ಜನಗಳ ಕಪ್ಪು ಮುಖ ದರಿದ್ರಾವಸ್ಥೆ ಇವುಗಳನ್ನು ನೋಡಿ ಸೈನಿಕರು ಇವರನ್ನು ಭಿಕ್ಷುಕರು ಎಂದು ತಿಳಿದಿರಬಹುದು. ಇದನ್ನು ನೆನದೇ ನನ್ನ ಮನಸ್ಸು ಉದಾಸೀನಗೊಳ್ಳುತ್ತಿತ್ತು.

ಆ ದಿನ ಈ ಜನ ಮುಳ್ಳು ಬೇಲಿಯ ಹೊರಗಡೆ ಬಕ್ಷೀಶ್... ಬಕ್ಷೀಶ್ ಎಂದು ಕೂಗುತ್ತಿದ್ದಾಗ ನಾನು ಖಾಕಿ ಬುಷ್‌ಷರ್ಟ್ ಧರಿಸಿದ್ದ ಗಾರ್ಡ್ ಜಾನಕಿನಾಥ್‌ನ ಜೊತೆ ಮಾತನಾಡುತ್ತಿದ್ದೆ. ನಮ್ಮ ಬದಿಯಲ್ಲೇ ಒಬ್ಬ ಆಫೀಸರ್ ಬೂಡ್ಸನ್ನು ಚುರ್ಚುರ್ ಎಂದು ಶಬ್ದ ಮಾಡುತ್ತಾ ಬಂದವನು, "ಬ್ಲಡಿ ಬೆಗ್ಗರ್ಸ್" ಎಂದು ಅರಚಿದ, ಆ ಸ್ವರ ಉಗುಳುತ್ತಿರುವಂತಿತ್ತು.

ನಾನು ಮತ್ತು ಜಾನಕೀನಾಥ್ ಒಬ್ಬರ ಮುಖವನ್ನೇ ಒಬ್ಬರು ನೋಡುತ್ತಾ ನಿಂತೆವು. ಅವಮಾನದಿಂದ ನಮ್ಮ ಮುಖ ಕಪ್ಪಾಗಿತ್ತು. ನಾನು ತಲೆ ಎತ್ತಿ ನೋಡದಾಗಿದ್ದೆ. ಅಸಹಾಯ ಸಿಟ್ಟಿನಿಂದ ಒಳಗೊಳಗೇ ದಹಿಸುತ್ತಿದ್ದೆ.

ಬ್ಲಡಿ ಬೆಗ್ಗರ್ಸ್ ! ಬ್ಲಡಿ ಬೆಗ್ಗರ್ಸ್ !

ನನ್ನ ಕೋಪವೆಲ್ಲಾ ಆ ಮಹತೊ ಹಳ್ಳಿಗರತ್ತ ತಿರುಗಿತ್ತು. ಗಾಡಿ ಹೊರಟು ಹೋದೊಡನೆಯೇ ಭಗವತಿಲಾಲ್ ಕರೆದುಕೊಂಡು ಹಿಂದೆ ಧಾಳಿ ಮಾಡಿದೆ. ಅವರು ಚೆಲ್ಲಿದ್ದ ಪೈಸೆಗಳನ್ನು ಆರಿಸಿ ತೆಗೆದುಕೊಂಡು ನಗುತ್ತಾ ಹಳ್ಳಿಯ ಕಡೆ ಓಡಿದರು.

ಆದರೂ ನಾನು ಅವರ ಈ ಲಜ್ಜಾಹೀನ ಕೆಲಸವನ್ನು ನನ್ನ ಆಂತರ್ಯದಲ್ಲೆ ಹುದುಗಿಸಿಟ್ಟುಕೊಂಡೆ. ಪರ್ವತದ ಶಿಬಿರದಂತೆ ಹಳ್ಳಿಯ ಆ ಮುದುಕನ ಮುಖ ಎದುರಿಗೆ ನಿಲ್ಲುತ್ತಿತ್ತು. ಆದರೆ ಅಂದು ನನ್ನ ಮನಸ್ಸಿನ ಜ್ವಾಲೆಯೆಲ್ಲಾ ಒಮ್ಮೆಗೆ ತಣ್ಣಗಾಗಿತ್ತು. ಮುರ ಕುಂಡಾದಲ್ಲಿ ಗುತ್ತಿಗೆದಾರನನ್ನು ಭೇಟಿ ಮಾಡಲು ಹೋಗಿದ್ದೆ. ಅಲ್ಲೇ ಈ ಸುದ್ದಿ ತಿಳಿದುದು.

ಆಗ ಇಬ್ಬರು ಕೂಲಿಗಳು ಟೇಬಲ್‌ಗಳನ್ನು ಅಣಿಗೊಳಿಸುತ್ತಿದ್ದರು. ಆ ಎರಡು ಡ್ರಂಗಳನ್ನು ಕಾಲಿನಿಂದ ಮುಳ್ಳು ಬೇಲಿಯತ್ತ ತಳ್ಳುತ್ತಿದ್ದರು. ಗುಡಾರದ ಹಗ್ಗಗಳನ್ನು ಯಾರೋ ಬಿಚ್ಚುತ್ತಿದ್ದ. ಭಗವತಿಲಾಲ್ ಡ್ರಂ ಬಡಿದು ಹೇಳಿದ, 'ಆಟ ಮುಗೀತು.. ಆಟ ಮುಗೀತು.'

ಇದ್ದಕ್ಕಿದ್ದಂತೆಯೇ ಕೇಳಿ ಬಂದ ಗಲಾಟೆಯಿಂದ ಬೆಚ್ಚಿ ಬಿದ್ದೆ, ಹಿಂದೆ ತಿರುಗಿ ನೋಡಿದೆ. ಮಹತೊ ಹಳ್ಳಿಯ ಜನರೆಲ್ಲಾ ಓಡುತ್ತಾ ಅತ್ತ ಬರುತ್ತಿದ್ದರು.

ನಾವು ಆಶ್ಚರ್ಯಚಕಿತರಾಗಿ ಅವರನ್ನು ನೋಡುತ್ತಿದ್ದೆವು. ಏಕೋ ಭಗವತಿಲಾಲ್ ನಗಲು ಪ್ರಾರಂಭಿಸಿದ್ದ, ಇಷ್ಟು ಹೊತ್ತಿಗೆ ಬೇಲಿಯ ಹಿಂದೆ ಜನಗಳ ಗುಂಪು ಸೇರಿತ್ತು.

ಆ ಕ್ಷಣ ಗಾಡಿ ಬರುತ್ತಿರುವ ಸದ್ದು ಕೇಳಿಸಿತು.

ತಿರುಗಿ ನೋಡಿದರೆ ಆ ಗಾಡಿ ಮೊಟ್ಟೆ ನಿಲ್ದಾಣದತ್ತಲೇ ಬರುತ್ತಿತ್ತು. ಕಿಟಕಿಗಳಲ್ಲಿ ಖಾಕಿ ಉಡುಪು ಕಾಣಿಸುತ್ತಿತ್ತು.

ನಾವು ಗಾಬರಿಗೊಂಡೆವು, ಆಶ್ಚರ್ಯಚಕಿತರಾದೆವು. ನೆರಕುಂಡಾ ಆಫೀಸಿನವರು ವಾರ್ತೆ ಕಳುಹಿಸುವುದನ್ನು ಮರೆತರು. ಅಥವಾ ಸುದ್ದಿ ನಮಗೆ ತಲುಪಿಲ್ಲವೆ?

ಅಥವಾ ಎಲ್ಲವೂ ತಪ್ಪೆ ?

ಗಾಡಿ ಹತ್ತಿರ ಬಂದಂತೆ ಅದರ ಶಬ್ದ ವಿಚಿತ್ರವಾದ ನಾದ ಲಹರಿಯನ್ನು ಎಬ್ಬಿಸಿತ್ತು. ಆದರೆ ಅದು ಶಬ್ದವಾಗಿರಲಿಲ್ಲ. ಗಾನ ಲಹರಿಯಾಗಿತ್ತು. ಗಾಡಿ ಹತ್ತಿರ ಬಂದಾಗ ಅರ್ಥವಾಯಿತು, ಗಾಡಿಯಲ್ಲಿನ ಸೈನಿಕರು ಒಬ್ಬರನ್ನೊಬ್ಬರು ತಬ್ಬಿಕೊಂಡು ಹಾಡುತ್ತಿದ್ದರು. ನಾನು ತಬ್ಬಿಬ್ಬಾಗಿ ಗಾಡಿಯನ್ನು ನೋಡಿದೆ. ಮತ್ತೊಮ್ಮೆ ಮುಳ್ಳು ಬೇಲಿಯ ಆ ಕಡೆಯಿದ್ದ ಗುಂಪನ್ನು ದಿಟ್ಟಿಸಿದೆ. ಆಗಲೇ ನನ್ನ ದೃಷ್ಟಿ ಮಹತೊ ಮುದುಕನ ಮೇಲೆ ಬಿದ್ದದ್ದು. ಗುಂಪಿನ ಜೊತೆ ತಾನು ಸೇರಿ ಮುದುಕನೂ ಕೈ ಸೀಟಿ ಕೂಗುತ್ತಿದ್ದ "ಸಾಹೇಬ್ ಬಕ್ಷೀಶ್."

ಹುಚ್ಚರಂತೆ, ಭಿಕಾರಿಗಳಂತೆ ಅವರು ಅರಚುತ್ತಿದ್ದರು. ಆ ಜನ ! ಆ ಮುದುಕ, ಎಲ್ಲರೂ ! ಆದರೆ ಅಮೇರಿಕನ್ ಸೈನಿಕರ ಆ ಗಾಡಿ ದಿನದಂತೆ ಇಂದು ವೊಟ್ಟೆ ಸ್ಟೇಷನ್‌ನಲ್ಲಿ ನಿಲ್ಲಲಿಲ್ಲ. ಪ್ಯಾಸೆಂಜರ್ ಗಾಡಿಗಳಂತೆ ವೊಟ್ಟೆ ನಿಲ್ದಾಣವನ್ನು ಉಪೇಕ್ಷಿಸಿ ಬಿರುಗಾಳಿಯಂತೆ ಹೊರಟುಹೋಯಿತು. ನಮಗೆ ಗೊತ್ತಿತ್ತು ಇನ್ನು ಎಂದೂ ಆ ಗಾಡಿ ಇಲ್ಲಿ ನಿಲ್ಲುವುದಿಲ್ಲ ಎಂದು.

ಗಾಡಿ ಹೊರಟುಹೋಯಿತು. ಆದರೆ ಮಹತೊ ಹಳ್ಳಿಯ ಎಲ್ಲರೂ ಭಿಕ್ಷುಕರಾದರು. ಹೊಲಗಳಲ್ಲಿ ಕೆಲಸ ಮಾಡುವ ಕೃಷಿಕರು, ಇಂದು ಎಲ್ಲರೂ ಭಿಕ್ಷುಕರು.

# ಇಸ್ಪೀಟ್ ಮನೆ

*ಸೈಯದ್ ಮುಸ್ತಫಾ ಸಿರಾಜ್*

ದೀಪಕ್ ಮಿತ್ರ

ಎಷ್ಟು ದೂರ ನಾನು ಓಡಿ ಬಂದಿದ್ದೇನೆ, ರಸ್ತೆಯ ಎರಡೂ ಕಡೆ ಒಂದು ಮನೆಯ ಬಾಗಿಲೂ ತೆರೆದಿರುವುದನ್ನು ನೋಡಲಿಲ್ಲ. ಯಾರೂ ಮನುಷ್ಯರೂ ಕಂಡುಬರಲಿಲ್ಲ. ನಗರದಲ್ಲಿ ಬ್ಲಾಕ್‌ಔಟ್ ಇರುವಂತೆ ಸುತ್ತಲೂ ಕಾಳಕತ್ತಲು ಹರಡಿದೆ. ರಸ್ತೆ ಮಳೆಯಿಂದ ನೆಂದಿದೆ. ಆಗಿನ ನಿಶ್ಯಬ್ದತೆಯೂ ವಿಚಿತ್ರವೆನಿಸಿತ್ತು. ಆಗಲೇ ರಾತ್ರಿ ಹತ್ತುಗಂಟೆ. ನಗರ ಒಂದು ವೇಳೆ ಎಚ್ಚತ್ತಿದ್ದರೆ ಈ ಘಟನೆ ಮೂಕವಿಸ್ಮಿತಗೊಳಿಸುತ್ತಿದ್ದುದರಲ್ಲಿ ಸಂದೇಹವಿಲ್ಲ. ಮನುಷ್ಯನ ರಕ್ತ ತಣ್ಣಗಾಗುತ್ತಿತ್ತು. ರಾಮ್, ಶಾಮ್, ಯದುಬಾಬು ಕೈಯಲ್ಲಿ ಚೀಲ ಹಿಡಿದು ಆಲೂಗೆಡ್ಡೆ, ಪಡವಲಕಾಯಿಯ ಬೆಲೆ ಕೇಳುತ್ತಿದ್ದರು, ಚಪ್ಪಲಿಯ ಕೆಳಗೆ ಬಿಸಿರಕ್ತ ಇತ್ತು, ಆದರೆ ರಕ್ತಕ್ಕೆ ಮಾತು ಬಾರದು.

ಹಿಂದೆ ದೂರದಲ್ಲಿ ಹೆಜ್ಜೆಯ ಶಬ್ದ ಕೇಳಿ ನಾನು ಇನ್ನೂ ಹೆಚ್ಚು ವೇಗದಿಂದ ಓಡತೊಡಗಿದೆ. ನನಗೆ ಗೊತ್ತು ಈಗ ನಾನು ಗಂಟಲು ಹರಿದು ಹೋಗುವಂತೆ ಕೂಗಿಕೊಂಡರೂ ಯಾವುದೂ ಬಾಗಿಲು ತೆರೆಯುವುದಿಲ್ಲ, ವಿಷಯ ಏನೆಂದು ಕುತೂಹಲದಿಂದಲೂ ಯಾರೂ ಕಿಟಕಿಯಿಂದಲೂ ಇಣಿಕಿ ಸಹ ನೋಡುವುದಿಲ್ಲ. ಇಂತಹ ಕೆಟ್ಟ ಸಮಯದಲ್ಲಿ ಜನಗಳು ತನ್ನ ಶರೀರವನ್ನು ಚಿಪ್ಪಿನೊಳಗೆ ಆಮೆ ಹುದುಗಿಟ್ಟುಕೊಳ್ಳುವಂತೆ, ಇವರು ತಮ್ಮ ಮನೆಯೊಳಗೇ ಹುದುಗಿ ಕುಳಿತುಕೊಳ್ಳುತ್ತಾರೆ. ಜೀವವಿಜ್ಞಾನದಲ್ಲಿ ನಾನು ಓದಿರುವಂತೆ ಆಮೆಗಳು ಶಬ್ದ ಮಾಡಲಾರವು.

ನಗರದ ಆ ಪ್ರದೇಶದ ಬಗ್ಗೆ ನನಗೆ ಪರಿಚಯವಿರಲಿಲ್ಲ. ಓಡುತ್ತಿದ್ದಂತೆ ಒಂದು ಸ್ವಾರಸ್ಯಕರ ವಿಷಯ ಅರಿವಾಯಿತು. ಇಂದು ನಾವು ಗರ್ವದಿಂದ ಹೇಳಬಹುದು. ಮನುಷ್ಯ ತಲುಪದಂತಹ ಸ್ಥಳವಾಗಲಿ, ನೀರಾಗಲಿ, ಅಂತರಿಕ್ಷವಾಗಲೀ ಈ ಪ್ರಪಂಚದಲ್ಲಿ ಇಲ್ಲ ಎಂದು. ಆದರೆ ಆಶ್ಚರ್ಯದ ವಿಷಯವೆಂದರೆ ಈ ಊರಿನಲ್ಲೇ ನಾನು ಇದುವರೆಗೆ ಹೆಜ್ಜೆ ಸಹ ಇಡದ ಅನೇಕ ಸ್ಥಳಗಳಿವೆ. ಮನುಷ್ಯನ ಅಹಂಕಾರಕ್ಕೆ ಎಣೆಯೆಲ್ಲಿ? ನಾನು, 27ವರ್ಷಗಳ, ಉತ್ಸಾಹ ತಂಬಿದ ಯುವಕ, ದೀಪಕ್ ಮಿತ್ರ.

ನಾನು ಬಹಳಷ್ಟು ಸ್ಥಳಗಳಿಗೆ ಹೋಗಲೂ ಅಶಕ್ತನಾಗಿದ್ದೇನೆ, ಅಲ್ಲದೆ ಏನನ್ನೂ ನಾನು ನೋಡಲು ಸಾಧ್ಯವಾಗಿಲ್ಲ. ನಾನು ನೋಡದೇ ಇರುವುದು ಅದು ಅದೆಷ್ಟು ಉಳಿದು ಹೋಗಿದೆ. ನನ್ನ ದುರ್ದೆಸೆಯ ಉತ್ತೇಜನಾಪೂರ್ಣ ಜೀವನ ವಿಪತ್ತುಗಳಿಂದ ಕೂಡಿದೆ. ಇದು ನೀರಮೇಲಿನ ಗುಳ್ಳೆಯಂತೆ ಯಾವಾಗ ಬೇಕಾದರೂ ಒಡೆದು ಹೋಗಬಹುದು. ಇದಕ್ಕೆ ಉಕ್ಕಿನ ಒಂದು ತುಂಡು ಸಾಕು. ಇದರ ಜೊತೆಯಲ್ಲಿ ನನ್ನ ಇಪ್ಪತ್ತೇಳು ವರ್ಷಗಳ ಜೀವನವೂ ವ್ಯರ್ಥವಾಗುತ್ತದೆ. ಈ ಪ್ರಪಂಚದ ಹಾಗೂ ಜೀವನದ ಬಹಳಷ್ಟು ವಿಷಯಗಳನ್ನು ಅರಿಯುವ ಮುನ್ನವೇ ನನ್ನನ್ನು ಸುಟ್ಟುಹಾಕಲಾಗುವುದು ಅಥವಾ ನೀರಿಗೆ ಎಸೆಯಲಾಗುವುದು. ನನ್ನ ಶರೀರ, ನಾಯಿ, ಕಾಗೆ, ನರಿಗಳ ಆಹಾರವಾಗುವುದು. ಹಾಯ್, ಹಣ್ಣಿನ ಹೋಳಿನಂತೆ ಸ್ವಾದಿಷ್ಟವಾದ ನನ್ನ ಶರೀರ ನನ್ನ ಯೌವನ, ನನ್ನ ಮನಸ್ಸು....

ಇದಕ್ಕಾಗಿಯೇ ನಾನು ಓಡುತ್ತಿದ್ದೆ. ನನ್ನ ಶರೀರ, ಯೌವನ ಹಾಗೂ ಮನಸ್ಸು ತಮ್ಮದೇ ಭಾಷೆಗಳಲ್ಲಿ ಅರಚುತ್ತಿದ್ದವು. "ಓಡು... ಓಡು... ಓಡಿ ಜೀವಿಸು...."

ನನಗೆ ಅನ್ನಿಸುತ್ತಿತ್ತು. ಆ ಜನಗಳು ನನ್ನನ್ನು ಹಿಡಿಯುವ ಆಸೆಯನ್ನು ಇನ್ನೂ ಬಿಟ್ಟಿರಲಾರರು. ನನ್ನನ್ನು ಕೊಂದಲ್ಲದೆ ಅವರಿಗೆ ಶಾಂತಿ ಲಭಿಸದು. ಅವರು ಒಂದೇ ಸಮನಾಗಿ ನನ್ನನ್ನು ಹಿಂಬಾಲಿಸುತ್ತಿದ್ದರು. ಈ ವಿಪತ್ತಿನ ಕ್ಷಣದಲ್ಲಿ ನಗರ ಆಶ್ಚರ್ಯರೀತಿಯಲ್ಲಿ ಬದಲಾಯಿಸಿಬಿಟ್ಟಿತ್ತು. ಸಭ್ಯತೆಯಿಂದ ಸಜ್ಜಾಗಿದ್ದ ಈ ಹೂದೋಟ, ಪ್ರಾಗೈತಿಹಾಸಿಕ ಕಾಡಿನಂತೆ ತೋರುತ್ತಿತ್ತು. ಸುತ್ತಲಿನ ಎಲ್ಲಾ ಬೃಹತ್ ಕಟ್ಟಡಗಳ ಕಿಟಕಿಗಳು ತೆರೆದಿದ್ದು ವಿಶಾಲ ವೃಕ್ಷದಂತೆ ಕಾಣುತ್ತಿದ್ದವು. ರಾಮ್, ಶ್ಯಾಮ್ ಮತ್ತು ಯದುಬಾಬು ತಮ್ಮ ಮಂಡಿಗಳ ಬಲದ ಮೇಲೇ ಕತ್ತಲೆಯಲ್ಲಿ ಯಾವ ಮರದ ಹಣ್ಣು ತಿಂದು ಮನುಷ್ಯಜಾತಿ ಈ ದುರ್ಗತಿಗೆ ತಲುಪಿದೆಯೋ, ಆ ಸ್ವರ್ಗೀಯ ವೃಕ್ಷದ ಬೇರುಗಳನ್ನು ಶೋಧಿಸುತ್ತಿದ್ದರು. ಇಂದು ಅವರ ಕೈಗಳಲ್ಲಿ ಪ್ಯಾಕೇಟ್‌ನಲ್ಲಿ ಸುತ್ತಿದ ಮೂರು ಚಿಕ್ಕ ಚಿಕ್ಕ ಹತ್ಯಾರಗಳಿದ್ದುವು. ಅವುಗಳ ನಿರ್ಧಾರಿತ ಬೆಲೆ ಐದು ಪೈಸೆ.

ಈಗ ಎದುರಿಗೆ ಮೂರು ರಸ್ತೆಗಳು ಕಂಡುಬಂದವು, ಎಡ, ಬಲ ಎತ್ತಹೋಗಲಿ ? ಎರಡು ಮೂರು ಕ್ಷಣಗಳು ಅತ್ತ ಇತ್ತ ನೋಡುತ್ತಾ ನಿಂತೆ. ಗುಂಡಿನ ಶಬ್ದ ಕೇಳಿಬರುತ್ತಿತ್ತು. ಇದೊಂದು ವಿಚಿತ್ರ. ಗುಂಡು ಹಾರಿಸುವಾಗ ಕಾಣುವ ತುಣುಕು ಕಿಡಿಗಳನ್ನು ಕಾಣಲು ಬಾರಿ ಬಾರಿಗೆ ಅತ್ತ, ಇತ್ತ ತಲೆ ಆಡಿಸಿ ನೋಡುತ್ತಿದ್ದೆ. ವಿಪತ್ತಿನ ಕ್ಷಣಗಳಲ್ಲೂ ನಮ್ಮ ಬಾಲ್ಯಾವಸ್ಥೆ ಜಾಗೃತಗೊಂಡಿರುತ್ತದೆ.

ಮತ್ತೊಂದು ಕ್ಷಣದಲ್ಲೆ ನಾನು ನೆಗೆದು ಬಲಗಡೆ ಓಡಿದೆ. ಅಲ್ಲಿ ಸ್ವಲ್ಪ ಎತ್ತರದಲ್ಲಿ ಬೆಳಕು ಕಂಡುಬಂತು. ಯಾರೋ ದುಸ್ಸಾಹಸಿ ಮನುಷ್ಯ ಸೆರೆಮನೆಯಲ್ಲಿನ ಗೋರಿಲ್ಲಾದಂತೆ ಕಿಟಕಿಯ ಕಂಬಿಗೆ ಮೂಗು ಉಜ್ಜುತ್ತಿದ್ದ. ಮನೆ ಸ್ಮಶಾನದಂತಿತ್ತು. ಗೇಟಿನ ಬಳಿ ಬಳ್ಳಿ ಹಬ್ಬಿಸಿದ ಛಾವಣಿ ಇತ್ತು. ಎದೆಯ ಎತ್ತರವಿದ್ದ ಬಾಗಿಲನ್ನು ದಾಟಿ ನಾನು ಒಳಕ್ಕೆ ಹೋದಾಗ ನಾನು ಸುರಕ್ಷಿತ ಅನಿಸಿತು. ಅನಂತರ ಇದ್ದಕ್ಕಿದ್ದಂತೆಯೇ ನನಗೆ ಅನಿಸಿತು, ಇಂತಹ ಮನೆಗಳಲ್ಲಿ ನಾಯಿ ಸಾಮಾನ್ಯವಾಗಿ

ಇರುತ್ತದೆ, ಹೊರಗಡೆ ಬರೆದಿರುತ್ತದೆ, "ನಾಯಿ ಇದೆ ಎಚ್ಚರ." ಒಳಗೆ ಹೋದ ಮೇಲೂ ನಾಯಿಯ ಬೊಗಳುವಿಕೆ ಕೇಳಿ ಬಾರದ್ದರಿಂದ ನಾಯಿ ಇಲ್ಲವೆಂದು ನಿಶ್ಚಿಂತೆಯಾಯಿತು. ಒಂದು ವೇಳೆ ಇದ್ದರೂ ಅದು ಯಾವುದೋ ಕೋಣೆಯಲ್ಲಿ ಬಂಧಿತಗೊಂಡಿದೆ.

ನಾನು ನಿರಾಯಾಸದ ಉಸಿರನ್ನು ಬಿಟ್ಟೆ. ಆರಾಮವಾಗಿ ಕುಳಿತೆ. ಈಗ ಹೊರಗಡೆ ಯಾವುದೇ ಶಬ್ದವಿರಲಿಲ್ಲ. ಬಹುಶಃ ಅವರು ನನ್ನನ್ನು ಅರಸುತ್ತಾ ಬೇರೆ ಬೀದಿಯಲ್ಲಿ ಅಲೆಯುತ್ತಿರಬಹುದು. ಕೆಲಕ್ಷಣ ನಿಶ್ಚಿಂತೆ ಅನಿಸಿತು. ಮೇಲಿನ ಕಿಟಕಿಯ ಅಸ್ಪಷ್ಟ ಬೆಳಕಿನಿಂದ ನಾನು ಒಳಗೆ ಇಣಿಕಿದೆ, ಎದುರಿಗೆ ಚಿಕ್ಕ ಹುಲ್ಲುಗಾವಲಿತ್ತು. ಎರಡೂ ಕಡೆ ಗಿಡ ಬಳ್ಳಿಗಳು – ಹೂದೋಟ, ಗಾಢವಾದ ಅಂಧಕಾರ ಹಾಗೂ ವಿಪತ್ತುಗಳು ತುಂಬಿದ ಇಲಾಖೆಯಲ್ಲಿ ಈ ಸಮಯವೂ, ಹೂ ಅರಳುವ ಸಾಹಸ ಈ ಪ್ರಕೃತಿ ನಡೆಸಿತ್ತು. ಇದನ್ನು ನೋಡಿ ನನ್ನ ಬುದ್ಧಿ ಕೆಟ್ಟಿತು. ಅದು ಸರಿಯಿರಲಿಲ್ಲ, ಸ್ವಲ್ಪವೂ ಸರಿಯಿರಲಿಲ್ಲ. ನಗರದಲ್ಲಿನ ಎಲ್ಲ ಹೂ ಬಳ್ಳಿಗಳಿಗೂ ಚೆನ್ನಾಗಿ ಹೊಡೆದು 'ಸುಮ್ಮನಿರಿ' ಎಂದು ಅರುಚಬೇಕೆನಿಸಿತು. ಅದು ಹಕ್ಕಿಗಳಿಗೆ ಗದರಿಸಿ ಹೇಳಬೇಕು 'ಹುಷಾರ್' ಮುಂದೆ ಹೋಗಬೇಡಿ, ಪ್ರೇಮಿಗಳನ್ನು ಗದರಿಸುತ್ತೇನೆ, ಪತಿ ಪತ್ನಿಯರು ಜೊತೆಯಲ್ಲಿ ಮಲಗುವುದನ್ನು ನಿಷೇಧಿಸುತ್ತೇನೆ. ಕೆಲಸಗಾರರಿಗೆ ಹೇಳುತ್ತೇನೆ. ನೀವೆಲ್ಲಾ ಸತ್ತು ಹೋಗಿ ಇಂಜಿನಿಯರ್‌ಗಳೇ ಕೈಗಳನ್ನು ಮೇಲೆತ್ತಿ. ವಿಜ್ಞಾನಿಗಳೇ ವಿಶ್ರಮಿಸಿಕೊಳ್ಳಿ....."

ಇದೇ ಸಮಯದಲ್ಲಿ ದೂರದಲ್ಲೆಲ್ಲೋ ಧಮ್ ಧಮ್ ಶಬ್ದ ಕೇಳಿಸಿತು. ಮನೆಯೇ ಕಂಪಿಸುತ್ತಿದೆ ಎನಿಸಿತು. ಗಾಡಿಯ ಡರ್ ಡರ್ ಶಬ್ದ ಕೇಳಿಬಂತು. ಬೆಳಕಿನ ಕಿರಣಗಳು ಪುನಃ ಅಂಧಕಾರದಲ್ಲಿ ಮುಳುಗಿಹೋದುವು. ನಿಜವಾಗಿಯೂ ಅದು ಪೊಲೀಸ್ ಗಾಡಿಯೇ ಇರಬೇಕು. ಇಷ್ಟು ಹೊತ್ತಿಗೆ ಪೊಲೀಸ್ ಬಂದಿದೆ.

ಒಂದೇ ನೆಗೆತಕ್ಕೆ ನಾನು ಎದುರಿನಿಂದ ಹೊರಹೋದೆ. ಎದುರಿಗೆ ಮೆಟ್ಟಲು ಕಾಣಿಸಿತು. ಮೆಟ್ಟಲ ಎದುರಿಗೆ ಒಂದು ದೊಡ್ಡ ಬಾಗಿಲು ತೆರೆದಿರುವುದು ಕಂಡಿತು. ಅಂದರೆ ಇದು ಅನೇಕ ಫ್ಲಾಟ್‌ಗಳಿರುವ ಮನೆ. ವಾರಸುದಾರರಿಲ್ಲದ ಸಂಪತ್ತಿನಂತೆ. ಮೆಟ್ಟಲ ಮುಂದಿರುವ ಬಾಗಿಲನ್ನು ಮುಚ್ಚುವಾಗ ರಾಮಬಾಬು ಯೋಚಿಸುತ್ತಾರೆ ಶ್ಯಾಮಬಾಬು ಬಾಗಿಲನ್ನು ಮುಚ್ಚುತ್ತಾರೆ. ಶ್ಯಾಮಬಾಬು ಯೋಚಿಸುತ್ತಾರೆ ಯದುಬಾಬು ಮಾಡುತ್ತಾರೆ ಎಂದು. ಒಂದು ವೇಳೆ ಜವಾನ ಇದ್ದರೂ ಆತ ನಶೆಯಿಂದ ತೂರಾಡುತ್ತಿರುತ್ತಾನೆ. ಮೆಟ್ಟಲು ಬದಿಯಲ್ಲಿರುವ ಸಣ್ಣ ಕೊಠಡಿಯೊಳಗೆ ಮಂಚದ ಮೇಲೆ ಸುಮ್ಮನೆ ಕುಳಿತಿರಬಹುದು ಎಂದು ಯೋಚಿಸಿ ನಾನು ನಾಲ್ಕಾರು ಮೆಟ್ಟಿಲುಗಳನ್ನು ಹತ್ತಿದೆ, ಮೇಲಿನ ಮಹಡಿಯಲ್ಲಿ ಮೆಟ್ಟಲ ಮೇಲೆ ಒಂದು ದೀಪ ಉರಿಯುತ್ತಿತ್ತು. ಬೆಳಕು ಮಂದವಾಗಿತ್ತು. ಜಾಡ ಹರಡಿತ್ತು. ಮೊದಲು ಹೂಗಿಡಗಳಿಂದ ತುಂಬಿದ್ದ ಬಂಗಲೆಯನ್ನು ನೋಡಿ ಇದು ಬಹಳ ಶುಭ್ರವಾಗಿರಬಹುದೆಂದು ಊಹಿಸಿದ್ದೆ. ನಿಧಾನವಾಗಿ ಮನೆಯ ಮುದಿತನ, ಜೀರ್ಣಗೊಂಡಿರುವಿಕೆ ಹಾಗೂ ನಿಂದೆಗೆ ಗುರಿಯಾಗಿರುವ ಗುರುತುಗಳು ಸ್ಪಷ್ಟವಾಗಿ

ಕಾಣತೊಡಗಿದುವು. ನಾನು ಮೇಲೆ ಹೋದಂತೆಲ್ಲಾ ಉಸಿರು ಕಟ್ಟಿಸುವ ವಾಸನೆ ತುಂಬಿರುವ ಮನೆಯೊಳಗೆ ನುಗ್ಗಿ ಬಂದಿದ್ದೇನೆ ಅನಿಸಿತು. ಎರಡನೆ ಮಹಡಿಯ ನಾಲ್ಕು ಬಾಗಿಲುಗಳಲ್ಲೂ ಬೀಗ ತೂಗಾಡುತ್ತಿದ್ದವು. ಎಲ್ಲರೂ ಗಂಟು ಮೂಟೆ ಕಟ್ಟಿಕೊಂಡು ಎಲ್ಲಿ ಹೊರಟುಹೋಗಿದ್ದಾರೆ? ಮೂರನೆ ಮಹಡಿಯಲ್ಲಿ ಮೂರು ಕಡೆ ಮೂರು ಬಾಗಿಲುಗಳಿದ್ದವು. ಅಲ್ಲಿನ ದೀಪ ಸಹ ಅಷ್ಟೇ ಮಂಕಾಗಿತ್ತು. ಮೂರರಲ್ಲಿ ಎರಡು ಕೊಠಡಿಗಳಿಗೆ ಬೀಗ ಹಾಕಿತ್ತು. ಒಂದರ ಬಾಗಿಲು ತೆರೆದಿತ್ತು. ಅಂದರೆ ಇದೇ ಕಿಟಕಿಯಲ್ಲಿ ನಾನು ಆ ಗೊರಿಲ್ಲಾನನ್ನು ನೋಡಿದುದು. ಅವನು ಒಬ್ಬನೇ ಇದ್ದಾನೆಯೋ ಅಥವಾ ಸಪರಿವಾರವೇ? ವಿಚಿತ್ರವೆಂದರೆ ಯಾವ ಬಾಗಿಲ ಮೇಲೂ ಹೆಸರಿನ ಹಲಗೆ ಇರಲಿಲ್ಲ. ಕಾಲಿಂಗ್‌ಬೆಲ್ ಇರಲಿಲ್ಲ. ಗೋಡೆಯ ಮೇಲೆ ಕೆಂಪು ಮತ್ತು ಕರಿಯ ಇಂಕಿನಿಂದ ಅಸಭ್ಯವಾದ ಮಾತುಗಳು ಬರೆಯಲ್ಪಟ್ಟಿದ್ದವು. ಈ ಮಾತುಗಳು ಯಾವುವೆಂದರೆ ನನಗೆ ಕಂಠಸ್ಥವಾಗಿರುವಂತೆ ಇತರರಿಗೂ ಕಂಠಸ್ಥವಾಗಿರುವ ಮಾತುಗಳು. ನನ್ನ ಶರೀರ ಕಂಪಿಸಿತು. ಬಹುಶಃ ಈ ಜಾಗ ನನಗೆ ಸುರಕ್ಷಿತವಲ್ಲ. ಏನೇ ಆದರೂ ಆ ಜನ ತಿಳಿದು ತಿಳಿದೆ ನನ್ನನ್ನು ಇಲ್ಲಿ ಸಿಕ್ಕಿಸಿದ್ದಾರೆ.

ನಾನು ನಿಶ್ಚಿಂತನಾದೆ. ಇದಲ್ಲದೆ ನಾನೇನು ಮಾಡಲು ಸಾಧ್ಯವಿತ್ತು? ನಾನು ಜೇಬಿನಲ್ಲಿ ಕೈ ಹಾಕಿ 0.38 ಕ್ಯಾಲಿಬರ್ ಪಿಸ್ತೂಲನ್ನು ಭದ್ರವಾಗಿ ಹಿಡಿದುಕೊಂಡೆ. ಒಂದೇ ಒಂದು ಗುಂಡು ಉಳಿದಿತ್ತು. ಒಳ್ಳೆಯದು, ನಾನಂತೂ ಕೆಲಗಂಟೆಗಳಾದರೂ ಈ ಹೆದರಿಕೆ ವಿಪತ್ತಿನಿಂದ ತಪ್ಪಿಸಿಕೊಂಡು ಇರಲೇಬೇಕಾಗಿತ್ತು. ಏತಕ್ಕೆಂದರೆ ಇದರಿಂದಲೇ ಮುಂದಿನ ಗಂಟೆಗಳು, ದಿನಗಳು, ತಿಂಗಳುಗಳು ಹಾಗೂ ವರ್ಷಗಳು ಬದುಕಿರಲು ಸಾಧ್ಯ. ಇದು ನನಗೆ ಬಹಳ ಅಗತ್ಯವಿತ್ತು. ಹಾಯ್, ನನ್ನ ಇಪ್ಪತ್ತೇಳು ವರ್ಷಗಳ ವ್ಯರ್ಥ ಜೀವನ. ಬೆಕ್ಕಿನ ಮುಗ್ಧ ಮರಿಗಳಂತೆ ಇವು ನನ್ನೊಳಗೇ ಇಣಿಕಿ ನೋಡುತ್ತಿದ್ದುವು.

ಬಹು ನಿಧಾನವಾಗಿ ನಾನು ಚಿಲುಕ ಅಲ್ಲಾಡಿಸಿದೆ. ಎರಡು ಬಾರಿ. ಅನಂತರ ಮತ್ತೆ ಸಾವಕಾಶವಾಗಿ ಬಾಗಿಲನ್ನು ಬಡಿದೆ.

ಹಿರಣ್ಮಯದತ್ತ ರಾಯ್.

..... ಏನು ಸಮಾಚಾರ? ದೀಪ ಮತ್ತೆ ಆರಿಹೋಯಿತು. ಮಳೆಗಾಲ ಪೂರ್ತಿ ಈ ಉಪದ್ರವ ತಪ್ಪಿದ್ದಲ್ಲ. ಮೇಣದ ಬತ್ತಿಯನ್ನು ಕೊಂಡುಕೊಂಡು ನಾನಂತೂ ಹುಚ್ಚನಾಗಿದ್ದೇನೆ. ಕಾರ್ಪೊರೇಷನ್.......

ಅದೇ ಸಮಯಕ್ಕೆ ಸರಿಯಾಗಿ ಸೊಸೆ ಓಡುತ್ತಾ ಬಂದಳು "ತಾವು ಕೇಳುತ್ತಿದ್ದೀರಾ? ಇಂದು ರಾತ್ರಿ ಪುನಃ ಪ್ರಾರಂಭವಾಗಿ ಬಿಟ್ಟಿದೆ."

ನಾನು ಬೆಚ್ಚಿಬಿದ್ದೆ. ಏನು ವಿಷಯ? ಏನು ಶುರುವಾದ್ದು? ಏನು ರಾನೂ ನನ್ನ ಮೇಲೆ ಸಿಟ್ಟುಗೊಂಡಳೇ? ನಿಜಸಂಗತಿ ಅಂದರೆ ನನ್ನ ಕಿವಿಗಳನ್ನು ವಯಸ್ಸು ಮುಚ್ಚಿಬಿಟ್ಟಿದೆ. ನಿಜವಾಗಿ ಇವು ನನ್ನ ಕಣ್ಣುಗಳಂತೆಯೇ ರಾನೂವನ್ನು ಅರ್ಥಮಾಡಿಕೊಳ್ಳಬೇಕು. ಅವಳನ್ನು ಅರ್ಥಮಾಡಿಕೊಂಡಿದ್ದೇನೆಂದರೆ ಅವಳು ರೇಗುತ್ತಾಳೆ. ನನಗೆ ಅರಿವಿದೆ. ದಿನದಿನಕ್ಕೆ ರಾನು ನನ್ನ ಮೇಲೆ ಸಿಟ್ಟಾಗುತ್ತಿದ್ದಾಳೆ.

ನನಗೆ ಗೊತ್ತು. ನಾನು ಇದ್ದಕ್ಕಿದ್ದಂತೆ ಬೆದರುವುದು, ಕಿಟಕಿ ತೆರೆದು ಕೆಳಗಿನ ರಸ್ತೆಯನ್ನು ದಿಟ್ಟಿಸುವುದು, ಮತ್ತು ಯಾರು ಕರೆದದ್ದು?' ಎಂದು ಕೂಗುತ್ತಾ ಬಾಗಿಲತ್ತ ಧಾವಿಸುವುದು ಇವೆಲ್ಲಾ ಅವಳಿಗೆ ಸರಿ ಕಾಣಿಸದು. ಮುಖ್ಯವಾಗಿ ಕುಳಿತುಕೊಳ್ಳುವ ಕೋಣೆಯಲ್ಲಿ ಎದುರಿಗೆ ಫೋಟೋ ತಗಲಿ ಹಾಕುವುದು ಅವಳಿಗೆ ಇಷ್ಟವಿಲ್ಲ. ಸೌಮೆನ್‌ನ ಫೋಟೊ ಇದ್ದುದು ಇದೊಂದೆ. ಸಾಕಷ್ಟು ದೊಡ್ಡದು, ಒಬ್ಬನೇ ನಿಂತಿರುವುದು. ಇದಲ್ಲದೆ ಇರುವ ಬೇರೆ ಫೋಟೋಗಳು ಹಳೆಯವು ಅಥವಾ ಹೆಂಡತಿ ಜೊತೆಗಿರುವುದು. ಆ ಫೋಟೋಗಳು ಸಂಸಾರದ ಆಲ್ಬಮ್‌ನಲ್ಲಿವೆ. ಆ ಫೋಟೋ ಆಲ್ಬಂ ಕೆಲವು ಸಮಯ ನನ್ನ ಬಳಿ ಇರುತ್ತದೆ. ಕೆಲಬಾರಿ ರಾನುಗೆ ಕೊಟ್ಟಿರುತ್ತೇನೆ ಇಲ್ಲವೇ ಅವಳೇ ಅದನ್ನು ತೆಗೆದುಕೊಂಡು ಹೋಗಿರುತ್ತಾಳೆ. ಆದರೆ ಆ ಫೋಟೊಗಳಲ್ಲಿ ಈಗಿನ ಸೌಮೆನ್‌ನನ್ನು ಹುಡುಕುವುದು ಸಾಧ್ಯವಾಗುವುದಿಲ್ಲ. ಈಗ ಆತನ ಕೆನ್ನೆಯಲ್ಲಿ ಗುಳಿ ಬೀಳುತ್ತಿತ್ತು. ಗಲ್ಲ ಉದ್ದವಾಗುತ್ತಿತ್ತು. ಆತನ ಮುಖದಿಂದ ನುಣುಪು ಮಾಯವಾಗಹತ್ತಿತ್ತು. ಕಣ್ಣುಗಳೂ ವಿಚಿತ್ರವಾಗಿದ್ದವು. ಇವೆಲ್ಲವೂ ಆತನ ಒಂದು ಹೊಸ ಫೋಟೋದಲ್ಲಿ ಎದ್ದು ಕಾಣುತ್ತಿದ್ದವು. ಸೌಮೆನ್ ನನ್ನ ಏಕಮಾತ್ರ ಮಗ. ಸೌಮೆನ್‌ಗೆ ಬಹಳ ಪ್ರೀತಿಪಾತ್ರನಾದ ಈಶ್ವರನಲ್ಲಿ ಪ್ರಾರ್ಥಿಸಿದ್ದೆ. 'ಆತನ ಎಲ್ಲಾ ನೋವುಗಳನ್ನೂ ಕಷ್ಟಗಳನ್ನೂ ನನಗೆ, ಈ ಮುದುಕನಿಗೆ ಕೊಡು' ಎಂದು. ಪ್ರಪಂಚದ ಬಹಳಷ್ಟು ದುಷ್ಟಶಕ್ತಿಗಳೊಡನೆ ಹೋರಾಡುವ ಶಕ್ತಿ, ಅನುಭವ ಈ ಮುದುಕನಿಗಿದೆ. ಒಂದಕ್ಕಿಂತ ಒಂದು ಭಯಂಕರವಾದ ವಿಷಯಗಳಲ್ಲಿ ನಾನು ಸಿಕ್ಕಿಬಿದ್ದಿದ್ದೇನೆ. ಭಯಂಕರ ಉಪದ್ರವ, ವಿಧ್ವಂಸಕ ಅಗ್ನಿಯ ಕಾವು, ಅನೇಕ ಬಿರುಗಾಳಿ, ಸುಂಟರಗಾಳಿ ಇದೇ ಮುಂತಾದ ಅಪ್ರತ್ಯಕ್ಷ ದೈತ್ಯರೊಡನೆ ಹೋರಾಡಬೇಕಾಗಿ ಬಂದಿದೆ. ಇಂತಹದೇ ಹಲವು ಕೆಟ್ಟ ಸಮಯಗಳನ್ನು ಕಳೆದಿದ್ದೇನೆ. ಇವುಗಳನ್ನೆಲ್ಲಾ ಸಹಿಸಿಕೊಂಡು, ಇಲ್ಲವೆ ಅವುಗಳನ್ನು ಹತೋಟಿಯಲ್ಲಿಟ್ಟುಕೊಂಡು ನಾನು ಇನ್ನೂ ಭದ್ರವಾಗಿ ನಿಂತಿದ್ದೇನೆ. ಅದಕ್ಕೇ ಎಷ್ಟೇ ಕಷ್ಟವಾಗಲಿ, ಯಾತನೆಯಾಗಲಿ, ಆಪತ್ತುಗಳಾಗಲಿ, ಕಾಯಿಲೆಯಾಗಲಿ ಸಹಿಸುವುದು ನನಗೇನೂ ಕಷ್ಟಕರವಾಗಿ ಕಾಣುವುದಿಲ್ಲ. ಆದರೆ ಸೌಮೆನ್ ! ಅವನದು ಇನ್ನೂ ಯೌವ್ವನದ ಹೊಸ ಜೀವನ, ಆತನ ಆತ್ಮದಲ್ಲಿ ಎಷ್ಟು ಕೋಮಲತೆ ತುಂಬಿತ್ತು! ಪ್ರಪಂಚದ ಬಗ್ಗೆ ಆತನಿಗೆ ಇನ್ನೂ ಬಹಳ ಆಸೆ ಇತ್ತು. ಆತ ಜೀವನವನ್ನು ಗಂಭೀರವಾಗಿ ಸ್ವಪ್ನದಂತೆ ನೋಡಿ ಸುಖ ಬಯಸುತ್ತಿದ್ದ. ಅದಕ್ಕೇ ನಾನು ಪ್ರಾರ್ಥಿಸುವುದು, ಆತನ ಕಷ್ಟಗಳನ್ನು ನನಗೆ ಕೊಡು. ಸುಖ ಏನಿದ್ದರೂ ಎಲ್ಲವೂ ಅವನಿಗೇ ಇರಲಿ. ಆದರೆ.....

ಹಾ ! ನಾನು ಫೋಟೋದ ಮಾತು ಆಡುತ್ತಿದ್ದೆ. ಅವನು ಇದ್ದಕ್ಕಿದ್ದಂತೆಯೇ ಈ ಫೋಟೋವನ್ನು ಏಕೆ ತೆಗೆದ ? ಈ ಬಗ್ಗೆ ನನಗೆ ಮೊದಲು ತಿಳಿದಿರಲಿಲ್ಲ. ಆನಂತರ ಗೊತ್ತಾಯಿತು, ಹೋಗುವುದಕ್ಕೆ ಮುಂಚೆ ಸಮಾಧಾನವಾಗಿ ಒಂದು ಒಳ್ಳೆಯ ನೆನಪನ್ನು ಬಿಟ್ಟು ಹೋಗಲು ಬಯಸಿದ್ದ ? ತನ್ನ ತಂದೆ, ಹಾಗೂ ಪತ್ನಿಗೆ ತಿಳಿದು ತಿಳಿದೇ ಈ ಚಿಕ್ಕ ನೆನಪಿನ ಕಾಣಿಯನ್ನು ಬಿಟ್ಟುಹೋಗಿದ್ದಾನೆ. ಇದನ್ನೇ ಇಟ್ಟುಕೊಂಡು

ಜೀವಿಸಿ ಹೀಗೇ ಬಹುಶಃ ಹೇಳುತ್ತಿದ್ದಿರಬಹುದು.

ಹಾ! ನಾನು ಎಪ್ಪತ್ತೆರಡು ವರ್ಷದ ಮುದುಕ. ನೆನಪುಗಳ ಬಲದ ಮೇಲೇ ಜೀವಿಸುತ್ತಿದ್ದೇನೆ. ಈ ಮುಪ್ಪಿನಲ್ಲಿ ಎಲ್ಲಾ ಮುದುಕರೂ ನನ್ನಂತೆಯೇ ನೆನಪುಗಳ ಬಲದ ಮೇಲೆ ಜೀವಿಸುತ್ತಿದ್ದಾರೆ. ಆದರೆ ಸೊಸೆ ರಾನು? ಅವಳು ಈ ರೀತಿ ಜೀವಿಸಲಾರಳು. ಅವಳು ಸೌಮೆನ್‌ನ ರಕ್ತಮಾಂಸ ಬಯಸುತ್ತಾಳೆ. ಅವಳು ಆತನ ಪ್ರತ್ಯಕ್ಷ ಅಸ್ತಿತ್ವದ ಮೇಲೆ ನಂಬಿಕೆ ಇರಿಸಿದ್ದಾಳೆ. ಅವಳು ಆತನ ಪರೋಕ್ಷವಾಗಿ ಮತ್ತೇನನ್ನೂ ಬಯಸುವುದಿಲ್ಲ. ರಾನುವಿನ ಕಷ್ಟಗಳು ನನಗೆ ಅರ್ಥವಾಗುತ್ತದೆ. ಅವಳು ಕೆಲವೊಮ್ಮೆ ಅಕ್ಷಮ್ಯ ಕ್ರೋಧದಿಂದ ಚಡಪಡಿಸುತ್ತಾಳೆ. ಇದೂ ನನಗೆ ಅರಿವಿದೆ. ತನ್ನ ಪತಿಯನ್ನು ಶಪಿಸುತ್ತಾಳೆ. ತಲೆ ಚಚ್ಚಿಕೊಂಡು ಬೈಗುಳ ಸುರಿಸುತ್ತಾಳೆ. ಬಹುಶಃ ಆತ ಅಂಜುಬುರುಕ ಎಂದೂ ತಿಳಿದಿರಬಹುದು. ಆದರೂ ರಾನುವನ್ನು ದೋಷಿ ಎನ್ನಲಾರೆ. ಸತ್ಯವಾಗಿ ಸೌಮೆನ್ ಹೀಗೆ ಮಾಡಬಾರದಾಗಿತ್ತು. ಆತನ ಪತ್ನಿ ತನ್ನ ಇಷ್ಟದಂತೇ ಆಯ್ದಿದ್ದಳು – ನನಗೆ ಇದೊಂದೂ ಗೊತ್ತಿರಲಿಲ್ಲ. ತಿಳಿದ ಮೇಲೆ ನನಗೆ ಸಂತೋಷವೇ ಆಗಿತ್ತು. ಸೊಸೆಯನ್ನು ಆದರದಿಂದ ಸ್ವೀಕರಿಸಿದ್ದೆ..... ಆನಂತರ ಒಂದು ವೇಳೆ ರಾನು ಸಿಟ್ಟಿನಿಂದ ಯಾರ ಜೊತೆಯಲ್ಲೇ ಹೂಂ. ಹೋಗಲಿ ಇದು ಅಸಂಭವದ ಮಾತು. ಇಲ್ಲಿ ಹುಡುಗಿಯರಲ್ಲಿ ರಕ್ತ ಮಾಂಸದ ಇಚ್ಛೆಯ ತೀವ್ರತೆಯನ್ನು ನಾನು ಅರಿತಿದ್ದೇನೆ. ಇದನ್ನು ಏನನ್ನುತ್ತಾರೆ "ಸೆಕ್ಸ್"! ತಿಳಿದೂ ತಿಳಿಯದಂತೆ ಅವರು ಇದಕ್ಕೆ ಶಿಕಾರಿಯಂತೆ ಹೋಗುತ್ತಾರೆ. ಆಧುನಿಕತೆಯ ಅರ್ಥವೇ ಕೊಠಡಿಯಿಂದ ಹೊರಗೆ ಹೊರಡುವುದು – ಆತ್ಮದ ಮುಕ್ತ ಹೊಸ ಹೊಸ ನಿಯಮ. ಕಾನೂನು ಮತ್ತು ಸ್ವಚ್ಛಂಧತೆಯ ಜೊತೆ ಸೇರಿಕೊಂಡಿದೆ. ಇದೇ ಸಭ್ಯತೆ ತಿಳಿಸುತ್ತಿರುವ ಪಾಠ – ಏನೇ ಆಗಲಿ ರಾನು ಸೊಸೆಗೆ ಇದೇನು ಪ್ರಭಾವ ಬೀರದು. ಇಷ್ಟೇ ಅಲ್ಲದೆ ಅವಳ ವಂಶ, ಅವಳ ಲಕ್ಷಣ ಹಾಗೂ ಅವಳ ವ್ಯಕ್ತಿತ್ವದ ಬಗ್ಗೆ ನನಗೆ ಬಹಳ ಗೌರವವಿದೆ. ಅವಳ ಮನಸ್ಸಿನಲ್ಲಿ ಈ ಬಗ್ಗೆ ಪ್ರತಿಕ್ರಿಯೆ ಹೊರಹೊಮ್ಮುವುದು ಸ್ವಾಭಾವಿಕ ಮಾತೇ ಸರಿ. ನಾನು ಸಂಸ್ಕಾರವಶನಾದ, ಪರಾವಲಂಬನಾ ಮನುಷ್ಯನೇನಲ್ಲ. ನಾನೇನು ಈಶ್ವರ ಚದ್ರ ವಿದ್ಯಾಸಾಗರರ ತಲೆಯನ್ನು ಒಡೆಯಲು ಹೋಗುವುದಿಲ್ಲ. ಒಂದು ವೇಳೆ ಸೌಮೆನ್ ನಿಜವಾಗಿ ಸತ್ತುಹೋಗಿದ್ದರೆ, ರಾನುವಿನ ತಂದೆ, ಯಾರು ಏನು ಹೇಳಲಿ, ನಾನು ಅವಳ ಮದುವೆಯನ್ನು ಸಾಂಗವಾಗಿ ನಡೆಸಿಕೊಡುತ್ತೇನ ನಿಜವಾಗಿ ಈ ಸಮಯದಲ್ಲಿ ರಾನುವಿನ ಸಲಹೆಯಂತೇ ನಡೆಯುತ್ತೇನೆ.

ಎಷ್ಟು ವಿಚಿತ್ರ ಮಾತು? ನಾನು ಏನು ಯೋಚಿಸುತ್ತಿದ್ದೇನೆ? ನನ್ನೆದೆ ಜೋರಾಗಿ ಬಡಿದುಕೊಳ್ಳಲು ಪ್ರಾರಂಭಿಸಿತು. ಕಾಲುಗಳು ಭಾರವಾದಂತೆನಿಸಿದುವು. ನಡುಗುತ್ತಿರುವಂತೆ ಭಾಸವಾಯಿತು. ಸೌಮೆನ್ ನನ್ನ ಏಕಮಾತ್ರ ಮಗ. ಏನು ನಾನು ಎಲ್ಲೋ ಜ್ಞಾನದಲ್ಲಿ ಆತನ ಮೃತ್ಯು ಬಯಸುತ್ತೇನೆಯೇ? ಇಲ್ಲ! ಇಲ್ಲ! ಅವನಿಗೆ ನನ್ನಿಂದೇನೂ ನಿರ್ಬಂಧವಿಲ್ಲ ಅವನು ಎಲ್ಲಾದರೂ ಇರಲಿ ಜೀವದಿಂದಿರಲಿ. ಅವನು ಬೇಕೆನಿಸಿದ್ದನ್ನು ಮಾಡಲಿ ನನ್ನಿಂದೇನೂ ನಿರ್ಬಂಧವಿಲ್ಲ. – ಬದುಕಿರಲಿ ಸಾಕು.

ಇಲ್ಲಿಯುವರೆಗೆ ಪತ್ರಿಕೆಗಳಲ್ಲಿ ಅದೆಷ್ಟು ಪ್ರಕಟಣೆಗಳನ್ನು ನೀಡಿಲ್ಲ. ಫೋಟೋಗಳನ್ನು ಮುದ್ರಿಸಿಲ್ಲ. ಅದೆಷ್ಟೋ ಬಾರಿ ಹೆಣಗಳ ಮಧ್ಯೆ ಸೌಮೆನ್‌ನ್ನು ಹುಡುಕುವ ತಪ್ಪು ಪ್ರಯತ್ನ ನಡೆಸಿ, ಯಾರದೋ ಶವವನ್ನು ಸೌಮೆನ್‌ನದೆಂದು ತಪ್ಪಾಗಿ ಗುರುತಿಸಿಲ್ವಾ ? ಕೆಲದಿನಗಳ ಹಿಂದಿನ ವಿಷಯ. ಒಂಬತ್ತು ಶವಗಳಲ್ಲಿ ಅಂದು ಸೌಮೆನ್‌ನನ್ನು ಹುಡುಕಿ ತೆಗೆದಿದ್ದೆ. ಆದರೆ ಮರುಕ್ಷಣವೇ ಆ ಶವದ ಇನ್ನೊಬ್ಬ ಹಕ್ಕುದಾರ ಬಂದು ಅದು ಅವರ ಮೃಗಾಲಿಕನದೆಂದೂ ತಿಳಿಸಿದ. ಈ ದೊಡ್ಡ ಪ್ರಸಂಗದಲ್ಲಿ ಭಾರಿ ಪರೀಕ್ಷೆ ಹಾಗೂ ವಾಗ್ದಾನ ಆದ ನಂತರ ನಾನು ಸೋತು ಹಿಂದೆ ಸರಿದಿದ್ದೆ. ಹೌದು ಅದು ಮೃಗಾಲಿಕನದೇ ಇರಬಹುದು ಸೌಮೆನ್ ಅಲ್ಲ ಅನ್ನಿಸುತ್ತದೆ. ಆತ ಪೋಲೀಸರ ಭಯದಿಂದ ಅಥವಾ ಇನ್ನ್ಯಾವುದೇ ಹೆದರಿಕೆಯಿಂದ ಅಡಗಿ ಕುಳಿತಿದ್ದಾನೆ. ಬಹುಬೇಗ ಆತ ತನ್ನ ತಂದೆ ಮತ್ತು ಪತ್ನಿಯನ್ನು ಭೇಟಿ ಮಾಡಲು ಬರುತ್ತಾನೆ. ಏತಕ್ಕೆಂದರೆ ಅಂತಹ ಹುಡುಗರಿಗೆ ಜಾಮೀನು ಕೊಡುವುದು ಅತ್ಯಗತ್ಯ.

ಕಾಗದ ಬರೆಯುವಲ್ಲಿ ಏನೋ ತೊಂದರೆ ಇರಬಹುದು ಅಥವಾ ಕಾಗದದಲ್ಲಿ ಎಲ್ಲವನ್ನೂ ಹೇಳಲಾರದವನಾಗಿರಬಹುದು. ಹಾಗೇ ಬಂದು ಬಾಗಿಲನ್ನು ತಟ್ಟಿದರೆ ! ಈಗ ಕೂಡಲೇ ಎದುರಿಗೆ ಬಂದು ಬಿಡಿಸಲು ಜಾಮೀನು ನೀಡಬಹುದು. ಸುಮ್ಮಸುಮ್ಮನೆ ಬಂದು ಬಾಗಿಲನ್ನು ಬಡಿಯುಬಹುದು ಅನ್ನಿಸುತ್ತದೆ. ಆಗ ಬಹುಶಃ ವಿದ್ಯುತ್ ಹೊರಟು ಹೋಗಿರಬಹುದು. ರಾತ್ರಿಯ ಅರ್ಧ ಯಾಮ ಕಳೆದು ಹೋಗಿರಬಹುದು. ರಸ್ತೆ ನಿಶ್ಯಬ್ದವಾಗಿರುತ್ತದೆ. ಮಳೆ ಸುರಿಯುತ್ತಿರಲಿ, ಗಾಳಿ ವೇಗವಾಗಿ ಬೀಸುತ್ತಿರಲಿ ಇಂತಹ ಸಮಯದಲ್ಲಿ ಆತ ಒದ್ದೆ ಬಟ್ಟೆಯಲ್ಲಿ ಮೌನವಾಗಿ ಮೂರು ಮಹಡಿ ಏರಿ ಹೋಗುವನು. ಆಗ ಆತನ ಗಮನ ಎಲ್ಲಾ ಕೊಠಡಿಗಳಿಗೆ ಬೀಗ ಹಾಕಿರುವುದತ್ತ ಹರಿಯುತ್ತದೆ. ಏನು, ಎಲ್ಲರೂ ಮೊಹಲ್ಲೆ ಬಿಟ್ಟು ಎಲ್ಲೋ ಹೊರಟುಹೋಗಿದ್ದಾರೆ. ಆಗ ಅವನಿಗೆ ಎಲ್ಲೆಡೆ ಜನಶೂನ್ಯತೆ ಕಂಡುಬರುವುದು.

ಅದಕ್ಕೇ ನಾನು ಜವಾನನಿಗೆ ಹಗಲು ರಾತ್ರಿ ಮೆಟ್ಟಿಲ ಬಳಿಯ ಕೊಠಡಿಯ ಬಾಗಿಲನ್ನು ತೆರೆದಿಟ್ಟಿರಲು ಹೇಳಿದ್ದೇನೆ. ಜವಾನನೇನೋ ಅಂಜುಬುರುಕ. ಆದರೆ ಆತನ ಹೃದಯ ವಿಶಾಲವಾದದ್ದು. ಆತನ ಉದಾರ ಬುದ್ಧಿಯೇ ಮೆಟ್ಟಿಲ ಬಾಗಿಲನ್ನು ದಿನ ರಾತ್ರಿ ತೆರೆದಿಡಲು ಆತನನ್ನು ಬಲವಂತಪಡಿಸುತ್ತದೆ. ಕೇವಲ ಆತನ ಅಂಜುಬುರುಕತನ ಮಾತ್ರ ಗೇಟ್‌ನ ಬಾಗಿಲನ್ನು ಮುಚ್ಚುವ ಆದೇಶ ನೀಡುತ್ತದೆ. ನಾನು ಒಂದು ಕಿಟಕಿ ತೆರೆದು ಮೇಲಿನಿಂದ ಕೆಳಗೆ ನೋಡುತ್ತಾ ಇರುತ್ತೇನೆ. ರಾತ್ರಿಯೆಲ್ಲಾ ರಸ್ತೆಯತ್ತ ದೃಷ್ಟಿ ಹರಿಸಿಯೇ ಇರುತ್ತೇನೆ. ನನಗೆ ನಿದ್ದೆ ಬಾರದು, ಒಂದು ವೇಳೆ ನನಗೆ ನಿದ್ದೆ ಬಂದರೆ, ಆಗ ಅವನು ಬಂದರೆ ನನ್ನ ಮುಂದೆ ನಿಲ್ಲಲು ಅನುಮಾನಿಸುತ್ತಾನೆ. ಸಂಕೋಚ ಪಟ್ಟುಕೊಳ್ಳುತ್ತಾನೆ. (ಬಾಲ್ಯದಲ್ಲಿ ಏನೋ ಕಾರಣವಿಲ್ಲದೆ ಸೌಮೆನ್ ನನಗೆ ಹೆದರುತ್ತಿದ್ದ). ರಾನು ಬಾಗಿಲನ್ನು ತೆರೆಯುತ್ತಾಳೆ. ರಾನು ಕೊಠಡಿಯೊಳಗೆ ಆತ ಹೊರಟು ಹೋಗುವನು. ಆನಂತರ......

ರಾನು ಯಾವಾಗ ಹೊರಟು ಹೋದಳು ? ಏನೋ ಗಲಾಟೆ ಆಗುತ್ತಿದೆ, ಹೀಗೆ ಏನೋ ಹೇಳುತ್ತಿದ್ದಳು. ನಿಜವೇ ಇರುವಂತಿದೆ. ಇಲಾಖೆಯ ಮುಖ್ಯ

ವಿದ್ಯುದ್ದಾಗಾರದಲ್ಲಿ ಏನೋ ತೊಂದರೆ ಎಂದು ಯಾರು ಏನು ಮಾಡುತ್ತಿದ್ದಾರೋ ? ಬಾರಿ ಬಾರಿಗೂ ಬಾಂಬ್ ಹಾಗೂ ಬಂದೂಕಿನ ಶಬ್ದ ಕೇಳಿ ಬರುತ್ತಿದೆ. ಯಾರ ಜೊತೆಯಲ್ಲಿ ಯಾರು ಹೋರಾಡುತ್ತಿದ್ದಾರೋ ಯಾರಿಗೆ ಗೊತ್ತು. ನನಗೆ ಸಮಾಚಾರವೇ ಗೊತ್ತಾಗುವುದಿಲ್ಲ. ವಿಷಯ ತಿಳಿಯದೆ ಯಮಯಾತನೆ ಆಗುತ್ತಿದೆ. ಹಿಂದೆಯೂ ನಾನು ನನ್ನ ಹುಡುಗನ ಬಗ್ಗೆ ಸಮಾಚಾರ ಇಟ್ಟುಕೊಳ್ಳುತ್ತಿರಲಿಲ್ಲ. ಆದಕ್ಕೆ ಈ ಯಾತನೆ ಸಹಿಸಬೇಕಾಗಿದೆ.

ನಾನು ಮತ್ತೆ ಕಿಟಕಿಯ ಬಳಿಗೆ ಹೋಗಬೇಕು. ರಾನು ಬಂದು ನನ್ನನ್ನು ನನ್ನ ಜಾಗದಿಂದ ಹೊರಡಿಸಿದ್ದಳು. ಓಹ್ ! ದೀಪ ಆರಿಹೋಯಿತು. ಸಮಯದಲ್ಲಿ ಆತನೇನಾದರೂ ರಸ್ತೆಯಲ್ಲಿ ಸುಳಿದರೆ ನನ್ನ ಕಣ್ಣಿಂದ ತಪ್ಪಿಸಿಕೊಂಡು ಬಿಟ್ಟಾನು ! ಇಷ್ಟು ಹೊತ್ತಿಗೆ ಆತ ನಿಶ್ಯಬ್ದವಾಗಿ ಮೆಟ್ಟಲು ಹತ್ತುತ್ತಿರಬಹುದು. ಆನಂತರ ನಿಧಾನವಾಗಿ ಬಾಗಿಲು ಬಡಿಯುತ್ತಾನೆ. ತಗ್ಗಿದ ಸ್ವರದಲ್ಲಿ ರಾನು ಹೆಸರು ಹಿಡಿದು ಕೂಗುತ್ತಾನೆ. ಕೂಗಲಿ, ನನಗೆ ಎಲ್ಲವೂ ಗೊತ್ತಾಗುತ್ತದೆ.

ರಾನುದತ್ತ ರಾಯ್

ಅವರಿಗೆ ಒಂದು ದಿನದ ಬಿಡುಗಡೆಯೂ ಇಲ್ಲ. ಅಲ್ಲಿ ನೋಡು ಪುನಃ ತಾಂಡವ ನೃತ್ಯ ಪ್ರಾರಂಭವಾಗಿದೆ. ಬಹುಶಃ ಇಡೀ ರಾತ್ರಿ ಇದು ನಡೆಯುತ್ತಲೇ ಇರುತ್ತದೆ. ಹಲವು ಬಾರಿ ನಿದ್ದೆ ಕೆಡುತ್ತಿದೆ. ಕೋಪವನ್ನು ನುಂಗಿಕೊಂಡು ಸುಮ್ಮನಾಗುತ್ತೇನೆ, ಆಯಾಸದಿಂದ ದುರ್ಬಲತೆ ಕಾಣುತ್ತದೆ. ಅಳು ಬರುತ್ತದೆ. ಆದರೆ ಇಂದು ಅಳಲು ನಾಚಿಕೆ ಆಗುತ್ತಿದೆ. ಆತ್ಮಧಿಕ್ಕಾರ ಹಾಗೂ ದುಃಖದ ಮಾತಿದು. ಅಸಹಾಯಕತೆ ಹಿಡಿತದಲ್ಲಿ ಬಂದಾಗ ಆಗ ಮನುಷ್ಯ ತಣ್ಣಗಾಗುತ್ತಾನೆ. ನಾನೂ ತಣ್ಣಗಾಗಬೇಕು, ಆದರೆ ಏತಕ್ಕೆ ಆಗುತ್ತಲೇ ಇಲ್ಲ. ಆ ಜನಗಳು ಯಾರು ? ನನಗೆ ಸರಿಯಾಗಿ ಅರ್ಥವಾಗುತ್ತಿಲ್ಲ. ಆದರೆ ಆ ಜನಗಳಲ್ಲಿ ಯಾವುದೋ ಯಾತನೆಯ ಉರಿಯಿದೆ ಎಂಬುದು ಮಾತ್ರ ಅರ್ಥವಾಗುತ್ತಿದೆ. ಈ ಅಗ್ನಿ ಇದ್ದಕ್ಕಿದ್ದಂತೆಯೇ ಚರಮ ಅವಸ್ಥೆಗೇರಿ ಯಾರ ಮೇಲೋ ಸುರಿಯುತ್ತದೆ. ನಾನು ಅಗ್ನಿಯ ಸುಳಿಯಲ್ಲಿ ಸಿಕ್ಕಿ ಬೀಳುತ್ತೇನೆ. ನನ್ನ ಪತಿಯನ್ನು ಇದೇ ಕಬಳಿಸಿದೆ. ಇದನ್ನು ಯೋಚಿಸಿಯೇ ಒಂದು ರೀತಿಯ ಸಮಾಧಾನವಾಗುತ್ತದೆ. ಜೊತೆ ಜೊತೆಯಲ್ಲಿ ಕೋಪವು ಉಕ್ಕುತ್ತದೆ. ನನ್ನಂತೆಯೇ ಇನ್ನು ಎಷ್ಟು ಹೆಂಗಸರ ಪತಿ, ತಂದೆ, ಮತ್ತು ಮಕ್ಕಳು ಇದೇ ತರಹದಲ್ಲಿ ಸಾವಿಗೆ ಶಿಕಾರಿಯಾಗಿದ್ದಾರೆ ಎಂದು ನೆನೆದಾಗ ಕೊಂಚ ಸಮಾಧಾನವಾಗುತ್ತದೆ. ಆದರೆ ನಾವೇನೂ ಈ ಬಗ್ಗೆ ಮಾಡಲಾರೆವಲ್ಲಾ ಎಂದು ಯೋಚಿಸಿದಾಗ ಸಿಟ್ಟುಬರುತ್ತದೆ. ಕೆಲ ತಿಂಗಳ ಹಿಂದೆ ಅಷ್ಟು ದೊಡ್ಡ ಕಾರಖಾನೆ ಮುಚ್ಚಿಹೋಯಿತು, ಅವರ ನೌಕರಿ ಹೊರಟುಹೋಯಿತು. ಮನೆ ಬಾಡಿಗೆ ಏರುತ್ತಾ ಹೋಯಿತು, ಸಂಸಾರ ನಡೆಸುವುದೇ ಕಠಿಣವಾಯಿತು. ವಿಲಾಸಿ ಸ್ವಭಾವದವರಾದ ನನ್ನ ಮಾವನವರಿಗೆ ಸಂಯಮ ಎಂಬುದೇ ತಿಳಿದಿರಲಿಲ್ಲ. ಅವರ ಪೆನ್‌ಷನ್ ಹಣದಿಂದ ಹೇಗೋ ಸಂಸಾರ ನಡೆದುಕೊಂಡು ಹೋಗುತ್ತಿತ್ತು. ಆದರೆ ಇದನ್ನು ಜೀವನ ಎಂದು ಹೇಳಲು ಸಾಧ್ಯವೇ ? ನನಗೆ ಕಷ್ಟವಾಗುತ್ತಿದೆ, ಮನಸ್ಸು ಚಟಪಟಿಸುತ್ತಿದೆ. ಹೊರಗೆ ಹೋಗಿ

ಯಾವುದಾದರೂ ನೌಕರಿ ಹಿಡಿಯಲು ಮನಸ್ಸು ತವಕಿಸುತ್ತಿದೆ, ಆದರೆ ಮಾವ ಪುರಾತನ ವಿಚಾರವಾದಿಗಳು ಮಾತ್ರವಲ್ಲ ಮನಸ್ಸಿನಿಂದಲೂ ಸಂಕೀರ್ಣರು, ದೊಡ್ಡ ಅಂಜುಬುರುಕರೂ ಇರಬಹುದು. ಪತಿಗಾಗಿ ಅಲ್ಲಿ ಇಲ್ಲಿ ಸ್ವಲ್ಪ ಹೋಗಿ ಬರಲು ಮನಸ್ಸು ಬಯಸುತ್ತಿತ್ತು. ಬಹುಶಃ ಅವರ ಪತ್ತೆ ಹಚ್ಚುತ್ತಿತ್ತೋ ಏನೊ ? ಆದರೆ ಮಾವ ನನ್ನನ್ನು ಒಬ್ಬಳೇ ಹೋಗಲು ಬಿಡುವುದೇ ಇಲ್ಲ. ಇದೊಂದು ಸೆರೆಮನೆ ಎಂದು ಹಲವು ಬಾರಿ ಅನಿಸುವುದುಂಟು. ನಾನು ಯಾವುದೋ ಪಂಜರದಲ್ಲಿ ಸಿಕ್ಕಿ ಹಾಕಿಕೊಂಡಿದ್ದೇನೆ. ಆ ಸ್ವಾರ್ಥಿ ಮುದುಕ ನನ್ನನ್ನು ಖಾಲಿ ಪೆಟ್ಟಿಗೆಯಾಗಿ ಮಾಡಿಕೊಂಡು ಸ್ವತಃ ಯಕ್ಷನಂತೆ ಕುಳಿತಿದ್ದಾನೆ.

ಇಲ್ಲ, ಇನ್ನು ಸಹಿಸಲು ನನ್ನಿಂದ ಸಾಧ್ಯವಿಲ್ಲ, ಖಂಡಿತಾ ನಾನು ಓಡಿಹೋಗುತ್ತೇನೆ. ಇಲ್ಲಿ ನಾನೇಕೆ ಬಿದ್ದು ಸಾಯಬೇಕು ? ಈ ಏಕಾಂತ, ಈ ನಿರೀಕ್ಷೆ ಮತ್ತು.... ಮತ್ತು ಆಸ್ವಾದವಿಲ್ಲದ ಈ ದಿನ ರಾತ್ರಿಗಳು, ಓಹ್ ! ಇಷ್ಟೇ ಅಲ್ಲದೆ ಒಬ್ಬರ ಹಿಂದೆ ಇನ್ನೊಬ್ಬರು ಎಲ್ಲಾ ಬಾಡಿಗೆದಾರರು ಓಡಿಹೋದರು. ಮೊಹಲ್ಲೆಯೇ ಖಾಲಿ ಆದಂತೆ ಕಾಣಿಸುತ್ತಿದೆ. ಆ ಮುದುಕರು ಮಾತ್ರ ಸ್ವಲ್ಪ ಓದಿದ್ದಾರೆ. ಮುದುಕಿ ಹಾಗೂ ಮಕ್ಕಳು ಎಲ್ಲರೂ ಅಪಕ್ವ. ಆಗಾಗ್ಗೆ ಬಾಂಬ್ ಸಿಡಿಯುವ ಶಬ್ದ, ಗುಂಡು ಹಾರಿದ ಮಂದ ಸದ್ದು, ಅಥವಾ ಯಾರೋ ನರಳಿದ ಆರ್ತನಾದ, ಇದನ್ನು ಬಿಟ್ಟರೆ ಉಳಿದ ಸಮಯವೆಲ್ಲಾ ಸ್ಥಿರ ಅಥವಾ ನಿಶ್ಯಬ್ದತೆ. ಆಗಾಗ್ಗೆ ಇದ್ದಕ್ಕಿದ್ದಂತೆಯೇ ಯಾರೋ ನಡೆದು ಬರುತ್ತಿರುವ ಶಬ್ದ. ಆದರೆ ಎದುರಿಗೆ ಯಾರೂ ಕಾಣಿಸರು. ಈ ಸ್ಮಶಾನ ಸದೃಶ ಯಕ್ಷಪುರಿಯಲ್ಲಿ ನನ್ನ ಇಪ್ಪತ್ತೊಂದು ವರ್ಷದ ಯೌವ್ವನ ಸಮಾಪ್ತಿಗೊಳ್ಳುತ್ತದೆ. ನಾನು ಇಲ್ಲಿರಲಾರೆ, ಓಡಿ ಹೋಗುತ್ತೇನೆ.

ಆದರೆ ಹೋಗುವುದು ಎಲ್ಲಿ ? ತಂದೆ ಮನದಲ್ಲೇ ನನ್ನ ಮೇಲೆ ಸಿಟ್ಟಾಗಿದ್ದಾರೆ, ಏತಕ್ಕೆಂದರೆ ಅವರು ಆರಿಸಿದ್ದ ಹುಡುಗನನ್ನು ನಾನು ಒಪ್ಪಲಿಲ್ಲ.

ಅವರ ಮನಸ್ಸಿಗೆ ವಿರುದ್ಧವಾಗಿ ಮುಚ್ಚು ಮರೆಯಲ್ಲೆ ನಾನು ಸೌಮೆನ್‌ನೊಡನೆ ಮದುವೆ ಆಗಿದ್ದೆ. ರಿಜಿಸ್ಟ್ರೇಷನ್ ಮದುವೆ ಆದ್ದರಿಂದ ಎರಡು ಪಕ್ಷದವರಿಗೂ ಸೂಚನೆ ನೀಡಲಾಗಿತ್ತು. ನಮ್ಮ ಮನೆಯಲ್ಲಿ ಹಲವು ದಿನ ಭೂಕಂಪವಾಗುತ್ತಿತ್ತು. ಬೆಂಕಿ ಸುರಿಯುತ್ತಿತ್ತು. ನನ್ನ ಪತಿಯ ಮನೆಯಲ್ಲಿ ವಿಶೇಷವೇನೂ ನಡೆಯಲಿಲ್ಲ. ಅತ್ತೆ ಬದುಕಿದ್ದರೆ ಏನಾದರೂ ನಡೆಯುತ್ತಿತ್ತೊ ಏನೋ ? ಕಾರಣ ಇಂತಹ ಸಮಸ್ಯೆಗಳಿಗೆ ಹೆಂಗಸೇ ಹೆಂಗಸಿಗೆ ದ್ವೇಷಿ ಆಗುತ್ತಾಳೆ. ನನ್ನ ತಾಯಿಯೇ ನನ್ನ ಪರಮ ವೈರಿ, ಅದು ನನಗೆ ಅರಿವಿದೆ. ಆದ್ದರಿಂದಲೇ ಅಲ್ಲಿಗೆ ಹೋಗುವ ಸಾಹಸವನ್ನು ನಾನು ಮಾಡಲಾರೆ. ವೈರಿ ನಗುತ್ತಾನೆ. ಅಂದರೆ ನಾನೆಲ್ಲಿ ಹೋಗಲಿ ಮನದಲ್ಲೇ ಹುಡುಕುತ್ತಾ ಇರುತ್ತೇನೆ. ಯೋಚಿಸುತ್ತಿರುತ್ತೇನೆ. ಯೋಚಿಸಿ ಯೋಚಿಸಿ ದಿನ ರಾತ್ರಿಗಳು ಕಳೆದುಹೋಗುತ್ತಿವೆ. ಆದರೂ ನಾನು ಓಡಿಯೇ ಹೋಗುತ್ತೇನೆ. ಓಹ್ ! ಒಳಗೊಳಗೇ ನಾನು ಒಣಗಿ ಹೋಗುತ್ತಿದ್ದೇನೆ. ಇನ್ನು ಕೆಲದಿನ ಇಲ್ಲೇ ನಾನು ಇದ್ದರೆ ನಿಜವಾಗಿ ಸತ್ತೇ ಹೋಗುತ್ತೇನೆ. ಇಲ್ಲ ಇಲ್ಲ ನಾನು ಸಾಯಲು ಬಯಸುವುದಿಲ್ಲ.

ಹೋಗುವುದಕ್ಕಿಂತ ಮುಂಚೆ ಯಾರಿಗೂ ಏನೂ ಹೇಳದೇ ಅವರು

ಹೊರಟುಹೋದರು. ಸಾಯಂಕಾಲ ಚಹ ಕುಡಿದಾದ ನಂತರ ಇದ್ದಕ್ಕಿದ್ದಂತೆಯೇ ಹೊರಗೆ ಹೊರಟರು. ದಿನವೆಲ್ಲಾ ಶಾಂತವಾಗಿತ್ತು. ಆ ದಿನಗಳಲ್ಲಿ ಅವರು ಮಾತು ಮಾತಿಗೆ ಸಿಟ್ಟಿಗೇಳುತ್ತಿದ್ದರು. ಅದಕ್ಕೇ ನಾನೂ ಏನೂ ಪ್ರಶ್ನಿಸುತ್ತಿರಲಿಲ್ಲ. ಅವರು ಈ ನಡುವೆ ಅಶಾಂತರಾಗಿರುತ್ತಿದ್ದರು, ಸಿಟ್ಟಿಗೇಳುತ್ತಿದ್ದರು. ಕೆಲಸದ ಬಗ್ಗೆ ಏನೋ ವ್ಯಾಕುಲತೆ ಇರಬಹುದೆಂದು ನಾನು ಯೋಚಿಸುತ್ತಿದ್ದೆ. ಮಾತನಾಡುವುದು ಬಹಳ ಕಡಿಮೆ ಮಾಡಿದ್ದರು. ಸದ್ದಿಲ್ಲದೆ ಹೊರಗೆ ಹೋಗುತ್ತಿದ್ದರು. ಹಿಂತಿರುಗುವ ಸಮಯ ಹೇಳುವಂತಿರಲಿಲ್ಲ. ಮಾವನವರು ಆಗಾಗ್ಗೆ ಅಸ್ಥಿರರಾಗುತ್ತಿದ್ದರು. ಅವರು ಹಿಂತಿರುಗಿದಾಗ ಏನೋ ಹೇಳುತ್ತಿದ್ದರು, ನನಗೇನು ಹೇಳುತ್ತಿರಲಿಲ್ಲ. ಇದರ ಅಗತ್ಯವೂ ಇರಲಿಲ್ಲ. ರಾತ್ರಿ ಅವರ ಸ್ಪರ್ಶ ಬಯಸುತ್ತಿದ್ದೆ. ಅಭ್ಯಾಸದ ಕಾರಣದಿಂದಾಗಿ ನನ್ನ ರಕ್ತ ಮಾಂಸ ಚಂಚಲಗೊಳ್ಳುತ್ತಿತ್ತು. ಅವರು ನಿಧಾನವಾಗಿ ನನ್ನಿಂದ ಪಕ್ಕಕ್ಕೆ ಸರಿದು ಹೊರಳಿ ಮಲಗುತ್ತಿದ್ದರು. ಸ್ವಲ್ಪ ಸರಿದು ಮಲಗು ಬಹಳ ಸೆಕೆ ಅನ್ನುತ್ತಿದ್ದರು.

ನನಗೆ ಅಳು ಬರುತ್ತಿತ್ತು, ಏನು? ಏನಾದರೂ ಕಾರಣದಿಂದ ನನ್ನ ಮೇಲೆ ಅವರಿಗೆ ಸಿಟ್ಟೆ? ಸುಳ್ಳು ಶಂಕೆ? ಅವಿಶ್ವಾಸ? ಇಂತಹದೇ ಏನೋ ಇರಬೇಕು, ಯಾರೋ ಏನೋ ಕಿವಿ ತುಂಬಿರಬಹುದು. ಈಶ್ವರನಿಗೇ ಗೊತ್ತು ಮನದಿಂದಲ್ಲದಿದ್ದರೂ ಶರೀರದಿಂದ ನಾನು ಏನೂ ಪಾಪ ಮಾಡಿಲ್ಲ. ಸುಮ್ಮ ಸುಮ್ಮನೆ ಅತ್ತು ಬಿಡುತ್ತಿದ್ದೆ.

ಆಶ್ಚರ್ಯದ ವಿಷಯವೆಂದರೆ ಅವರಿಗೆ ಇದೆಲ್ಲಾ ಅರ್ಥವಾಗಿ ಬಿಡುತ್ತಿತ್ತು. ಇದ್ದಕ್ಕಿದ್ದಂತೆಯೇ ನನ್ನನ್ನು ಎದೆಯ ಮೇಲೆ ಸೆಳೆದುಕೊಂಡು ಹೇಳುತ್ತಿದ್ದರು. "ಬೇಡ ರಾನು ಬೇಡ, ನಿನ್ನ ಮೇಲೆ ನನಗೆ ಯಾವ ಸಿಟ್ಟು ಇಲ್ಲ, ಮತ್ತಾರ ಮೇಲೂ ಸಿಟ್ಟಿಲ್ಲ. ಎಲ್ಲಾ ಸಿಟ್ಟು, ಎಲ್ಲಾ ದುಃಖ ನನ್ನ ಮೇಲೆ ಇದೆ. ನನ್ನನ್ನು ನಾನು ಸಂಭಾಳಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನೀನು ನಂಬು ನಾನು ಸುಟ್ಟುಹೋಗುತ್ತಿದ್ದೇನೆ ರಾನು... ಕೆಟ್ಟ ರೀತಿಯಲ್ಲಿ ಸುಟ್ಟು ಹೋಗುತ್ತಿದ್ದೇನೆ."

ಹೆಂಗಸಿನ ಸಾಧಾರಣ ಪೀಠಿಕೆಯೊಡನೆ ನಾನು ಹೇಳುತ್ತಿದ್ದೆ. "ನಿಮ್ಮೆಲ್ಲಾ ಕಷ್ಟ, ನಿಮ್ಮೆಲ್ಲಾ ಯಾತನೆಗಳನ್ನು ನನಗೆ ಕೊಟ್ಟುಬಿಡಿ."

"ನೀನೊಬ್ಬಳು ಹುಚ್ಚಿ" ಎಂದು ಹೇಳಿ ಅವರು ಸುಮ್ಮನಾಗುತ್ತಿದ್ದರು. ನನ್ನನ್ನು ಸೆಳೆದಿದ್ದ ಬಾಹುಗಳ ಹಿಡಿತ ಸಡಿಲವಾಗುತ್ತಿತ್ತು. ಅನಂತರ ಅವರು ಮಲಗಿ ಬಿಡುತ್ತಿದ್ದರು. ಅವರು ಕತ್ತಲಿನಲ್ಲಿ ಏನನ್ನೋ ನೋಡುತ್ತಿದ್ದಾರೆ, ಏನನ್ನೋ ಯೋಚಿಸುತ್ತಿದ್ದಾರೆ. ನಾನು ಪ್ರಶ್ನಿಸುತ್ತಿದ್ದೆ, "ಏನಾಗಿದೆ ನನಗೂ ಹೇಳಬಾರದೆ? ನಿಮ್ಮ ಕಾಲಿಗೆ ಬೀಳುತ್ತೇನೆ ನನಗೆ ತಿಳಿಸಿ."

ಅವರು ಏನನ್ನೂ ಹೇಳುತ್ತಿರಲಿಲ್ಲ. ಆಗಾಗ್ಗೆ ನುಡಿಯುತ್ತಿದ್ದರು, "ಏನೂ ವಿಶೇಷವಿಲ್ಲ." ಅವರದೆಲ್ಲ ಕಷ್ಟಗಳೂ ಹಣವನ್ನು ಕುರಿತೇ ಎಂದು ನಾನು ಯೋಚಿಸುತ್ತಿದ್ದೆ. ಬಹುಶಃ ಕೆಲಸವಿಲ್ಲದ ಮನುಷ್ಯನ ಮನಸ್ಸಿನಲ್ಲಿ ಹೀಗೇ ಆಗುತ್ತದೆ. ನಾನು ಹೇಳುತ್ತಿದ್ದೆ 'ಹೆಚ್ಚಿಗೆ ಯೋಚಿಸಬೇಡಿ. ಏನಾದರೂ ಕೆಲಸ ಸಿಗುತ್ತದೆ ಬಿಡಿ'. ಅವರು ಹೋದ ಹಿಂದಿನ ರಾತ್ರಿ, ನಿದ್ದೆಯಲ್ಲಿ ಒಂದೇ ಮಾತನ್ನು ಪುನಃ ಪುನಃ

ನುಡಿಯುತ್ತಿದ್ದರು. ಆಗ ನಾನಿನ್ನೂ ಮಲಗಿರಲಿಲ್ಲ. ಅವರ ಮಾತನ್ನು ಕೇಳಿಸಿಕೊಂಡು ನಾನು ಕಂಪಿಸಿದ್ದೆ. ಎದೆಯ ರಕ್ತ ಜಗಿಯುತ್ತಿರುವಂತೆನಿಸಿತು, ಅವರು ಏನು ಹೇಳುತ್ತಿದ್ದಾರೆ ?

ಟ್ರೇಟರ್ (ವಿಶ್ವಾಸಘಾತುಕ) ನಾನು ಟ್ರೇಟರ್... ಟ್ರೇಟರ್ ನಾನು ಟ್ರೇಟರ್....... ನನಗೇನು ಅರ್ಥವಾಯಿತೋ ಅರ್ಥವಾಗಲಿಲ್ಲವೋ ತಿಳಿಯದು. ರಹಸ್ಯಮಯವಾದ ಕಪ್ಪು ಪರದೆ ನನ್ನ ಕಣ್ಣ ಮುಂದಿಂದ ಸ್ವಲ್ಪ ಸರಿದಿತ್ತು. ನನ್ನ ಗ್ರಹಿಕೆ ತಪ್ಪಾಗಿರಬಹುದು, ನಾನು ತಪ್ಪಾಗಿಯೇ ಕೇಳಿಸಿಕೊಂಡಿರಬಹುದು. ಆದರೂ ನನ್ನ ರಕ್ತ ಹೆಪ್ಪುಗಟ್ಟತೊಡಗಿತ್ತು. ನನ್ನ ತೊಡೆ ಭಾರವಾದಂತೆನಿಸಿತು. ತಲೆ ಹಿಮಗಡ್ಡೆಯಂತೆ ಸೆಟೆದುಕೊಂಡಿತು. ನಾನು ಜ್ಞಾನವಿಲ್ಲದಂತೆ ಬಿದ್ದುಕೊಂಡಿದ್ದೆ.

ಮಾವನವರಿಗೆ ನಾನು ಈ ವಿಷಯವನ್ನು ಇದುವರೆವಿಗೂ ಹೇಳಿರುವುದಿಲ್ಲ. ಹೇಳುವುದೂ ಸರಿಯಲ್ಲವೆಂದು ತಿಳಿದಿದ್ದೇನೆ. ಏನು ಸಂಭವಿಸಿದೆ ಎಂಬುದು ನನಗೆ ತಿಳಿದಿದೆ. ಶಂಖದ ಬಳೆ ಮತ್ತು ಸಿಂಧೂರ ಹಚ್ಚಿದ ಈ ಸುಮಂಗಲಿಯ ರೂಪ ಸುಳ್ಳು. ಬೇರೆಯವರ ಸಂಸಾರದಲ್ಲಿ ಸುಳ್ಳು ಸೊಸೆಯಾಗಿ ಕುಸಿದುಬಿದ್ದಿದ್ದೇನೆ. ಅವರು ಎಂದೂ ಹಿಂತಿರುಗುವುದಿಲ್ಲ.

ಆದರೂ ನಿರೀಕ್ಷೆಯ ಮುಳ್ಳು, ರಕ್ತದಲ್ಲಿ ಚುಚ್ಚುತ್ತಾ ಇರುತ್ತದೆ. ಮನೆಯ ವಿಶಾಲ ಮೆಟ್ಟಿಲ ಮೇಲಿಂದ ಗಾಳಿ ಬೀಸಿದಾಗ ವಿಚಿತ್ರ ರೀತಿಯ ಶಬ್ದ ಕೇಳಿ ಬರುತ್ತದೆ.

ಯಾರೋ ಗಂಟೆ ಬಾರಿಸಿದಂತೆ ಅನಿಸುತ್ತದೆ. ನಾನು ದಡಬಡಿಸಿ ಎದ್ದು ಕುಳಿತುಕೊಳ್ಳುತ್ತೇನೆ. ಬಾಗಿಲತ್ತ ಧಾವಿಸಿ ಹೋಗುತ್ತೇನೆ. ಬಾಗಿಲು ತೆಗೆಯುತ್ತ ತೆಗೆಯುತ್ತಲೇ ಮನದಲ್ಲೇ ಯೋಚಿಸುತ್ತೇನೆ 'ನೋಡಿದೊಡನೆ ಏನು ಹೇಳಲಿ ?'' ಅನಂತರ ಬಾಗಿಲು ತೆರೆಯುತ್ತೇನೆ. ಹಳದಿ ಬಣ್ಣದ ಬೆಳಕಿನ ಅಸ್ಪಷ್ಟತೆಯಲ್ಲಿ ಕೆಲವು ಗೆರೆಗಳು ಕಂಪಿಸಿ ನಶಿಸಿಹೋದವು. ನಿಶ್ಶಬ್ದತೆಯ ಕಂಪನದಲ್ಲಿ ನೆರಳೊಂದು ಮೇಲೆದ್ದು ಅದೂ ನಶಿಸಿಹೋಯಿತು. ನನ್ನ ಹಿಂದೆ ನನ್ನ ಮಾವ ಓಡುತ್ತಾ ಬಂದರು. ಅಸ್ಪಷ್ಟ ಸ್ವರದಲ್ಲಿ, ನೀಳ ಉಸಿರನ್ನು ಬಿಡುತ್ತಾ ಪ್ರಶ್ನಿಸಿದರು ಏನಾಯಿತು ? ಸೋಮು ಬಂದನೆ ? ಸೋಮುನೆ ? ಯಾರು ಅವರು ? ಹೇಳಮ್ಮಾ ಹೇಳು ಏಕೆ ಏನೂ ಹೇಳುತ್ತಲೇ ಇಲ್ಲ ?

ನಾನು ಏನು ಹೇಳಲಿ ? ನಾನು ಇಷ್ಟು ಮಾತ್ರ ಹೇಳಲು ಶಕ್ತಳಾದೆ "ಗಾಳಿ". ಆನಂತರ ನಾನು ನಡೆದುಬಂದೆ. ಹಿಂದೆ ತಿರುಗಿ ನೋಡಿದೊಡನೆ ಕೂಡುವ ಕೋಣೆಯಲ್ಲಿ ಇರಿಸಿದ್ದ ಆ ಫೋಟೋದತ್ತ ದೃಷ್ಟಿ ಹರಿಯಿತು. ಸಿಟ್ಟನ್ನು ಕ್ಷೋಭೆ ಹಾಗೂ ದುಃಖದಿಂದ ಅದನ್ನು ಒಡೆದು ಹಾಕುವಷ್ಟು ಕೋಪ ಬಂತು. ಯಾವುದು ಇಲ್ಲವೋ ಯಾವುದು ಅದರ ಪ್ರತಿಬಿಂಬವೋ ಅದನ್ನು ನೋಡಿಕೊಳ್ಳಲು ಮನಸ್ಸು ಹಾತೊರೆಯುತ್ತದೆ. ಟ್ರೇಟರ್ ವಿಶ್ವಾಸಘಾತುಕ.

**ದೀಪಕ್ ಮಿತ್ರ**

**ಯಾರು ಬಾಗಿಲು ತೆರೆದರೋ ಅವರ ಪರಿಚಯ ನನಗಿಲ್ಲ. ಆದರೆ ಆತನ ಬದಿಯ ಕೊಠಡಿಯಲ್ಲಿ, ಎತ್ತರವಾದ ಟೇಬಲ್ಲ ಮೇಲಿರಿಸಿದ್ದ ಆ ಫೋಟೋವನ್ನು**

ಗುರುತಿಸಿದೆ. ಆತ ನನಗೆ ಚೆನ್ನಾಗಿ ಗೊತ್ತು, ಕ್ಷಣದಲ್ಲಿ ನನ್ನ ತಲೆಯಲ್ಲಿ ಅಗ್ನಿ ಭುಗ್ ಎಂದಿತು. ಕಿವಿಯಿಂದ ಬೀಸಿ ಗಾಳಿ ಹೊರಬಂತು. ಕಣ್ಣುಗಳು ಅಗಲಗೊಂಡವು. ಸೋಮೆನ್! ಇದು ಸೋಮೆನ್‌ನ ಮನೆ! ನಾನು ಆ ಮನೆಗೇ ಹೋಗಬೇಕಿತ್ತು.

ನಾನು ಕಂಪಿಸಿದ್ದನ್ನು ಆ ಹೆಂಗಸು ಗಮನಿಸಿದ್ದಳೋ ಇಲ್ಲವೋ ನನಗೆ ಗೊತ್ತಿಲ್ಲ. ಆದರೆ ನನ್ನನ್ನು ಕಂಡು ಆಕೆ ಕಂಪಿಸಿದ್ದಳು. ಆಕೆ ಒಂದು ಹೆಜ್ಜೆ ಹಿಂದೆ ಸರಿದು ನಡುಗುತ್ತಿದ್ದ ಸ್ವರದಿಂದ ಪ್ರಶ್ನಿಸಿದಳು "ಯಾರು ಬೇಕಿತ್ತು?" ನಾನು ನನ್ನನ್ನೇ ಸಂಭಾಳಿಸಿಕೊಂಡೆ, ತಣ್ಣಗಿನ ಸ್ವರದಲ್ಲಿ ನುಡಿದೆ "ಇಂದು ರಾತ್ರಿ ನಾನು ಇಲ್ಲೇ ನಿಲ್ಲುತ್ತೇನೆ ಕೂಗಬೇಡಿ. ಇದರಿಂದ ಏನೂ ಪ್ರಯೋಜನವಿಲ್ಲ. ನಾನೇನು ನಿಮಗ್ಯಾರಿಗೂ ತೊಂದರೆ ಮಾಡುವುದಿಲ್ಲ. ಕೇವಲ ಈ ದಿನ ರಾತ್ರಿ....

ವಿಚಿತ್ರ ಮಾತು! ಆ ಹೆಂಗಸು ಹಿಂದೆ ಸರಿದಳು. ನಾನು ಒಳಗೆ ನುಗ್ಗಿ ಸರ್ರನೆ ಬಾಗಿಲನ್ನು ಮುಚ್ಚಿದೆ. ಮುಂದೆ ಹೋಗಿ ಥಟ್ಟನೆ ಕುಳಿತು ಬಿಟ್ಟೆ. ನಂತರ ನುಡಿದೆ, "ಒಂದು ಗ್ಲಾಸು ನೀರು ಬೇಕಾಗಿದೆ. ಕೇವಲ ನೀರು. ಇಷ್ಟು ರಾತ್ರಿ ಕಳೆದಿದೆ. ಊಟ ಕೇಳಿ ತಮಗೆ ತೊಂದರೆ ಕೊಡುವುದಿಲ್ಲ. ಏನಾದರೂ ಚಾಪೆ ಇದ್ದರೆ ಕೊಡಿ. ಅದರ ಮೇಲೇ ಮಲಗುತ್ತೇನೆ."

ಆಕೆ ಏನೂ ನುಡಿಯಲಿಲ್ಲ.

ಏನು ಈಕೆ ಸೌಮೆನ್‌ನ ಪತ್ನಿಯೇ? ಹಾಗಿದ್ದರೆ ಇನ್ನೂ ಏಕೆ ಸುಮಂಗಲಿಯಾಗಿದ್ದಾಳೆ?

ನಾನು ಇಲ್ಲಿಯವರೆಗೂ ಜೇಬಿನಲ್ಲಿ ಕೈಇರಿಸಿಯೇ ಇದ್ದೆ. ಏತಕ್ಕೆಂದರೆ ಸಮಯ ಬಂದರೆ ಅದನ್ನು ಹೊರತೆಗೆದು ಹೆದರಿಸಬಹುದೆಂದು. ಆದರೆ ಈಗ ಅದರ ಅಗತ್ಯವಿಲ್ಲ. ಜೇಬಿನಿಂದ ಕೈಯನ್ನು ಹೊರತೆಗೆದೆ. ಕೊಠಡಿಯ ಒಳಗೆಲ್ಲಾ ದೃಷ್ಟಿ ಹರಿಸಿದೆ. ಎರಡು ಕಡೆ ಎರಡು ಕೊಠಡಿಗಳಿದ್ದುವು. ಬಾಗಿಲ ಮೇಲೆ ಕೊಳೆಯ ಪರದೆ ಇಳಿಬಿದ್ದಿತ್ತು. ಸಾಮಾನು ಒಂದೂ ಒಳಗಿರಲಿಲ್ಲ. ಒಂದು ರ್‍ಯಾಕಿನ ಮೇಲೆ ಕೆಲ ಪುಸ್ತಕಗಳಿದ್ದವು. ಒಂದು ಟೇಬಲ್ಲು, ಎರಡು ಕುರ್ಚಿಗಳಿದ್ದವು, ಗೋಡೆಯ ಕ್ಯಾಲೆಂಡರೊಂದು ನೇತಾಡುತ್ತಿತ್ತು. ಸ್ಟೂಲಿನ ಮೇಲೆ ಸೌಮೆನ್‌ನ ಆ ಚಿತ್ರ ಇಡಲಾಗಿತ್ತು. ಆ ಚಿತ್ರದತ್ತ ನೋಡಲು ನನಗೆ ಹೆದರಿಕೆ ಆಗುತ್ತಿತ್ತು. "ನಿನ್ನ ಮುಖದಿಂದ ನೀನು ಕೊಲೆಗಾರನನ್ನು ಹೋಲುತ್ತಿಲ್ಲ, ನಾನು ನಿನಗೆ ಹೆದರುವುದಿಲ್ಲ, ದೀಪೂ...."

ಆಕೆ ನೀರನ್ನು ಬಹುಬೇಗ ತಂದಳು. ನಾನು ಆಕೆಯತ್ತ ನೋಡದೆಯೇ ಒಂದೇ ಉಸಿರಿಗೆ ನೀರನ್ನು ಕುಡಿದೆ. ನಾನು ಗ್ಲಾಸನ್ನು ಕೆಳಗೆ ಇಡುತ್ತಿದ್ದೆ, ಅಷ್ಟರಲ್ಲಿ ಅವಳು ಅದನ್ನು ತೆಗೆದುಕೊಳ್ಳಲು ಕೈ ಚಾಚಿದಳು. ನಾನು ನೋಡಿದೆ "ಕೇಳಿ"

ಅವಳು ಸುಮ್ಮನೆ ತಿರುಗಿ ನಿಂತಳು.

"ಮನೆಯಲ್ಲಿ ಇನ್ನೂ ಯಾರು ಯಾರು ಇದ್ದಾರೆ?"

"ನಾನು ಮತ್ತು ನನ್ನ ತಂದೆ."

"ಈ ಚಿತ್ರದಲ್ಲಿರುವವ ಎಲ್ಲಿದ್ದಾನೆ?"

"ನನಗೆ ತಿಳಿಯದು."

"ತಾವು ಯಾರು."

"ನಾನು ಈ ಮನೆಯ ಸೊಸೆ."

"ಅಂದರೆ ಈ ಚಿತ್ರ ನಿಮ್ಮ ಗಂಡನದು ?"

"ಹೌದು."

ಸ್ವಲ್ಪ ಹೊತ್ತು ನಾನು ಸುಮ್ಮನಿದ್ದೆ.

ಸೌಮೆನ್‌ನ ಪತ್ನಿ ನುಡಿದಳು "ಮತ್ತೇನಾದರೂ ತಿಳಿಯುವುದಿದೆಯೇ ?"

"ಹೌದು ನೀವು ಯಾರನ್ನು ತಂದೆ ಎಂದು ಕರೆದಿರೋ ಅವರು ನಿಮ್ಮ ಮಾವ ಅಲ್ಲವೆ ?"

"ಹೌದು."

"ನಿಮ್ಮ ಪತಿ ಇಲ್ಲಿ ಇಲ್ಲಾ ಏಕೆ ?"

"ಗೊತ್ತಿಲ್ಲ. ನಿಮಗೆ ಹಾಸಿಗೆ ತಂದು ಕೊಡುತ್ತೇನೆ."

ಸೌಮೆನ್‌ನ ಪತ್ನಿ ಒಳಗೆ ಹೋಗುತ್ತಿದ್ದಳು. ಅದೇ ಸಮಯಕ್ಕೆ ಸರಿಯಾಗಿ ಇನ್ನೊಂದು ಕೊಠಡಿಯಿಂದ ಅದೇ ಗೋರಿಲ್ಲಾ ಮುದುಕ ಅಲ್ಲಿಗೆ ಬಂದು ಪ್ರಶ್ನಿಸಿದ. "ಯಾರು ಯಾರು ಬಂದಿದ್ದಾರೆ ? ಸೋಮು ? ಯಾರು ಯಾರು ನೀನು ? ತಾವು ಯಾರು ? ಏಕೆ ಏನೂ ಹೇಳುತ್ತಿಲ್ಲಾ ? ಹೇಳಮ್ಮಾ ಆತ ಯಾರು ?

ಸೌಮೆನ್‌ನ ಪತ್ನಿ ನುಡಿದಳು "ಸುಮ್ಮನಿರಿ ಪಿತಾಜಿ. ಇವರು ನಿಮ್ಮ ಮಗನ ಸ್ನೇಹಿತರು. ಅವರ ಸಮಾಚಾರ ತಂದಿದ್ದಾರೆ.

ನಾನು ಬೆಚ್ಚಿಬಿದ್ದೆ. ನನ್ನ ಎದೆ ಜೋರಾಗಿ ಬಡಿದುಕೊಳ್ಳುತ್ತಿತ್ತು. ಏನು ಈಕೆ ಎಲ್ಲಾ ತಿಳಿದೇ ಹಾಗೆ ಹೇಳುತ್ತಿದ್ದಾಳೆಯೇ ? ಅಥವಾ ಮಾವನಿಗೆ ಬೇಜಾರು ಮಾಡದಿರಲು ಹೀಗೆ ಹೇಳುತ್ತಿದ್ದಾಳೆಯೇ ? ನಾನು ಅವಳತ್ತ ದೃಷ್ಟಿ ಹರಿಸಿದೆ. ಅವಳ ದೃಷ್ಟಿ ನಿಷ್ಕಪಟವಾಗಿತ್ತು. ಅದರಲ್ಲಿ ಒಂದು ಉಜ್ವಲತೆ ಇತ್ತು. ತುಟಿಗಳ ಮಧ್ಯೆ ಮುಗುಳ್ನಗೆ ಹುದುಗಿತ್ತು. ಏತಕ್ಕೆ ? ನನ್ನ ರಿವಾಲ್ವರ್ ಜೇಬಿನೊಳಗೇ ತುಕ್ಕು ಹಿಡಿಯತೊಡಗಿತ್ತು. ಅದರ ಟ್ರಿಗರ್ ಕೆಟ್ಟುಹೋಗಿತ್ತು. ಕೊನೆಯ ಗುಂಡು ಬಹುಶಃ ನೆನೆದು ಹೋಗಿತ್ತು.

ಆ ಮುದುಕ ನನ್ನತ್ತ ವಾಲಿ ಮುದುಡಿದ ಸ್ವರದಲ್ಲಿ ಪ್ರಶ್ನಿಸಿದ, "ಸೋಮು ಹೇಗಿದ್ದಾನೆ ಮಗು ? ಎಲ್ಲಿದ್ದಾನೆ ಅವನು ? ಏನು ಮಾಡುತ್ತಿದ್ದಾನೆ ? ಒಳ್ಳೇ ಮಗ ಅವನು ! ಇಷ್ಟೊಂದು ಹೆದರೋದು ಏನಿತ್ತು ? ನಾನು ಪೊಲೀಸಿನ ದೊಡ್ಡ ಅಧಿಕಾರಿಗಳ ಬಳಿಗೆ ಹೋಗುತ್ತೇನೆ. ನಾನು ಸ್ವತಃ ನಿವೃತ್ತ ಸರಕಾರಿ ಅಧಿಕಾರಿ."

ನಾನು ಅವರನ್ನು ತಡೆಯುತ್ತ ನುಡಿದೆ "ಅವನಿಗೆ ಪೊಲೀಸರ ಹೆದರಿಕೆ ಇರಲಿಲ್ಲ. ತಮ್ಮ ಮಗ ಟ್ರೇಟರ್ ಆಗಿದ್ದ. ವಿಶ್ವಾಸ ಘಾತ ಮಾಡಿದ ಕಾರಣವೇ...."

"ಖಬರ್‌ದಾರ್" ! ಮುದುಕ ಗರ್ಜಿಸಿದ.

ನಾನು ನಕ್ಕೆ. ನುಡಿದೆ "ತಾವು ತಮ್ಮ ಸೊಸೆಯನ್ನು ಕೇಳಿ."

ಸೌಮೆನ್‌ನ ಪತ್ನಿ ಗಾಬರಿಗೊಂಡು ನನ್ನನ್ನು ನೋಡಲು ತೊಡಗಿದಳು, ನುಡಿದಳು

"ಹೌದು ಪಿತಾಜಿ, ಇವರು ಹೇಳುತ್ತಿರುವುದು ನಿಜ."

"ಅಸಂಭವ, ಈ ಮನುಷ್ಯ ಸುಳ್ಳನಿದ್ದಾನೆ." ಮುದುಕ ಕೂಗಾಡಲು ಪ್ರಾರಂಭಿಸಿದ. "ಇವನೊಬ್ಬ ಸುಳ್ಳ.... ಬದ್‌ಮಾಶ್. ನಾನು ಯಾರನ್ನೂ ನಂಬುವುದಿಲ್ಲ. ಎಲ್ಲರೂ ಟ್ರೈಟರ್. ಎಲ್ಲರೂ ವಿಶ್ವಾಸಘಾತುಕರೇ."

ಸೌಮೆನ್‌ನ ಪತ್ನಿ ಸ್ವಲ್ಪ ಮುಂದೆ ಬಂದು ಹೆದರುತ್ತಲೇ ನುಡಿದಳು. "ಏನು ಮಾಡುತ್ತಿದ್ದೀರಿ ಪಿತಾಜಿ. ದಯವಿಟ್ಟು ಸುಮ್ಮನಾಗಿ."

ಮುದುಕರು ಬಾಗಿಲತ್ತ ಬೆರಳು ಮಾಡಿ ನುಡಿದರು "ನೀವು ಈಗಲೇ ಹೊರಟುಹೋಗಿರಿ. ಸುಳ್ಳು ಸುದ್ದಿ ತರಲು ನಿಮಗೆ ಹೇಳಿದ್ದವರಾರು ? ನಾನು ಹೇಳುತ್ತಾ ಇದ್ದೇನೆ, ನೀವು ಮೊದಲು ಹೊರಟುಹೋಗಿರಿ. ನನ್ನ ಸೋಮು ವಿಶ್ವಾಸಘಾತುಕನೇ ?.." ಈಗ ನಾನು ಜೇಬಿನಲ್ಲಿದ್ದ ಪಿಸ್ತೂಲು ತೆಗೆದು ಎದ್ದು ನಿಂತುಕೊಂಡೆ, ನುಡಿದೆ "ಹೆಚ್ಚಿಗೆ ಕೂಗಾಡಬೇಡಿ. ಹೋಗಿ ನಿಮ್ಮ ಕೋಣೆಗೆ ಹೋಗಿ. ಇಂದು ರಾತ್ರಿ ನಾನು ಇಲ್ಲೇ ತಂಗುತ್ತೇನೆ. ಹೆಚ್ಚಿಗೆ ತೊಂದರೆ ಕೊಟ್ಟರೆ ತಾವು ನಿಮ್ಮ ಜೀವ ಕಳೆದುಕೊಳ್ಳಬೇಕಾಗುತ್ತೆ. ನಾನು ಹೇಳುತ್ತಿದ್ದೇನೆ. ನೋಡಿ ತಾವು ನಿಮ್ಮ ಮಾವನವರನ್ನು ಬೇರೆ ಕೊಠಡಿಗೆ ಕರೆದುಕೊಂಡು ಹೋಗಿ. ನನ್ನ ಬುದ್ಧಿ ನನ್ನ ಹಿಡಿತದಲ್ಲಿಲ್ಲ.

ನಾಲ್ಕು ಕ್ಷಣ ನನ್ನ ಕೈಯಲ್ಲಿ ಆಯುಧ ಕಂಡು ಎರಡು ಕೈಗಳಿಂದ ತನ್ನ ಮುಖವನ್ನು ಮುಚ್ಚಿಕೊಂಡರು, ಅಳಲು ಪ್ರಾರಂಭಿಸಿದರು, ಅನಂತರ ಕುಸಿದು ಕುಳಿತರು. ತೊದಲು ನುಡಿಯಲ್ಲಿ ನುಡಿದರು "ಹೊಡಿ ನನ್ನನ್ನು ಹೊಡೆದೆ ಹಾಕು. ಸೋಮುಗೆ ಏನಾಗಿದೆ ಈಗ ನನಗೆ ಅರ್ಥವಾಗುತ್ತಿದೆ. ನಾನು ಬದುಕಿ ಏನೂ ಲಾಭವಿಲ್ಲ."

ಸೌಮೆನ್‌ನ ಪತ್ನಿ ತನ್ನ ಮಾವನವರನ್ನು ಸಂತೈಸುತ್ತಿದ್ದಳು. ಅವಳು ಈಗ ವಿಚಿತ್ರ ರೀತಿಯಿಂದ ನಕ್ಕಳು. "ಏನಾಯಿತು ? ಹೊಡೆಯಲಾರಿರಿ ಅಲ್ಲವೆ ? ಇನ್ನು ಗುಂಡಿಲ್ಲವೇ ? ಅಥವಾ ಇದೊಂದು ಆಟದ ಸಾಮಾನೇ ? ನಿಜ ಸಂಗತಿ ನನಗೆ ಅರ್ಥವಾಗಿದೆ. ನೀವು ನಿಮ್ಮ ಕೊಠಡಿಯಿಂದ ಹೊರಗೆ ಬರಲಾರಿರಿ. ಏಟು ತಿಂದು ತಿಂದು ಬಹಳ ಬಳಲಿದ್ದೀರಿ ಅಲ್ಲವೇ ?"

ಸೊಸೆ ಆ ಮಾವನನ್ನು ತಳ್ಳಿಕೊಂಡು ಅವರ ಕೊಠಡಿಗೆ ಕರೆದೊಯ್ದಳು. ಅನಂತರ ಪುನಃ ತನ್ನ ಕೊಠಡಿಗೆ ಬಂದಳು. ಅಲ್ಲಿಂದ ಹಾಸಿಗೆ ತಂದು ನೆಲದ ಮೇಲೆ ಚೆನ್ನಾಗಿ ಹಾಸಿ ನುಡಿದಳು "ಮಲಗಿಕೊಳ್ಳಿ. ಇಂದು ನನಗೆ ಒಳ್ಳೆಯ ನಿದ್ದೆ ಬರುತ್ತಿದೆ ಅಲ್ಲವೆ..."

ಹಾಸಿಗೆಯ ಮೇಲೆ ಉರುಳಿಕೊಳ್ಳುತ್ತಾ ನಾನು ಪ್ರಶ್ನಿಸಿದೆ "ಏತಕ್ಕೆ ? ಮಧ್ಯದಲ್ಲೇ ನಿಲ್ಲಿಸಿದಿರಿ ? ಮತ್ತೇನು."

"ತಮಗೆ ಧನ್ಯವಾದಗಳು" ನುಡಿದು ನಿಧಾನವಾಗಿ ಸೌಮೆನ್‌ನ ಪತ್ನಿ ತನ್ನ ಕೊಠಡಿಗೆ ಹೊರಟುಹೋದಳು. ನನಗೆ ನಿದ್ದೆ ಬಾರದಾಗಿತ್ತು. ಸೌಮೆನ್‌ನ ಆ ಚಿತ್ರ ನನ್ನ ಕಣ್ಮುಂದೇ ಇತ್ತು. ಕೆರೆಯ ದಡದಲ್ಲೇ ಆತನ ಶ್ವಾಸನಾಳವನ್ನು ನಾನೇ ಕತ್ತರಿಸಿ

ಹಾಕಿದ್ದೆ. ಆತನ ಶವವನ್ನು ಸುಟ್ಟುಹಾಕಿದ್ದೆ.

ಆ ಕೊಠಡಿಯಿಂದ ತೆಳುವಾದ ಶಬ್ದ ಕೇಳಿ ಬರುತ್ತಿತ್ತು. ಇದರಿಂದ ಆ ಕೊಠಡಿಯೊಳಗೆ ಏನು ನಡೆಯುತ್ತಿದೆ ಎಂಬುದನ್ನು ಊಹಿಸಲು ಶಕ್ಯವಿತ್ತು. ಯಾವ ಕೆಲಸ ಅರ್ಧಕ್ಕೆ ನಿಂತುಹೋಗಿತ್ತೊ ಅದು ನಿಶ್ಯಬ್ದವಾಗಿಯೇ ಪೂರೈಸತೊಡಗಿತ್ತು. ಸೌಮೆನ್‌ನ ಪತ್ನಿ ಸೌಭಾಗ್ಯದ ಶಂಖದ ಬಳೆಗಳನ್ನು ಒಡೆಯುತ್ತಿದ್ದಳು. ಕುಂಕುಮ ಅಳಿಸಿಕೊಳ್ಳುತ್ತಿದ್ದಳು. ಪೆಟ್ಟಿಗೆಯಿಂದ ಸೌಮೆನ್‌ನ ಬಿಳಿಯ ಧೋತರ ತೆಗೆದು ಉಟ್ಟುಕೊಳ್ಳುತ್ತಿದ್ದಳು. ಒಳಗೊಳಗೆ ಅಳುತ್ತಿದ್ದಳು. ಅಳು ಹೆಚ್ಚುತ್ತಿತ್ತು.

ಊದುಬತ್ತಿಯ ಹೊಗೆಯಂತೆ, ಮಂಜಿನಂತೆ, ಅವಳ ಅಳು ನಿಧಾನವಾಗಿ ಬಾಗಿಲುದಾಟಿ ಹೊರಗೆ ಸರಿದು ಸುತ್ತಲಿನ ವಾತಾವರಣ ಸೇರತೊಡಗಿತ್ತು. ನನಗೆ ಅನಿಸುತ್ತಿತ್ತು. ಅದೆಷ್ಟೋ ಹೊತ್ತು ನಾನು ನನ್ನ ಕಿವಿಗಳನ್ನು ಮುಚ್ಚಿಕೊಂಡು ಮಲಗಿದ್ದೆ. ಈ ಶೋಕತಪ್ತ ಪ್ರಪಂಚದಿಂದ ಯಾವ ರೀತಿಯಿಂದಲೂ ಓಡಿ ಹೋಗದಾಗಿದ್ದೇನೆ. ಮತ್ತು ಈ ವಿಶಾಲಕಾಯ ಹೆಬ್ಬಾವು – ವಿಲಾಪದ ಈ ಹಾವು ನನ್ನನ್ನು ಸುತ್ತಿಹಾಕಿಕೊಂಡು ಹಿಸುಕಿ ಉಸಿರು ಕಟ್ಟಿಸುತ್ತಿದೆ. ನನಗೆ ಸ್ವಲ್ಪ ಗಾಳಿ ಬೇಕಿತ್ತು. ಸ್ವಲ್ಪವೇ ಗಾಳಿ.

ಇದಾದ ನಂತರ ಬೆಳಗಿನ ಜಾವದ ಹೊತ್ತಿಗೆ ನಿದ್ದೆಯ ಜೊಂಪು ಹತ್ತಿತ್ತು. ನಾನೊಂದು ಸ್ವಪ್ನ ಕಂಡೆ. ಸಾವಿರ ಸಂಖ್ಯೆಯಲ್ಲಿ ಸೌಮೆನ್‌ನ ಚಿತ್ರಗಳು ನನ್ನ ಸುತ್ತಲೂ ಬಂದು ಬೀಳುತ್ತಿವೆ. ಈ ಚಿತ್ರಗಳು ಪ್ರಪಂಚದಲ್ಲೆಲ್ಲಾ ತುಂಬಲು ಹೊರಟಿರುವಂತಿತ್ತು.

ನೆಲದ ಮೇಲೆ, ಹರಡಿರುವ ಇಸ್ಪೀಟಿನ ಎಲೆಗಳಂತೆ, ಬಂಧವಿಮುಕ್ತ ಸೌಮೆನ್‌ನ ಚಿತ್ರಗಳಂತೆ ಮಧ್ಯೆ ನಾನು ನನ್ನ ದಾರಿ ಹುಡುಕಿಕೊಳ್ಳುವುದು ಸಾಧ್ಯವಾಗಿರಲಿಲ್ಲ.

# ಮುಚ್ಚಂಜೆಯ ಎರಡು ಮುಖ

*ಮತಿ ನಂದಿ*

ಹೌರಾ ಸ್ಟೇಷನ್‌ನ ವಿಶಾಲ ತಗಡು ಛಾವಣಿಯ ಕೆಳಗೆ ನಿಂತು ಇಬ್ಬರು ಸಹೋದರಿಯರು ಸುತ್ತಲೂ ದೃಷ್ಟಿ ಹರಿಸಿದ್ದರು. ಅವರು ಪ್ರತಿಯೊಬ್ಬರನ್ನೂ ತೀಕ್ಷ್ಣವಾಗಿ ನೋಡುತ್ತಿದ್ದರು. ಹೀಗೆ ಮತ್ತಾರೂ ಆ ಜನಗಳನ್ನು ನೋಡುತ್ತಿರಲಿಲ್ಲ. ಎಲ್ಲರೂ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿದ್ದರು. ಎಲ್ಲರಿಗೂ ಒಂದಲ್ಲ ಒಂದು ಕೆಲಸವಿತ್ತು. ಅಂತಹುದೇ ಕೆಲಸ ಈ ಇಬ್ಬರ ಮಧ್ಯೆಯೂ ಇತ್ತು.

ಆ ಇಬ್ಬರೂ ವಿಶಾಲ ಛಾವಣಿಯ ಕೆಳಗೆ ಸುತ್ತಲೂ ಆಗುತ್ತಿದ್ದ ಜನಗಳ ಗದ್ದಲ ಹಾಗೂ ಓಡಾಟದ ಮಧ್ಯೆ, ನಿಂತು ನಿಂತು ಬೇಸರಪಟ್ಟುಕೊಳ್ಳುತ್ತಿದ್ದರು. ಸಂಪೂರ್ಣ ನಿಲ್ದಾಣದಲ್ಲಿ ಒಂದು ಶಬ್ದ ರಿಂಗಣಗೊಳ್ಳುತ್ತಿತ್ತು. ಇಬ್ಬರು ಸಹೋದರಿಯರೂ ಒಬ್ಬರ ಮುಖವನ್ನು ಇನ್ನೊಬ್ಬರು ನೋಡಿಕೊಳ್ಳುತ್ತಿದ್ದರು. ಇದ್ದಕ್ಕಿದ್ದಂತೆಯೇ ಅವರ ಮಾತುಗಳು ನಿಂತವು. ತಂಗಿಯು ಕೈಯ ಬೆರಳನ್ನೆತ್ತಿ ತೋರಿಸುತ್ತಾ ನುಡಿದಳು "ನೋಡಲ್ಲಿ". ಇಬ್ಬರ ದೃಷ್ಟಿಯೂ ಪ್ಲಾಟ್‌ಫಾರಂನ ವಿಶಾಲ ಧ್ವನಿವರ್ಧಕದತ್ತ ಹರಿಯಿತು. ತಂಗಿ ತನ್ನ ದನಿಯನ್ನು ಸರಿಪಡಿಸಿಕೊಳ್ಳುತ್ತಾ ನುಡಿದಳು. "ಈಗ ಏನು ಮಾಡೋಣ ?"

ಅಕ್ಕ ನೋಡುವ ನೆಪದಿಂದಲೇ ಅತ್ತ ದೃಷ್ಟಿ ಹರಿಸಿದಳು. ಗೋಡೆಯ ಆಸರೆ ಪಡೆದು ಇವರ ಸಹೋದರ ತನ್ನ ತಲೆಕೂದಲಲ್ಲಿ ಬೆರಳುಗಳನ್ನು ಆಡಿಸುತ್ತಿದ್ದ. ಈಗ ಕೈಯನ್ನು ಫೂ ಫೂ ಎಂದು ಊದಿ ತಲೆಯನ್ನು ಝಾಡಿಸಿದನು.

ಅಕ್ಕ ನುಡಿದಳು. "ಹೂಂ ! ನಡೆ ಆಕಡೆ."

ಭಾರಿ ಗುಂಪನ್ನು ಸೀಳಿಕೊಂಡು ಅವರಿಬ್ಬರೂ ಉತ್ತರದ ಕಡೆ ನಡೆಯತೊಡಗಿದರು. ಚಿಕ್ಕ ಟಿಕೆಟ್ ಕೌಂಟರ್ ಮುಂದೆ ಜನಗಳ ಒಂದು ದೊಡ್ಡ ಸಾಲು ನಿಂತಿತ್ತು. ಅದರ ಸನಿಹದಲ್ಲೆ ಜನಗಳು ಹರಡಿ ಕುಳಿತು ತೂಕಡಿಸುತ್ತಿದ್ದರು. ಇನ್ನೊಂದು ಕಡೆಯಿಂದ ಜನಗಳು ಏದುಬ್ಬಸ ಪಡುತ್ತಾ ಓಡುತ್ತಾ ಬರುತ್ತಿದ್ದರು. ಇಬ್ಬರು ಸಹೋದರಿಯರೂ ಮೂರನೆ ದರ್ಜೆಯ ವಿಶ್ರಾಮಗೃಹ ತಲುಪಿದರು. ಒಂದು ಬೆಂಚಿನ ಮೇಲೆ ಇಬ್ಬರೂ ಹತ್ತಿರ ಹತ್ತಿರ ಜರುಗಿ ಕುಳಿತರು. ಕಿಟಕಿಯಿಂದ ಹೊರಗಿನ ರಸ್ತೆ ಕಾಣುತ್ತಿತ್ತು. ಬಸ್ಸುಗಳು ಸಾಲಾಗಿ ನಿಂತಿದ್ದವು. ಕೊಠಡಿಯೊಳಗೆ

ಮಬ್ಬು ಬೆಳಕಿತ್ತು. ಒಂದು ವಿಚಿತ್ರ ರೀತಿಯ ವಾಸನೆ ಒಳಗೆಲ್ಲಾ ತುಂಬಿತ್ತು. ಸನಿಹದಲ್ಲೆ ನಲ್ಲಿ ಇತ್ತು. ಟಿಕೆಟ್‌ಗಾಗಿ ಹುಡುಗಿಯರ ಸಾಲು ನಿಂತಿತ್ತು. ಟ್ರೈನನ್ನು ನಿರೀಕ್ಷಿಸುತ್ತಿರುವ ಯಾತ್ರಿಕರು ಕುಳಿತಿದ್ದರು.

'ಅಕ್ಕಾ ನೀರು ಕುಡಿದು ಬರುತ್ತೇನೆ."

"ಕುಡಿದು ಬಾ."

ತಂಗಿಯತ್ತ ಅಕ್ಕ ಧ್ಯಾನ ಹರಿಸಿದಳು. ಅವಳು ಬಗ್ಗಿ ನಲ್ಲಿಯನ್ನು ಅದುಮುತ್ತ ನೀರು ಕುಡಿಯುತ್ತಿದ್ದಳು. ಅಕ್ಕನಿಗೆ ಅದು ವಿಚಿತ್ರವಾಗಿ ತೋರುತ್ತಿತ್ತು. ತಂಗಿಯ ಫ್ರಾಕು ಗಾಳಿಯಲ್ಲಿ ಬಡಿದುಕೊಳ್ಳುತ್ತಿತ್ತು. ಕೈಯಲ್ಲಿ ಲೋಟ ಹಿಡಿದ ಒಬ್ಬ ವ್ಯಕ್ತಿ ಆಕೆಯತ್ತ ನೋಡುತ್ತಿದ್ದ.

ತೂಫಾನ್ ಎಕ್ಸ್‌ಪ್ರೆಸ್ ಇಂದು ತಡವಾಗಿ ಬರುತ್ತಿತ್ತು.

ಅಕ್ಕ ದೃಷ್ಟಿ ತಿರುಗಿಸಿದಳು. ಅವಳ ಬದಿಯಲ್ಲಿ ನಿಂತಿದ್ದ ಹೆಂಗಸೊಬ್ಬಳು ಹೇಳುತ್ತಿದ್ದಳು. "ಇನ್ನು ಎಷ್ಟು ಹೊತ್ತು ಹೀಗೆ ಕುಳಿತಿರಬೇಕಾಗುವುದೋ ?"

"ಯಾರಾದರೂ ಬರುವವರಿದ್ದಾರೆಯೇ ?"

ಆಕೆ ನಕ್ಕಳು. ನಗುತ್ತಲೇ ಸಂಪೂರ್ಣ ಕೊಠಡಿಯತ್ತ ದೃಷ್ಟಿ ಚೆಲ್ಲಿ ನುಡಿದಳು. "ಕಾಗದ ಬಂದಿತ್ತು. ಅವರು ನಿನ್ನೆ ಬರಬೇಕಿತ್ತು. ನಿನ್ನೆಯೂ ಬಂದುಹೋದೆ. ಅವರು ಬರಲಿಲ್ಲ."

ಅಕ್ಕ ಎದ್ದು ನಿಂತಳು. ತಂಗಿ ಎತ್ತಲೋ ನೋಡುತ್ತಿದ್ದಳು.

"ನೀವು ಎಲ್ಲಾದರೂ ಹೋಗುವಿರಾ ? ಅಥವಾ ಯಾರನ್ನಾದರೂ ಕಾಯುತ್ತಿದ್ದೀರಾ ?"

"ಇಲ್ಲ ನಾವು ಎಲ್ಲೋ ಹೋಗಲು ಬಂದಿದ್ದೇವೆ."

ಅಕ್ಕ ಮಾತನ್ನು ಮುಂದುವರಿಸಲು ಇಚ್ಛಿಸಲಿಲ್ಲ. ಸ್ಟೇಷನ್‌ನ ವಿಶಾಲ ಛಾವಣಿಯ ಕೆಳಗೆ ಜನಗಳ ಹಾಗೂ ಶಬ್ದದ ಮಧ್ಯೆ ಬಂದು ನಿಂತಳು. ನಿಂತು ತಂಗಿಯನ್ನು ಹುಡುಕತೊಡಗಿದಳು. ಒಂದೊಂದೇ ಹೆಜ್ಜೆ ಹಾಕುತ್ತಾ ಅವಳು ಸ್ಟೇಷನ್‌ನಲ್ಲಿ ಹೊಸದಾಗಿ ಕಟ್ಟಿದ್ದ ಗೇಟುಗಳಲ್ಲಿ ಒಂದರ ಮುಂದೆ ಬಂದು ನಿಂತಳು. ಅಲ್ಲಿಂದ ಹೌರಾ ಸೇತುವೆ ಕಾಣುತ್ತಿತ್ತು. ಸೇತುವೆಯ ಆ ಕಡೆ ಕಲ್ಕತ್ತಾ ನಗರವಿದೆ. ಕಲ್ಕತ್ತಾದ ಯಾವುದೋ ಒಂದು ಗಲ್ಲಿಯಲ್ಲಿ ಇವರ ಮನೆಯಿತ್ತು. ಆ ಮನೆಯ ಒಂದು ಕೊಠಡಿಯಲ್ಲಿ ತಾಯಿ, ಸಹೋದರ ಹಾಗೂ ತಂಗಿಯ ಜೊತೆ ವಾಸಿಸುತ್ತಿದ್ದಳು. ಚಳಿಗಾಲದಲ್ಲಿ ಚಳಿ, ಬೇಸಿಗೆಯಲ್ಲಿ ಧಗೆ, ಇವೆರಡೂ ಆ ಕೊಠಡಿಯ ಮೇಲೆ ಧಾಳಿ ಮಾಡುತ್ತಿದ್ದುವು. ದಕ್ಷಿಣದ ಗಾಳಿ ಸೂರಿನಿಂದ ಒಳಗೆ ಇಳಿದು ಮುಂದೆ ಹರಿಯುತ್ತಿತ್ತು. ಕೇವಲ ಗಾಳಿ ಮಾತ್ರ ಅಲ್ಲ, ಮೋಡವೂ ತೂರಿ ಬರುತ್ತಿತ್ತು. ಇನ್ನೊಮ್ಮೆ ಬಿಸಿಲೂ ಬಂದು ಹೋಗುತ್ತಿತ್ತು. ಸಂಜೆಯೂ ಗತಿಸಿ ಹೋಗುತ್ತಿತ್ತು.

ಮೂಗನ್ನು ಉಡುಗಿಸಿ ಆಕೆ ಏನೋ ವಾಸನೆ ಆಘ್ರಾಣಿಸಲು ಬಯಸಿದಳು. ವಿಚಿತ್ರ ವಾಸನೆ ! ತಂದೆಯನ್ನು ಸ್ಮಶಾನಕ್ಕೆ ಸಾಗಿಸುವಾಗ ಅಣ್ಣ ಒಂದು ಸೀಸೆ ಸೆಂಟ್ ಖರೀದಿಸಿ ತಂದಿದ್ದ. ಅಂತಹುದೇ ಏನೋ ವಾಸನೆ. ಖಾಲಿ ಶೀಸೆಯನ್ನು ಎಚ್ಚರಿಕೆಯಿಂದ ಎಲ್ಲೋ

ಇರಿಸಿದ್ದಳು. ಆದರೆ ತಂಗಿ ಎಲ್ಲಿ ಹೋದಳು ?

'ದಿಲ್ಲಿ ನೋಡಿ' 'ಆಗ್ರಾ ನೋಡಿ' ಎಂದು ಹ್ಯಾಂಡಲ್ ತಿರುಗಿಸುತ್ತಾ 'ಕುತುಬ್ ಮಿನಾರ್, ತಾಜ್‌ಮಹಲ್' ಒಂದಾದ ನಂತರ ಒಂದನ್ನು ಡಬ್ಬಿ ತಟ್ಟಿ ತೋರಿಸುತ್ತಾ ಆ ಮನುಷ್ಯ ಕೂಗುತ್ತಿದ್ದ. ಸ್ಟೇಷನ್‌ನ ಕಂಬದ ಮೇಲೆ ತೂಗಿ ಹಾಕಿದ್ದ ಆ ಚಿತ್ರವನ್ನು ನೋಡುತ್ತಿದ್ದ ತಂಗಿಗೆ ಆ ಮನುಷ್ಯನ ನೆನಪು ಬಂತು. ಒಂದು ದಿನ ತಂಗಿ ಆ ಮನುಷ್ಯನನ್ನು ಪ್ರಶ್ನಿಸಿದ್ದಳು. "ನೀನು ಆಗ್ರಾ ಅಥವಾ ದೆಹಲಿ ನೋಡಿದ್ದೀಯಾ ?" ಅವಳ ಮಾತಿಗೆ ಯಾವ ಉತ್ತರವನ್ನೂ ನೀಡದೆ ಆ ಪೆಟ್ಟಿಗೆಯ ಮೂತಿಯೊಳಗೆ ಇಣುಕಿ ನೋಡುತ್ತಿದ್ದ ಆತ, ಹುಡುಗರ ತಲೆಯ ಮೇಲಿನ ನೊಣವನ್ನು ಓಡಿಸುವುದರಲ್ಲಿ ತನ್ಮಯನಾಗಿದ್ದ. ತಂಗಿಗೆ ಆ ಮನುಷ್ಯನ ನೆನಪು ಬರಹತ್ತಿತ್ತು. ಇದಾದ ಬಹಳ ದಿನಗಳ ನಂತರ ಮೊಹಲ್ಲೆಗೆ ಒಂದು ಹೊಸ ಬಯಸ್ಕೋಪು ಬಂದಿತ್ತು. ಆ ಮನುಷ್ಯ ಈ ನಡುವೆ ಏಕೆ ಬರುತ್ತಿಲ್ಲ? ಈ ಪ್ರಶ್ನೆ ಹಲವು ಬಾರಿ ಆ ತಂಗಿಯ ಮನಸ್ಸಿನಲ್ಲಿ ಎದ್ದಿತ್ತು. ಈ ಬಗ್ಗೆ ಯೋಚಿಸುತ್ತಿದ್ದಂತೆ ಆಕೆಯ ಕಣ್ಣಮುಂದೆ ಕುತುಬ್ ಮಿನಾರ್, ತಾಜ್‌ಮಹಲ್, ವಿಮಾನ, ಹಡಗು, ಜಟಾಯುವಿನ ಕಾಳಗ, ಸುಳಿದು ಹೋಗುತ್ತಿದ್ದುವು. ಜಾಹೀರಾತು ಚಿತ್ರಗಳನ್ನು ನೋಡಲು ಒಂದು ಬಾರಿ ಆಕೆ ಒಬ್ಬ ಸೊಸೆಯ ಬಳಿಗೆ ಹೋಗಿದ್ದಳು. ಈಕೆಯನ್ನು ಕಂಡೊಡನೆ ಈಕೆಗೆ ಅರ್ಥವಾಯಿತು. ಆಕೆಯೂ ಅವನ್ನೇ ನೋಡುತ್ತಿದ್ದಳು ಎಂದು. ಆ ಚಿತ್ರಗಳಲ್ಲಿ ಇಂಗ್ಲಿಷ್‌ನ ಕೆಲಬರಹಗಳಿದ್ದುವು. ಬಡಬಡಿಸಿ ಆಕೆ ಅವುಗಳನ್ನು ಓದಲು ಪ್ರಾರಂಭಿಸಿದಳು. ಹಾಗೆ ಕೊನೆಗಣ್ಣಿನಿಂದ ಆ ಸೊಸೆಯನ್ನು ನೋಡಿದಳು. ಆಕೆಯ ಬಟ್ಟೆಯಿಂದ ಯಾವುದೋ ಮಧುರ ಸುಗಂಧ ಬರುತ್ತಿತ್ತು. ಆಕೆ ನೀಳ ಉಸಿರನ್ನು ಬಿಟ್ಟಳು. ಚಾಕಲೇಟಿನ ಮೇಲೆ ಸುತ್ತಿರುವ ಸುನ್ನೇರಿ ಕಾಗದದಿಂದ ಅದೇ ತರಹ ವಾಸನೆ ಬರುತ್ತದೆ!

"ಇಲ್ಲ, ಅಷ್ಟೇನೂ ಚೆನ್ನಾಗಿಲ್ಲ."

ತಂಗಿ ಕತ್ತನ್ನು ತಿರುಗಿಸಿ ನೋಡಿದಳು. ಸೊಸೆ ಚಿತ್ರಗಳನ್ನು ನೋಡುತ್ತಿದ್ದಳು.

"ಹಿಂದಿನ ದಸರ ರಜಾಕ್ಕೆ ನಾವು ಅಲ್ಲಿಗೆ ಹೋಗಿದ್ದೆವು. ಓಹ್! ಹೋಗಿ ಬರಲು ಬಹಳ ಕಷ್ಟವಾಗುತ್ತದೆ. ಹೊಟೇಲ್ ಸಹ ಬಹಳ ದುಬಾರಿ."

ಆ ಮಧುರ ಸುಗಂಧವನ್ನು ಆಘ್ರಾಣಿಸಿ ತನ್ನ ಎದೆಯಲ್ಲಿ ಶೇಖರಿಸಿ ಇಟ್ಟುಕೊಳ್ಳಲು ತಂಗಿಗೆ ಆಸೆಯಾಗುತ್ತಿತ್ತು. ನುಡಿದಳು "ಸುಂದರವಾಗಿಯೇನೂ ಇಲ್ಲ, ನೀವು ಏನು ಹೇಳುತ್ತಿದ್ದೀರಿ? ಅಲ್ಲಿ, ಹೀಗೆ ಏನು....! ಸ್ವಲ್ಪವೂ ಚೆನ್ನಾಗಿಲ್ಲ, ಕಾಡು ವನಗಳ ಚಿತ್ರ; ಅಲ್ಲಿಗೆ ಹೋಗುವವರು ತಾನೇ ಯಾರು? ಇದಕ್ಕಿಂತ ಕೊನಾರಕ್ ಚಿತ್ರಗಳು ಹೆಚ್ಚು ಆಕರ್ಷಕವಾಗಿವೆ. ಅಲ್ಲಿ ನೋಡುವುದು ಬಹಳವಿದೆ."

"ನೀವು ಅಲ್ಲಿಗೆ ಹೋಗಿದ್ದೀರಾ ?"

"ನನ್ನ... ನನ್ನ ನಾದಿನಿಯ ಗಂಡ ಹೋಗಿದ್ದಾರೆ."

"ಈಗ ನೀವು ಎಲ್ಲಿ ಹೋಗುತ್ತಿದ್ದೀರಿ ?"

"ರಾನಿಗಂಜ್."

"ಯಾರ ಬಳಿಗೆ ಹೋಗುತ್ತಿದ್ದೀರಿ ?"

ಆಕೆ ನಕ್ಕುಬಿಟ್ಟಳು. ಫೊಟೋದೊಳಗೆ ನಗುವಂತೆಯೇ ಅವಳು ನಕ್ಕಳು. ನಂತರ ಏನೋ ಹೇಳಲು ಬಯಸಿದಳು. ಆದರೆ ಏನೂ ಹೇಳದೆ ಪುನಃ ನಕ್ಕಳು. ಇದನ್ನು ನೋಡಿ ತಂಗಿಯೂ ನಕ್ಕಳು.

"ಮುಂದಿನ ವರ್ಷ ಅವರಿಗೆ ರಜಾ ಸಿಕ್ಕಿದಾಗ ನಾವು ಕಾಶ್ಮೀರಕ್ಕೆ ಹೋಗುತ್ತೇವೆ."
"ಅಕ್ಕಾ ಟ್ರೈನು 7ನೇ ಪ್ಲಾಟ್‌ಫಾರಂನಿಂದ ಹೊರಡುತ್ತೆ. ಬೇಗ ಹೊರಡು."

ಅರ್ಧ ಪ್ಯಾಂಟು ಧರಿಸಿದ್ದ ಹುಡುಗನೊಬ್ಬ ಓಡುತ್ತಾ ಬಂದು ಸೂಟ್‌ಕೇಸನ್ನು ಕೈಗೆತ್ತಿಕೊಂಡ. ಬೆತ್ತದ ಬುಟ್ಟಿಯನ್ನು ಕೈಲಿ ತೆಗೆದುಹಾಕಿಕೊಂಡು ಆ ಸೊಸೆ ನುಡಿದಳು. "ಹೂಂ ಹೊರಡುತ್ತೇವೆ."

ತಂಗಿ ನಿಧಾನವಾಗಿ ಮುಂದೆ ಸಾಗಿ ಮಡಚುವ ಗೇಟಿನ ರೇಲಿಂಗ್ ಮೇಲೆ ಕೈಇಟ್ಟು ಏಳನೇ ನಂಬರಿನ ಪ್ಲಾಟ್‌ಫಾರಂ ಮೇಲೆ ನಿಂತಿದ್ದ ಟ್ರೈನಿನತ್ತ ನೋಡಹತ್ತಿದಳು.

ಸುತ್ತಲೂ ಗಲಾಟೆ. ಏನೊಂದು ಮಾತು ಕೇಳಿಸುತ್ತಿರಲಿಲ್ಲ. ಕಂಬವನ್ನು ಅದುಮಿ ಹಿಡಿದಿದ್ದ ಆಕೆ ಲೋಹದಂತೆಯೇ ಆಗಿ ನಿಂತಿದ್ದಳು. ತಲೆಯ ಮೇಲೆ ಕೆಂಪು ಟೋಪಿ, ಖಾಕಿ ಪೋಷಾಕು ಧರಿಸಿದ್ದ ಆ ಮನುಷ್ಯ ಅತ್ತಇತ್ತ ನೋಡುತ್ತಾ ಇವರು ನಿಂತಿದ್ದೆಡೆಗೇ ಬರುತ್ತಿದ್ದ. ಅಕ್ಕನಿಗೆ ಈಗೇನೂ ಕೇಳಿಸುತ್ತಲೇ ಇರಲಿಲ್ಲ. ಆ ಮನುಷ್ಯ ಬದಿಯಲ್ಲೇ ಹಾದುಹೋದ. ಹೋಗುವಾಗ ಒಮ್ಮೆ ಇವಳನ್ನು ನೋಡಿದ. ಅಕ್ಕ ಯೋಚಿಸಿದಳು. ವಿಶ್ರಾಂತಿ ಗೃಹದೊಳಗೆ ಹೋಗಿ ಕಾಯುವುದು ಒಳ್ಳೆಯದು. ತಂಗಿ ಇಷ್ಟು ಹೊತ್ತಿಗಾಗಲೇ ಅಲ್ಲಿ ಹೋಗಿ ಕುಳಿತಿರಬಹುದು.

ಬೆಂಚು ಭರ್ತಿಯಾಗಿತ್ತು. ಅಕ್ಕ ಗೋಡೆಯ ಆಸರೆ ಪಡೆದು ನಿಂತಳು. ಆ ಹೆಂಗಸು ಎಲ್ಲೆಲ್ಲೊ ಸುತ್ತಿ ಮತ್ತೆ ಬಂದಳು. ಕುಳಿತುಕೊಳ್ಳಲು ಜಾಗ ಸಿಗದೆ ಈಕೆಯ ಬಳಿಯೆ ಬಂದು ನಿಂತಳು. "ಇಲ್ಲ, ಇನ್ನೂ ಬರಲಿಲ್ಲ" ನುಡಿದಳು.

"ಯಾರು ಬರಬೇಕಿತ್ತು ?"

ಏನಾದರೂ ಮಾತನಾಡಬೇಕಲ್ಲಾ ಎಂದೇ ಪ್ರಶ್ನಿಸಿದ್ದೆ. ಪ್ರಶ್ನಿಸಿ ಆಕೆಯನ್ನು ದಿಟ್ಟಿಸಿದೆ. ಅವಳು ನನ್ನತ್ತ ನೋಡಿದಳು. ಆ ಮುಖಕ್ಕೆ ಶೋಭೆ ನೀಡುತ್ತಿದ್ದ ಆ ಅಗಲ ಕಣ್ಣುಗಳನ್ನು ಇನ್ನಷ್ಟು ಅರಳಿಸಿದಳು. ಗದ್ದದ ಕೆಳಗೆ ವಯಸ್ಸಿನ ಸುಕ್ಕು ಹೊಯ್ದಾಡಿತು.

"ಯಾರು ಬರುತ್ತಾರೆ ? ಯಾರು ಬರುವುದಿಲ್ಲ."

ಈ ಎರಡನೆ ದನಿಯೂ ತದ್ರೂಪವಾಗಿತ್ತು. ತಲೆ ಸಿಟ್ಟಿನಿಂದ ತೂಗಿತು. ಚಿಕ್ಕಮ್ಮ ಎರಡು ರೂಪಾಯಿ ನೀಡಿ ನುಡಿದಿದ್ದಳು. "ಪುನಃ ಪುನಃ ಬಂದರೆ ನಾನು ತಾನೇ ಏನು ಮಾಡಲು ಸಾಧ್ಯ" ಆಗ ಕೊಠಡಿಯಲ್ಲಿ ಮೊಹಲ್ಲೆಯ ಜನ ಯಾರೂ ಇರಲಿಲ್ಲ. ಹಿಂತಿರುಗುವಾಗ ಚಿಕ್ಕಮ್ಮನಿಗೆ ಅಕ್ಕ ಹೇಳುತ್ತಿದ್ದುದನ್ನು ಕೇಳಿಸಿಕೊಂಡೆ. "ಯಾರಿರಬಹುದು ? ಯಾರೂ ಇಲ್ಲ."

"ಮೂವತ್ತು ರೂಪಾಯಿ ಹೆಚ್ಚಿಗೆ ಸಿಗುತ್ತದೆ ಎಂದೇ ಯೋಚಿಸಿ ನೂರ ಐವತ್ತು ಮೈಲಿ ದೂರ ನೌಕರಿ ಮಾಡಲು ಹೊರಟುಹೋದ. ಇದರ ಅಗತ್ಯ ಏನಿತ್ತು;

ತಿಳಿಯದು. ಸ್ಕೂಲಿನ ನನ್ನ ಸಂಪಾದನೆ ಜೊತೆಯಲ್ಲಿ ಇವನೂ ಸ್ವಲ್ಪ ಸೇರಿಸಿದ್ದರೆ ಏಳು ಜನರ ಸಂಸಾರ ಚೆನ್ನಾಗಿಯೇ ನಡೆಯುತ್ತಿತ್ತು.'' ಅಕ್ಕ ತಲೆಯಲ್ಲಾಡಿಸಿದಳು.

''ನನ್ನ ಮಾತನ್ನು ಯಾರೂ ಕೇಳುವುದೇ ಇಲ್ಲ. ಎಂಟು ವರ್ಷಗಳಿಂದ ನೋಡುತ್ತಿದ್ದೇನೆ. ಮದುವೆಗೆ ಮುಂಚೆ ನನ್ನ ಹಣವನ್ನು ಮುಟ್ಟುವುದೂ ಇಲ್ಲ.''

''ಅವರು ಕೆಲಸ ಮಾಡುವದೆಲ್ಲಿ?''

''ಡಿ.ವೀ.ಸೀ.ಯಲ್ಲಿ.''

''ನನ್ನ ಅಣ್ಣ ಅಲ್ಲಿ ಪ್ರಯತ್ನ ನಡೆಸಿದ್ದರು. ಆದರೆ ಕೆಲಸ ಸಿಕ್ಕಿರಲಿಲ್ಲ.''

''ಏನು ಹೇಳುತ್ತಿದ್ದೀರಿ ತಾವು? ಅವನು ತನ್ನ ಪ್ರಯತ್ನದಿಂದ ಎಷ್ಟು ಜನರಿಗೆ ಕೆಲಸ ಕೊಡಿಸಿದ್ದರು. ಒಳ್ಳೇದು, ನಾನು ಅವನನ್ನು ಕೇಳುತ್ತೇನೆ. ತಾವು ಇಲ್ಲೇ ಇರುವಿರೊ ಅಥವಾ ''ಟ್ರೈನಿನ ಸಮಯ ಆಗುತ್ತಾ ಬಂತು.''

''ಇಲ್ಲ ಇಲ್ಲ, ಟ್ರೈನಿನ ಸಮಯ ಆಗಿಲ್ಲ. ನಾನು ಇಲ್ಲೇ ಇರುವೆ.''

ಅಕ್ಕನಿಗೆ ಈಗ ಏನೂ ಕೇಳಿಸುತ್ತಿರಲಿಲ್ಲ. ಕೇವಲ ಅವಳ ಹೃದಯದ ಬಡಿತ ಅವಳ ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ''ನಾನು ಇಲ್ಲೇ ಇರುವೆ, ನಾನು ಎಲ್ಲೂ ಹೋಗುವುದಿಲ್ಲ.''

''ನಾನು ಇನ್ನೊಮ್ಮೆ ನೋಡಿಕೊಂಡು ಬರುವೆ.''

ಹೆಂಗಸು ಹೋಗುತ್ತಿದ್ದಳು. ಈಕೆಯೂ ನಿಧಾನವಾಗಿ ಹೊರಟಳು. ಭಾರಿ ಗುಂಪಿನಲ್ಲಿ ಹೆಂಗಸು ಮರೆಯಾದಳು. ಅಕ್ಕ ಹಿಂದೆ ಜರುಗಿ ಸ್ಟೇಷನ್‌ನ ಬಾಗಿಲ ಬಳಿ ಬಂದು ನಿಂತಳು. ಸಂಜೆ ಮುಳುಗುತ್ತಿತ್ತು. ಆಫೀಸಿನಿಂದ ಬಸ್‌ಸ್ಟಾಂಡಿಗೆ ಬಂದಿದ್ದ ಆ ಜನಗಳು ಬಸ್ಸಿನ ಕಿಟಕಿಯ ಹೊರಗೆ ನೋಡುತ್ತಿದ್ದರು. ಅವರೆಲ್ಲರ ಮುಖ ತುಕ್ಕು ಹಿಡಿದ ತಗಡಿನ ಹಾಗೆ ಕಾಣುತ್ತಿತ್ತು. ಬಿಸಿಲಿನ ಝಳ ಹೌರಾ ಸೇತುವೆಯನ್ನು ನುಂಗುತ್ತಿತ್ತು. ಸ್ಟೀಮರ್ ಹಾರನ್ ಶಬ್ದ ಮಾಡಿತು. ಬೆನ್ನು ಬಗ್ಗಿಸಿಕೊಂಡು ಜನರು ತೂಗಾಡುತ್ತಾ ಸೇತುವೆಯ ದಿಬ್ಬ ಹತ್ತುತ್ತಿದ್ದರು. ಬಸ್ಸಿನಿಂದಿಳಿದು ಡ್ರೈವರ್ ಬೀಡಿ ಸೇದಿದ ಹೊಗೆಯನ್ನು ಆಕಾಶದತ್ತ ಬಿಡುತ್ತಿದ್ದ. ಸಂಜೆ ಮುಳುಗುತ್ತಿತ್ತು. ಲಿಲುಆದಲ್ಲಿ ಹುಡುಗಿಯರಿಗಾಗಿಯೇ ಸರ್ಕಾರಿ ಆಶ್ರಮವಿದೆ. ಓಡಿ ಹೋಗುವಾಗ ಸಿಕ್ಕಿದ ಹುಡುಗಿಯರನ್ನು ಪೋಲೀಸರು ಈ ಆಶ್ರಮದಲ್ಲಿ ಸೇರಿಸುತ್ತಾರೆ.

'ನಾವು ಇಲ್ಲೇ ಇರುತ್ತೇವೆ ಎಂದು ಹೇಳಲು ನಮಗೆ ಯಾವ ಮನೆಯೂ ಇಲ್ಲ. ನಮ್ಮವರೂ ಯಾರೂ ಇಲ್ಲ. ನೀನು ಹೇಳಬಲ್ಲೆ ಅಲ್ಲವೆ?'' ಇದನ್ನು ಹೇಳುತ್ತಾ ಅಣ್ಣನ ಮುಖ ಸಂಜೆಯಂತೆ ಸಪ್ಪಗಾಗಿತ್ತು.

ಅಕ್ಕ ಪುನಃ ಸ್ಟೇಷನ್‌ನ ಛಾವಣಿ ಕೆಳಗೆ ಬಂದಿದ್ದಳು. ರೈಲಿಂಗ್ ಹಿಡಿದುಕೊಂಡು ತಂಗಿ ಓಡುತ್ತಿದ್ದ ಟ್ರೈನ್ ನೋಡಿ ನಗುತ್ತಿದ್ದಳು.

ಟ್ರೈನಿನ ಬೋಗಿಯೊಳಗಿಂದ ಹಲವಾರು ಮುಖಗಳು ಪ್ಲಾಟ್‌ಫಾರಂ ನೋಡುತ್ತಾ ನಗುತ್ತಿದ್ದವು. ನಗುತ್ತಾ ಹೋಗುತ್ತಿದ್ದರು. ಇದೇ ರೀತಿ ಹೊರಟುಹೋಗಲು ಅವಳ ಮನಸ್ಸು ಬಯಸಿತು.

ರೈಲ್ವೆ ಹಾದಿಯ ಮೇಲೆ ಉದ್ದವಾದ ಕೋಲಿನ ರೀತಿಯ ಒಂದು ಸೇತುವೆ ಇದೆ. ಪ್ಲಾಟ್‌ಫಾರಂ ಅಂಚಿನಲ್ಲೇ ಸಾಗುವ ದಾರಿ ಮೇಲೆ ಏರಿ ಸೇತುವೆ ಸೇರುತ್ತದೆ. ಚೀಲಗಳನ್ನು ತಗುಲಿ ಹಾಕಿಕೊಂಡು ರಸ್ತೆಯಲ್ಲಿ ಮೂವರು ನಡೆಯುತ್ತಿದ್ದರು. ಅವರು ಬೆಟ್ಟ ಹತ್ತುವವರಾಗಿದ್ದರು. ಅವಳು ಯೋಚಿಸಿದಳು. 'ಅಕ್ಕ ಇನ್ನೂ ದಾರಿ ಕಾಯುತ್ತಿದ್ದಾಳೆ' ಎಂದು.

ವಿಶ್ರಾಮಗೃಹದಲ್ಲಿ ಅಕ್ಕನನ್ನು ಕಾಣದೆ ಅವಳು ಛಾವಣಿಯ ಕೆಳಗೆ ಬಂದು ನಿಂತಳು. ತೂಕ ನೋಡುವ ಯಂತ್ರದ ಮೇಲೆ ಒಬ್ಬ ನಿಂತು ತೂಕ ನೋಡುತ್ತಿದ್ದ. ಇವಳು ನೋಡಿದಳು. ಆ ಮುದುಕ ಕಾರ್ಡ್ ನೋಡಿದ. ಆನಂತರ ಜೋರಾಗಿ ನಡೆಯತೊಡಗಿದ.

"ಎಷ್ಟು ಬೇಜವಾಬ್ದಾರಿ ಮನುಷ್ಯ. ಇನ್ನು ಕೇವಲ ಮೂರು ನಿಮಿಷಗಳಿವೆ. ಇನ್ನೂ ಆತ ಬಂದಿಲ್ಲ."

ತಂಗಿ ಮುಖ ತಿರುಗಿಸಿ ಸುತ್ತಲೂ ನೋಡಿದಳು. 6–7 ಹುಡುಗ ಹುಡುಗಿಯರ ಗುಂಪೊಂದಿತ್ತು.

"ಆತನಿಗಾಗಿ ಕಾದರೆ ನಮ್ಮ ಗಾಡಿಯೂ ಹೊರಟುಹೋಗುತ್ತದೆ."

"ಮತ್ತೇನು ?"

ಆ ಜನಗಳು ತಮ್ಮ ತಮ್ಮಲ್ಲೇ ಪರಾಮರ್ಶೆ ಮಾಡಿಕೊಳ್ಳುವುದರಲ್ಲಿ ಲೀನವಾದರು. ಸ್ವಲ್ಪ ಹೊತ್ತಿನಲ್ಲಿ ಕನ್ನಡಕ ಧರಿಸಿದ ಒಬ್ಬ ಹುಡುಗಿ ಓಡುತ್ತಾ ಬಂದಳು. ಬಹಳ ತೆಳುವಾಗಿದ್ದಳು. ಬಹುಶಃ ಏಳನೆಯ ಕ್ಲಾಸಿನಲ್ಲಿ ಓದುತ್ತಿರಬಹುದು. ಇವಳನ್ನು ನೋಡಿದ ತಂಗಿ ತಿಳಿದಳು. ಇವಳ ಬಗ್ಗೆಯೆ ಆ ಗುಂಪು ಚರ್ಚಿಸುತ್ತಿದ್ದುದೆಂದು.

"ಆ ಜನಗಳು ಇದೇ ತಾನೇ ಹೋಗಿದ್ದಾರೆ."

"ಹೊರಟುಹೋದರೇ ?"

ಹುಡುಗಿ ಚರ್ಮದ ಚೀಲವನ್ನು ಹಿಸುಕಿ ಹಿಡಿದುಕೊಂಡಳು. ಕನ್ನಡಕವನ್ನು ಮೂಗಿನ ಮೇಲೆ ಸರಿಯಾಗಿ ಇಟ್ಟುಕೊಂಡಳು. ಅನಂತರ ಅವಳು ನೋಡಿದ ರೀತಿ ಅವಳು ಏನೋ ಪ್ರಶ್ನಿಸುವಂತಿತ್ತು. 'ಈಗ ನಾನು ಏನು ಮಾಡಲಿ'.

"ಏನು ? ಒಬ್ಬಳೆ ಹೋಗಲಾರೆಯಾ ?"

"ಏಕೆ ಹೋಗುವುದಿಲ್ಲ. ಅವರ ಜೊತೆಯಲ್ಲಿ ಹೋಗಿದ್ದರೆ ಮನೆ ಹುಡುಕಲು ಸುಲಭವಾಗುತ್ತಿತ್ತು." ಇಷ್ಟು ಹೇಳಿ ಅವಳು ಕೂಗಿದಳು. 'ಅರೇ'. ಹುಡುಗನೊಬ್ಬ ವ್ಯಾಕುಲನಾಗಿ ಅಲ್ಲಿಗೆ ಧಾವಿಸಿ ಬಂದ. ಆತನನ್ನು ಹುಡುಗ ಹುಡುಗಿಯರ ಆ ಗುಂಪಿನಲ್ಲಿ ನೋಡಿದ್ದಳು.

"ನೀವು ಬರುತ್ತಿದ್ದಿರಾ ?" ಹುಡುಗ ಪ್ರಶ್ನಿಸಿದ.

"ಹೌದು – ನೀವು ?"

"ನಾನೂ ಸಹ."

"ಸರಿ ಮತ್ತೆ ಟ್ರೈನು ಹೊರಟುಹೋಗಿದೆ. ರಸ್ತೆಯಲ್ಲಿ ಜನಗಳ

ಮೆರವಣಿಗೆಯಿಂದಾಗಿ ಟ್ರಾಂ ನಿಂತುಹೋಗಿತ್ತು. ಈಗ ಮುಂದೇನು ?"

"ಈ ಮೆರವಣಿಗೆಯ ಗಲಾಟೆ ಎಂದು ಕೊನೆಗೊಳ್ಳುತ್ತೊ ಗೊತ್ತಿಲ್ಲ."

"ಹೋಗ್ಲಿ ಆ ವಿಷಯ ಬಿಡಿ. ಈಗ ಏನು ಮಾಡೋಣ."

"ಈಗ ನಾವು ಹೋಗಲಾರೆವು."

"ಮನೇಲಿ ಹೇಳಿ ಬಂದಿದ್ದೇನೆ. ಹಿಂತಿರುಗಬೇಕಾದರೂ ಹನ್ನೊಂದು ಗಂಟೆ ಆಗಿಬಿಡುತ್ತೆ ಅಂತಾ. ಮದುವೆ ಮನೆ. ಈಗ ನಾನು ಹಿಂತಿರುಗಿ ಹೋದರೆ ಎಲ್ಲರೂ ಹಾಸ್ಯ ಮಾಡುತ್ತಾರೆ."

"ನಡೀರಿ ರೈಲಿನಲ್ಲಿ ಬ್ಯೆಂದಲ್ ತನಕ ಹೋಗಿಬರೋಣ."

"ಅದಕ್ಕೆ ಮುಂಚೆ ಸ್ವಲ್ಪ ತಿಂಡಿ ತಿನ್ಬೇಕು."

ಅವರಿಬ್ಬರು ಹೊರಟು ಹೋದರು. ಅದೇ ಸಮಯಕ್ಕೆ ಸರಿಯಾಗಿ ಸ್ಟೇಷನ್‌ನ ಎಲ್ಲಾ ದೀಪಗಳೂ ಹತ್ತಿಕೊಂಡವು. ಯಾವುದೋ ಟ್ರೈನ್ ಬಂದು ನಿಂತಿತ್ತು. ಸ್ಟೇಷನ್‌ನಲ್ಲಿ ಲೆಕ್ಕವಿಲ್ಲದಷ್ಟು ಜನ ಇಳಿಯುತ್ತಿದ್ದರು. ಇಷ್ಟೊಂದು ಜನ ! ತಂಗಿಗೆ ಇದು ಇಷ್ಟವಾಗಲಿಲ್ಲ. ಅವಳು ಪುನಃ ವಿಶ್ರಾಂತಿಗೃಹಕ್ಕೆ ಹಿಂತಿರುಗಿದಳು.

* * * *

ತಮ್ಮನನ್ನು ತಾಯಿ ಗದರಿಸಿ ಹೇಳಿದ್ದಳು "ಕೆಟ್ಟ ಮುಖದವನೆ ಮುಂಚೇನೆ ಹೋಗೊಕೆ ಏನಾಗಿತ್ತು? ಯಾರ್ದೊ ಮದುವೆಗೆ ಆಹ್ವಾನ ಇಲ್ದೆ ಹೋಗಿ ಒದೆ ತಿಂದು ಬಂದಿದ್ದಾನೆ."

ಅವನು ಸಹೋದರಿಯರತ್ತ ತಿರುಗಿ ಬಿಕ್ಕಿ ಬಿಕ್ಕಿ ಅಳಹತ್ತಿದ. ಆಗ ತಮ್ಮನ ಮುಖ ಚಪ್ಪಟೆಯಾದಂತೆನಿಸುತ್ತಿತ್ತು.

ಅಕ್ಕ ಫೋಟೋಗೆ ಇನ್ನೂ ಹತ್ತಿರ ಬಂದು ನಿಂತಳು. ಅವು ರೈಲಿಗೆ ಸಿಕ್ಕಿ ತುಂಡಾದವರ ಫೋಟೋಗಳಾಗಿದ್ದುವು. ಕಟ್ಟೆಯ ಮೇಲೆ ತನ್ನ ನೆರಳು ಬಿತ್ತು. ತನ್ನದೇ ಮುಖವನ್ನು ನೋಡಲು ಅವಳು ಸ್ವಲ್ಪ ಸೊಟ್ಟಗೆ ಸರಿದು ನಿಂತಳು. ತನ್ನ ಮುಖ ಎಷ್ಟು ಕೆಟ್ಟದ್ದಾಗಿದೆ, ಎಷ್ಟು ಭಯಂಕರವಾಗಿದೆ ಅನಿಸಿತು. ತಮ್ಮ ಒಮ್ಮೆ ರೋಸಿ ಹೇಳಿದ್ದ. "ನನ್ನ ಕೈಯಿಂದ ಏನು ಸಾಧ್ಯ ? ನಾನು ಏನು ಮಾಡಲಿ ? ನನ್ನ ಕೈಲಾದುದನ್ನೆಲ್ಲಾ ನಾನು ಮಾಡುತ್ತಿದ್ದೇನಲ್ಲ." ಅಕ್ಕನಿಗೆ ಗಾಜಿನ ಮೇಲೆಲ್ಲಾ ತಮ್ಮನದೇ ಚಿತ್ರ ಕಾಣಿಸಿತು. ಮಮತೆ ಹಾಗೂ ದುಃಖದಿಂದ ಅವಳ ಹೃದಯ ತುಂಬಿ ಬಂತು. ರೈಲಿಗೆ ಸಿಕ್ಕಿ ತತ್ತರಿಸಿ ಹೋದವರ ಬಗ್ಗೆ ಮನಸ್ಸು ಉದಾಸಗೊಂಡಿತು.

ಅಕ್ಕನಿಗೆ ಆ ಹೆಂಗಸು ಮತ್ತೆ ಕಾಣಿಸಿದಳು.

ಪುರುಷನ ಕೈಯಲ್ಲಿ ಸೂಟ್‌ಕೇಸ್ ಮತ್ತು ಹಾಸಿಗೆ ಇತ್ತು. ಅವರು ತಮ್ಮತಮ್ಮಲ್ಲೆ ಮಾತನಾಡಿಕೊಳ್ಳುತ್ತಿದ್ದರು. ಅಕ್ಕ ಓಡಿಹೋಗಿ ಆಕೆಯ ಕೈಯನ್ನು ಹಿಡಿದುಕೊಂಡುಬಿಟ್ಟಳು.

ಹೆಂಗಸು ತಲೆ ಅಲ್ಲಾಡಿಸಿದಳು.

"ಅವರ ವಿಳಾಸ ಕೊಡಿ. ತಮ್ಮನನ್ನು ಕಳುಹಿಸುತ್ತೇನೆ" ಇಷ್ಟು ಹೇಳಿ ಅಕ್ಕ ಅವರನ್ನು ದಿಟ್ಟಿಸತೊಡಗಿದಳು. ಅವಳೂ ನೋಡಿದಳು. ಎರಡು ಮುಖಗಳ

ಶೋಭೆಯಲ್ಲಿ ವಿಶಾಲ ಎರಡು ಕಣ್ಣುಗಳು, ಇಳೀಬಿದ್ದ ಗಡ್ಡ, ಮುರಿದ ಒಲೆಯ ಮಣ್ಣಿನ ಬಣ್ಣದ ತುಟಿ ಕಾಣಿಸಿತು.

"ಅಲ್ಲಿ ಕೆಲಸದ ಆಯ್ಕೆಗಾಗಿ ನೋಟೀಸು ಹಾಕಲಾಗಿದೆ."

ಆ ಹೆಂಗಸು ಹೊರಟುಹೋದಳು. ಅಕ್ಕ ಅವಳು ಹೋಗುತ್ತಿರುವುದನ್ನು ನೋಡುತ್ತಾ ನಿಂತಳು. ಅವಳ ಭುಜದ ಮೇಲೆ ಯಾರೋ ಸೂಟ್‌ಕೇಸ್‌ನ ಭಾರವನ್ನು ಹೇರಿದಂತೆನಿಸುತ್ತಿತ್ತು. ಅಕ್ಕ ಆಯಾಸದಿಂದ ತೂಕಡಿಸತೊಡಗಿದಳು. ಕಣ್ಣಿನ ರೆಪ್ಪೆಗಳು ಭಾರವಾದುವು. ಸುತ್ತಲೂ ಕಣ್ಣು ಹರಿಸಿ ತಂಗಿ ಎಲ್ಲಾದರೂ ತನ್ನನ್ನು ನಿರೀಕ್ಷಿಸುತ್ತಾ ನಿಂತಿದ್ದಾಳೆಯೋ ಎಂದು ನೋಡಿದಳು.

ವಿಶ್ರಾಂತಿ ಗೃಹದಲ್ಲಿ ತಂಗಿಯನ್ನು ಕಂಡಳು.

ಇಬ್ಬರೂ ಸುಮ್ಮನೆ ಮಾತಿಲ್ಲದೆ ಹತ್ತಿರ ಹತ್ತಿರ ಕುಳಿತರು. ಬಹಳ ಹೊತ್ತಿನ ನಂತರ ಅಕ್ಕ ನುಡಿದಳು "ಸುಮ್ಮನೆ ಕುಳಿತಿರುವುದರಿಂದ ಏನು ಪ್ರಯೋಜನ? ನಡಿ ಆ ಕಡೆ ಹೋಗೋಣ."

ನಡೆದು ಇಬ್ಬರೂ ಸ್ಟೇಷನ್‌ನ ಇನ್ನೊಂದು ಬದಿಗೆ ಬಂದರು. ತಂಗಿ ಪ್ರಶ್ನಿಸಿದಳು "ಈಗ ಏನು ಮಾಡೋಣ ?"

ಅಕ್ಕ ನಿಂತು ಯೋಚಿಸತೊಡಗಿದಳು. ಯೋಚಿಸಿ ನುಡಿದಳು: "ಇಲ್ಲೆ ಸ್ವಲ್ಪ ಹೊತ್ತು ಇರೋಣ."

ರೆಸ್ಟೋರೆಂಟಿನ ಬಾಗಿಲು ತೆರೆಯಿತು. ಹುಡುಗ ಹುಡುಗಿಯರ ಒಂದು ಗುಂಪು ನುಗ್ಗಿತು. ಅದನ್ನು ನೋಡಿ ತಂಗಿ 'ಇನ್ನು ಇವರು ತಿರುಗಾಡಲು ಹೊರಡುತ್ತಾರೆ' ಎಂದ ಯೋಚಿಸಿದಳು.

ಅವಳು ಕೆಮ್ಮಿದಳು. ಉಗುಳಿದಳು. ಬೆನ್ನು ತಿರುಗಿಸಿ ವಾಂತಿ ಮಾಡಲು ಮನಸ್ಸಾಯಿತು. ಅಕ್ಕ ಅವಳ ಬೆನ್ನಿನ ಮೇಲೆ ಕೈ ಇರಿಸಿ ಹತ್ತಿರ ಸೆಳೆದುಕೊಂಡಳು. ಪ್ರಶ್ನಿಸಿದಳು : "ಏನಾದ್ರೂ ಹೇಳ್ತೀರಾ ?"

'ಇಲ್ಲ'

'ಹಸಿವೆ ಆಗುತ್ತಿದೆಯೆ ?'

'ಇಲ್ಲ'

ಪುನಃ ರೆಸ್ಟೋರೆಂಟಿನ ಬಾಗಿಲು ತೆರೆಯಿತು. ಶಬ್ದ ಕೇಳಿಸಿತು. ಶಬ್ದ ಕೇಳಿ ಅವಳು ಆಕಳಿಸಿದಳು. ಟ್ರೈನು ಶಿಳ್ಳೆ ಊದಿತು.

ತಂಗಿ ಪ್ರಶ್ನಿಸಿದಳು 'ಶಂಖದ ಸ್ವರದಂತಿದೆ ಅಲ್ವೆ.'

'ಹೌದು.'

"ಅಕ್ಕ ನಿಂಗೆ ಜ್ಞಾಪಕ ಇರಬಹುದು. ತಂದೆಯ ಜೊತೆಯಲ್ಲಿ ಸುತ್ತಾಡುವಾಗ ಒಮ್ಮೆ ಇಂಜಿನ್ನಿನೊಳಗೆ ಹತ್ತಿದ್ದೆವು."

"ಹೌದು ಜ್ಞಾಪಕ ಇದೆ."

"ಡ್ರೈವರಿಗೆ ಒಂದು ಚಿನ್ನದ ಹಲ್ಲಿತ್ತು. ನನ್ನನ್ನು ಆತ ಎತ್ತಿಕೊಂಡಿದ್ದ.

"ಅವನು ಇಂಜನ್ನಿನ ಶಿಳ್ಳೆ ಬಾರಿಸಿದಾಗ ಹೆದರಿಕೆಯಿಂದ ನೀನು ಆತನ ಎದೆಯಲ್ಲಿ

ಮುಖ ಮುಚ್ಚಿಕೊಂಡಿದ್ದ."

ತಂಗಿ ನಕ್ಕಳು.

ಅಕ್ಕ ನುಡಿದಳು. "ಅಲ್ಲಿ ನೋಡು."

ಮದುವೆಯ ನಂತರ ವರ ವಧುವನ್ನು ಮನೆಗೆ ಕರೆದೊಯ್ಯುತ್ತಿದ್ದ. ಹೊಸ ಪೆಟ್ಟಿಗೆ, ಹೊಸ ಹಾಸಿಗೆ, ಹೊಸ ಒಡವೆಗಳು, ಹೊಸ ಬಟ್ಟೆಬರೆ. ವಧು ನಾಚಿಕೆಯಿಂದ ಕುಗ್ಗಿ ನಡೆಯುತ್ತಿದ್ದಳು. ವರ ಸಿಗರೇಟು ಸೇದುತ್ತಿದ್ದ.

"ಅಕ್ಕಾ, ಕನ್ಯೆಯ ಕೂದಲು ನೋಡು ಎಷ್ಟು ತೆಳ್ಳಗಿದೆ."

"ಹೌದು."

"ವರನ ವಯಸ್ಸು ಅಧಿಕವಿದೆ."

"ಹೌದು."

"ಅಣ್ಣನ ಸ್ನೇಹಿತ ಮತ್ತೇಕೆ ಬರಲಿಲ್ಲ?"

"ನಂಗೇನು ಗೊತ್ತು."

"ಬಹಳ ಚೆನ್ನಾಗಿ ಮಾತನಾಡುತ್ತಿದ್ದ."

ಅಕ್ಕ ಏನೂ ಮಾತನಾಡಲಿಲ್ಲ.

"ಒಂದು ಸಲ ಆತ ನನಗೆ ಚಾಕಲೇಟು ತಂದುಕೊಟ್ಟಿದ್ದ. ನಿನಗೆ ಜ್ಞಾಪಕವಿದೆಯೆ?" ಉತ್ತರ ಬಾರದಿರಲು ತಂಗಿ ಸುಮ್ಮನಾಗಲಿಲ್ಲ, ನುಡಿದಳು "ಅಮ್ಮ ಹೇಳುತ್ತಿದ್ದಳು, ಬಹುಶಃ ನೀನು ಅವನಿಗೆ ಇಷ್ಟವಾಗಿರಬೇಕು."

"ನೀನು ಸುಮ್ನಿರು."

ತಂಗಿಯ ಕಣ್ಣು ತುಂಬಿ ಬಂತು. ಕೆಮ್ಮನ್ನು ತಡೆಯಲು ಬಗ್ಗಿ ನಿಂತಳು. ಮೆಲುದನಿಯಲ್ಲಿ ನುಡಿದಳು "ನೀರು ಕುಡಿಯಬೇಕು."

"ಕುಡಿದು ಬಾ."

ತಂಗಿ ಹೋಗಲಿಲ್ಲ. ಅಕ್ಕನಿಗೆ ತೂಕಡಿಕೆ ಬರಹತ್ತಿತ್ತು. ಅವಳು ನೆಟ್ಟಗಣ್ಣಿನಿಂದ ಎದುರಿಗೆ ಹೋಗುತ್ತಿದ್ದಳು. ತಂಗಿ ಅತ್ತಲೆ ನೋಡುತ್ತಾ ನುಡಿದಳು. "ಈಗ ನಾವು ಏನು ಮಾಡೋಣ".

"ನನಗೆ ತಿಳಿಯದು."

"ತಮ್ಮ ಏನು ಹೇಳಿದ."

ಅಕ್ಕ ಜ್ಞಾಪಿಸಿಕೊಳ್ಳತೊಡಗಿದಳು.

"ಅವರು ಇಂದು ಬರುತ್ತಾರೆಯೇ?"

"ಏಕೆ?"

"ಹಾಗಿದ್ದರೆ ನಾವು ಏಕೆ ಬಂದಿದ್ದೇವೆ?"

ಅಕ್ಕ ಸುತ್ತಲೂ ದೃಷ್ಟಿ ಹರಿಸಿದಳು. ಜನಗಳು, ಬೆಳಕು, ಕೋಲಾಹಲ ನೋಡಿ ಕೇಳಿ ಅನಂತರ ದುರದುರನೆ ನೋಡಹತ್ತಿದಳು. ಅನಂತರ ನಿದ್ದೆಗಣ್ಣಿನ ಸ್ವರದಲ್ಲಿ ನುಡಿದಳು. "ನಾವು ಕಾಯೋಣ. ಅವರು ಬರುತ್ತಾರೆ, ಪ್ರಶ್ನಿಸುತ್ತಾರೆ, 'ಜೊತೆಯಲ್ಲಿ ಯಾರಿದ್ದಾರೆ, ಎಲ್ಲಿಗೆ ಹೋಗುತ್ತಿದ್ದೀರಿ, ಏತಕ್ಕೆ ಹೋಗುತ್ತಿದ್ದೀರಿ?' 'ನಾವು ಇಬ್ಬರು

ಅಕ್ಕತಂಗಿಯರು. ಮುಂಬಯಿಗೆ ಹೋಗಲು ಹೊರಟುಬಂದಿದ್ದೇವೆ. ಜೊತೆಯಲ್ಲಿ ಯಾರೂ ಇಲ್ಲ. ಅಲ್ಲಿ ನಾವು ಸಿನಿಮಾ ಸೇರಲು ಇಚ್ಛಿಸಿದ್ದೇವೆ' ಎಂದು ಹೇಳಿದರೆ ಅವರು ನಮ್ಮನ್ನು ಹಿಡಿದುಕೊಂಡು ಹೋಗುತ್ತಾರೆ. ವಿಳಾಸ ಕೇಳುತ್ತಾರೆ. ನಾವು ಹೇಳುವುದಿಲ್ಲ. ಆಗ ಅವರು ನಮ್ಮನ್ನು ಆಶ್ರಮಕ್ಕೆ ಕಳುಹಿಸುತ್ತಾರೆ."

"ಅಲ್ಲಿ ನಾವು ಮಾಡುವುದೇನು ?"

"ಗೊತ್ತಿಲ್ಲ."

"ಅಕ್ಕಾ, ನಡಿ ಎಲ್ಲಾದರೂ ಓಡಿ ಹೋಗೋಣಾ."

ನಿಧಾನವಾಗಿ ಅಕ್ಕನ ತೂಕಡಿಕೆ ಓಡಿಹೋಯಿತು. ತಣ್ಣಗಿನ ಸ್ವರದಲ್ಲಿ ನುಡಿದಳು. "ಎಲ್ಲಿಗೆ ಓಡುತ್ತಿ ?"

"ಎಲ್ಲಾದರೂ ಸರಿ."

"ಆನಂತರ."

ತಂಗಿ ಸುಮ್ಮನೆ ನೋಡುತ್ತಾ ನಿಂತಳು. ಅಕ್ಕ ಅವಳನ್ನು ಹತ್ತಿರ ಸೆಳೆದು ಎದೆಗೆ ಅಪ್ಪಿಕೊಂಡಳು. ಅವಳ ಸನಿಹ ಬಗ್ಗಿ ನುಡಿದಳು "ಏನು ಹೆದರಿಕೆ ಆಯಿತೆ ?" ತಂಗಿ ಎದೆಯಲ್ಲಿ ತಲೆ ಹುದುಗಿಸಿಕೊಂಡು ಥರಥರ ನಡುಗಲಾರಂಭಿಸಿದಳು. ಅಕ್ಕ, ಆಕೆಯ ಬೆನ್ನಿನ ಮೇಲೆ ಕೈ ಇರಿಸಿ ಅದುಮಿದಳು.

ಆಗ ಒಬ್ಬಳು ಯೋಚಿಸಿದಳು. ಮನುಷ್ಯನ ಮುಖ ತುಕ್ಕುಹಿಡಿದ ತಗಡಿನಂತಿದೆ. ಇನ್ನೊಬ್ಬಳು ಯೋಚಿಸಿದಳು. ನಗುತ್ತಿರುವ ಟ್ರೈನ್‌ನ ಮುಖ ದೂರದೂರ ಹೊರಟುಹೋಗುತ್ತಿದೆ.

# ಅನಾವೃಷ್ಟಿ

*ಸುನೀಲ್ ಗಂಗೋಪಾಧ್ಯಾಯ*

ಛಿಪದಹ್‌ನಿಂದ ಡಾಲ್‌ಟನ್ ಗಂಜ್‌ಗೆ ಹೋಗುವಾಗ ಗಾಡಿ ಕೆಟ್ಟುಹೋಯಿತು. ಥಳಥಳಿಸುತ್ತಿದ್ದ ಹೊಸ ಸ್ಟೇಷನ್ ವ್ಯಾಗನ್ ಇದ್ದಕ್ಕಿದ್ದಂತೆಯೇ ಕೆಡುತ್ತದೆ ಎಂದು ಯಾರೂ ಊಹಿಸಿರಲಿಲ್ಲ. ಸೇತುವೆ ದಾಟಿ ದಿಣ್ಣೆ ಏರುವ ಸಮಯದಲ್ಲಿ ಎರಡು ಮೂರು ಬಾರಿ ದುರ್ಬಲವಾಗಿ ಕೆಮ್ಮಿ ಗಾಡಿ ನಿಂತಾಗ ಯಾರೂ ಇದರತ್ತ ಗಮನ ಹರಿಸಲಿಲ್ಲ. ನಿಂತಿದೆ; ನಿಂತಿರಲಿ, ಹೊರಡುವುದಂತೂ ಸರಿ ಎಂದು ಯೋಚಿಸಿದ ಜನ ತಮ್ಮ ಕಣ್ಣುಗಳಿಂದ ಪ್ರಕೃತಿಯನ್ನು ತಮಗೆ ಪ್ರಿಯವಾದ ರೀತಿಯಲ್ಲಿ ನೋಡಲು ಪ್ರಾರಂಭಿಸಿದರು. ಮಿ: ಖೆಮಕಾ ತಮ್ಮ ಸಿಗರೇಟ್ ಕೇಸ್ ಎಳೆದು ಮುಂದೆ ಹಿಡಿದರು. ಇಂಗ್ಲಿಷ್, ಹಿಂದಿ ಹಾಗೂ ಬಂಗಾಳಿಯಲ್ಲೂ ಸಹ ಅವರು ಒಬ್ಬೊಬ್ಬರಾಗಿ ಎಲ್ಲರನ್ನೂ ಸಿಗರೇಟ್ ತೆಗೆದುಕೊಳ್ಳಲು ಪ್ರಾರ್ಥಿಸಿದರು. ಸಿಗರೇಟ್ ಕೇಸ್‌ನಲ್ಲಿ ಎಂಟು ಸಿಗರೇಟ್‌ಗಳಿದ್ದುವು. ಅವೆಲ್ಲಾ ಒಟ್ಟಿಗೆ ಖಾಲಿಯಾದವು. ಹತ್ತು ನಿಮಿಷಗಳಾದರೂ ಗಾಡಿ ಹೊರಡಲಿಲ್ಲ. ಹಿಂದೊಂದು ಟ್ರಕ್ ಹಾರನ್ನು ಬಾರಿಸಹತ್ತಿತ್ತು. ಮಿ. ಖೆಮಕಾ ತಾವೇ ಕೆಳಗಿಳಿದರು. ಕಿರಿದಾದ ಸೇತುವೆ ದಾಟಿ ನದಿಯ ದಡದಲ್ಲೇ ಸಾಗುವ ದಾರಿ ಅದಾಗಿತ್ತು. ಅದೇನು ನದಿಯೇ, ನದಿಯ ಅಸ್ಥಿಪಂಜರ ಎಂದು ಹೇಳಬಹುದು. ರಕ್ತ ಮಾಂಸ ಕಿಂಚಿತ್ತೂ ಇಲ್ಲ. ಅರುಣನೂ ಕೆಳಗಿಳಿದ. ಗಾಡಿಯ ಒಳಗೆ ಉಸಿರು ಕಟ್ಟಿಸುವ ಧಗೆ. ಇಬ್ಬರೂ ಕೈಗಳನ್ನು ಹಿಂದೆ ನೀಡಿ ಎದೆಯನ್ನು ಉಬ್ಬಿಸಿ ಮೈಮುರಿದು ಸ್ವಲ್ಪ ಆಯಾಸ ಪರಿಹರಿಸಿಕೊಂಡರು. ಶರೀರವೆಲ್ಲಾ ನವೆಯಾಗುತ್ತಿತ್ತು. ಸ್ನಾನವಿಲ್ಲದೆ ಆರಾಮ ಲಭಿಸುವಂತಿರಲಿಲ್ಲ. ನದಿಯಲ್ಲಿ ನೀರೇನಾದರೂ ಇದ್ದಿದ್ದರೆ ಎಲ್ಲರೂ ಅಲ್ಲೆ ಇಳಿದು ಬಿಡುತ್ತಿದ್ದರು. ಬಲವಂತವಾಗಿ ತುರುಕುವ ಬೇಡದ ಹಾಸ್ಯದಂತೆ ಬಿಸಿಲು ಅಸಹನೀಯವಾಗಿತ್ತು. ಆದರೆ ಆಗಿನ್ನೂ ಹನ್ನೊಂದುವರೆಗಂಟೆ.

ಬಹುಶಃ ಈ ಜಾಗದಲ್ಲಿ ಬಹಳಷ್ಟು ಗಾಡಿಗಳು ಕೆಟ್ಟುನಿಲ್ಲುತ್ತಿದ್ದುವು. ಅಥವಾ ಬೇಕೆಂದೇ ಗಾಡಿ ನಿಲ್ಲಿಸುತ್ತಿದ್ದರು. ಏತಕ್ಕೆಂದರೆ ಇದ್ದಲು ಅಥವಾ ಸೀಮೆಸುಣ್ಣದಿಂದ ಶಿಕ್ಷಿತ ಜನರ ಕೈಬರಹ ನೋಡಲು ಕಾಣುತ್ತಿತ್ತು. ಸೀಮೆಸುಣ್ಣ ಆ ಜನರಿಗೆ ಎಲ್ಲಿಂದ ಸಿಗುತ್ತಿತ್ತು ? ಪ್ರವಾಸ ಹೋಗುವಾಗ ಜನರು ಸೀಮೇಸುಣ್ಣವನ್ನು

ಜೇಬಿನಲ್ಲಿಟ್ಟುಕೊಂಡು ತಿರುಗುತ್ತಾರೆಯೆ ? ಅತಿ ಹೆಚ್ಚಿಗೆ ಎದ್ದು ಕಾಣುತ್ತಿದ್ದ ಬರವಣಿಗೆ ಎಂದರೆ ಮದಿರಾ + ಲಾಲ್ ಕ್ಲಬ್ = ಹೆವೆನ್. ಅರುಣ್ ಮೆಲುದನಿಯಲ್ಲಿ ನುಡಿದ 'ಗುಡ್‌ಹೆವೆನ್ಸ್ – ಹೆಲ್'.

ಡ್ರೈವರ್ ವ್ಯಾನಿನ ಬ್ಯಾನೆಟ್ ತೆರೆದಿದ್ದ. ಖೆಮಕಾ ಅದರೊಳಗೆ ಇಣಿಕಿನೋಡುತ್ತಿದ್ದ. ಗಾಡಿಯ ಒಳಗಿನಿಂದ ಹೆರಾಲ್ಡ್ ಟ್ರಿಬ್ಯೂನ್‌ನ ಲಾಹಿಡಿ, ಸಿಟ್ಟಿನಿಂದ ಹೊರಬಂದು ಕೂಗಿದ "ಹೇ, ಖೆಮಕಾ ವಾಟ್ ದಿ ಹೆಲ್ ಯೂ."

ಖೆಮಕಾ ಗಟ್ಟಿಯಾದ ಮನುಷ್ಯ. ಯಾವಾಗಲೂ ವಿಚಲಿತನಾಗುತ್ತಿರಲಿಲ್ಲ. ತಕ್ಷಣ ತಲೆ ಎತ್ತಿ ನುಡಿದ: 'ಲೆಟಸ್ ಡೂ ಒನ್ ಥಿಂಗ್ – ಗಾಡಿ ತೊಂದರೆ ಕೊಡುತ್ತಿದೆ. ಆದ್ದರಿಂದ ನಾವು ಇಳಿಯುವುದೇ ಉಚಿತ. ಹತ್ತಿರದಲ್ಲೆ ರೂಪಾ ಟುಂಗರಿಯ ಡಾಕ್ ಬಂಗಲೆ ಇದೆ. ಮಧ್ಯಾಹ್ನದ ಊಟ ಅಲ್ಲಿಗೇ ಹೋಗಿ ಮಾಡೋಣ."

ಅಷ್ಟು ಹೊತ್ತಿಗೆ ನಾಲ್ಕೈದು ಜನ ಕೆಳಗಿಳಿದಿದ್ದರು. ಲಾಹಿಡಿಯ ಬುದ್ಧಿ ಬೆಳಿಗ್ಗೆ ಎಂದೂ ಸ್ಥಿಮಿತದಲ್ಲಿರುವುದಿಲ್ಲ. ಅರುಣನಿಗೆ ಗೊತ್ತು. ಬೆಳಗ್ಗೆ ಹೊತ್ತು ಪ್ರತಿಮಾತಿನ ಜೊತೆ ಆತ 'ಹೆಲ್' ಉಚ್ಚರಿಸುತ್ತಿದ್ದ. ಲಾಹಿಡಿ ಬಾಯಿ ತೆರೆದು ಕೈಗಡಿಯಾರ ನೋಡಿದ. ಗಡಿಯಾರ ಆತ ನೋಡಿದ್ದು ಸಮಯ ಅರಿಯಲಲ್ಲ ದಿನ ತಿಳಿಯಲು. ನುಡಿದ "ಇಂದು ಎಂಟನೇ ತಾರೀಖು. ಮೈಗುಡ್‌ನೆಸ್, ಇಂದು ನಾನು ಪಾಟ್ನಾ ತಲುಪಲೇಬೇಕು. ನಿಮ್ಮ ಟಾಟಾ ಕಂಪನಿ ಇಂಥಾ ಹರಕು ಮುರುಕು ಗಾಡಿ ಇಟ್ಟಿದೆ ಅಂದರೆ...." ಖೆಮಕಾ ಗಹಿಸಿದ, ನುಡಿದ "ಇದು ತೀರಾ ಹೊಸಗಾಡಿ ಅದಕ್ಕೆ ತೊಂದರೆ ಕೊಡುತ್ತಿದೆ. ನಡಿಯಿರಿ, ನಡಿಯಿರಿ. ಇಲ್ಲೆ ಒಂದು ಮುದ್ದಾದ ಡಾಕ್ ಬಂಗಲೆ ಇದೆ. ಇದು ನಿಜವಾಗಿ ಎಲ್ಲರಿಗೂ ಇಷ್ಟವಾಗುತ್ತೆ. ಮಿಸ್ಟರ್ ರಂಗಾಚಾರಿ ಏನು ನಿಮ್ಮ ಅಭಿಪ್ರಾಯ ?"

ರಂಗಾಚಾರಿಗೆ ಈ ಬಗ್ಗೆ ಏನೂ ಆಕ್ಷೇಪಣೆ ಇರಲಿಲ್ಲ. ಇತರರಿಗೂ ಏನೂ ಅಂತಹ ವಿಶೇಷ ಆಕ್ಷೇಪಣೆ ಇರಲಿಲ್ಲ. ಆದರೆ ಲಾಹಿಡಿ ದೊಡ್ಡ ಇಂಗ್ಲೀಷ್ ಪತ್ರಿಕೆಯ ಮನುಷ್ಯ. ಅದಕ್ಕೆ ಆತನ ಸ್ವಭಾವವೂ ಕೊಂಚ ತೀಕ್ಷ್ಣವಾದದ್ದು.ಆತ ಗಡಿಬಿಡಿ ಮಾಡಲಾರಂಭಿಸಿದ. 'ಡಾಲ್‌ಟನ್ ಗಂಜ್‌ನ ಡಿ.ಎಂ. ರನ್ನು ನಾನು ಮೂರು ಗಂಟೆಗೆ ಭೇಟಿ ಮಾಡಬೇಕಿತ್ತು. ಆದರೆ ಇಲ್ಲಿ... ಬಂಗಲೆ ಎಷ್ಟು ದೂರವಿದೆ ? ಈ ಬಿಸಿಲಿನಲ್ಲಿ ನಡೆಸಿಕೊಂಡು ಹೋಗ್ತೀಯಾ ?"

"ಹತ್ತಿರದಲ್ಲೆ ಇದೆ. ಎದುರಿಗೇ ಕಾಣುತ್ತಿದೆ."

"ಅಲ್ಲೇನು ಊಟಕ್ಕೆ ಎಲ್ಲಾ ಸಿಗುವುದೇ ? ಇಲ್ಲಿ ಎಲ್ಲೂ ಏನೂ ತಿನ್ನೊ ವಸ್ತು ಕಾಣಿಸ್ತಾನೇ ಇಲ್ಲ."

"ಅದೆಲ್ಲಾ ನಂಗೆ ಬಿಟ್ಟಿದ್ದು. ನನ್ನ ಹತ್ರ ಎಲ್ಲಾ ಏರ್ಪಾಡೂ ಇದೆ. ಏನೂ ತೊಂದರೆ ಆಗೋದಿಲ್ಲ."

ಖೆಮಕಾ ಎಂತಹ ಸ್ಥಿತಿಯಲ್ಲೂ ಹೆದರುವ ಮನುಷ್ಯನಲ್ಲ. ಲಾಹಿಡಿ ಜೊತೆಯಲ್ಲಿ ಆತ ನಗುತ್ತಲೇ ಮಾತನಾಡುತ್ತಿದ್ದ. ಆದರೆ ಈಗ ಡ್ರೈವರ್ ಕಡೆ ತಿರುಗಿ ತನ್ನ ಮುಖ ಚರ್ಯೆಯನ್ನು ಬದಲಾಯಿಸಿಕೊಂಡು ಕಠೋರ ಸ್ವರದಲ್ಲಿ ಡ್ರೈವರ್‌ನನ್ನು

ದಬಾಯಿಸಿದ. ಅನಂತರ ತಕ್ಷಣವೇ ಆ ಮುಖವಾಡವನ್ನು ಬದಲಿಸಿ ನಗುತ್ತಾ ಲಾಹಿಡಿಗೆ ನುಡಿದ "ಆಗಾಗ್ಯೆ ಇಂತಹ ಅನಿರೀಕ್ಷಿತ ಘಟನೆಗಳು ನನಗೆ ಬಹಳ ಇಷ್ಟ. ಹೂಂ ನಡೀರಿ."

ಗಾಡಿಯು ಕ್ಲೀನರ್ ಸಾಮಾನುಗಳನ್ನು ತೆಗೆದುಕೊಂಡೇ ನಮ್ಮ ಹಿಂದೆ ಹಿಂದೆ ಬರುತ್ತಿದ್ದ. ಒಂದು ಕೇಸು ಬಿಯರ್ ಮತ್ತು ಮೂರು ಬಾಟಲ್ ಸ್ಕಾಚ್ ಇನ್ನೂ ಉಳಿದಿತ್ತು. ಸಾಸ್ ಕೂಡ ಪೂರ್ತಿ ಖರ್ಚಾಗಿರಲಿಲ್ಲ. ಅದರತ್ತ ಓರೆನೋಟ ಬೀರಿದ ಲಾಹಿಡಿಯ ಮುಖಚರ್ಯೆ ಕೊಂಚ ಬದಲಾಯಿಸಿತು. ಡಾಕ್ ಬಂಗಲೆಯಲ್ಲಿ ಎರಡು ಕೊಠಡಿಗಳಿದ್ದವು. ಒಳ್ಳೆಯ ಶುಭ್ರವಾದ ಸ್ನಾನ ಗೃಹ, ಮೂರು ಜನ ಜವಾನರು ಇದ್ದರು. ಸ್ವಲ್ಪಹೊತ್ತಿನ ಮುಂಚೆ ತಾನೆ ಕೇಂದ್ರೀಯ ಮಂತ್ರಿವರ್ಯರೊಬ್ಬರು ತಮ್ಮ ಸಹಚರರೊಡನೆ ಇಲ್ಲಿ ತಂಗಿದ್ದರು. ಅದಕ್ಕೆ ಆ ಜವಾನರು ಇನ್ನೂ ತಮ್ಮ ಸಮವಸ್ತ್ರಗಳನ್ನು ಸಹ ತೆಗೆದಿರಲಿಲ್ಲ. ಖೆಮುಕಾ ಕ್ರಿಕೆಟ್ ಆಟಗಾರನಂತೆ ಸುಲಭವಾಗಿ ಎಲ್ಲಾ ಏರ್ಪಾಟುಗಳನ್ನು ಬೇಗಬೇಗ ಮಾಡಿ ಪೂರೈಸಿದ. ಎಷ್ಟೇ ಪ್ರಯತ್ನ ಪಟ್ಟರೂ ಮೂರು ಕೋಳಿಗಳಿಗಿಂತ ಹೆಚ್ಚಿಗೆ ಹೊಂಚಲು ಸಾಧ್ಯವಾಗಲಿಲ್ಲ. ಇದಕ್ಕಾಗಿ ವಿಷಾದ ವ್ಯಕ್ತಪಡಿಸಿ ಬಿಯರ್ ಬಾಟಲ್‌ಗಳನ್ನು ತೆರೆದ. ಲಾಹಿಡಿಯ ಸಿಡಕಿನ ಮುಖವು ಸ್ವಲ್ಪಹೊತ್ತಿನಲ್ಲೆ ಸರಿಹೋಯಿತು. ಟೇಬಲ್‌ನ ಮೇಲೆ ಕಾಲುಚಾಚಿ ನುಡಿದ: "ಅರೆ ಖೆಮುಕಾ ಇಲ್ಲೆ ಹತ್ತಿರದಲ್ಲಿ ನಿನ್ನ ಟಾಟಾ ಕಂಪನಿಯ ಖಾನಾವಳಿ ಇದೆಯೆ ?"

"ಇಲ್ಲ ಈ ಕಡೆ ಎಲ್ಲೂ ಇಲ್ಲ. ಚಾರ್ ಪಾಯಿಂಟ್‌ನಲ್ಲಿ ನಾವು ರಿಲೀಫ್ ಪಡುತ್ತಿದ್ದೇವೆ. ನೀವು ನಿನ್ನೆ ನೋಡಿದ್ದು.."

"ಹೋಗಲಿ ಬಿಡಿ ಜೀವ ಉಳಿಯಿತು. ಹಿಂದಿನ ಮೂರು ದಿನಗಳಲ್ಲಿ ಇಷ್ಟು ಅತ್ಯಾಚಾರ ಮಾಡಿದ್ದೇವೆ."

"ಅತ್ಯಾಚಾರ ? ಮಿ. ಲಾಹಿಡಿ, ಯು ಮಸ್ಟ್ ಫೇಸ್ ಲೈಫ್. ನೀವು ಪತ್ರಿಕಾಕರ್ತರುಗಳು..."

"ಬೆಳಗ್ಗೇನೆ ಬಾಯಿ ಹೊಲಸು ಮಾಡಿಕೊಳ್ಳಬೇಡ. ಲಾಯಿಫ್ (ಅಚ್ಚು ಹಾಕಲು ಯೋಗ್ಯವಲ್ಲ) ಹೂಂ ಬಿಯರ್ ಹೀರು...

"ದೇಶದ ಸ್ಥಿತಿ ಹೇಗಿದೆ ? ನೀವು ನಿಮ್ಮ ಕಣ್ಣಿನಿಂದ ನೋಡುವುದಿಲ್ಲ. ವಿದೇಶಿ ರಿಪೋರ್ಟರ್ ಹೇಳುವತನಕ...."

"ದೇಶದ ಸ್ಥಿತಿ ನೋಡುವುದಕ್ಕೆ ನಿಮಗೇನು ದರದು ?"

"ಏನೇನೋ ಬೊಗಳಬೇಡ, ವಲ್ಗರ್. ಏ ಅರುಣ್, ನಿನ್ನ ಬಳಿ ಚಾರ್‌ಮಿನಾರ್ ಇದ್ದರೆ ಒಂದು ಕೊಡು."

ಖೆಮೆಕಾನ ಸಿಗರೇಟ್ ಕೇಸು ಪುನಃ ಭರ್ತಿಯಾಗಿತ್ತು. ಅದನ್ನು ಮುಂದೆ ಮಾಡಿದ ತಕ್ಷಣವೇ ಲಾಹಿಡಿ ನುಡಿದ. "ನಿನ್ನ ಗೋಲ್ಡ್‌ಫ್ಲೇಕ್ ಕುಡಿದು ಕುಡಿದು ರುಚಿಯೇ ಕೆಟ್ಟುಹೋಗಿದೆ. ಅರುಣ್, ಚಾರ್‌ಮಿನಾರ್ ಕೊಡು."

ಅರುಣ್ ದೂರದಿಂದಲೇ ಸಿಗರೇಟ್ ಪ್ಯಾಕ್ ಅನ್ನು ಎಸೆದು ನುಡಿದ. "ಲಾಹಿಡಿ

ಭೈಯಾ ಇಂದು ಇಲ್ಲೆ ಇದ್ದರೆ ಹೇಗೆ. ಈ ಸ್ಥಳ ಬಹಳ ಏಕಾಂತವಾಗಿದೆ.''

''ನಿಂಗೇನು ? ಏಳು ದಿನ ಬೇಕಾದರೂ ರಜಾ ತೆದುಕೊಂಡು ಮಜಾ ಮಾಡಬಹುದು. ನಾನಂತೂ ನಾಡದ್ದು ಕಲ್ಕತ್ತಾಗೆ ಹೋಗಿ ವಿಮಾನ ಹಿಡಿಯಬೇಕು. ಹಾಗೆ ನೋಡಿದರೆ ಇನ್ನೊಂದೇ ದಿನ... ಪ್ರಕೃತಿ ಕೆಟ್ಟುಹೋದಾಗ ಏನೂ ಹಿಡಿಸಲ್ಲ.''

ಖೇಮಕಾ ನುಡಿದ: ''ಸತ್ಯವಾಗಿ ಸಹಿಸೋಕೆ ಸಾಧ್ಯವಿಲ್ಲ. ಇಂಥಾ ಕರುಣಾಮಯ ದೃಶ್ಯ...1''

''ಏನು ಕರುಣ ? ಏನು ಸಮಾಚಾರ ?''

ಲಾಹಿಡಿ ಕಾಲುಗಳನ್ನು ಕೆಳಗೆ ಇಳಿಸಿ ಸರಿಯಾಗಿ ನಿಂತುಕೊಂಡ. ಲಾಹಿಡಿಯ ನಡು ವಿಶಾಲ ಚಚ್ಚೌಕ ಮುಖ. ಕಣ್ಣಿನಲ್ಲಿ ಅಧಿಕ ಶಕ್ತಿಯ ಕನ್ನಡಕ. ನಿಜವಾಗಿ ಆತನ ಮುಖ ಮಕ್ಕಳಂತಿತ್ತು. ಕೋಪ, ಆಶ್ಚರ್ಯ, ನಿರಾಶೆ ಈ ಎಲ್ಲಾ ಭಾವಗಳೂ ಚೆನ್ನಾಗಿ ಮೂಡುತ್ತಿದ್ದವು. ಈಗಲೂ ಯಾವ ಬೆರಕೆ ಇಲ್ಲದ ವಿಸ್ಮಯ ಸೂಸುತ್ತಾ ನುಡಿದ. ''ಕರುಣಾಮಯ ಯಾವುದು ?''

ಬಂಬಾಯಿ ಟ್ರಿಬ್ಯೂನ್‌ನ ದೇಶಪಾಂಡೆ ನುಡಿದ. ''ಮಿ. ಲಾಹಿಡಿ ನೀವು ನೋಡಿದಿರಾ ? ನಾನು ಒಂದು ಚಿತ್ರ ತೆಗೆದಿದ್ದೇನೆ. ಬೆತೂ ರಿಲೀಫ್ ಸೆಂಟರ್ – ಲೈನ್‌ನಲ್ಲಿ ಕುಳಿತಿದ್ದಂತೆಯೇ ಒಬ್ಬ ಮುದುಕಿಯ ತೊಡೆಯ ಮೇಲೆ ಮುಖ ಇರಿಸಿ ಒಬ್ಬ ಮುದುಕ ಸತ್ತುಹೋದ. ಇದನ್ನೆಲ್ಲಾ ನಾವು ನೋಡಲು ಶಕ್ಯವೆ ? ಜಯಪ್ರಕಾಶರನ್ನು ನೋಡಿದರೆ ಅವರು ಬಾರಿಬಾರಿಗೆ ಬೆವರು ಒರೆಸಿಕೊಳ್ಳುತ್ತಿದ್ದರು. ನಾನು ಕಣ್ಣು ಮುಚ್ಚಿಕೊಂಡುಬಿಟ್ಟಿದ್ದೆ.''

ರಂಗಾಚಾರಿ ನಗುತ್ತಾ ನುಡಿದ ''ಕಣ್ಣು ಮುಚ್ಚಿಕೊಳ್ಳುವುದಕ್ಕೆ ಮುಂಚೆ ಕ್ಯಾಮರಾದಿಂದ ಸರಿಯಾಗಿ ಫೋಟೊ ತೆಗೆದಿದ್ದ. ಈಗ ಆ ಚಿತ್ರವನ್ನು ಟೈಮ್ಸ್ ಅಥವಾ ಗಾರ್ಡಿಯನ್‌ಗೆ ಮಾರುತ್ತಾನೆ.'' ದೇಶಪಾಂಡೆ ಕೊಂಕು ಸ್ವರದಲ್ಲಿ ನುಡಿದ ''ಈಗಲೇ ಇಲ್ಲ. ನಾನು ನಮ್ಮ ದೇಶದ ಈ ಅವಮಾನಕರ ಚಿತ್ರಗಳನ್ನು ವಿದೇಶೀಯರಿಗೆ ಎಂದೂ ಮಾರುವುದಿಲ್ಲ.''

ಲಾಹಿಡಿ ಗಮನವಿಟ್ಟು ಆಲಿಸುತ್ತಿದ್ದ. ಈಗ ನುಡಿದ ''ಇದು ನಿನ್ನ ಕರುಣ ದೃಶ್ಯವಾಗಿತ್ತು. ನಮ್ಮ ಸ್ಥಿತಿ ಏನು ಅದಕ್ಕೆ ಕಡಿಮೆ ಕರುಣಾಮಯವಾಗಿದೆಯೆ ? ಈ ಭಡವಾ ಖೆಮಕಾ....''

ಖೆಮಕಾ ಮುಗುಳ್ನಗುತ್ತಾ ಹೆದರಿಕೆಯ ಭಾವವನ್ನು ಪ್ರದರ್ಶಿಸುತ್ತಾ ನುಡಿದ. ''ಅರೆ ! ಅರೆ ! ನಾನೇನು ತಪ್ಪು ಮಾಡಿದ್ದೀನಿ.''

''ಏ ಭಡವಾ, ಈ ಎಲ್ಲಾ ತೊಂದರೆಗೆ ನೀನೇ ಕಾರಣ ?''

''ಏನು ? ದೇಶದಲ್ಲಿ ಏನಾಗುತ್ತಿದೆ ? ಏನು ನೀವು....''

''ದೇಶದಲ್ಲಿ ಏನಾಗುತ್ತಿದೆ. ಇದನ್ನು ನಮ್ಮ ಆವಶ್ಯಕತೆ ಇದ್ದಂತೆ ನೋಡುತ್ತೇವೆ. ಇಲ್ಲವೆ ನಮ್ಮ ಪತ್ರಿಕೆ ಇದನ್ನು ಅರಿಯಲು ಕಳುಹಿಸುತ್ತೆ. ನೀನೇಕೆ ಔತಣ ನೀಡಿ ಇದನ್ನು ತೋರಿಸಲು ಕರೆದುಕೊಂಡು ಬಂದೆ ? ದಾನ ದಕ್ಷಿಣೆ ನೀಡಿ ಡೋಲು ಬಾರಿಸಿ ಏನು ತೋರಿಸಬೇಕೆಂದಿದ್ದೆ ? ಔತಣಕ್ಕೆ ಕರೆದು ಯಾರಾದರೂ ಹೆಣ

ತೋರಿಸುತ್ತಾರೆಯೇ ? ದಿನ ರಾತ್ರಿ ಸ್ಕಾಚ್ ಕುಡಿಸುತ್ತಿದ್ದಿ. ಆರಾಮವಾಗಿ ಇಟ್ಟಿದ್ದಿ. ಇದರ ಮಧ್ಯೆ ಹೇಳುತ್ತಿ, ಹೆಣ ನೋಡಿ ಹಿಂತಿರುಗಿ ಅಂತಾ. ರಾಮ ರಾಮ, ನಿಮ್ಮನ್ನು ಅದು ತಿನ್ನುತ್ತಾ ಇದೆ. ಆದ್ದರಿಂದ ನೀನು ನಮಗೆ ಇಷ್ಟವಾಗಿದ್ದಿ ಎಂದು ತಿಳಿಯಬೇಡ. ಎಷ್ಟಾದರೂ ನಾನೊಬ್ಬ ಕುಡುಕ. ಒಳ್ಳೇ ಮಾಲು ನೋಡಿದ್ರೆ ಬಿಡಲಾರೆ. ಇದಕ್ಕಾಗಿಯೇ ಇಷ್ಟೊಂದು ಅತ್ಯಾಚಾರವೆ ?

ಖೆಮಕಾ ತನ್ನ ಅಂದಾಜು ಬದಲಿಸಿ ಮೆಲ್ಲಗೆ ಚಪ್ಪಾಳೆ ತಟ್ಟುತ್ತಾ ನುಡಿದ: "ನೀವು ಹೇಳುತ್ತಾ ಇರುವುದು ಸರಿ. ನಾನು ನಿಮ್ಮ ಮಾತು ಒಪ್ಪುತ್ತೀನಿ. ಆದರೆ ನನ್ನ ನೌಕರಿ..."

ಲಾಹಿಡಿ ತನ್ನ ಕುರ್ಚಿಯಿಂದ ಎದ್ದು ವಾರಂಡಕ್ಕೆ ಹೋಗಿ ಉಗುಳಿದ. ಜೇಬಿನಿಂದ ಕರ್ಚಿಪು ತೆಗೆದು ಮೂಗನ್ನು ಸ್ವಚ್ಛಗೊಳಿಸಿದ. ಕನ್ನಡಕ ತೆಗೆದೊಡನೆಯೇ ಆತನ ಮುಖವೇ ಬದಲಾಯಿಸಿ ಹೋಯಿತು. ಒಬ್ಬ ಅಸಹಾಯಕನ ಮುಖಮಾಡಿ ಆತ ನುಡಿದ: "ನಿಜವಾಗಿ ಏನೂ ಸರಿ ಇದ್ದಂತೆ ಇಲ್ಲ. ಹೊಟ್ಟೆ ಹಸಿಯುತ್ತಾ ಇದೆ. ಹೋಗಿ ನೋಡು ಅಡಿಗೆ ಆಗುತ್ತಿದೆಯೇ ಇಲ್ಲವೆ, ನಾಷ್ಟ ಇನ್ನೂ ಸ್ವಲ್ಪ ಹೆಚ್ಚಾದರೆ ಊಟ ಮಾಡುವ ಇಚ್ಛೆಯೇ ಹೊರಟುಹೋಗುತ್ತದೆ."

ಡಾಕ್ ಬಂಗಲೆಯ ಅಂಗಳದಲ್ಲಿ ಒಂದು ಬಾವಿ ಇತ್ತು. ಗುಂಪು ಗುಂಪಾಗಿ ಜನರು ಆ ಬಾವಿಯಿಂದ ನೀರು ತೆಗೆದುಕೊಂಡು ಹೋಗಲು ಬರುತ್ತಿದ್ದರು. ಒಬ್ಬ ಜವಾನ ಅಲ್ಲಿ ನಿಂತು ಒಬ್ಬರು ಒಂದೇ ಕೊಡ ನೀರನ್ನು ತೆಗೆದುಕೊಂಡು ಹೋಗುವಂತೆ ನೋಡಿಕೊಳ್ಳುತ್ತಿದ್ದ. ಅರುಣ ಅತ್ತಲೇ ನೋಡುತ್ತಿದ್ದ. ಲಾಹಿಡಿ ಆತನ ಬಳಿಗೆ ಹೋಗಿ ಪ್ರಶ್ನಿಸಿದ. "ಏನು ನೋಡುತ್ತಿದ್ದಿ ? ಹೆಂಗಸು ! ಏಳು ವರ್ಷಗಳ ಹಿಂದೆಯೇ ಇಲ್ಲಿಗೆ ಒಮ್ಮೆ ಬಂದಿದ್ದೆ. ಆಗ ನನಗೆ ನಿನ್ನದೇ ವಯಸ್ಸು. ಈ ಹಳ್ಳಿಯ ಹುಡುಗಿಯರಲ್ಲಿ ಎಂತಹ ದೃಢಕಾಯವಿದೆ ಎಂಬುದನ್ನು ನೋಡಿದ್ದೆ. ಈಗ ನೋಡು ಒಬ್ಬ ಹುಡುಗಿಗಾದರೂ ಎದೆ ಇಲ್ಲ, ನಿತಂಬವಿಲ್ಲ."

ಅರುಣ, ಏನನ್ನೂ ನುಡಿಯದೆ ಲಾಹಿಡಿಯತ್ತ ನೋಡಿ ಮುಗುಳ್ನಕ್ಕ. ಲಾಹಿಡಿ ನುಡಿದ "ಏನು, ಭಾಷೆಯ ಬಗ್ಗೆ ಯೋಚಿಸುತ್ತಿದ್ದಿಯಾ, ಹೇಗೆ ? ಏನು ಬರೆಯಲಿ ಎಂದು. ನಿಮ್ಮ ಬಂಗಾಲಿ ಪತ್ರಿಕೆಗಳಲ್ಲಿ ಬಹಳ ಒಳ್ಳೆಯ ಸಾಹಿತ್ಯ ರಚನೆ ಬರುತ್ತದೆ. ಹೂಂ ನಾನು ಹೇಳುತ್ತೇನೆ, ನೀನು ಬರೆ. ಅಸಂಖ್ಯಾತ ಜನರ ಮುಖದಲ್ಲಿ ದುಃಖದ ಛಾಯೆ ಕವಿದಿತ್ತು. ಇಲ್ಲ ಇಲ್ಲ, ಛಾಯೆ ಸರಿಯಿಲ್ಲ. ಈ ಶಬ್ದ ಬಹಳ ಹಳೆಯದಾಗಿದೆ. ಬೆವರು, ಶೋಕದ ಬೆವರು, ಇಲ್ಲ, ಇಲ್ಲ. ಶೋಕದ ಸ್ವೇದ, ಫಸ್ಟ್‌ಕ್ಲಾಸ್, ಬಿಸಿಲು, ಹೊರಗಿನ ಬಿಸಿಲು ಇದು ಬಹಳ ಚೆನ್ನಾಗಿದೆ. ತಲೆಬರಹ ಕೂಡ ನಾನೇ ಹೇಳುತ್ತಿದ್ದೇನೆ.... ಆಕಾಶದಲ್ಲಿ ಬಹಳ ಬಸಿಲು ಕೆಳಗೆ ಶೋಕದ ಸ್ವೇದ... ನಿಜವಾಗಿ ಒಳ್ಳೆಯ ಕವಿತೆ."

ಅರುಣ ಏನೂ ನುಡಿಯದೆ ಪುನಃ ನಕ್ಕನು. ಈ ಮುಗುಳ್ನಗೆ ಬೇರೆಯ ರೀತಿಯದಾಗಿತ್ತು. ಲಾಹಿಡಿ ಇದನ್ನು ಗಮನಿಸಿದ. ನುಡಿದ "ನಾನು ಹೆಚ್ಚಿಗೇನೆ ಮಾತನಾಡುತ್ತಿದ್ದೇನೆ ಅಲ್ಲವೇ ? ಸಿಲಿ ಅಂಡ್ ಸ್ಟುಪಿಡ್. ನೋಡು ಎಷ್ಟು ದುಃಖದ

ಮಾತು. ಸಾವಿರಾರು ಲೆಕ್ಕದಲ್ಲಿ ಮನುಷ್ಯ ಏನನ್ನೂ ತಿನ್ನದೆ ಸಾಯುತ್ತಿದ್ದಾನೆ. ಇಲ್ಲಿ ನಮ್ಮ ಕೆಲಸವೇನು ? ಇದರ ವರ್ಣನೆಯನ್ನು ಯಾವ ಭಾಷೆಯಲ್ಲಿ ಮಾಡಬೇಕು ! ಇದರ ಮೇಲೆ ತಲೆ ಕೆಡಿಸಿಕೊಳ್ಳುವುದು. ಹೌದೋ ಅಲ್ಲವೋ ? ನಿಜವಾಗಿ ಯಾವುದೂ ಸರಿ ಕಾಣದು."

"ಲಾಹಿಡಿ ಕೇಳಿದ್ದಿ ತಾನೆ ? ಎಲ್ಲಿಂದಲೋ ಬಂದ ಒಬ್ಬ ಸಾಧು ಇಲ್ಲಿ ದೊಡ್ಡ ಕೆಲಸ ಮಾಡಿದ್ದಾನೆ."

"ಸಾಧು ! ಎಂಥಾ ಸಾಧು ?"

"ಬೊಂಬಾಯಿಯಿಂದ ಒಬ್ಬ ಸಾಧು ಬಂದು ಪ್ರತಿದಿನವೂ ಸಾವಿರಾರು ಜನಕ್ಕೆ ಊಟ ಹಾಕುತ್ತಿದ್ದಾನೆ. ಸಾಧುವಿನ ಸಾಹುಕಾರ ಭಕ್ತರು ಹಣ ಹಾಗೂ ಅಕ್ಕಿಯನ್ನು ಕಳುಹಿಸುತ್ತಿದ್ದಾರೆ. ವಿಷಯ ಬಹಳ ಕುತೂಹಲಕಾರಿಯಾಗಿದೆ. ಹೂಂ, ನಡೆಯಿರಿ, ಇಲ್ಲಿ ನಿಂತಮೇಲೆ ಇಲ್ಲಿನ ವಿಷಯವನ್ನಾದರೂ ತಿಳಿದುಕೊಳ್ಳೋಣ."

"ಸಾಧು ಊಟ ಹಾಕಿಸುತ್ತಿದ್ದಾನೆ. ಇದರಿಂದ ನಿನಗೆ ಅಥವಾ ನನಗೇನು ?"

"ಅರೆ ! ವಿಷಯ ನೋಡಲು ಅರ್ಹವಾದ್ದು. ನಿಮ್ಮ ಇಂಗ್ಲಿಷ್ ವೃತ್ತಪತ್ರಿಕೆಗೆ ಒಳ್ಳೆಯ ಕತೆಯಾಗುತ್ತೆ."

"ಓ ! ಸುಮ್ಮನಿರಪ್ಪ, ಬಿಯರ್ ಇಷ್ಟೊಂದು ಕಹಿ, ಭೇದಿ ಔಷಧ ಕುಡಿದ ಹಾಗಿದೆ. ಬಹುಶಃ ಇದರಲ್ಲಿ ಏನೊ ಕಲಬೆರಕೆ ಇರಬೇಕು."

"ಬಿಯರ್ ಯಾವಾಗಲೂ ಸ್ವಲ್ಪ ಕಹಿಯಾಗಿಯೇ ಇರುತ್ತೆ."

"ಕೆಲಸಕ್ಕೆ ಬಾರದ್ದು ಹರಟಬೇಡ. ನೀನೊಬ್ಬ ಹಾಲು ಕುಡಿಯೋ ಮಗು. ಬಿಯರ್ ಕಹಿ ಅಥವಾ ಇಲ್ಲಾ ಅನ್ನೋದನ್ನು ನೀನು ನನಗೆ ಹೇಳಿಕೊಡ್ತಿಯಾ ?"

ಲಾಹಿಡಿ ಮುದುಡಿ ಕುಳಿತ. ಕನ್ನಡಕ ತೆಗೆದ. ಅಸಹಾಯಕ ಮುಖ. ಒಂದು ಬಾರಿ ಇವನ ಬಳಿ, ಇನ್ನೊಂದು ಬಾರಿ ಇನ್ನೊಬ್ಬನ ಬಳಿ ಹೋಗಿ ಬಾಯಿಗೆ ಬಂದದ್ದು ಏನೊ ಬೊಗಳುವನು. ಆಗ ಯಾರಾದರೂ ಗದರಿಸಿದರೆ ಈತ ಕಿರುಚುತ್ತಿದ್ದ. "ಓ ! ಸುಮ್ಮನಾಗು, ಸ್ಟಾಪ್ ಹೌಲಾಂಗ್ ವಿಲ್ ಯು ?" ಇದ್ದಕ್ಕಿದ್ದಂತೆಯೇ ಲಾಹಿಡಿ ಖೆಮಕಾನನ್ನು ಕರೆದ "ಏ ಭಡವ ಖೆಮಕಾ, ನಿನ್ನ ವಿರುದ್ಧ ರುಸ್ತುಮಜಿಯಲ್ಲಿ ದೂರು ಕೊಡುತ್ತೇನೆ. ನಿನ್ನನ್ನು ರಾಂಚಿಗೆ ವರ್ಗ ಮಾಡಿಸುತ್ತೇನೆ."

ಖೆಮಕಾ ವರಾಂಡದ ಒಂದು ಮೂಲೆಯಲ್ಲಿ ಕುಳಿತಿದ್ದ. ಆತನ ಮುಖದ ಮೇಲೆ ಬಿಸಿಲು ಬೀಳುತ್ತಿತ್ತು. ಆದ್ದರಿಂದಲೇ ಮುಖ ಹೊಳೆಯುತ್ತಿತ್ತು. ಮಧುರ ಸ್ವರದಲ್ಲಿ ಖೆಮಕಾ ನುಡಿದ. "ನೀವು ಹಾಗೆ ಮಾಡುವುದಾದಲ್ಲಿ, ನೀವು ನನಗೆ ಒಳ್ಳೆಯದನ್ನೆ ಮಾಡುತ್ತಿದ್ದೀರಿ ಎಂದು ತಿಳಿಯುತ್ತೇನೆ. ನೀವು ಯಾವಾಗಲಿಂದಲೂ ನನ್ನ ಸ್ನೇಹಿತರಾಗಿಯೇ ಇದ್ದೀರಿ."

"ನಾನು, ನಿನ್ನ ಸ್ನೇಹಿತ – ಸ್ನೇಹಿತ ಏನೂ ಅಲ್ಲ."

"ನೀವು ಯಾವಾಗಲಿಂದಲೂ ಇದ್ದೀರಿ. ಈಗ ನನ್ನಿಂದ ಏನು ತಪ್ಪಾಗಿದೆ" ಲಾಹಿಡಿ ಸೊಂಟದ ಮೇಲೆ ಕೈಯಿರಿಸಿ ನಿಂತಿದ್ದ. ಹರಿತವಾದ ದೃಷ್ಟಿ ಹರಿಸಿ ಖೆಮಕಾನ ತಪ್ಪುಗಳನ್ನು ಹುಡುಕುತ್ತಿದ್ದ. ಅತ್ತ ಇತ್ತ ನೋಡಿ ನನ್ನ ಕೈಯಲ್ಲಿದ್ದ ಖಾಲಿ ಗ್ಲಾಸನ್ನು

ಗಮನಿಸಿ ತಕ್ಷಣ ನುಡಿದ: "ಈಗ ಹಾಳು ದೇಶೀ ಬಿಯರ್ ಕುಡಿಸ್ತಾ ಇದ್ದಿ, ಸ್ಕಾಚ್ ನಿನ್ನ ಪ್ರೇಯಸಿಗೆ ಕುಡಿಸುತ್ತಿಯೇನು ? ಹೇ !"

ಖೆಮಕಾ ಸರ್ರನೆ ಎದ್ದು ಟೇಬಲ್‌ನ ಕೆಳಗಿನಿಂದ ಸ್ಕಾಚ್ ಬಾಟಲನ್ನು ಹೊರತೆಗೆದು ನುಡಿದ. "ನಾನು ನೋಡಿದ್ದೇನೆ. ಮನಸ್ಸು ಉದಾಸಗೊಂಡಾಗ ನೀವುಗಳು ವಿಸ್ಕಿ ಬದಲು ಬಿಯರೇ ಕುಡಿಯಲು ಬಯಸುತ್ತೀರಿ. ಆದ್ರಿಂದಲೇ..."

ಊಟ ಸಿದ್ಧವಾಗಿತ್ತು. ಸಣ್ಣ ಬಿಳಿಯ ಅನ್ನ, ಡಬ್ಬನ ಬೆಣ್ಣೆ, ಮತ್ತು ಕೋಳಿಯ ಸಾರು. ರಂಗಾಚಾರಿ ಗುಸುಗುಸ್ಸೆಂದು ಅರುಣನೊಡನೆ ಹೇಳಿದ. "ಬಹಳ ದಿನಗಳ ನಂತರ ಇಂದಿನ ಅನ್ನ ಬಹಳ ಚೆನ್ನಾಗಿದೆ. ವಿಚಿತ್ರ ಅಂದರೆ ಒಣಗಿದ ಜಾಗದಲ್ಲಿ ಬಹಳ ಒಳ್ಳೆಯ ಅನ್ನ ಸಿಕ್ಕಿದೆ ಅಲ್ಲವೆ ?" ಅರುಣ ನುಡಿದ. "ಚಿಕನ್ ಬಹಳ ಸ್ವಾದಿಷ್ಟವಾಗಿದೆ. ಬಹಳ ಚೆನ್ನಾಗಿ ಮಾಡಿದ್ದಾನೆ."

"ಮೆಣಸು ಸ್ವಲ್ಪ ಜಾಸ್ತಿ."

ಆಗ ದಿನದ ಒಂದು ಗಂಟೆ. ಲಾಹಿಡಿಗೆ ನಶೆ ಚೆನ್ನಾಗಿ ಹತ್ತಿತ್ತು. ಆತ ಬೆರಳಿಂದ ಅನ್ನವನ್ನು ಹಿಸುಕುತ್ತಿದ್ದ. ಊಟದತ್ತ ಆತನ ಗಮನ ಇರಲೇ ಇಲ್ಲ. ಕಣ್ಣುಗಳು ಕೆಂಪಗಾಗಿದ್ದವು. ಇಂದು ಪೂರ್ಣ ದಿನ ಆತ ಹೀಗೆ ಕಳೆಯುತ್ತಾನೆ. ವಾಸ್ತವವಾಗಿ ಅರುಣ ಕಂಡಿರುವ ರೀತ್ಯ, ಆ ಮನುಷ್ಯ ರಿಪೋರ್ಟ್ ಬರೆಯಲು ಕುಳಿತರೆ ಆತನ ಮುಖಚರ್ಯೆಯೇ ಬದಲಾಗಿ ಹೋಗುತ್ತದೆ. ಆತನಿಗೆ ಅಸಾಧಾರಣ ಸ್ಮರಣ ಶಕ್ತಿ ಹಾಗೂ ಶಕ್ತಿಯುತವಾದ ಭಾಷೆಯಿದೆ. ಆತ ಯಾವಾಗಲೂ ಏಕಾಗ್ರತೆಯಿಂದ ಕೆಲಸ ಮಾಡುತ್ತಾನೆ.

ಅರುಣ ಪ್ರಶ್ನಿಸಿದ. "ಲಾಹಿಡಿ ನೀವೇನೂ ತಿನ್ನುತ್ತಲೇ ಇಲ್ಲ !"

"ಥತ್ ! ಏನು ತಿನ್ನಲಿ ? ಏಕೋ ಹಿಡಿಸುತ್ತಲೇ ಇಲ್ಲ. ಎಲ್ಲಾ ಹಳಿಸಿದ ಕೋಳಿ ಸಂಪೂರ್ಣ ಕೆಟ್ಟುಹೋಗಿದೆ."

ಖೆಮಕಾ ವಿಚಿತ್ರ ಮುಖ ಮಾಡಿಕೊಂಡು ನುಡಿದ. "ಬದುಕಿದ್ದ ಕೋಳಿ ಕೊಳೆತಿದೆ. ಆಹಾಹಾ !"

ಆತನ ಅನುಕರಣ ಕಂಡು ಎಲ್ಲರೂ ನಕ್ಕರು.

ಲಾಹಿಡಿ ಸಿಟ್ಟುಗೊಂಡು ನುಡಿದ. "ಈ ಗೇಲಿ ಸಾಕುಮಾಡಿ. ನಾನು ಹೇಳುತ್ತಿದ್ದೇನೆ. ನಿಸ್ಸಂದೇಹವಾಗಿ ಪುನಃ ಹೇಳುತ್ತೇನೆ. ಈ ಕೋಳಿ ಕೊಳೆತಿದೆ. ಥೂ ನಿಮ್ಮ !"

ಅನ್ನ ಹಾಗೂ ಮಾಂಸವನ್ನು ಲಾಹಿಡಿ ನೆಲದ ಮೇಲೆ ಚೆಲ್ಲುತ್ತಿರುವುದನ್ನು ಕಂಡು ದೇಶಪಾಂಡೆ ನುಡಿದ: "ದಾದಾ, ತಿನ್ನುವುದು ಇಷ್ಟವಿಲ್ಲದಿದ್ದರೆ ತಿನ್ನಬೇಡ. ಆದರೆ ಊಟ ಹಾಳು ಮಾಡಬೇಡ."

"ತುಂಬಾನೇ ಹಾಳು ಮಾಡುತೇನೆ ನಿನಗೇನು."

"ಇದು ಅನ್ಯಾಯ. ಎಷ್ಟೊ ಜನಕ್ಕೆ ಊಟವೇ ಸಿಕ್ಕುವುದಿಲ್ಲ. ಮೇಲಾಗಿ ನಾವು ಹೊಟ್ಟೆ ತುಂಬ ತಿನ್ನುತ್ತೇವೆ. ಇದೇ ಒಂದು ತರದ ಅತ್ಯಾಚಾರ. ಇವಲ್ದೆ ಹಾಳು ಮಾಡೋದು ಅಂದರೆ..."

"ಉಫ್ ! ಸಾಕುಮಾಡು. ಹೇಳಿದ್ದೆಲ್ಲಾ ನಾನೇ ಹಾಳು ಮಾಡ್ತೀನಿ ಅಂತಾ."

"ಇದಕ್ಕೆ ಏನು ಅರ್ಥವೇ ಇಲ್ಲಾ. ಬಾಂಗ್ಲಾದ ಬೆಯರ್ ಜನ ತಿನ್ನುತ್ತಾರೆ. ಇಲ್ಲವೆ ಯಾರಾದರೂ ಭಿಕ್ಷುಕರಿಗೆ ಕೊಟ್ಟುಬಿಡುತ್ತಾರೆ."

ಷಟ್‌ಅಪ್ ನಾನು ಇನ್ನೇನೂ ಕೇಳಲು ಇಷ್ಟಪಡುವುದಿಲ್ಲ. ಯಾರಿಗೆ ಊಟ ಸಿಗುವುದಿಲ್ಲವೋ – ಭಿಕಾರಿ. ನನಗೆ ಇದೆಲ್ಲಾ ಸರಿಕಾಣೋದಿಲ್ಲ. ನಾನು ಇದನ್ನೆಲ್ಲಾ ಸಹಿಸಲಾರೆ."

"ಇದೇನು ಹೊಸಮಾತೇ. ಏನು ? ಮೊದಲು ಏನು ಯಾರೂ ಊಟ ಮಾಡದೆ ಪುನಃ ಕರೆದು ತೋರಿಸಲು ಏನಿತ್ತು? ಈಗ ದಿನವೆಲ್ಲಾ ಯಾರು ಹಸಿದಿದ್ದಾರೆ ಬಾಯಾರಿದ್ದಾರೆ, ಇವುಗಳ ಬಗ್ಗೆ ನಾನು ಮಾತನಾಡುವುದಿಲ್ಲ. ಈಗಾಗಲೇ ಬಹಳವಾಗಿದೆ. ಈವತ್ತು ಪೂರ್ತಿ ರಜಾ ಜ್ಞಾಪಕವಿರಲಿ."

"ಇವತ್ತು ಬರ ಮತ್ತು ಹಸಿವೆಗಳಿಂದ ರಜ. ನಿಮಗೆಲ್ಲರಿಗೂ ಗೊತ್ತು ತಾನೆ ? ಇಂದು ಹೆಂಗಸು ಮತ್ತು ಶರಾಬಿನ ಬಗ್ಗೆ ಮಾತ್ರ ಮಾತನಾಡುತ್ತೇನೆ. ಎಚ್ಚರಿಕೆ-ಯಾರೂ ಇನ್ನು ಯಾವುದೇ ವಿಷಯವನ್ನು ಕುರಿತು ಮಾತನಾಡಬಾರದು."

"ಅದರ ಅಗತ್ಯವೇ ಬಾರದು. ಮಿ: ಲಾಹಿಡಿ. ಗಾಡಿ ರಿಪೇರಿಯಾಗಿದೆ. ಊಟ ಮುಗಿಸಿ ನಾವು ಹೊರಡಬಹುದು."

"ಇದೊಂದು ವಿನೋದ ಅಂದುಕೊಂಡಿದ್ದಿರಾ ? ಊಟ ಮಾಡಿ ಇಷ್ಟುಹೊತ್ತಿನ ಮೇಲೆ ನಿನ್ನ ಡಬ್ಬದ ಗಾಡಿಯಲ್ಲಿ ನಾನು ಕುಳಿತುಕೊಳ್ಳುವುದಿಲ್ಲ, ನನ್ನಾಣೆಗೂ. ಇಂದು ನಾವು ಇಲ್ಲೆ ತಂಗುತ್ತೇವೆ."

"ಆದರೆ, ನೀವೇ ಹೇಳಿದ್ರಿ. ನಾಡಿದ್ದು ಕಲ್ಕತ್ತಾದಲ್ಲಿ ವಿಮಾನ ಹಿಡಿಯಬೇಕು ಅಂತ."

"ವಿಮಾನ ನಾನು ಹಿಡಿಯಬೇಕಾದ್ರೆ ನಿನಗೇಕೆ ಅಷ್ಟೊಂದು ಚಿಂತೆ. ನಾನು ಆಗಲೇ ಹೇಳಿದ್ದೇನೆ. ಇಂದು ರಜಾ ಅಂತಾ."

ದಿಲ್ಲಿಯ ಇಬ್ಬರು ಪತ್ರಕರ್ತರು ಆ ತಕ್ಷಣವೇ ಹೋಗಲು ಬಯಸಿದ್ದರು. ದೇಶಪಾಂಡೆಗೂ ಇರಲು ಇಷ್ಟವಿರಲಿಲ್ಲ. ತಾನು ತೆಗೆದಿರುವ ಚಿತ್ರಗಳನ್ನು ಶೀಘ್ರನೇ ಕೊಡದೇ ಹೋದರೆ ಅದಕ್ಕೆ ಬೆಲೆಯೇ ಬಾರದು. ಕೊನೆಗೆ ನಾಲ್ವರೂ ಹೊರಟರು. ನಾಲ್ಕು ಜನ ಉಳಿದರು. ಗಾಡಿ ಅವರುಗಳನ್ನು ನಿರ್ದಿಷ್ಟ ಸ್ಥಳಕ್ಕೆ ತಲುಪಿಸಿ ಪುನಃ ಬರುವುದಿತ್ತು.

ವರಾಂಡದಲ್ಲಿ ಆರಾಮ ಕುರ್ಚಿಯ ಮೇಲೆ ಎಲ್ಲರೂ ಕುಳಿತಿದ್ದರು. ಲಾಹಿಡಿ ಗ್ಲಾಸಿನಲ್ಲಿ ಪುನಃ ವಿಸ್ಕಿ ತುಂಬಿಸಿಕೊಂಡಿದ್ದ. ಆತನೇ ಬಲವಂತಪಡಿಸಿ ಇತರರ ಗ್ಲಾಸಿಗೂ ಭರ್ತಿ ಮಾಡಿದ. ಆಲ್ಕೋಹಾಲ್ ಈತನ ರಕ್ತದಲ್ಲಿ ಸೇರಿತ್ತು. ಲಾಹಿಡಿ ಚಡಪಡಿಸುತ್ತಿದ್ದ. ಒಮ್ಮೆ ಕುರ್ಚಿಯಿಂದ ಎದ್ದು ನಿಲ್ಲುವನು, ಇನ್ನೊಮ್ಮೆ ಒಳಗೆಲ್ಲಾ ನಡೆಯುವನು. ಅನಂತರ ಕುಳಿತುಕೊಳ್ಳುವನು. ಬಿಸಿಲು ಸುಡುತ್ತಿತ್ತು. ಈ ಬಿಸಿಲಿನಲ್ಲಿ ಗಾಳಿ ಬೀಸಿದಾಗ ಒಂದು ವಿಚಿತ್ರ ಶಬ್ದ ಹೊರಡುತ್ತಿತ್ತು. ಕಾಡಿನಿಂದ ಈ ಶಬ್ದ ಹೊತ್ತ ಗಾಳಿ ಓಡಿ ಬರುತ್ತಿರುವಂತೆ ಭಾಸವಾಗುತ್ತಿತ್ತು.

ಅಸಂಖ್ಯಾತ ಹೆಣ್ಣು ಗಂಡುಗಳು ಆ ಬಾವಿಯಿಂದ ನೀರು ತೆಗೆದುಕೊಂಡು ಹೋಗಲು ಬಂದುಹೋಗುತ್ತಿದ್ದರು. ನೀರು ಎತ್ತುವ ಇಂಜಿನ್ನಿನ ದಡ್ ದಡ್ ಶಬ್ದ ಹಾಗೂ ಅರಿವಾಗದ ಭಾಷೆಯಲ್ಲಿ ಅದು ಮಾಡುತ್ತಿದ್ದ ಕಲಹ ಕಿವಿ ಚುಚ್ಚುತ್ತಿತ್ತು. ಲಾಹಿಡಿ ತನ್ನ ಸಹಚರರನ್ನು ಸಂಬೋಧಿಸಿ ನುಡಿದ "ಏಕೆ ಎಲ್ಲರೂ ಸುಮ್ಮನಾದಿರಿ, ಹರಟೆ ಮುಂದುವರಿಯಬೇಕು. ಏ ರಂಗಾಚಾರಿ ಇದೇ ತಾನೆ ರಷ್ಯಾ ಸುತ್ತಿಕೊಂಡು ಬಂದಿದ್ದಾನೆ. ಹುಂ ಹೇಳು ಅಲ್ಲಿನ ಹೆಂಗಸರು ಹೇಗಿದ್ದಾರೆ. ಸಿಗುತ್ತಾರೆಯೆ ?"

ರಂಗಾಚಾರಿ ಆಕಳಿಸಿ ನುಡಿದ. "ನನಗೆ ಹುಡುಕಲು ಸಮಯವೇ ಸಿಗಲಿಲ್ಲ. ಬಹಳ ಟೈಟ್ ಪ್ರೊಗ್ರಾಮ್."

"ನಿನ್ನ ಕೈಲಿ ಹುಡುಗಿಯನ್ನು ಹುಡುಕಲು ಸಾಧ್ಯವಿಲ್ಲ. ನಾನು ಒಪ್ಪಿಕೊಳ್ಳುತ್ತೇನೆ. ಜರ್ಮನಿಗೆ ಹೋಗಿದ್ದಾಗ ಏನಾಯಿತು ಹೇಳು... ಆ ಕತೆಯನ್ನು ಪುನಃ ಹೇಳು."

"ನೀವೇನಾದರೂ ಹೇಳಿರಿ."

"ನಾನು ಏನು ಹೇಳಲಿ. ಕೂದಲು ಆಗಲೇ ಬೆಳ್ಳಗಾಗಿದೆ. ಮನಸ್ಸು ಬೇಸರಗೊಂಡಿದೆ. ಈಗ ಇನ್ನೇನು. ಹೇ! ಅರುಣ್, ನಿಂದು ಇನ್ನೂ ಎಳೆಯ ವಯಸ್ಸು. ಮದುವೆಯೂ ಆಗಿಲ್ಲ. ಒಂದೆರಡು ಪ್ರೇಮಕಥೆ ಬಿಡು."

"ಲಾಹಿಡಿಯವರೆ, ಸ್ಪೇನ್‌ನಲ್ಲಿ ನಡೆದಿದ್ದ ಘಟನೆಯೋ ಹೇಳಿ ?"

ರಾಮಯಶ್ ಸಿಂಹ, ಬಹಳ ಗಂಭೀರ ಸ್ವಭಾವದ ಮನುಷ್ಯ. ಇಂಟರ್‌ವ್ಯೂನಲ್ಲಿ ಅಲ್ಲದೆ ಬೇಗ ಇನ್ನೆಲ್ಲೂ ಬಾಯಿ ಬಿಡುತ್ತಿರಲಿಲ್ಲ. ಶರಾಬನ್ನೂ ನಿಶ್ಯಬ್ದವಾಗೇ ಕುಡಿಯುತ್ತಿದ್ದ. ರಂಗಾಚಾರಿ ಪುಸಲಾಯಿಸುತ್ತಾ ಪ್ರಶ್ನಿಸಿದ. "ಬಿಹಾರದಲ್ಲಿ ಶೇಕಡಾ ಎಷ್ಟು ಜನ ಬರಗಾಲಕ್ಕೆ ಒಳಗಾಗಿದ್ದಾರೆ ?" ರಾಮಯಶ್ ಸಿಂಹ ನುಡಿದರು: "ಇಲ್ಲಿಯವರೆಗೆ ಶೇಕಡಾ ಇಪ್ಪತ್ತನಾಲ್ಕು."

"ಹಸಿವಿನಿಂದ ಸತ್ತವರ ಸಂಖ್ಯೆ ?"

"ಸರ್ಕಾರಿ ರಿಪೋರ್ಟ್ ಇಲ್ಲ. ಆದರೆ ನಾನು ಕೇಳಿರುವ ರೀತ್ಯಾ..."

ಲಾಹಿಡಿ ಗರ್ಜಿಸಿದ. "ಪುನಃ ಅದೇ ಮಾತು. ಎಲ್ಲರನ್ನೂ ಹುಚ್ಚರನ್ನಾಗಿ ಮಾಡುವೆಯಾ ? ಆಗಲೇ ನಾನು ಹೇಳಿದೆ. ಇಂದು ರಜಾ. ಒಂದು ದಿನದ ಮಟ್ಟಿಗೂ ಕೆಲಸ ಮರೆಯಲಾರೆಯಾ ?"

"ಲಾಹಿಡಿ ಸಾಹೇಬ್, ಇದು ನೌಕರಿಯ ಇಂಟರೆಸ್ಟ್ ಮಾತ್ರ ಅಲ್ಲ. ಇದು ಮಾನವತೆಯ ಪ್ರೇರಣೆ ಅಷ್ಟೆ."

"ಷಟ್‌ಅಪ್, ನಂಗೆ ಏನನ್ನೂ ಕೇಳಿಸಿಕೊಳ್ಳಲು ಇಷ್ಟವಿಲ್ಲ."

"ಕುಡುಕನ ಜೊತೆ ಮಾತನಾಡುವುದರಿಂದ ಏನೂ ಲಾಭವಿಲ್ಲ."

"ನಾನು ನಶೆಯಲ್ಲಿಲ್ಲ. ಇನ್ನೊಬ್ಬರ ಹಣದಲ್ಲಿ ಶರಾಬು ಕುಡಿದು ಮುರ್ಗಿ ತಿಂದು ಮಾನವತೆಯ ಮೇಲೆ ಮಾತಾಡಬೇಡ. ಬುಲ್‌ಶಿಟ್, ಈಗ ಹೆಂಗಸರ ಬಗ್ಗೆ ಮಾತ್ರ ಮಾತುಕತೆ. ಶರಾಬು ಮತ್ತು ಮಾಂಸದ ನಂತರ ಹೆಂಗಸರ ಮೇಲೆ ಮಾತನಾಡಿದರೆ ಚೆನ್ನಾಗಿರುತ್ತದೆ."

"ಸರಿ ತಾವು ಹೇಳಿ. ಕೇಳುವುದಕ್ಕೆ ನಾವು ತಯಾರಿದ್ದೇವೆ."

"ಹೋದವರ್ಷ ಜನವರಿಯಲ್ಲಿ ನಾನು ಮ್ಯಾಡ್‌ರಿಡ್ ಹೋಟೆಲ್‌ನಲ್ಲಿದ್ದೆ. ರಾತ್ರಿಯ ಸಮಯ ಆ ಹುಡುಗಿ ಬಾತ್‌ಟಬ್‌ನಲ್ಲಿ ಶರೀರವನ್ನು ಮುಳುಗಿಸಿ ಸ್ನಾನ ಮಾಡುತ್ತಿದ್ದಳು. ನಾನು ಬಾಗಿಲು ತಟ್ಟಿದಾಗ ಟವಲ್ ಸುತ್ತಿಕೊಂಡು... ನನಗೆ ಚೆನ್ನಾಗಿ ನಶೆ ಹತ್ತಿತ್ತು. ಓ! ನೋಡಿ ರಂಗಾಚಾರಿ ಆಗಲೇ ಮಲಗಿದ್ದಾನೆ. ಹೇ! ರಂಗಾಚಾರಿ.... ಹೇ"

ರಂಗಾಚಾರಿ ಗೊರಕೆ ಹೊಡೆಯಲು ಪ್ರಾರಂಭಿಸಿದ್ದ. ಲಾಹಿಡಿ ಮೂರು ನಾಲ್ಕು ಬಾರಿ ಜೋರಾಗಿ ಕೂಗಿದ. ಏನೂ ಪ್ರಯೋಜನವಾಗಲಿಲ್ಲ. ತೂರಾಡುತ್ತ ಲಾಹಿಡಿ ಆತನ ಹತ್ತಿರ ಹೋಗಿ ಆತನ ಕೂದಲು ಹಿಡಿದು ಕೂಗಿದ. "ಏ ನನ್ನ ಮಗನೆ ರಂಗಾಚಾರಿ....."

ರಂಗಾಚಾರಿ ದಡಬಡಿಸಿ ಎದ್ದು ಕುಳಿತ. ನುಡಿದ: "ನಿದ್ದೆ ಬಂದುಬಿಟ್ಟಿತು ನೋಡಿ. ಖೆಮಕಾ ಸಹ ನಿದ್ದೆ ಹೋಡಿತಾ ಇದ್ದಾನೆ."

"ಆ ನನ್ಮಗ ಖೆಮಕಾ ಬಗ್ಗೆ ನಾನು ರುಸ್ತುಮ್ಜಿ ಬಳಿ ಖಂಡಿತಾ ದೂರು ಕೊಡ್ತೀನಿ. ಹೇ! ಖೆಮಕಾ...."

ಖೆಮಕಾ ಕಣ್ಣು ತೆರೆದು ನುಡಿದ: "ನಾನು ಮಲಗಿಲ್ಲ. ನೀವು ಕಥೆ ಮುಂದುವರಿಸಿ, ನಾನು ಕೇಳಿಸಿಕೊಳ್ಳುತ್ತಿದ್ದೇನೆ. ಟವಲು ಸುತ್ತಿದ ಆ ಹುಡುಗಿ..."

"ಹಾಂ ಒಂದು ಕ್ಷಣದಲ್ಲಿ ಅವಳು ಟವಲ್‌ನ್ನು ಕಿತ್ತೆಸೆದಳು. ಆಗ ನಾನು ಕಂಡಿದ್ದೇನು ?

ಜಗಜ್ಜನನಿಯ ರೂಪು! ಓ! ಏನು ವರ್ಣಿಸಲಿ? ಪಣ ತೊಟ್ಟು ಹೇಳ್ತೀನಿ. ಅಂತಹ ಹುಡುಗಿ ಒಂದು ಕೋಟಿಯಲ್ಲಿ ಒಬ್ಬಳು ಸಿಕ್ಕಳು. ಸಂಪೂರ್ಣ ದೇಹದಲ್ಲಿ ಚಾಕುವಿನ ಹರಿತವಿತ್ತು. ಎದೆ ಹೇಗಿತ್ತೆಂದರೆ ಎರಡು ಸರ್ಚ್‌ಲೈಟುಗಳಂತಿದ್ದವು. ಅವಳ ಸೊಂಟ... ಆ ಹುಡುಗಿ ನನ್ನ ಕಂಡೊಡನೆ ಏನು ಹೇಳಿದಳು ಗೊತ್ತೆ. ಆ ಹುಡುಗಿ ನನಗೆ ಏನು ಹೇಳಿದಳು... ?"

ಇದರ ಉತ್ತರ ಯಾರು ಹೇಳಲು ಸಾಧ್ಯ. ಮೂವರ ಮೂಗಿನಿಂದಲೂ ನಿದ್ದೆಯ ಸಣ್ಣ ಗೊರಕೆ ಹೊರಬರುತ್ತಿತ್ತು. ಕೇವಲ ಅರುಣ ಎಚ್ಚೆತ್ತಿದ್ದ. ಸಿಹಿ ನಗು ಹರಿಸಿದ್ದ.

ಲಾಹಿಡಿಯ ಮುಖದಲ್ಲಿ ವೇದನೆ ಎಳೆ ಕಾಣಿಸಿತು. ಕಣ್ಣು ಅಗಲಿಸಿ ನುಡಿದ: "ಎಲ್ಲರೂ ಮಲಗಿಬಿಟ್ಟಿದ್ದಾರೆ. ಹೇ! ಇವರೆಲ್ಲ ಗಂಡಸರು! ಹೆಂಗಸಿನ ಮಾತು ಕೇಳುತ್ತಲೇ ಮಲಗಿಬಿಟ್ಟರು! ಎಲ್ಲ ಕಳ್ಳಭಡವರು!"

ಅರುಣ ನುಡಿದ. "ನೀವು ಹೇಳಿ ಲಾಹಿಡಿ ಆ ಹುಡುಗಿ ಏನು ಹೇಳಿದಳು ?"

"ಕೇಳಬೇಕೆ ನೀನು ? ನನ್ನ ಕೈಯಲ್ಲಿ ಟವಲ್ಲು ಇತ್ತು. ಆ ಹುಡುಗಿ, ಕೃತಕ ನಗು ನಕ್ಕು ನುಡಿದಳು. 'ನನ್ನ ಬೆನ್ನು ನೆಂದಿದೆ. ನೀನು ಒರೆಸು ಬಾ.' ನಾನು ನುಡಿದೆ. 'ಥತ್! ನಂಗೆ ಇವೆಲ್ಲಾ ಸರಿ ಕಾಣಿಸಲಿಲ್ಲ.' ಮೂರು ಕೋಣಗಳ ಮೂಗು ಸಂಗೀತ ಹಾಡುತ್ತಿವೆ. ಇಂಥ ಸಮಯದಲ್ಲಿ ಹರಟೆ ನಡೆಯಲು ಸಾಧ್ಯವೆ? ಹುಂ ನಡೀ ಹೊರಗೆ ಸುತ್ತಾಡಿ ಬರೋಣ."

"ಎಲ್ಲಿಗೆ ಹೋಗೋಣ ಈ ಬಿಸಿಲಿನಲ್ಲಿ? ಕುಳಿತಿರಿ. ರೀ ಲಾಹಿಡಿ, ನೀವು

ಜನಿಸಿದ್ದು ಎಲ್ಲಿ."

"ಇಲಹಾಬಾದ್‌ನಲ್ಲಿ. ನನ್ನ ತಂದೆ ಅಲ್ಲಿ ಪ್ರೊಫೆಸರ್ ಆಗಿದ್ದರು. ಏನು ನಿಂಗೇನಾದರೂ ಕೆಲಸವಿದೆಯೆ?"

"ಹೀಗೆ ಕೇಳಿದೆ ಅಷ್ಟೆ."

ಹೇ ವಿಸ್ಕಿ ಬಾಟಲ್ ಇತ್ತ ಕೊಡು. ಹುಂ! ಹೋಗಲಿ ಬಿಡು, ಏಕೋ ಸರಿ ಬೀಳ್ತಾಯಿಲ್ಲ. ಈಗ ಏನು ಮಾಡೋಣ ಹೇಳು."

"ನೀವು ಮಲಗಿ ಬಿಡಿ."

"ಮಧ್ಯಾಹ್ನ ಮಲಗೋದೆ? ಥತ್! ಇದರ ಬದಲು ಹೊರಟೇ ಹೋಗಿದ್ದರೆ ಚೆನ್ನಾಗಿರುತ್ತಿತ್ತು. ಮಲಗಿದಾಗ ಮೂಗಿನಿಂದಲೇ ಮಾತನಾಡುತ್ತಾರೆ. ಈ ಕೋಣಗಳ ಮಧ್ಯೆ ಇರೋದೇ? ಈಗ ನೀನು ಏನು ಮಾಡ್ತಿ?"

"ಏನೂ ಇಲ್ಲ. ನಾನು ಸುಮ್ನೆ ಕೂತಿರ್ತೀನಿ. ಇಲ್ಲಿಗೆ ಬಂದ್ಮೇಲೆ ನಂಗೆ ಬಾಳ ಹಳೇ ವಿಷಯಗಳು ನೆನಪಿಗೆ ಬರ್ತಾ ಇವೆ."

"ಏನು ವಿಷಯ? ಯಾರಾದ್ರೂ ಪ್ರೇಮಿ....?"

"ಇಲ್ಲ ಇಲ್ಲ. ನನ್ನ ಜನ್ಮ ಪೂರ್ವ ಬಂಗಾಳದಲ್ಲಿ ಆಗಿತ್ತು. ಆಗ ಬಂಗಾಳದಲ್ಲಿ ಐವತ್ತರ ಬರಗಾಲ ಬಂದಿತ್ತು. ಆಗ 1893ನೇ ಇಸವಿ. ನಾನು ಪೂರ್ವ ಬಂಗಾಳದಲ್ಲಿದ್ದೆ. ಅಂದಿನ ಕೆಲ ವಿಷಯ ನಂಗೆ ಇದ್ದಕ್ಕಿದ್ದಂತೆ ನೆನಪಿಗೆ ಬರ್ತಾ ಇದೆ."

"ಆಗ ನೀನು ಇನ್ನೂ ಬಾಳ ಚಿಕ್ಕೋನು ಅಂತಾ ಕಾಣ್ಸುತ್ತೆ."

"ಹೌದು. ಆಗ ನನ್ನ ಹೊಟ್ಟೆ ಸರಿ ಇರ್ತಿರ್ಲಿಲ್ಲ. ಯಾವಾಗಲೂ ಹಸಿವು ಆಗ್ತಾ ಇತ್ತು. ದಿನವೆಲ್ಲಾ ಅಳ್ತಾ ಇದ್ದೆ. ಊಟ ಕೇಳ್ತಾ ಇದ್ದೆ. ಮನೆಯವರಿಗೆ ಬಾಳ ಕಷ್ಟ ಕೊಡ್ತಾ ಇದ್ದೆ.

ವಿಚಿತ್ರ. ಇಲ್ಲಿಗೆ ಬಂದ ಮೇಲೆ ಅವೆಲ್ಲಾ ನನಗೆ ಹೇಗೆ ಜ್ಞಾಪಕ ಬರುತ್ತದೆ? ಏಕೆ?

ತಂದೆ ಕಲ್ಕತ್ತೆಯಲ್ಲಿ ಮೇಸ್ಟ್ರಾಗಿದ್ದರು. ಆಗಿನ ಪರಿಸ್ಥಿತಿ ನಿಮಗೇ ಗೊತ್ತಿದೆ. ತಂದೆ ತಿಂಗಳಿಗೆ ಇಪ್ಪತ್ತು ರೂಪಾಯಿ ನನಗೆ ಕಳುಹಿಸುತ್ತಿದ್ದರು. ಆಗ ಪೂರ್ವ ಬಂಗಾಳದಲ್ಲಿ ಅಕ್ಕಿಯ ಬೆಲೆ ಮಣಕ್ಕೆ ಐವತ್ತಾರು. ಮನೆಯಲ್ಲಿ ಇದ್ದವರು ನಾವು ಐದು ಜನ. ದಿನಕ್ಕೆ ಒಮ್ಮೆ ಮಾತ್ರ ನಮಗೆ ಗಂಜಿ ಅನ್ನ ದೊರೆಯುತ್ತಿತ್ತು. ಜೊತೆಯಲ್ಲಿ ಬೇಯಿಸಿದ ಆಲೂಗಡ್ಡೆ. ನಾನು ಜೇಬಿನಲ್ಲಿ ಯಾವಾಗಲೂ ಬೇಯಿಸಿದ ಆಲೂಗಡ್ಡೆ ಇರಿಸಿಕೊಂಡಿರುತ್ತಿದ್ದೆ. ಆಗ ನಾನು ನಾಲ್ಕನೆ ಕ್ಲಾಸಿನಲ್ಲಿದ್ದೆ. ಕ್ಲಾಸಿಗೆ ಹೋದ ಮೇಲೂ ಜೇಬಿನಿಂದ ಆಲೂಗಡ್ಡೆ ತೆಗೆದು ತಿನ್ನುತ್ತಿದ್ದೆ. ನಮ್ಮ ಕ್ಲಾಸಿನಲ್ಲಿ ಎಲ್ಲರೂ ಬೇಯಿಸಿದ ಆಲೂಗಡ್ಡೆ ತರುತ್ತಿದ್ದರು. ಆಲೂಗಡ್ಡೆಯ ಮೇಲೆ ಎರಡು ಕಾಳು ಉಪ್ಪು ಇರಿಸಿ ತಿನ್ನುತ್ತಿದ್ದೆವು. ನನಗೆ ಇದು ಜೀರ್ಣವಾಗುತ್ತಿರಲಿಲ್ಲ. ನಾನು ಮೊದಲೇ ಹೊಟ್ಟೆಯ ತೊಂದರೆ ಇದ್ದವನು. ಬೇಯಿಸಿದ ಆಲೂ, ಗಂಜಿ ಅನ್ನ ನನಗೆ ಹಿಡಿಸುತ್ತಿರಲಿಲ್ಲ. ಎಷ್ಟಾದರೂ ಹಸಿವು ಹಸಿವೇ ತಾನೆ? ತಾಯಿಗೆ ಬಹಳ ತೊಂದರೆ ಕೊಡುತ್ತಿದ್ದೆ. ತಾಯಿ ಊಟಕ್ಕೆ ಕುಳಿತರೆ ಆಕೆಯ ಊಟವನ್ನೇ ಕಿತ್ತುಕೊಳ್ಳುತ್ತಿದ್ದೆ."

ಲಾಹಿಡಿ ಕಾರಣವಿಲ್ಲದೆ ತಲೆ ಅಲ್ಲಾಡಿಸುತ್ತಿದ್ದ. ನುಡಿದ 'ತಿಳಿಯಿತು.'

ಅನಂತರ ವರಾಂಡದ ಒಂದು ಮೂಲೆಗೆ ಹೋಗಿ ಇನ್ನೆಲ್ಲೋ ನೋಡುತ್ತಾ ನುಡಿದ. "ನನಗೆ ತಿಳಿಯಿತು. ನಿನ್ನ ತಾಯಿ ಜೀವಿಸಿಲ್ಲ, ಅಲ್ಲವೇ?"

"ಅಲ್ಲ. ಅದೇ ವರ್ಷ ನನ್ನ ತಾಯಿ ಟಿ.ಬಿ. ಕಾಯಿಲೆಯಿಂದ ಮರಣ ಹೊಂದಿದಳು. ನನ್ನದು ರಾಕ್ಷಸ ಹಸಿವು. ಹೊಟ್ಟೆಗೆ ಯಾವುದೂ ಸರಿ ಹೊಂದುತ್ತಿರಲಿಲ್ಲ. ಆದರೂ ತಾಯಿಯ ಊಟ ಕಸಿದುಕೊಂಡು ತಿಂದುಬಿಡುತ್ತಿದ್ದೆ. ತಾಯಿ ಯಾರಿಗೂ ಇದನ್ನು ಹೇಳದೆ ದಿನವೆಲ್ಲಾ ಹಸಿದುಕೊಂಡೇ ಇರುತ್ತಿದ್ದಳು. ಇದರಿಂದಲೇ ತಾಯಿಗೆ ಟಿ.ಬಿ. ತಗುಲಿತು. ಆಗ ನನಗೆ ಇದು ಗೊತ್ತಾಗುತ್ತಿರಲಿಲ್ಲ. ಈಗ ಎಲ್ಲವೂ ನೆನಪು ಬರುತ್ತದೆ. ನಿನ್ನೆ ಧರ್ಮಛತ್ರದ ಮುಂದೆ ಜನಗಳ ಸಾಲನ್ನು ಕಂಡಾಗ ನನ್ನ ಮನಸ್ಸಿನಲ್ಲಿ ಏನೇನೋ ಆಗಹತ್ತಿತು. ನನಗೆ ಒಂದು ತರಹ ಮಜವಾಗುತ್ತದೆ ಎಂದು ನೀವು ಹೇಳುತ್ತಿದ್ದಿರಿ. ನನಗೆ ಅನಿಸುತ್ತಿತ್ತು. ನಾನು ಎಷ್ಟು ವಿಚಿತ್ರ ಪರಿಸ್ಥಿತಿಯಲ್ಲಿ ಜೀವಿಸುತ್ತಿದ್ದೇನೆ ಎಂದು."

ಲಾಹಿಡಿ ಗರ್ಜಿಸಿದ "ಮಜಾ ಬಂತಾ ಎಂದರೆ ಏನು ಅರ್ಥ. ಇದೇನು ಮಜಾ ಬರಿಸುವ ಮಾತೇ?"

ಅರುಣನ ಮುಗುಳ್ನಗೆ ನನಗೆ ಅರ್ಥವಾಗಿತ್ತು. ನಗುತ್ತಲೇ ಆತ ನುಡಿದ. "ಐವತ್ತರ ಈ ಬರಗಾಲದಲ್ಲಿ ನಾನು ಸತ್ತುಹೋಗಬಹುದಿತ್ತು. ಆದರೆ ನಾನು ಸಾಯಲಿಲ್ಲ. ನನ್ನ ತಾಯಿಯನ್ನು ಸಾಯಿಸಿ ನಾನು ಬದುಕಿ ಉಳಿದೆ. ಹೀಗೆ ಬದುಕುಳಿದುದೇ ಮಜದ ಮಾತಲ್ಲವೇ?"

ಲಾಹಿಡಿ ಸಿಗರೇಟಿನ ಕೊನೆಯ ತುಂಡನ್ನು ಹಿಸುಕಿ ದೂರ ಎಸೆದ. ಜೇಬಿನಲ್ಲಿ ಕೈತೂರಿಸಿ ಚಿಲ್ಲರೆ ಕಾಸನ್ನು ಝಣಝಣ ಎಣಿಸಹತ್ತಿದ. ಒಂದು ಕೈಯಿಂದ ಆತ ತನ್ನ ಕೂದಲನ್ನು ಹಿಡಿದುಕೊಂಡ. ಇದ್ದಿಕ್ಕಿದ್ದಂತೆ ವರಾಂಡದಿಂದ ಹೊರಗೆ ನೆಗೆದು ಒಂದು ಹೂವನ್ನು ಕಿತ್ತ. ಅನಂತರ ಕೂಗಿ ಹೇಳಿದ. "ಹೇ ಅರುಣ್.... ನೀನು ಕೊಠಡಿಯೊಳಗೆ ಹೋಗು... ದೀಪ ಆರಿಸಿ ಕೆಲ ನಿಮಿಷ ನಿದ್ದೆ ಮಾಡು. ಆಗ ನಿನಗೆ ಹಾಯ್ ಅನಿಸೀತು."

ಅರುಣ ತನ್ನ ಕಣ್ಣನ್ನು ಲಾಹಿಡಿಯ ಹಿಂದೆ ಹರಿಸಿದ್ದ. ನುಡಿದ. "ನಾನು ಸರಿಯಾಗಿದ್ದೇನೆ. ನನಗೆ ಇದೇ ಚೆನ್ನಾಗಿ ಕಾಣಿಸುತ್ತದೆ." ಲಾಹಿಡಿ ಬಾವಿಯ ಬಳಿಗೆ ನಡೆದ. ಒಬ್ಬ ಹುಡುಗಿ ನೀರನ್ನು ತೆಗೆದುಕೊಂಡು ಹೋಗುತ್ತಿದ್ದಳು. ಆತ ನುಡಿದ "ಸ್ವಲ್ಪ ನೀರು ಕೊಡ್ತೀಯಾ. ಮುಖ ತೊಳೆದುಕೊಳ್ತೀನಿ."

ಹುಡುಗಿ ಗಾಬರಿಗೊಂಡು ನಿಂತಳು. ಆಕೆ ಲಾಹಿಡಿಯ ನಶೆ ಭರಿತ ಕಂಪುಕಣ್ಣನ್ನು ನೋಡಿದಳು. ಅನಂತರ ಸೊಂಟದಲ್ಲಿರಿಸಿಕೊಂಡಿದ್ದ ಬಿಂದಿಗೆಯಿಂದ ಬಗ್ಗಿ ಸ್ವಲ್ಪ ನೀರನ್ನು ಸುರಿದಳು. ಲಾಹಿಡಿ ತನ್ನ ಕನ್ನಡಕ ತೆಗೆದು ಬೊಗಸೆಯಲ್ಲಿ ನೀರು ಹಿಡಿದುಕೊಂಡು ಮುಖವನ್ನು ತೊಳೆದುಕೊಂಡ. ತೃಪ್ತಿಯಾಗುವಷ್ಟು ನೀರನ್ನು ಕುಡಿದ. ಅನಂತರ ಹುಡುಗಿಗೆ ಹೇಳಿದ "ಹೂಂ,... ಬಾ... ನಿಂಗೆ ತುಂಬಿ ಕೊಡ್ತೀನಿ."

ಅನಂತರ ನೌಕರನಿಗೆ ಹೇಳಿದ. "ಸರಿ. ನೀನು ಈಗ ಹೋಗಬಹುದು. ಇವರಿಗೆಲ್ಲ

ನಾನೇ ನೀರು ತುಂಬಿ ಕೊಡ್ತೀನಿ.''

ಬಗ್ಗಿ ಆತ ನೋಡಿದ, ಬಾವಿಯಲ್ಲಿ ನೀರು ಬಹಳ ಆಳದಲ್ಲಿತ್ತು.

# ಜೀವಿಸುವುದಕ್ಕಾಗಿ

ಪ್ರಫುಲ್ಲ ರಾಯ್

ಮಾಘಮಾಸ ಕಳೆಯುುವುದರಲ್ಲಿತ್ತು. ಆದರೆ ಚಳಿ ಇನ್ನೂ ಕಡಿಮೆ ಆಗಿರಲಿಲ್ಲ. ಇದರ ಮೇಲೆ ಇಂದು ಬೆಳಿಗ್ಗೆಯಿಂದಲೇ ಆಕಾಶದಲ್ಲಿ ದೊಡ ದೊಡ್ಡ ಮೋಡಗಳ ತುಣುಕುಗಳು ಹಾರಾಡುತ್ತಿದ್ದವು. ಮಧ್ಯ ಮಧ್ಯದಲ್ಲಿ ಕೊಂಚ ಬಿಸಿಲೂ ಸಹ ಕಾಣಬರುತ್ತಿತ್ತು. ಮೋಡ ತುಂಬಿದ ಆಕಾಶದಲ್ಲಿ ಮಿಂಚು ಹೊಳೆದು ಸ್ವಲ್ಪ ಕೆಂಪಾಗಿಸಿ ತಕ್ಷಣ ಅಳಿದು ಹೋಗುತ್ತಿತ್ತು.

ಬಿಷ್ಟುಪದ ಉತ್ತರದ ಮೈದಾನದಲ್ಲಿ ಕಾಲಿರಿಸಿದಾಗ ತಣ್ಣನೆಯ ಸಂಜೆ ಮುಳುಗಿತ್ತು. ಮರಗಳ ನೆರಳು ನೀಳವಾಗಿದ್ದವು.

ಬಿಷ್ಟುಪದನ ವಯಸ್ಸು ಸುಮಾರು ನಲವತ್ತು ವರ್ಷ. ದೀಪದ ಚಿಮಣಿಯಂತಹ ದಪ್ಪ ಮೂಗು. ಅದರ ಮೇಲೆ ಆಕರ್ಷಣೆರಹಿತ ಕೊಳಕು ಅಗಲ ಕಣ್ಣುಗಳು. ಹುಬ್ಬುಗಳು ಹೆಸರಿಗೆ ಮಾತ್ರ ಇದ್ದವು. ಕಪ್ಪು ದಪ್ಪ ತುಟಿಗಳು. ಕೆಳಮುಖವಾಗಿ ನೇತುಬಿದ್ದಿದ್ದವು. ಸ್ವರ ಕಂಠ ಒಡೆದಿತ್ತು. ಅಸ್ವಾಭಾವಿಕ ಅನ್ನುವಷ್ಟು ನೀಳ ನಿಲುವು. ಒಣಗಿದ ಶರೀರದ ಕಪ್ಪು ಚರ್ಮದ ಮೇಲೆ ಏನೋ ಒಂದು ಹೊಳಪಿತ್ತು. ಎಲ್ಲವನ್ನೂ ಸೇರಿಸಿ ಸಿಡಿಲಿಗೆ ತುತ್ತಾದ ತಾಳೆಮರದಂತೆ ಕಾಣಿಸುತ್ತಿದ್ದ. ಆತನ ಸಂಪೂರ್ಣ ಶರೀರದಲ್ಲಿ ಕೇವಲ ಅಗಲವಾದ ದಪ್ಪ ಎಲುಬುಗಳು ಮಾತ್ರ ಉಳಿದಿದ್ದುವು. ಬಿಷ್ಟುಪದನ ಈ ಕಟ್ಟಿಗೆ ಶರೀರಕ್ಕೆ ಸ್ವಲ್ಪ ಮಾಂಸದ ಹೊದಿಕೆ ಸೇರಿದ್ದರೆ ಆತ ಬೆಟ್ಟದಂತೆ ಶಕ್ತಿಯುತನಾಗುತ್ತಿದ್ದ.

ಆತನ ಮೈಮೇಲಿರುತ್ತಿದ್ದ ಬಟ್ಟೆಯೆಂದರೆ ಸೊಂಟಕ್ಕೆ ಸಿಕ್ಕಿಸಿದ ಒಂದು ಹರಕು ತುಂಡು ಲಂಗೋಟಿ ಹಾಗೂ ಬಣ್ಣ ಬಣ್ಣದ ಕಾಗದದ ತುಂಡುಗಳು. ತಲೆಗೆ ಒಂದು ಟವಲು ಸುತ್ತಿರುತ್ತಿದ್ದ. ಹೆಗಲಿಗೆ ಒಂದು ಕೊಡಲಿ ಏರಿಸಿರುತ್ತಿದ್ದ, ಸೊಂಟದಲ್ಲಿ ಒಂದು ಕಠಾರಿ ಕಟ್ಟಿರುತ್ತಿದ್ದ.

ಹಿಂದಿನ ಮೂರು ದಿನಗಳಿಂದ ಬಿಷ್ಟುಪದನಿಗೆ ಏನೂ ಕೆಲಸ ದೊರಕಿರಲಿಲ್ಲ ಮತ್ತೆ ಈತನಿಗೆ ಬೇರೆ ಯಾವ ಉದ್ಯೋಗವೂ ಇರಲಿಲ್ಲ. ಇಂತಹ ಭೂರಹಿತರಿಗೆ ಕೂತು ತಿನ್ನುವುದು ಹೇಗೆ ಅಸಾಧ್ಯವೊ, ಹಾಗೆಯೇ ದಿನಕೂಲಿಗಳ ಮನೆಯಲ್ಲಿ ಚಿನ್ನ ಬೆಳ್ಳಿಯೂ ಇರುವುದು ದುಸ್ಸಾಧ್ಯ. ಮನೆಯಲ್ಲಿದ್ದ ನಾಲ್ಕು ಕಾಳು ಅಕ್ಕಿ ನಿನ್ನೆಯ

ತನಕ ಜೀವನ ತಳ್ಳಲು ಸಾಧ್ಯವಾಗಿತ್ತು. ಇಂದು ಏನಾದರೂ ಕೆಲಸ ಸಿಗದೆ ಹೋದರೆ ಸಂಸಾರವನ್ನು ಉಪವಾಸ ಮಾಡಲು ಬಿಡದೆ ಬೇರೆ ದಾರಿಯೇ ಇರಲಿಲ್ಲ.

ನಿದ್ದೆಯಿಂದ ಎಚ್ಚತ್ತೊಡನೆಯೇ ಬಿಷ್ಟುಪದ ಕೆಲಸ ಹುಡುಕಿಕೊಂಡು ಹೊರಬಿದ್ದ. ಆದರೆ ಕೆಲಸ ಎಲ್ಲಿ? ಸುತ್ತಿ ಸುತ್ತಿ ಸಂಪೂರ್ಣವಾಗಿ ಸುಸ್ತಾಗಿ ನಿರಾಸೆಗೊಂಡಾಗ ಆತನಿಗೆ ಈ ಉತ್ತರದ ಮೈದಾನದ ನೆನಪು ಬಂತು.

ಉತ್ತರದ ಈ ಮೈದಾನ ಹಿಂದೆ ಹಲವು ಬಾರಿ ಈತನ ಜೀವವನ್ನು ಉಳಿಸಿತ್ತು. ಇಲ್ಲಿ ಅವನಿಗೆ ಕೆಲವು ಬಾರಿ ಹಣ್ಣು, ಕೆಲವು ಬಾರಿ ಸೊಪ್ಪು, ತರಕಾರಿ, ಸಿಕ್ಕಿದರೆ ಮತ್ತು ಒಮ್ಮೊಮ್ಮೆ ಹಕ್ಕಿಗಳು, ಆಗೊಮ್ಮೆ ಈಗೊಮ್ಮೆ ಭೂ ಆಮೆ, ಮತ್ತೆ ಕೆಲಬಾರಿ ಅಲ್ಲಿ ಸಿಕ್ಕಿದ ಆ ಮೊಲವನ್ನು ಹಿಡಿದುಕೊಂಡು ಹೋಗಿ ತನ್ನ ಮಕ್ಕಳು ಮರಿಗಳ ಜೀವ ಉಳಿಸಿದ್ದ. ಇಂದೂ ಇದೇ ಆಸೆಯಿಂದ ಆ ಮೈದಾನಕ್ಕೆ ಬಂದಿದ್ದ.

ಮೈದಾನಕ್ಕೆ ಬಂದು ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದ. ಸ್ಮಶಾನ ಸದೃಶ ಸ್ಥಳ. ಎಡ ಅಥವಾ ಬಲ ಎಲ್ಲೇ ದೃಷ್ಟಿ ಹರಿದರೂ ಹುಲ್ಲೇ ಹುಲ್ಲು. ಚಳಿಗಾಲವಾದ್ದರಿಂದ ಹುಲ್ಲು ಸಜೀವವಾಗಿ ಹಸಿರಾಗಿ ಕಳಕಳಿಸುತ್ತಿರಲಿಲ್ಲ. ವಿವರ್ಣಗೊಂಡು ಸಪ್ಪಗಾಗಿತ್ತು. ಮೈದಾನದ ಮಧ್ಯಮಧ್ಯದಲ್ಲಿ ಪೊದೆಗಳಿರಲಿಲ್ಲ. ಚಿಕ್ಕ ಚಿಕ್ಕ ಗಿಡ ಬಳ್ಳಿಗಳಿದ್ದುವು. ಮೈದಾನದೊಳಗಿಂದ ಒಂದು ನಾಲೆಯೂ ಹರಿಯುತ್ತಿತ್ತು.

ಸುತ್ತಲೂ ಕಣ್ಣುಹರಿಸಿ ಬಿಷ್ಟುಪದ ನಡೆಯಲು ತೊಡಗಿದ. ಮುಳುಗುತ್ತಿದ್ದ ಸಂಜೆ ಬೆಳಕಿನಲ್ಲಿ ಮೇಲುಗಡೆ ಗುಂಪು ಗುಂಪಾಗಿ ಹಕ್ಕಿಗಳು ಹಾರುತ್ತಿದ್ದವು. ಬಿಷ್ಟುಪದ ಯೋಚಿಸಿದ. ನಾನು ಕವಣೆಯನ್ನು ತಂದಿದ್ದರೆ ಸುಲಭವಾಗಿ ಮೂರು ನಾಲ್ಕು ಹಕ್ಕಿಗಳನ್ನಾದರೂ ಕೆಡವಿ ಉರುಳಿಸಬಹುದಾಗಿತು. ನನ್ನಿಂದ ದೊಡ್ಡ ತಪ್ಪಾಗಿದೆ.

ನಡಯುತ್ತ ನಡೆಯುತ್ತ ಎದುರಿಗೆ ಬಳ್ಳಿ ಅಥವಾ ಗಿಡ ಕಂಡೊಡನೆ ಬಿಷ್ಟುಪದ ಬೆಚ್ಚಿಬೀಳುತ್ತಿದ್ದ. ಕಾಲುವೆಯ ಬಳಿಯಲ್ಲಿ ಒಬ್ಬ ಹೆಂಗಸು ನಿಂತಿದ್ದಳು. ಅವಳು ಬಿಟ್ಟ ಕಣ್ಣು ಬಿಟ್ಟ ಹಾಗೆಯೇ ಈತನನ್ನೇ ನೋಡುತ್ತಿದ್ದಳು.

ಬಿಷ್ಟುಪದ ನಿಂತಲ್ಲಿಂದ ಹತ್ತು ಹೆಜ್ಜೆ ನಡೆದರೆ ಆ ಹೆಂಗಸನ್ನು ತಲುಪಬಹುದಿತ್ತು. ದೂರ ಹೆಚ್ಚಿಗೆ ಇಲ್ಲದುದರಿಂದಲೇ ಬಿಷ್ಟುಪದ ನಿಚ್ಚಳವಾಗಿ ಆ ಹೆಂಗಸಿನ ಕಣ್ಣಲ್ಲಿ ಗಾಬರಿ, ಮತ್ತು ಅಪನಂಬಿಕೆ ಇರುವುದನ್ನು ಕಾಣಲು ಶಕ್ತನಾಗಿದ್ದ.

ಈ ಸ್ಮಶಾನ ಸದೃಶ ಮೈದಾನದಲ್ಲಿ ಚಳಿಯ ಈ ಸಂಜೆಯಲ್ಲಿ ಈ ಹೆಂಗಸು ಎಲ್ಲಿಂದ ಬಂದಳು? ಬಿಷ್ಟುಪದನಿಗೆ ಅರ್ಥವಾಗಲಿಲ್ಲ. ಆತ ಆಕೆಯನ್ನು ದಿಟ್ಟಿಸಿ ನೋಡಲು ಪ್ರಾರಂಭಿಸಿದ. ಆಕೆಯ ಬಣ್ಣ ಕಂದು. ದುಂಡು ದುಂಡು ದೇಹ ರಚನೆ. ಮೊಟಕಾದ ಮೂಗು, ತುಂಬಿದೆದೆ. ಆರೋಗ್ಯ ಹೀಗೆ ಒಳ್ಳೆಯದಿದ್ದು ಆಕೆಯ ಚಿಕ್ಕ ಸೀರೆ ಅದನ್ನು ಮುಚ್ಚಿಡಲು ಅಶಕ್ತವಾಗಿದೆ.

ಸ್ವಲ್ಪ ಹೊತ್ತಾದ ನಂತರ ಬಿಷ್ಟುಪದ ಪ್ರಶ್ನಿಸಿದ "ನೀನು ಯಾರು? ತೀಕ್ಷ್ಣವಾದ ಆದರೆ ಕೊಂಚ ಅಂಜಿತ ಸ್ವರದಲ್ಲಿ ಅವಳು ನುಡಿದಳು "ನಾನು ಯಾರೇ ಆಗಿರಲಿ ನೀನು ಮೊದಲು ಇಲ್ಲಿಂದ ಹೊರಟುಹೋಗು." "ನೀನು ಹೇಳಿದೆ ಅಂತ ಹೊರಟು ಹೋಗಲು ಸಾಧ್ಯವೆ. ಇಲ್ಲಿ ನನಗೆ ಕೆಲಸವಿದೆ."

"ಏನು ಕೆಲಸ ?"

ಇದೆ ಎಂದು ಹೇಳಿ ಕೆಲಕ್ಷಣ ಸುಮ್ಮನಾದ. ಆನಂತರ ಪ್ರಶ್ನಿಸಿದ. "ಈ ಸ್ಮಶಾನದಲ್ಲಿ ನೀನು ಏನು ಮಾಡುತ್ತಿದ್ದಿ ?"

"ನನಗೂ ಕೆಲಸವಿದೆ." ಆ ಹೆಂಗಸು ನುಡಿದಳು.

ಆತನಿಗೇ ಅರಿವಿಲ್ಲದೆ ಆತ ಮುಂದೆ ಹೆಜ್ಜೆ ಇಡುತ್ತಿದ್ದ. ಇದ್ದಕ್ಕಿದ್ದಂತೆಯೇ ಆ ಹೆಂಗಸು ಜೋರಾಗಿ ಕಿರುಚಿದಳು. "ಎಚ್ಚರಿಕೆ. ಒಂದು ಹೆಜ್ಜೆನೂ ಮುಂದೆ ಇಡ್ಬೇಡ." ಬಿಷ್ಟುಪದ ಬೆಚ್ಚಿದ. ಅವಳನ್ನು ನೋಡಿದ. ಹಿಂದೆ ಕಾಣುತ್ತಿದ್ದ ಹೆದರಿಕೆ ಈಗ ಅವಳ ಮುಖದಲ್ಲಿ ಕಾಣುತ್ತಿರಲಿಲ್ಲ. ಅವಳ ಕಣ್ಣುಗಳು ಹೊಳೆಯುತ್ತಿದ್ದುವು. ಬಿಷ್ಟುಪದನೇ ಹೆದರಿ ನುಡಿದ "ಸರಿ ನಿನ್ನ ಇಷ್ಟ, ಇಲ್ಲದಿದ್ದರೆ ನಾನು ಮುಂದೆ ಬರುವುದಿಲ್ಲ. ಆದರೆ ನೀನು ಎಲ್ಲಿಯವಳು. ಎಲ್ಲಿಂದ ಇಲ್ಲಿಗೆ ಬಂದಿದ್ದಿ? ಹೇಳುವುದಕ್ಕೆ ಏನು ತೊಂದರೆ ?"

ಹೆಂಗಸು ಸ್ವಲ್ಪ ಮೃದುವಾದಳು, ನುಡಿದಳು "ತಾಲ್‌ಡಂಗಾದಲಿ ವಾಸಿಸುತ್ತೇನೆ. ಉತ್ತರದ ಕಡೆ."

"ಅದು ಬಹಳ ದೂರ. ಎರಡು ಹರದಾರಿ ಆಗಬಹುದು."

"ಹೌದು ಆಗಬಹುದು."

"ಅಷ್ಟು ದೂರದಿಂದ ಬಂದಿದ್ದಿ ?"

"ಅಗತ್ಯ ಬಿದ್ದಾಗ ಬರಲೇಬೇಕಾಗುತ್ತದೆ."

"ಏನು ಅಂತಹ ಅಗತ್ಯ, ಹೇಳಬಹುದು ತಾನೆ."

ಹೆಂಗಸು ನುಡಿದಳು "ಕೇಳಲು ಅಷ್ಟು ಆಸೆ ಇದ್ದರೆ ಕೇಳು. ನಾನು ಸೊಪ್ಪು, ತರಕಾರಿ, ಹಣ್ಣು ಹುಡುಕಿಕೊಂಡು ಬಂದೆ."

ಬಿಷ್ಟುಪದ ದಿಗ್ಭ್ರಮೆಗೊಂಡ. ಕಕ್ಕಾಬಿಕ್ಕಿಯಾಗಿ ನುಡಿದ "ಎಷ್ಟು ಆಶ್ಚರ್ಯದ ಮಾತು. ನಾನೂ ಅದೇ ಕೆಲಸದ ನಿಮಿತ್ತವೇ ಬಂದಿದ್ದೇನೆ."

ಹೆಂಗಸಿನ ಕಣ್ಣುಗಳು ಪುನಃ ಹೊಳೆದವು. "ಸುಳ್ಳು ಹೇಳುತ್ತಿದ್ದಿ." "ಆಣೆ ಮಾಡಿ ಹೇಳ್ತಾ ಇದ್ದೀನಿ. ಸುಳ್ಳು ಹೇಳ್ತಾ ಇಲ್ಲ." ಬಿಷ್ಟುಪದ ವ್ಯಾಕುಲಗೊಂಡು ಪುನಃ ನುಡಿದ. "ದೇವರಾಣೆಗೂ. ಬೆಳಗ್ಗೆಯಿಂದ ಮಕ್ಕಳು ಮರಿ ಉಪವಾಸ; ಹಿಂದಿನ ಮೂರು ದಿನಗಳಲ್ಲಿ ಒಂದು ಕಾಸಿನ ಸಂಪಾದನೆ ಇಲ್ಲ. ಈ ಮೈದಾನದಿಂದಲೂ ಏನನ್ನೂ ತೆಗೆದುಕೊಂಡು ಹೋಗದೆ ಇದ್ದರೆ ಮಕ್ಕಳು ಮರಿ ಸತ್ತುಹೋಗ್ತಾರೆ."

ಬಿಷ್ಟುಪದನ ವ್ಯಾಕುಲಸ್ವರ, ಹಾಗೂ ಕಾತರಗೊಂಡಿದ್ದ ಮುಖ ಕಂಡು ಆ ಹೆಂಗಸಿಗೆ ಆತನ ಮೇಲೆ ವಿಶ್ವಾಸ ಮೂಡಿತು. ಆದರೂ ಪ್ರಶ್ನಿಸಿದಳು. "ಇನ್ನೇನೂ ಕೆಟ್ಟ ಉದ್ದೇಶ ಇಲ್ಲಾ ತಾನೆ ?"

"ಹೇಳಿದೆನಲ್ಲಾ ದೇವರಾಣೆಗೂ ಸರಿ. ನೀನು ನನ್ನ ಹತ್ತಿರ ಬಾ. ನಿನ್ನ ಮುಟ್ಟಿ ಪ್ರಮಾಣ ಮಾಡ್ತೀನಿ."

"ಮುಟ್ಟಿ ಹೇಳಬೇಕಾದ ಅಗತ್ಯವಿಲ್ಲ. ನಿನ್ನ ಮನೆ ಎಲ್ಲಿ ?"

"ಪಯಾರ್ ಪುರ್. ಇಲ್ಲಿಂದ ದಕ್ಷಿಣದಲ್ಲಿ" ಬಿಷ್ಟುಪದ ಬೆರಳಿಂದ ಆಕಡೆ

ತೋರಿಸಿದ.

"ನಿನ್ನ ಮನೆಯೂ ದೂರವಿದೆ. ಮೂರು ದಿನ ನಡೆಯಬೇಕಾಗುತ್ತೆ." ತನ್ನ ಕೊಳಕು ಹಲ್ಲನ್ನು ತೆರೆದು ಬಿಷ್ಟುಪದ ನಕ್ಕು ನುಡಿದ "ನೀನೇ ಹೇಳಿದ್ಯಲ್ಲಾ ಅಗತ್ಯ ಬಿದ್ದರೆ ಎಲ್ಲಿಂದ ಆದರೂ ಬರ್ಬೇಕಾಗುತ್ತೆ."

"ಅದೇನೋ ಸರಿ." ಆ ಹೆಂಗಸು ನುಡಿದಳು.

ಬಿಷ್ಟುಪದ ನುಡಿದ. "ಇಷ್ಟು ಹೊತ್ತು ಮಾತುಕತೆ ಆಗಿದೆ. ಆದರೆ ಒಬ್ರಿಗೆ ಇನ್ನೊಬ್ಬರ ಹೆಸರೇ ಗೊತ್ತಾಗಿಲ್ಲ. ನನ್ನ ಹೆಸರು ಬಿಷ್ಟುಪದ. ನಿನ್ನ ಹೆಸರು ?"

"ನಿಷಿ, ನಿಷಿ ಬಾಲಾ."

ಸ್ವಲ್ಪ ಹೊತ್ತು ನಿಶ್ಯಬ್ದತೆ ನೆಲೆಸಿತ್ತು. ಅನಂತರ ಬಿಷ್ಟುಪದ ನುಡಿದ "ಒಂದು ಮಾತು ಹೇಳ್ತೀನಿ."

"ಏನು ?"

"ನೀನು ಯಾವ ಕೆಲಸಕ್ಕಾಗಿ ಬಂದೆಯೋ ಅದೇ ಕೆಲಸಕ್ಕೆ ನಾನೂ ಬಂದಿದ್ದೇನೆ. ಹೂಂ. ಬಾ. ನಾವು ಇಬ್ಬರೂ ಸೇರಿ ಸೊಪ್ಪು ತರಕಾರಿ ಹಣ್ಣು ಹುಡುಕೋಣ. ಥಂಡಿಯಾಗಿದೆ, ಮಧ್ಯಾಹ್ನ ಇಷ್ಟರಲ್ಲೇ ಸಂಜೆ ಆಗುತ್ತೆ. ನೀನು ಯುವತಿ. ಒಬ್ಬಳೇ ಮೈದಾನದಲ್ಲಿ ಸುತ್ತುವುದು ಒಳ್ಳೆಯದಲ್ಲ."

ಸ್ವಲ್ಪ ಹೊತ್ತು ಅನುಮಾನಿಸಿದ ಮೇಲೆ ಅವಳು ನುಡಿದಳು "ಅದೇನೋ ಸರಿ. ಹೂಂ... ನಡೆ, ನಿನ್ನ ಜೊತೇನೇ ಬರ್ತೀನಿ."

ಅವಳೇ ಇವನ ಹತ್ತಿರ ಬಂದು ನಿಂತಳು. ಅನಂತರ ಮೈದಾನದಲ್ಲಿ ಸುತ್ತುತ್ತ ಇವರಿಬ್ಬರ ಮಧ್ಯೆ ಒಂದು ಅಲಿಖಿತ ಒಪ್ಪಂದವಾಯಿತು. ಇಲ್ಲಿ ಏನೇ ಸಿಕ್ಕಿದರೂ ಅದನ್ನು ಎರಡು ಸಮಭಾಗಗಳಾಗಿ ಹಂಚಿಕೊಳ್ಳುವುದು.

ಇದಾದ ನಂತರ ನಿಶಿ ಹಾಗೂ ಬಿಷ್ಟುಪದ ಮೈದಾನದಲ್ಲಿನ ಪ್ರತಿಯೊಂದು ಪೊದೆ, ಹಳ್ಳಕೊಳ್ಳಗಳನ್ನು ಹುಡುಕಲು ಪ್ರಾರಂಭಿಸಿದರು. ಆದರೆ ನಾಲ್ಕಾರು ಚಿಕ್ಕಚಿಕ್ಕ ಮಣ್ಣಿನ ಆಮೆಗಳನ್ನು ಬಿಟ್ಟರೆ ಮತ್ತೇನೂ ಸಿಗಲಿಲ್ಲ. ಇವುಗಳ ದಪ್ಪ ಚಿಪ್ಪು ತೆಗೆದ ಮೇಲೆ ಉಳಿಯುವ ಮಾಂಸ ಎಷ್ಟು ?

ಇಬ್ಬರೂ ಸುತ್ತುತ್ತಾ ಮಾತು ಆಡುತ್ತಿದ್ದರು.

"ನಿಮ್ಮನೆಯಲ್ಲಿ ಯಾರು ಯಾರು ಇದ್ದಾರೆ ?" ನಿಶಿ ಪ್ರಶ್ನಿಸಿದಳು.

ಈ ಶೀಘ್ರ ಅವಧಿಯಲ್ಲಿ ಬಿಷ್ಟುಪದನ ಬಗ್ಗೆ ಆಕೆಯ ಮನಸ್ಸಿನ ಶಂಕೆ ದೂರವಾಗಿತ್ತು. ಬಿಷ್ಟುಪದನ ಮೇಲೆ ಪೂರ್ಣ ಭರವಸೆ ಮೂಡಿತ್ತು.

ಬಿಷ್ಟುಪದ ನುಡಿದ "ಮನೆಯಲ್ಲಿ ಮಕ್ಕಳು ಮರಿ ಮತ್ತು ಹೆಂಡತಿ."

"ಎಷ್ಟು ಮಕ್ಕಳು ?"

"ಮೂರು ದೊಡ್ಡವರು ಇಬ್ಬರು ಹುಡುಗರು. ಒಬ್ಬಳು ಹುಡುಗಿ."

"ಓಹೋ ಅಂದರೆ ಐದು ಜನಗಳ ಸಂಸಾರ ನಿನ್ನದು ?"

"ಹೌದು."

"ನೀನು ಏನು ಕೆಲಸ ಮಾಡುತ್ತಿ ?"

"ಕೂಲಿ ಕೆಲಸ."

"ಅದರಿಂದ ಜೀವನ ಸಾಗುವುದೆ ?"

"ಸಾಗುತ್ತದೆ. ಅರ್ಧದಿನ ಅರ್ಧ ಹೊಟ್ಟೆ ತುಂಬುತ್ತೆ . ಉಳಿದ ದಿನ ಉಪವಾಸ" ಸ್ವಲ್ಪ ಯೋಚಿಸಿ ನಿಶಿ ಪ್ರಶ್ನಿಸಿದಳು. "ಜಮೀನು ಗಿಮೀನು ಏನಾದ್ರೂ ಇದೆಯೆ ?"

ಬಿಷ್ಣುಪದ ನುಡಿದ "ಜಮೀನು ಎಲ್ಲಿಂದ ತರಲಿ ?"

"ಅಂದ್ರೆ ಈ ಶರೀರದ ಬಲದಿಂದಲೇ ಜೀವಿಸಿದ್ದಿ ?"

"ಹೌದು."

"ಅದರಲ್ಲಿ ಬಹಳ ಕಷ್ಟಗಳಿವೆ."

"ಮತ್ತೇನಿದೆ ಉಪಾಯ ? ಹೀಗೇ ಎಷ್ಟು ದಿನ ಇರಲು ಸಾಧ್ಯವೊ ಅಷ್ಟುದಿನ ಇರುತ್ತೇನೆ."

ಅನಂತರ ಬಿಷ್ಣುಪದ ಪ್ರಶ್ನಿಸಿದ "ಕೇವಲ ನನ್ನ ವಿಷಯ ಮಾತ್ರ ಕೇಳ್ತಿದ್ದೀಯ ? ನಿನ್ನ ವಿಷಯ ಹೇಳೋದಿಲ್ವೆ ?"

ನಿಶಿ ನುಡಿದಳು "ನಂದೇನು ಯಾವ್ದೂ ಹೊಸ ವಿಷಯವಿಲ್ಲ. ಶರೀರದ ದುಡಿತದ ಮೇಲೆ ನನ್ನ ಭರವಸೆ."

"ಅದು ನನಗೇನು ಗೊತ್ತಾಗಿಲ್ಲ ಅಂದ್ಕೊಂಡ್ಯಾ ? ನೀನು ಏನು ಯೋಚಿಸಿದ್ದೆ ? ನಂಗೆಲ್ಲಾ ಗೊತ್ತಾಗಿದ್ರೂನೂ... !"

"ಏನು ಕೇಳ್ಬೇಕು ಅಂತಿದ್ದಿ ?"

ಕತ್ತು ತಿರುಗಿಸಿ ಬಿಷ್ಣುಪದ ತನ್ನ ಜೊತೆಗಾರಳನ್ನು ದೃಷ್ಟಿಸಿದ. ಅನಂತರ ನುಡಿದ "ಬೈತಲೆಯಲ್ಲಿ ಕುಂಕುಮವಿಲ್ಲ. ಕೈಯಲ್ಲಿ ಶಂಖದ ಬಳೆಗಳಿಲ್ಲ. ಹುಡುಗೀಗೆ ಇನ್ನು ಮದ್ವೆ ಆಗಿಲ್ಲವೆ ?"

ಅನುಮಾನಿಸುತ್ತ ನಿಶಿ ನುಡಿದಳು "ಆಗಿತ್ತು."

"ಆಮೇಲೆ."

ಬಿಷ್ಣುಪದ ಏನನ್ನು ತಿಳಿಯಬಯಸಿದ್ದಾನೆ ಎಂಬುದು ಅವಳಿಗೆ ಅರ್ಥವಾಯಿತು. ಮದುವೆ ಆಗಿದ್ದು, ಶಂಕದ ಬಳೆ ಮತ್ತು ಸಿಂಧೂರ ಇಲ್ಲವಾಗಿತ್ತು. ಬಿಷ್ಣುಪದನ ಮನಸ್ಸನಲ್ಲಿ ಸಂಶಯ ನೆಟ್ಟಿತ್ತು.

ಬಹಳ ಉದಾಸಗೊಂಡ ಸ್ವರದಲ್ಲಿ ನಿಶಿ ನುಡಿದಳು "ನನ್ನ ಗಂಡ ಬದುಕಿಲ್ಲ" ಬಿಷ್ಣುಪದ ನಾಲಿಗೆಯಲ್ಲೇ ಶೋಕ ವ್ಯಕ್ತಪಡಿಸುತ್ತಾ ನುಡಿದ "ಇಷ್ಟು ಚಿಕ್ಕ ವಯಸ್ನಲ್ಲೇ ಗಂಡನನ್ನು ಕಳ್ಕೊಂಡ್ಬಿಟ್ಟೆ ಪಾಪ."

ನಿಶಿ ಏನೂ ಉತ್ತರಿಸಲಿಲ್ಲ.

ಬಿಷ್ಣುಪದ ಪುನಃ ಪ್ರಶ್ನಿಸಿದ "ಏನಾಗಿತ್ತು ? ಏನಾದ್ರೂ ಖಾಯಿಲೆ ?"

ನಿಶಿ ನುಡಿದಳು "ಇಲ್ಲ. ಸಂಬಂಧಿಕರೊಡನೆ ಹೊಡೆದಾಡಲು ಹೋಗಿದ್ದ. ಅಲ್ಲೇ ಅವನನ್ನು ಕೊಂದುಹಾಕ್ಬಿಟ್ರು. ಚೂರಿಯಲ್ಲಿ ತಿವಿದು ಹೊಟ್ಟೆ ಸೀಳಿ ಹಾಕಿದ್ರು ಆ ಜನ. ಕರುಳೆಲ್ಲಾ ಹೊಟ್ಟೆಯಿಂದ ಹೊರಗೆ ಬಂದಿತ್ತು. ಕಣ್ಣಿಂದ ನೋಡೋಕೆ ಸಾಧ್ಯವಾಗ್ತಿರಲಿಲ್ಲ."

ಹೇಳುತ್ತಾ ಹೇಳುತ್ತಾ ಅವಳು ಸ್ಮಶಾನದಂತೆ ಮೌನವಾಗಿದ್ದ ಮೈದಾನವನ್ನು ದಿಟ್ಟಿಸಿ ಜೋರಾಗಿ ಅಳಲು ಪ್ರಾರಂಭಿಸಿದಳು. 'ಹೋ, ನನ್ನ ಗಂಡನ್ನ ಅವರು ಹೊಡ್ದುಹಾಕ್ಬಿಟ್ರು.'

ಬಿಷ್ಟುಪದನಿಗೆ ಸ್ವಲ್ಪ ಸಂಕೋಚವಾಯಿತು. ಅವಳ ತಲೆಕೂದಲಿನ ಮೇಲೆ ಮೃದುವಾಗಿ ಕೈಆಡಿಸುತ್ತಾ ಅವಳಿಗೆ ಧೈರ್ಯ ತುಂಬಿದ.

"ಅಳ್ಬೇಡ, ಹೆಣ್ಣೇ ಅಳ್ಬೇಡ. ಏನು ಅನಾಹುತ ಆಗ್ಬೇಕಾಗಿತ್ತೋ ಆಗ್ಹೋಗಿದೆ."

ನಿಶಿಯ ದುಃಖ ಸ್ವಲ್ಪ ಶಮನಗೊಂಡ ನಂತರ ಬಿಷ್ಟುಪದ ಪ್ರಶ್ನಿಸಿದ. "ನಿಂಗೆಷ್ಟು ಮಕ್ಕಳು ?"

ಸ್ಪಷ್ಟ ಸ್ವರದಲ್ಲಿ ನಿಶಿ ನುಡಿದಳು "ಇಲ್ಲ."

"ಒಳ್ಳೆಯದು."

ನಿಶಿ ಸುಮ್ಮನಿದ್ದಳು.

ಬಿಷ್ಟುಪದ ಪುನಃ ಪ್ರಶ್ನಿಸಿದ "ಈ ಪ್ರಪಂಚದಲ್ಲಿ ಇನ್ನು ಯಾರಿದ್ದಾರೆ. ನಿನ್ನ ಜೊತೆಯಲ್ಲಿ ?"

"ಮುದಿ ಅತ್ತೆ, ದಿನವೆಲ್ಲಾ ಬಾಯಿತೆರೆದು ಬಿದ್ದಿರ್ತಾಳೆ. ಮಹಾ ಹಸಿವು ಮುದ್ಕಿಗೆ. ಬೆಟ್ಟದಂಥ ಮಗನ್ನ ನುಂಗಿಕೊಂಡ್ಳು. ಆದ್ರೂ ಅವಳ ಹಸಿವು ಹಿಂಗಿಲ್ಲ. ಅವಳ ಹಸಿವು ಹಿಂಗಿಸೋದ್ರಲ್ಲೇ ನಾನು ಒಂದಿನ ಇಲ್ಲವಾಗ್ತೀನಿ."

"ಜಮೀನು ಗಿಮೀನು ಏನಾದ್ರೂ ಇದ್ಯೆ ?"

"ಇದ್ದಿದ್ರೆ ನಾನೇಕೆ ಸೊಪ್ಪು ಸದೆ ಆರಿಸ್ಕೊಂಡು ಮೈದಾನ ಸುತ್ಬೇಕಾಗಿತ್ತು. ?"

ಇಬ್ಬರು ಹುಡುಕಲು ಪ್ರಾರಂಭಿಸಿದರು. ಹುಡುಕುತ್ತಲೇ ನಡೆದರು. ಮಾತೃ ರೂಪದ ಆ ಮೈದಾನ ಇಂದೇಕೊ ಬಹಳ ಕೃಪಣವಾಗಿತ್ತು. ನಿರ್ದಯಿಯಾಗಿತ್ತು. ನಾಲ್ಕು ನೆಲದ ಆಮೆಯ ನಂತರ ಇಲ್ಲಿಯವರೆಗೆ ಐದು ಬಳ್ಳಿಗಳು ಸಿಕ್ಕಿದ್ದವು.

ಇದರ ಅರ್ಧ ಪಾಲು ಯಾರಿಗೂ ಉಪಯೋಗ ಆಗದು. ಥಂಡಿ ಸಂಜೆ ತನ್ನ ಬಣ್ಣವನ್ನು ಮತ್ತಷ್ಟು ಬದಲಾಯಿಸಿತು. ಬಿಸಿಲು ಕೊಂಚವೂ ಇರಲಿಲ್ಲ. ಪಶ್ಚಿಮ ದಿಕ್ಕಿನಲ್ಲಿ ಮರಗಳ ಮರೆಯಲ್ಲಿ ಸೂರ್ಯನು ಯಾವಾಗಲೊ ಮುಳುಗು ಹಾಕಿದ್ದು, ಬಿಷ್ಟುಪದ ಹಾಗೂ ನಿಶಿಗೆ ಗೊತ್ತಾಗೇ ಇರಲಿಲ್ಲ. ಬಹಳ ತ್ವರಿತಗತಿಯಿಂದ ನಾಲ್ಕೂ ಕಡೆ ಬೆಳಕು ತೆಳುವಾಗುತ್ತಲಿತ್ತು.

ಬೆಳಗ್ಗೆಯಿಂದಲೂ ಇಂದು ಆಕಾಶದಲ್ಲಿ ನಾಲ್ಕೂ ಕಡೆ ಮೋಡದ ತುಣುಕುಗಳು ತೇಲುತ್ತಿದ್ದವು. ಹಸಿಹಸಿ ಮಳೆಯೂ ಸುರಿಯತೊಡಗಿತ್ತು. ಉತ್ತರದ ಕಡೆಯಿಂದ ಕಿವಿಯನ್ನು ತಣ್ಣಗಾಗಿಸುವ ಥಂಡಿ ಗಾಳಿ ಮನುಷ್ಯನ ಮಾಂಸಖಂಡವನ್ನೇ ಸೀಳುವಂತೆ ಬೀಸುತ್ತಿತ್ತು. ಚಳಿ ಹಾಗೂ ಹುಲ್ಲು ತುಂಬಿದ ಮೈದಾನದಲ್ಲಿ ಮಂಜು ಸಂಗ್ರಹವಾಗುತ್ತಿತ್ತು.

ಬಲಬದಿಯಲ್ಲಿ ನಿಶಿ ನುಡಿದಳು "ಇಂದು ಬಹಳ ಚಳಿ, ಅಲ್ಲವೇ ?" ಅನುಮಾನಿಸಿ ಬಿಷ್ಟುಪದ ನುಡಿದ "ಹೌದು, ಹೌದು."

"ಪುನಃ ಮಳೆ ಪ್ರಾರಂಭವಾಯ್ತು."

"ಹೌದು"

ಬಿಷ್ಟುಪದ ನಿಶಿಯ ಮಾತಿಗೆ ಪ್ರತ್ಯುತ್ತರವನ್ನೇನೊ ನೀಡುತ್ತಿದ್ದ. ಆದರೆ ಮನಸ್ಸು ಮತ್ತೇನನ್ನೋ ಯೋಚಿಸುತ್ತಿತ್ತು. ನನ್ನ ಭಾಗಕ್ಕೆ ಎರಡು ಆಮೆ ಹಾಗೂ ಎರಡೂವರೆ ಬಳ್ಳಿ ಮಾತ್ರ ಸಿಗುತ್ತದೆ. ಇದನ್ನು ತೆಗೆದುಕೊಂಡು ಮನೆಗೆ ಹೋಗಿ ಯಾರ ಬಾಯಿಗೆ ಹಾಕಲಿ ?

ಬಿಷ್ಟುಪದ ನುಡಿದ "ಇನ್ನೂ ಸ್ವಲ್ಪ ಏನಾದರೂ ಬೇಕು ನಿಶಿ. ನಮ್ಮನೆಯಲ್ಲಿ ತಿನ್ನುವ ಐದು ಹೊಟ್ಟೆಗಳಿವೆ."

ನಿಶಿ ನುಡಿದಳು. "ಸರಿಯಾಗೇ ನೀನು ಹೇಳುತ್ತಿದ್ದಿ. ಆದರೆ ಸಂಜೆ ಮುಳುಗಿಬಿಟ್ಟಿದೆ. ಮಳೆಯೂ ಹನಿಯತೊಡಗಿದೆ. ಇನ್ನು ಏನು ಸಿಗಲು ಸಾಧ್ಯ"

ನಿಶಿಯ ಸ್ವರದಲ್ಲಿ ಸಂಶಯ ತುಂಬಿತ್ತು.

"ನೋಡ್ತೇನೆ" ಹೇಳುತ್ತಿದ್ದಂತೆ ಬಿಷ್ಟುಪದನ ಕಣ್ಣಲ್ಲಿ ಹೊಳಪು ಮೂಡಿತು. ಎದುರಿಗೆ ಬೆರಳು ತೋರಿಸುತ್ತಾ ಉತ್ತೇಜಿತನಾಗಿ ನುಡಿದ "ಅದೇನು ನೋಡ್ತಾ."

ನಿಶಿ ಅತ್ತ ದೃಷ್ಟಿಹರಿಸಿ ನುಡಿದಳು "ಹಂದಿ ಹಾಗೇ ಕಾಣ್ಸುತ್ತೆ."

"ಹೌದು, ಸರಿಯಾಗೇ ಹೇಳ್ತಾ ಇದ್ದಿ."

"ಅದು ಇಲ್ಲಿ ಏನು ಮಾಡ್ತಿದೆ ?"

ಬಿಷ್ಟುಪದ ದಿಟ್ಟಿಸಿ ನೋಡಿ ನುಡಿದ "ನೆಲ ಅಗಿಯುತ್ತಿದೆ."

ನಿಶಿ ನುಡಿದಳು "ಹಂದಿ ನೆಲ ಅಗಿಯುತ್ತಿದೆ. ಅಂದರೆ ಅಲ್ಲಿ ಏನೋ ಇದ್ದೇ ಇರಬೇಕು. ಅಲ್ಲಿ ನೆಲದಲ್ಲಿ ಏನೂ ಇಲ್ಲದಿದ್ದರೆ ಹಂದಿ ಹಾಗೆಲ್ಲ ನೆಲ ತೋಡಲ್ಲ." ಬಿಷ್ಟುಪದ ನುಡಿದ "ಹೂಂ, ನಡಿ ಹೋಗೇ ನೋಡೋಣ." ಹೇಳುತ್ತಿದ್ದಂತೆ ಆತನ ಮನಸ್ಸಿನಲ್ಲಿ ಮಿಂಚಿನಂತೆ ಒಂದು ವಿಷಯ ಪುಟಿಯಿತು. ಏನೂ ಸಿಗದೆ ಹೋದರೆ ಬಿಷ್ಟುಪದ ಈ ಹಂದಿಯನ್ನೆ ಹೊಡೆದು ಹಾಕುವನು. ಇದರ ತೂಕ ಕೊನೆಯಪಕ್ಷ ಒಂದು ಮಣವಾದರೂ ಆದೀತು. ಅರ್ಧ ಭಾಗವನ್ನು ನಿಶಿಬಾಲೆಗೆ ಕೊಟ್ಟರೂ ಉಳಿದ ಅರ್ಧಭಾಗವೇ ಮನೆಯ ಐದು ಜನಕ್ಕೆ ನಾಲ್ಕು ದಿನಗಳಿಗಾದರೂ ಒಳ್ಳೆಯ ಆಹಾರ ಆದೀತು. ಅನಂತರದ ವಿಷಯ ಆನಂತರ ಯೋಚಿಸಿದರಾಯಿತು.

ಮನದ ವಿಷಯವನ್ನು ನಿಶಿಗೆ ಹೇಳಿದಾಗ ಅವಳು ಭೀತಗೊಂಡಳು. ನುಡಿದಳು, "ನಿಮ್ಮ ಮಾತೇನೋ ಚೆನ್ನಾಗಿದೆ ಆದರೆ..."

"ಆದರೆ ಮತ್ತೇನು ?"

"ಇಷ್ಟು ದೊಡ್ಡ ಪ್ರಾಣಿಯ ಜೊತೆ ಹೇಗೆ ಹೊಡೆದಾಡುವೆ ? ಮೇಲಿಂದ ಅದಕ್ಕೆ ಕೊಂಬು ಬೇರೆ ಇದ್ದರೆ ನಿನ್ನ ಗತಿ ಪೂರೈಸಿದಂತೆಯೇ"

ಬಿಷ್ಟುಪದ ನುಡಿದ "ನನ್ನ ಬಳಿ ಕೊಡಲಿ, ಕಠಾರಿ ಎಲ್ಲಾ ಇವೆ."

ನಿಶಿ ನುಡಿದಳು. "ಕೊಡಲಿ, ಕಠಾರಿಯಿಂದ ನೀನು ಈ ಯಮದೂತನನ್ನು ಘಾಯ ಕೂಡಗೊಳಿಸಲಾರೆ."

ಬಿಷ್ಟುಪದ ಇದೊಂದನ್ನು ಕೇಳಲು, ಈ ಬಗ್ಗೆ ಯೋಚಿಸಲು ಸಿದ್ಧನಿರಲಿಲ್ಲ. ನುಡಿದ "ಘಾಯಗೊಳಿಸದೆ ಇದ್ದರೂ ಸರಿ. ಪ್ರಯತ್ನವನ್ನಂತೂ ಮಾಡ್ತೀನಿ."

ನಿಶಿಗೆ ಮುಂದೆ ಯೋಚಿಸಲು ಬಿಡದೆ ಆತ ಧಾವಿಸಿದ. ನಿಶಿ ಮತ್ತೇನು ಮಾಡಲು ಶಕ್ಯವಿತ್ತು ? ಆಕೆ ಬಿಷ್ಟುಪದನನ್ನು ಹಿಂಬಾಲಿಸಿದಳು.

ಹತ್ತಿರ ಹೋಗಿ ಬಿಷ್ಟುಪದ ನೋಡಿದ, ಅದಕ್ಕೆ ಕೊಂಬುಗಳಿರಲಿಲ್ಲ.

ಅದೊಂದು ಕಾಡುಹಂದಿ. ಮಣ್ಣನ್ನು ಅಗೆದು ಅಗೆದು ಆಗಲೇ ಭಾರಿಗುಂಡಿ ತೋಡಿತ್ತು. ಹಳ್ಳದಲ್ಲಿ ದೃಷ್ಟಿ ಹರಿದೊಡನೆ ಆತನ ಕಣ್ಣಲ್ಲಿ ಹೊಳಪು ಮೂಡಿತು. ನೆಲದಲ್ಲಿ ಹೂತಿದ್ದ ಒಂದು ಭಾರಿ ಕಾಡು ಆಲೂಗಡ್ಡೆಯ ಸ್ವಲ್ಪ ಭಾಗ ಹೊರಗೆ ಕಾಣುತ್ತಿತ್ತು.

ಇದಕ್ಕಾಗಿಯೇ ಅದು ನೆಲವನ್ನು ಅಗಿಯುತ್ತಿದೆ ಎಂಬುದು ಅರ್ಥವಾಗಿ ಹೋಯಿತು.

ಬಿಷ್ಟುಪದ ಮನದಲ್ಲಿ ಯೋಚಿಸಿದ, ಈ ಆಲೂಗಡ್ಡೆ ಕೊನೆಯಪಕ್ಷ ಹತ್ತು ಸೇರು ತೂಗುತ್ತದೆ. ಇದೇನು ಕಡಿಮೆಯಲ್ಲ. ಈಗ ಮನದಲ್ಲಿ ನಿರ್ಧರಿಸಿದ. ಆ ಕಾಡು ಪ್ರಾಣಿಯ ಜೊತೆ ಹೋರಾಡಬೇಕಾದ ಪ್ರಮೇಯವೇನೂ ಬಾರದು. ಅದನ್ನು ಓಡಿಸಿ ಆಲೂಗಡ್ಡೆಯನ್ನು ಹೊಡೆದರಾಯಿತು.

ಹಿಂದೆ ಆಶೆಯಿಂದ ನಿಶಿ ನುಡಿದಳು. "ಎಷ್ಟು ದೊಡ್ಡ ಆಲೂಗಡ್ಡೆ. ನೋಡಿದೆಯಾ ?"

ಬಿಷ್ಟುಪದ ನುಡಿದ. "ಹೂಂ, ನೋಡ್ತಾ ಇದ್ದೇನೆ."

ಆತ ತನ್ನ ಮನದಲ್ಲೇ ಮಣ್ಣು ಅಗೆಯಲು ಪ್ರಾರಂಭಿಸಿದ್ದ. ಹಂದಿ ಮನುಷ್ಯರ ಸ್ವರ ಕೇಳಿಸಿಕೊಂಡಿದ್ದೇ ತಡ ಅದು ಬೆದರಿ ಮುಖ ಎತ್ತಿತು. ಅದರ ಚಿಕ್ಕ ಚಿಕ್ಕ ಮಸಕು ಬಣ್ಣದ ಕಣ್ಣುಗಳು ಕೆಂಪಗಿದ್ದುವು. ಮುಖ ಮೊದಲ್ಗೊಂಡು ಸಂಪೂರ್ಣ ಶರೀರ ಮಣ್ಣಿನ ಲೇಪ ಪಡೆದಿತ್ತು.

ಅದನ್ನು ಓಡಿಸಲು ಬಿಷ್ಟುಪದ ಹೇ...ಹೇ....ಓಡು...ಓಡು ಕೂಗಿದ, ಆದರೆ ಅದು ಅಲುಗಾಡಲೂ ಇಲ್ಲ. ಅದು ಬಿಷ್ಟುಪದನನ್ನು ದುರುಗುಟ್ಟಿಕೊಂಡು ನೋಡಿತು. ಅದರ ಚಿಕ್ಕ ಚಿಕ್ಕ ಕಣ್ಣುಗಳಲ್ಲಿ ಸಂದೇಹ ತುಂಬಿತ್ತು.

ಬಿಷ್ಟುಪದ ಮತ್ತೆ ಕೂಗಿದ. ಜೊತೆ ಜೊತೆಯಲ್ಲಿ ನಿಶಿ ಸಹ ಕೂಗಿದಳು. ಆದರೆ ನಿಶ್ಚಲವಾಗಿ ನಿಂತೇ ಇತ್ತು.

ಬಿಷ್ಟುಪದ ನುಡಿದ "ಖಚಡಾ ಮುಂಡೇದು. ಇಲ್ಲಿಂದ ಅದು ಅಲುಗೋ ಹಾಗೇ ಕಾಣಿಸ್ತಿಲ್ಲ."

ನಿಶಿ ನುಡಿದಳು. "ನಾವು ಆಲೂ ಕಿತ್ಕೊಂತೀವಿ ಅಂತಾ ಅದಕ್ಕೆ ಗೊತ್ತಾಗ್ಬಿಟ್ಟಿದೆ."

"ಇರಬಹುದ್ದು." ಬಿಷ್ಟುಪದ ಹೇಳಲು ಪ್ರಾರಂಭಿಸಿದ. "ಹೇ ಹುಡುಗಿ, ಗಲಾಟೆ ಮಾಡೋದ್ರಿಂದ ಏನೂ ಪ್ರಯೋಜನವಿಲ್ಲ. ಅದರ ದೇಹ ಕೊಡಲಿ ಏಟು ತಿನ್ನಲು ತವಕಿಸ್ತಾ ಇದೆ." ಇಷ್ಟು ಹೇಳುತ್ತಿದ್ದಂತೆಯೇ ಆತ ಭುಜದ ಮೇಲಿದ್ದ ಕೊಡಲಿ ತೆಗೆದು ಹಂದಿಯ ಕತ್ತಿನ ಮೇಲೆ ಒಗೆದ.

ಆದರೆ ಏಟು ಸರಿಯಾದ ಸ್ಥಳದಲ್ಲಿ ಬೀಳಲಿಲ್ಲ. ಕೊಡಲಿ ಕತ್ತಿನ ಮೇಲೆ ಒಂದು ಸಣ್ಣ ಘಾಯ ಮಾಡಿ ಜಾರಿ ಬಿದ್ದುಹೋಯಿತು. ಕ್ರೂರದೃಷ್ಟಿಯನ್ನು ಬಿಷ್ಟುಪದನತ್ತ

ಬೀರಿ ಅದು ಇದ್ದಕ್ಕಿದ್ದಂತೆಯೇ ಆತನ ಮೇಲೆರಗಿತು.

ಅದು ಇದ್ದಕ್ಕಿದ್ದಂತೆಯೇ ತನ್ನನ್ನು ಕೆಡವುತ್ತದೆ ಎಂದು ಬಿಷ್ಟುಪದ ಯೋಚಿಸಿಯೇ ಇರಲಿಲ್ಲ. ಜೀವವನ್ನು ಕೈಲಿ ಹಿಡಿದು ಇಬ್ಬರೂ ಓಡತೊಡಗಿದರು.

ಇವರನ್ನು ಸಾಕಷ್ಟು ದೂರ ಓಡಿಸಿದ ನಂತರ ಹಂದಿ ಪುನಃ ಹಿಂತಿರುಗಿ ಆಲೂಗೆಡ್ಡೆಯ ಬಳಿ ಬಂತು. ಬಿಷ್ಟುಪದ ಕೂಡ ಧೈರ್ಯ ಕುಂದಿರಲಿಲ್ಲ. ಆದರೂ ಪುನಃ ಹಿಂತಿರುಗಿದೊಡನೆಯೇ ಬಿಷ್ಟುಪದ ಪುನಃ ಅದರ ಮೇಲೆ ಕೊಡಲಿ ಎಸೆದ. ಈ ಸಾರಿ ಅದರ ಬೆನ್ನಿನ ಬಹಳಷ್ಟು ಮಾಂಸ ಕಿತ್ತುಬಂತು. ಘಾಯಗೊಂಡ ಪ್ರಾಣಿ ಪುನಃ ಬಿಷ್ಟುಪದನನ್ನು ಕೆಡವಿತು.

ಈ ಸಾರಿ ಅದು ಬಿಷ್ಟುಪದನನ್ನು ಸಾಕಷ್ಟು ದೂರ ಓಡಿಸಿತು. ಸ್ವಲ್ಪ ಹೊತ್ತಿನ ನಂತರ ಬಿಷ್ಟುಪದ ಅದರ ಬಳಿಗೆ ಬಂದು ಅದನ್ನು ಮತ್ತೆ ಹೊಡೆದ. ಇದೇ ರೀತಿ ಕೆಲ ನಿಮಿಷ ಯುದ್ಧ ನಡೆಯಿತು.

ಮತ್ತೊಂದು ಕಡೆ ಥಂಡಿಯ ಸಂಜೆ ಗಾಢವಾಗತೊಡಗಿತು. ಗಿಡಮರಗಳ ನೆರಳು ಉದ್ದವಾಗತೊಡಗಿತ್ತು. ಕೆಲನಿಮಿಷಗಳ ಹಿಂದಿನ ತುಂತುರು ಹನಿ ಜೋರು ಮಳೆಯಾಗತೊಡಗಿತ್ತು. ಉತ್ತರದ ಗಾಳಿ ಬೀಸುತ್ತಲೇ ಇತ್ತು.

ನಿಶಿಗೆ ಪೂರ್ಣ ನಿರಾಶೆಯಾಗಿತ್ತು. ಅವಳು ನುಡಿದಳು "ಹೋಗಲಿ ಬಿಡಪ್ಪಾ, ಆ ಯಮರಾಜನಿಂದಲೂ ಆಲೂ ನೀನು ಕಸಿಯಲಾರೆ."

ಆದರೆ ಬಿಷ್ಟುಪದ ಕೂಡ ಪಣ ತೊಟ್ಟಿದ್ದ. ಆತ ನುಡಿದ "ಎಂದಿಗೂ ಇಲ್ಲ." ಆಲೂ ಕಿತ್ತುಕೊಳ್ಳದೆ ನಾನು ಇಲ್ಲಿಂದ ಅಲುಗೋದೇ ಇಲ್ಲ. ನಾನು ಆಲೂನೂ ಕಿತ್ಕೊಂತೀನಿ. ಆ ಮರಿನೂ ಕೊಂದ್ಹಾಕ್ತೀನಿ. ನನ್ನ ಬುದ್ಧಿಗೆ ಒಂದು ಮಾತು ಹೊಳೀತಿದೆ. ಆಗ ಅದರ ಮುಂದೆ ನಾವಿಬ್ಬರೂ ಹೋಗುವುದಿಲ್ಲ. ನಾನು ಅದರ ಎದುರಿಗೆ ನಿಲ್ಲುತ್ತೇನೆ. ನೀನು ಆದರ ಹಿಂದುಗಡೆ. ಒಂದು ವೇಳೆ ಅದು ನನ್ನ ಮೇಲೆರಗಿದರೆ ನೀನು ಹಿಂದಿನಿಂದ ಹೊಡೆ. ನಿನ್ನ ಮೇಲೆ ಬಿದ್ದರೆ ನಾನು ಅದನ್ನು ಕತ್ತರಿಸಿ ಹಾಕುತ್ತೇನೆ."

ಯೋಜನೆಯ ರೀತ್ಯಾ ಬಿಷ್ಟುಪದ ಅದರ ಎದುರಿಗೆ ಹೋಗಿ ನಿಂತ. ನಿಶಿ ಅದರ ಹಿಂದುಗಡೆ ನಿಂತಳು.

ಆ ಹಂದಿ ಏನು ತಿಳಿಯಿತೋ, ಏನು ಯೋಚಿಸಿತೋ, ಯಾರಿಗೆ ಗೊತ್ತು. ಇಷ್ಟು ಕಷ್ಟಪಟ್ಟು ಸಿಕ್ಕಿರುವ ಆಲೂಗಡ್ಡೆಗೆ ಪಾಲುದಾರರು ಬಂದರಲ್ಲಾ ಎಂದು ಅದು ಯೋಚಿಸಿದ್ದಿರಬಹುದು.

ಬಿಷ್ಟುಪದ ಅದನ್ನು ಹೊಡೆಯುವ ಮೊದಲೇ ಅದು ಕತ್ತನ್ನು ತಗ್ಗಿಸಿ ಆತನತ್ತ ಓಡಿತು. ಈ ಸಾರಿ ಅದು ಎಷ್ಟು ಜೋರಾಗಿ ಓಡಿತೆಂದರೆ ಬಿಷ್ಟುಪದನಿಗೆ ತಪ್ಪಿಸಿಕೊಳ್ಳಲು ಸಮಯ ದೊರೆಯದಾಗಿತ್ತು. ಬೆಳಗ್ಗೆಯಿಂದ ಹೊಟ್ಟೆಗೆ ಒಂದು ಅಗಳೂ ಬಿದ್ದಿರಲಿಲ್ಲ. ಶರೀರದಲ್ಲಿ ಕಿಂಚಿತ್ತೂ ಶಕ್ತಿ ಇರಲಿಲ್ಲ. ಅದು ಗುದ್ದಿದಾಗ ಬಿಷ್ಟುಪದ ದೂರ ಎಗರಿಬಿದ್ದ, ಆ ತಕ್ಷಣ ಅವನಿಗೆ ಹಂದಿ ತನ್ನ ಹಲ್ಲನ್ನು ಶರೀರದೊಳಗೆ ನೂಕುತ್ತಿದೆ ಅನಿಸಿತು.

ಬಿಷ್ಣುಪದ ಅರಚಿದ "ಅಯ್ಯೋ ನನ್ನ ಕೊಂದು ಹಾಕ್ತು, ಕೊಂದು ಹಾಕ್ತು...ಉಳಿಸಿ, ನನ್ನ ಉಳಿಸಿ" ಹೇಳುತ್ತಾ ಅವನ ಕೈ ಸೊಂಟದತ್ತ ಹೋಯಿತು. ಹರಿತವಾದ ಕಠಾರಿಯನ್ನು ತೆಗೆದು ತನ್ನೆಲ್ಲ ಶಕ್ತಿಯನ್ನೂ ಬಿಟ್ಟು ಅದನ್ನು ತಿವಿದುಬಿಟ್ಟ. ತಕ್ಷಣವೇ ರಕ್ತ ಕಾರಂಜಿ ಚಿಮ್ಮಿತು. ಹಿಂದಿನಿಂದ ನಿಶಿ ಅದನ್ನು ಹಲವು ಬಾರಿ ಹೊಡೆದಳು. ಏಟುತಿಂದು ಆಹತಗೊಂಡಿದ್ದ ಆ ಪ್ರಾಣಿ ಈಗ ಬಿಷ್ಣುಪದನನ್ನು ಬಿಟ್ಟು ಹಿಂದೆ ತಿರುಗಿ ನಿಶಿಯ ಮೇಲೆ ಎರಗಿತು. ಅವಳು ತನ್ನನ್ನು ಸಂರಕ್ಷಿಸಿಕೊಳ್ಳದಾದಳು. ಜಾರಿ ಬಿದ್ದುಬಿಟ್ಟಳು. ಹಂದಿ ಹಲ್ಲಿನಿಂದ ಅವಳ ಶರೀರವನ್ನು ಸೀಳಿತು. ಅದೇ ಅವಸ್ಥೆಯಲ್ಲೇ ಅವಳು ಬಾರಿಬಾರಿಗೆ ಅದನ್ನು ಹೊಡೆಯುತ್ತಿದ್ದಳು.

ಬಿಷ್ಣುಪದನ ಸೊಂಟವೂ ಸಾಕಷ್ಟು ಗಾಯಗೊಂಡಿತ್ತು. ರಕ್ತವೂ ಹರಿಯುತ್ತಿತ್ತು. ಆದರೆ ಆತ ಇದರತ್ತ ಧ್ಯಾನ ಹರಿಸಲಿಲ್ಲ. ಹುಚ್ಚನಂತೆ ಓಡಿ ಕೊಡಲಿಯಿಂದ ಹಂದಿಯನ್ನು ಹೊಡೆದ. ನಿಶಿಯನ್ನು ಬಿಟ್ಟು ಅದು ಪುನಃ ಬಿಷ್ಣುಪದನತ್ತ ಓಡಿತು. ನೆಲದ ಮೇಲಿಂದ ಎದ್ದ ನಿಶಿ ಅದರ ಮೇಲೆ ಮತ್ತೆ ಆಕ್ರಮಣ ಮಾಡಿದಳು.

ಏಟುತಿಂದ ಹಂದಿ ಒಮ್ಮೆ ಬಿಷ್ಣುಪದನತ್ತ ಮತ್ತೊಮ್ಮೆ ನಿಶಿಯ ಕಡೆ ಓಡುತ್ತಿತ್ತು. ನೋಡ ನೋಡುತ್ತಿದ್ದಂತೆ ಥಂಡಿ ಸಂಜೆಯ ಆ ಮಬ್ಬು ಬೆಳಕಿನಲ್ಲಿ ಆ ಜನರಹಿತ ಮೈದಾನ ರಣಭೂಮಿಯಾಗಿ ಬದಲಾಯಿಸಿತು. ಒಂದು ಚೂರು ತರಕಾರಿಗಾಗಿ ಗಂಡುಹೆಣ್ಣು ಹಿಂಸಕ ಪ್ರಾಣಿಯೊಡನೆ ಜೀವದ ಹಂಗುತೊರೆದು ಹೋರಾಡುತ್ತಿದ್ದರು.

ಬಹಳ ಹೊತ್ತಿನ ಹೋರಾಟದಿಂದ ಕೊಡಲಿಯ ಪೆಟ್ಟು ತಿಂದು ತತ್ತರಿಸಿ ಹಂದಿ ಎದೆಬಿರಿದು ಹೋಗುವಂತೆ ಅರಚಿತು. ಅಸಹನೀಯ ನೋವಿನಿಂದ ಸ್ವಲ್ಪ ಹೊತ್ತು ನೆಲದ ಮೇಲೆ ಹೊರಳಾಡುತ್ತಿತ್ತು. ಅನಂತರ ಬಾಣದಂತೆ ಪಶ್ಚಿಮದ ಕಾಡಿನತ್ತ ಓಡಿ ಕಣ್ಮರೆಯಾಯಿತು.

ಅದು ಓಡಿಹೋದ ಮೇಲೆ ಬಿಷ್ಣುಪದ ಹಾಗೂ ನಿಶಿ ಬಹಳ ಹೊತ್ತು ಜ್ಞಾನವಿಲ್ಲದೆ ಅಲ್ಲೆ ಬಿದ್ದಿದ್ದರು. ಅನಂತರ ಏದುಬ್ಬಸಪಡುತ್ತಾ ಅವರಿಬ್ಬರೂ ಎದ್ದು ಆಲೂಗಡ್ಡೆಯನ್ನು ಅಗೆದು ಹೊರತೆಗೆದರು.

ಆಲೂ, ಆಮೆ ಮತ್ತು ಬಳ್ಳಿ ಒಂದು ಕಡೆ ಕಲೆ ಹಾಕಿ ತಮ್ಮ ತಮ್ಮ ಭಾಗಗಳನ್ನು ಹಂಚಿಕೊಳ್ಳುವುದರಲ್ಲಿದ್ದರು. ಅಷ್ಟರಲ್ಲಿ ಭಾರಿ ಮಳೆ ಬಂತು. ಯುದ್ಧ ಆಗುತ್ತಿದ್ದಷ್ಟು ಕಾಲವೂ ಇವು ಯಾವುದೂ ಅವರಿಗೆ ಗೊತ್ತೇ ಆಗಿರಲಿಲ್ಲ. ಹುರುಪು ಹಾಗೂ ಹಿಂಸೆಯ ಭಾವ ತುಂಬಿದ ಮನಸ್ಸು ಮತ್ತು ಶರೀರಕ್ಕೆ ಮತ್ತೇನೂ ಭಾವನೆಯ ಅನುಭವವೂ ಆಗುತ್ತಿರಲಿಲ್ಲ. ಈಗ ಬಿಷ್ಣುಪದನಿಗೆ ಭಾರಿ ಚಳಿಯಾಗುತ್ತಿರುವುದು ಅನುಭವವಾಯಿತು. ಮೂಳೆಗಳು ಚಳಿಯಿಂದ ನಡುಗುತ್ತಿದ್ದವು. ಹಲ್ಲಿನ ಮೇಲೆ ಹಲ್ಲುಗಳು ಬಡಿಯುತ್ತಿದ್ದುವು. ಬಿಷ್ಣುಪದ ನುಡಿದ "ಹಾಳು ಮಳೆ ಪ್ರಾರಂಭವಾಗಿ ಬಿಡ್ತು."

ನಿಶಿಯೂ ನಡಗುತ್ತಾ ನುಡಿದಳು "ಇಲ್ಲೆ ನಿಂತಿದ್ದರೆ ನಾವು ನಿಜವಾಗಿ ಸತ್ತು

ಹೋಗುತ್ತೇವೆ. ಏನಾದರೂ ಉಪಾಯ ಯೋಚಿಸು.''

''ಎಲ್ಲಿ ಹೋಗೋಣ ನೀನೇ ಹೇಳು.''

ಸ್ವಲ್ಪ ಯೋಚಿಸಿ ನುಡಿದಳು ''ಪಶ್ಚಿಮದ ಕಡೆ ಒಂದು ಸ್ಮಶಾನವಿದೆ. ಅಲ್ಲೊಂದು ಕೊಠಡಿ ಇದೆ. ನಡೀ ಅಲ್ಲಿಗೆ ಹೋಗೋಣ.''

ಬಿಷ್ಟುಪದನಿಗೂ ಜ್ಞಾಪಕ ಬಂತು. ನುಡಿದ ''ಹಾ.ಹಾ.ಹೂಂ. ಅಲ್ಲಿಗೆ ನಡಿ.''

ಇಬ್ಬರೂ ಓಡುತ್ತಾ ಸ್ಮಶಾನದ ಆ ಗುಡಿಸಲಿನ ಹತ್ತಿರ ಬಂದರು. ಆ ಕೊಠಡಿ ಸ್ಮಶಾನಕ್ಕೆ ಬರುವ ಯಾತ್ರಿಕರಿಗಾಗಿ ನಿರ್ಮಿಸಿದುದಾಗಿತ್ತು.

ರಕ್ತವನ್ನು ಒರೆಸಿಕೊಂಡು ನಿಶಿ ಮತ್ತು ಬಿಷ್ಟುಪದ ಸ್ವಲ್ಪಹೊತ್ತು ಕುಳಿತು ಆಕಳಿಸ ಹತ್ತಿದರು. ಅನಂತರ ಬಿಷ್ಟುಪದ ನುಡಿದ. ''ಹೇ ಹುಡುಗಿ, ನಂಗೆ ತುಂಬಾ ಹಸಿವು ಆಗ್ತಾ ಇದೆ.''

ನಿಶಿ ಹೇಳಿದಳು ''ನಂಗೂ ಹಸಿವು ಆಗ್ತಾ ಇದೆ. ಬಾ ತಿಂಡಿಯನ್ನು ಹಂಚಿಕೊಳ್ಳೋಣ.''

ಅನಂತರ ನಿಶಿ ಕಾಡ ಗೆಣಸಿನ ಒಂದು ಚೂರು ಕತ್ತರಿಸಿದಳು. ಬಿಷ್ಟುಪದ ಆಮೆಯ ಕವಚವನ್ನು ಹರಿದು ಅದರ ಮಾಂಸವನ್ನು ಹೊರತೆಗೆದ. ಸ್ವಲ್ಪಹೊತ್ತಿನ ಮುಂಚೆ ಯಾವುದೊ ಹೆಣವನ್ನು ಸುಟ್ಟಿದ್ದರು. ಅಲ್ಲಿಂದಲೇ ಸ್ವಲ್ಪ ಬೆಂಕಿಯನ್ನು ತಂದು ಮಾಂಸ ಹಾಗೂ ಆಲೂವನ್ನು ಬೇಯಿಸಿ, ಇಬ್ಬರೂ ಉಂಡು ಜೋರಾಗಿ ಸಂತೋಷದಿಂದ ತೇಗಿದರು.

ಬಿಷ್ಟುಪದ ನುಡಿದ ''ಪೂರ್ತಿ ದಿನ ಕಳೆದುಹೋಯ್ತು. ಈಗ ಹೊಟ್ಟೆಗೆ ಏನೋ ಬೇಕು ಅನ್ಸುತ್ತೆ.''

ನಿಶಿ ನುಡಿದಳು ''ನಂಗೂ ಹಾಗೇನೆ ಅನ್ಸುತ್ತೆ.''

''ಊಟವಂತೂ ಆಯ್ತು. ಈಗೊಂದು ಬೀಡಿ ಸಿಕ್ಕಿದರೆ ?'' ಬಿಷ್ಟುಪದ ನುಡಿದ.

''ಹೌದು ನಂಗೂ ಪಾನ್ ಬಹಳ ಇಷ್ಟ. ಅದೊಂದು ಸಿಕ್ಕಿದರೆ ?''

ಇನ್ನೂ ಜೋರಾಗಿಯೇ ಮಳೆ ಸುರಿಯುತ್ತಿತ್ತು. ಆಕಾಶವನ್ನು ಸೀಳುತ್ತಾ ಮಿಂಚು ಹೊಳೆಯುತ್ತಿತ್ತು.

ನಿಶಿ ನುಡಿದಳು ''ಬಹುಶಃ ಈ ಮಳೆ ಇಂದು ಬಿಡೋ ಹಾಗೇ ಕಾಣಿಸಲಿಲ್ಲ.''

'ಇಂದಿನ ರಾತ್ರಿ ಇಲ್ಲೆ ಇರ್ಬೇಕಾಗಬಹ್ದು.'

''ಹೌದು ಹಾಗೆ ಕಾಣ್ಸುತ್ತೆ.'' ಬಿಷ್ಟುಪದ ತಲೆ ಅಲ್ಲಾಡಿಸಿದ.

''ಇಂದಿನ ರಾತ್ರಿ ಬಹುಶಃ ಇಲ್ಲೆ ಕಳೀಬೇಕಾಗುತ್ತೆ.''

''ಹೌದು.''

ಸ್ವಲ್ಪಹೊತ್ತಿನ ನಂತರ ಬಿಷ್ಟುಪದ ನುಡಿದ ''ಕುಳಿತಿದ್ರೆ ಏನೂ ಆಗಲ್ಲ. ನಾನಂತೂ ಮಲಗ್ಬಿಡ್ತೀನಿ.''

ನಿಶಿ ನುಡಿದಳು ''ನಾನು ಮಲಕ್ಕೊಳ್ತಾ ಇದೀನಿ.''

ಕೊಠಡಿಯ ಎರಡು ಕಡೆಗಳಲ್ಲೂ ಇಬ್ಬರು ಮಲಗಿದರು. ಇಬ್ಬರ ಮಧ್ಯೆ ಸಾಕಷ್ಟು ಜಾಗವಿತ್ತು.

ರಾತ್ರಿ ಇನ್ನೂ ಹೆಚ್ಚು ಗಾಢವಾದಂತೆ ಇದ್ದಕ್ಕಿದ್ದಂತೆಯೇ ನಿಶಿ ಕೂಗಿದಳು. "ಏ! ಮನುಷ್ಯ...."ರಾತ್ರಿಯಲ್ಲಿ ದೂರದ ಮೂಲೆಯೊಂದರಲ್ಲಿ ಬಿಷ್ಣುಪದ ನುಡಿದ "ಏನು ಮಾಡ್ತಾ ಇದ್ದಿ?"

"ನನ್ನ ಬಳಿ ಬಾ."

"ಏಕೆ?"

"ಥಂಡಿ ಬಾಳ ಜಾಸ್ತಿ. ಸ್ವಲ್ಪ ನನ್ನ ಬಾಹುಗಳಲ್ಲಿ ಬಂಧಿಸಿಟ್ಟುಕೋ."

ಈ ಕೆಟ್ಟ ಗಳಿಗೆ-ತುಂಬಿದ ರಾತ್ರಿಯಲ್ಲಿ ಒಂದು ಶರೀರದ ಬಿಸಿಯನ್ನು ಇನ್ನೊಂದು ಶರೀರ ಕಾಯಲು ನಿಶಿ ಮತ್ತು ಬಿಷ್ಣುಪದರು ಒಬ್ಬರನ್ನೊಬ್ಬರು ಅಪ್ಪಿ ನಿದ್ರಿಸಿದರು.

ಮಾರನೆ ದಿನ ಬೆಳಿಗ್ಗೆ ಆಮೆ ಮತ್ತು ಯುದ್ಧದಲ್ಲಿ ಗೆದ್ದ ಕಾಡು ಆಲೂಗಡ್ಡೆಯ ತಮ್ಮ ತಮ್ಮ ಪಾಲುಗಳನ್ನು ತೆಗೆದುಕೊಂಡು ನಿಶಿ ಉತ್ತರದ ಕಡೆ ಹೊರಟಳು; ಬಿಷ್ಣುಪದ ದಕ್ಷಿಣದ ಕಡೆ ನಡೆಯಹತ್ತಿದ.

# ನನ್ನನ್ನು ನೋಡಿ

*ಶೀರ್ಷೇಂದು ಮುಖೋಪಾಧ್ಯಾಯ*

ದಯವಿಟ್ಟು ನನ್ನ ಕಡೆಗೆ ಒಮ್ಮೆ ನೋಡಿ. ಇತ್ತ ನೋಡಿ. ನಾನು ಇಲ್ಲಿ ಇದ್ದೇನೆ. ಕೆಲವು ನಿಮಿಷಗಳ ಹಿಂದೆ ಅಡ್ಡಾದಿಡ್ಡಿ ಗುಂಪಿನಲ್ಲಿ ನುಗ್ಗಿ ಬಸ್ಸಿನ ಕಾಲುಮಣೆಯ ಮೇಲೆ ಹೇಗೊ ಕಾಲನಿಕ್ಕಿ ಅನಂತರ ಒಳಗೆ ಇಲಿಯಂತೆ ನುಸುಳಿ ಅಂತೂ ಇಷ್ಟು ದೂರ ಬಂದೆ. ಬಸ್ಸಿನ ಮೇಲ್ಛಾವಣಿಗೆ ಸೇರಿಸಿದ್ದ ದಂಡ ಸಾಕಷ್ಟು ಎತ್ತರದಲ್ಲಿತ್ತು. ನಾನು ಕುಳ್ಳ ಮನುಷ್ಯ. ಅಷ್ಟುದೂರ ನನ್ನ ಕೈಯೇ ತಲುಪುತ್ತಿರಲಿಲ್ಲ. ನಾನು ಆಸನದ ಹಿಂದಿನ ಭಾಗ ಹಿಡಿದು ನಿಂತುಕೊಂಡಿರುತ್ತಿದ್ದೆ. ಸ್ವಲ್ಪಹೊತ್ತಿನ ನಂತರ ನನ್ನನ್ನು ನಾನೇ ಸಡಿಲ ಮಾಡಿಕೊಳ್ಳುತ್ತಿದ್ದೆ. ಬಸ್ ತುಯ್ಯಲಾಡಿದಾಗ ನಾನೂ ಹೊಯ್ದಾಡುತ್ತಿದ್ದೆ. ಅಕ್ಕಪಕ್ಕದಲ್ಲಿ ನಿಂತಿರುವ ಜನಗಳ ಆಸರೆ ಪಡೆದು ಬೀಳುವುದನ್ನು ತಪ್ಪಿಸಿಕೊಳ್ಳುತ್ತಿದ್ದೆ. ಇದಕ್ಕಾಗಿ ನನ್ನ ಅಕ್ಕಪಕ್ಕ ನಿಂತ ಜನರು ನನ್ನ ಮೇಲೆ ಸಿಟ್ಟಾಗುತ್ತಿರಲಿಲ್ಲ. ಏತಕ್ಕೆಂದರೆ ನನ್ನ ತೂಕ ಬಹಳ ಕಡಿಮೆ ಇದ್ದು ನಾನು ಅವರ ಮೇಲೆ ಬಿದ್ದರೂ ನನ್ನ ತೂಕ ಅವರಿಗೆ ಅರಿವಾಗುತ್ತಿರಲಿಲ್ಲ. ಹಾ! ಈಗ ನಾನು ಬಸ್ಸಿನ ಹಿಂದಿನ ಆಸನವನ್ನು ಹಿಡಿದು ನಿಂತಿದ್ದೇನೆ. ನನ್ನ ಇಕ್ಕೆಡೆಯೂ ಪರ್ವತದಂತಹ ಜನರು ನಿಂತಿದ್ದಾರೆ. ಅವರು ನನ್ನನ್ನು ಹೇಗೆ ಸುತ್ತುವರಿದಿದ್ದಾರೆಂದರೆ ನಾನು ಬಹುಶಃ ಯಾರ ದೃಷ್ಟಿಗೂ ಬೀಳುತ್ತಲೇ ಇಲ್ಲ. ಅಥವಾ ಕಣ್ಣಿಗೆ ಬಿದ್ದರೂ ಯಾರೂ ನನ್ನತ್ತ ಗಮನ ಹರಿಸುತ್ತಿಲ್ಲ. ಇದೇ ಕಷ್ಟದ ವಿಷಯ. ಬಹಳಷ್ಟು ಜನ ನನ್ನನ್ನು ನೋಡುತ್ತಾರೆ, ಆದರೆ ಯಾರೂ ಗಮನ ಕೊಡುವುದಿಲ್ಲ. ಈಗ ನಾನು ಯಾರ ಹತ್ತಿರವೊ ನಿಂತಿದ್ದೇನೆ ಅಥವಾ ಯಾರ ಹಿಂದೆ ಮುಂದೆ ಇದ್ದೇನೆ ಅವರು ಬಹುಶಃ ನನ್ನನ್ನು ನೋಡುತ್ತಿರಬಹುದು. ಇರಿವಿನಿಂದಾಗಿ ಅವರಿಗೆ ಯಾವ ಲಾಭವಾಗಲಿ ನಷ್ಟವಾಗಲಿ ಆಗುವಂತಿಲ್ಲ ಎಂಬುದು ಅವರ ನಿರ್ಲಿಪ್ತ ನೋಟದಲ್ಲಿ ವ್ಯಕ್ತವಾಗುತ್ತಿದೆ. ನನ್ನ ಮುಖದಲ್ಲಿ ಗುರುತಿಸಬಹುದಾದ ಏನೂ ವಿಶೇಷ ಇಲ್ಲದಿರುವುದೇ ಬಹುಶಃ ಇದಕ್ಕೆ ಕಾರಣವಿರಬಹುದು. ಹೌದು ನನ್ನ ಎತ್ತರ ಕೇವಲ ಐದು ಅಡಿ ಎರಡು ಅಂಗುಲ. ನಾನು ತೆಳು ಮನುಷ್ಯನೇನೋ ಸರಿ. ಆದರೆ ದೃಷ್ಟಿ ತಾಗುವಷ್ಟಿಲ್ಲ. ನಾನೇನೊ ಕಪ್ಪು, ಆದರೆ ಹಿಂದೆ ತಿರುಗಿ ತಿರುಗಿ ನೋಡುವಷ್ಟಿಲ್ಲ. ನಲವತ್ತು ವರ್ಷಗಳ ನಂತರ ನನ್ನ ಕೂದಲು ಉದುರುತ್ತಿದೆ. ಆದರೆ ನಾನೇನು

ಬಕ್ಕತಲೆಯುವನಲ್ಲ. ಬಕ್ಕ ತಲೆಯುವರನ್ನು ಜನ ದಿಟ್ಟಿಸಿ ನೋಡುತ್ತಾರೆ.

ನನ್ನ ಮುಖವೂ ಅಷ್ಟೆ. ಅಷ್ಟೇನು ಸ್ಫುರದ್ರೂಪಿಯೂ ಅಲ್ಲ, ಕುರೂಪಿಯೂ ಅಲ್ಲ. ನನ್ನ ಮೂಗು ಚಪ್ಪಟೆಯಾದುದೂ ಅಲ್ಲ, ಚಿಕ್ಕದೂ ಅಲ್ಲ. ಕಣ್ಣು ದೊಡ್ಡದೂ ಅಲ್ಲ ಅಥವಾ ಗುಂಡಿಯಷ್ಟು ಚಿಕ್ಕದೂ ಅಲ್ಲ. ಅದಕ್ಕೇ ನಾನು ಹೇಳುತ್ತಿರುವುದು. ಈ ಗುಂಪಿನಲ್ಲಿ ನನ್ನನ್ನು ಯಾರಾದರೂ ನೋಡುತ್ತಿದ್ದಾರೆಯೋ ಅಂದರೆ ನಾನು ಹೇಳುತ್ತೇನೆ ಇಲ್ಲ. ಯಾರೂ ನೋಡುತ್ತಿಲ್ಲ, ನೋಡಿದರೂ ಯಾರೂ ದಿಟ್ಟಿಸುತ್ತಿಲ್ಲ. ಇದು ನನಗೆ ಅರಿವಿದೆ.

ಮದುವೆಯ ನಂತರ ಒಂದು ಮಜವಾದ ಘಟನೆ ಘಟಿಸಿತ್ತು. ಮದುವೆಯ ವಿಧಿನಿಯಮಗಳೆಲ್ಲ ಪೂರೈಸಿದ ಒಂದೆರಡು ದಿನಗಳ ನಂತರ ನನ್ನ ಪತ್ನಿಯೊಡನೆ ಬಜಾರಿಗೆ ಹೋಗಿದ್ದೆ. ನಾಲ್ಕೈದು ದಿನಗಳ ನಂತರ ಅತ್ತೆಮನೆಗೆ ಹೋಗುವುದಿತ್ತು. ಅದಕ್ಕೆ ಬಟ್ಟೆಬರೆಗಳನ್ನು ಕೊಳ್ಳುವುದಿತ್ತು. ನಾವು ಸಾಮಾನ್ಯವಾಗಿ ಹತ್ತಿರದ ಬೀದಿಯಲ್ಲೆ ಕಡಿಮೆ ಬೆಲೆಯ ಬಟ್ಟೆಬರೆಗಳನ್ನು ಕೊಂಡುಕೊಳ್ಳುತ್ತಿದ್ದೆವು. ಆದರೂ ನಾನು ಹೊಸ ಮಾರ್ಕೆಟ್ಟಿಗೆ ಹೋಗಲು ಬಲವಂತಪಡಿಸಿದೆ. ಏತಕ್ಕೆಂದರೆ ನನ್ನ ಹೆಂಡತಿ ಹಳ್ಳಿಯುವಳು. ಹೊಸ ಮಾರ್ಕೆಟ್ ಆಕೆ ನೋಡಿರಲಿಲ್ಲ. ಎರಡನೆ ಕಾರಣ, ನನ್ನ ಮಾವನ ಮನೆಯುವರು ನನಗಿಂತ ಹಣವಂತರು. ನನ್ನ ಪತ್ನಿ ಸಂತೋಷಗೊಳ್ಳಲೆಂದೇ ಹೊಸ ಮಾರ್ಕೆಟ್ ಬಗ್ಗೆ ನಾನು ಹೇಳಿದ್ದೆ. ಮಾವನ ಮನೆಯುವರು ನಾವು ಹೊಸ ಬಟ್ಟೆಗಳನ್ನು ಹೊಸ ಮಾರ್ಕೆಟ್ಟಿನಲ್ಲಿ ಕೊಂಡಿದ್ದು ಕೇಳಿದರೆ ಒಂದು ತರಹ ಪ್ರಭಾವ ಬೀರುತ್ತದೆ. ಆದರೆ ಈ ಹೊಸ ಮಾರ್ಕೆಟ್ಟಿನ ಪ್ರಸ್ತಾಪ ನಾನು ಮಾಡಿದ ದೊಡ್ಡ ತಪ್ಪಾಯಿತು. ನಾನು ಅಲ್ಲಿಗೆ ಹೋಗದೆ ಇದ್ದಿದ್ದರೆ ಈ ಘಟನೆ ಘಟಿಸುತ್ತಲೇ ಇರಲಿಲ್ಲ. ಅಲ್ಲಿ ಆದದ್ದು ಇಷ್ಟೆ. ಹೊಸ ಮಾರ್ಕೆಟ್ ಹೊಕ್ಕೊಡನೆಯೇ ಅಂಗಡಿಯುವರ ಥಳಕು ಹೊಳಪು ಮಾತಿಗೆ ನನ್ನ ಪತ್ನಿ ಮಾರು ಹೋದಳು. ಯಾವುದಾದರೂ ಅಂಗಡಿಯ ಮುಂದೆ ಹೋದರೆ ಷೋಕೇಸಿನತ್ತಲೇ ದೃಷ್ಟಿನೆಟ್ಟು ಅಂಗುಲ ಅಂಗುಲ ನಡೆಯ ಹತ್ತುವಳು. ನನ್ನತ್ತ ನಡುವುದನ್ನೇ ಅವಳು ಮರೆತುಬಿಟ್ಟಳು. ನನ್ನ ಪತ್ನಿ ಇಲ್ಲಿಗೆ ತೀರಾ ಹೊಸಬಳಾಗಿದ್ದಳು. ಈ ಮಾತನ್ನು ಕೆದಕುವುದು ಸ್ವಾಭಿಮಾನದ ವಿಷಯವಾಗುತ್ತದೆ. ಸ್ವಲ್ಪಸ್ವಲ್ಪವೇ ಅದನ್ನೆಲ್ಲಾ ತೋರಿಸಿ ನನ್ನ ಪ್ರಭಾವ ಬೀರಬೇಕೆಂದಿದ್ದೆ. ಆದರೆ ಆಕೆ ಯಾವುದರ ಮೇಲೂ ವಿಶೇಷ ಗಮನ ಹರಿಸದೆ ಸುಮ್ಮನೆ ಎಲ್ಲವನ್ನು ನೋಡುತ್ತಿದ್ದಳು. ನನ್ನ ಸ್ವಾಭಿಮಾನ ಉತ್ತುಂಗಶಿಖರ ಏರಿ ಕುಳಿತಾಗ ನಾನು ತಿಳಿದು ತಿಳಿದೇ ನನ್ನ ಕಾರ್ಯ ವ್ಯಾಪ್ತಿಯನ್ನು ಸಂಕುಚಿತಗೊಳಿಸಿದೆ. ಆದರೆ ನನ್ನ ಪತ್ನಿ ಇತ್ತ ಗಮನವನ್ನೇ ಹರಿಸದೆ ತನ್ನ ಮನದಂತೆಯೇ ನಡೆಯುತ್ತಿದ್ದಳು. ಇದನ್ನು ನೋಡಿ ನಾನು ಇದ್ದಕ್ಕಿದ್ದಂತೆಯೇ ನಿಂತುಬಿಟ್ಟೆ. ಆದರೆ ನನ್ನ ಪತ್ನಿ ನಡೆಯುತ್ತಲೇ ಇದ್ದಳು. ಅಂಗಡಿಗಳನ್ನು ಆಶಾದೃಷ್ಟಿಯಿಂದ ನೋಡುತ್ತಿದ್ದಳು. ಗಾರ್ಡ್ ಆಫ್ ಆನರ್ ಕೊಡುವಾಗ ಸೈನಿಕರು ಹೇಗೆ ನಡೆಯುತ್ತಾರೊ ಅದೇ ರೀತಿಯಲ್ಲಿ ಆಕೆ ನಡೆಯುತ್ತಿದ್ದಳು. ನಾನು ದೂರದಲ್ಲಿ ನಿಂತು ನೋಡುತ್ತಿದ್ದೆ. ಆಕೆ ಝಗಝಗಿಸುವ ಬೆಳಕಿನಲ್ಲಿ ಗುಂಪನ್ನು ಸೀಳಿಕೊಂಡು

ಮುಂದೆ ನಡೆಯುತ್ತಿದ್ದಳು. ಮಧ್ಯೆ ಮಧ್ಯೆ ಆಕೆ ಏನೋ ಹೇಳುತ್ತಲೂ ಇದ್ದಳು. ನಾನು ಜೊತೆಯಲ್ಲಿ ಇದ್ದೇನೆಂದು ಅವಳು ಮಾತನಾಡುತ್ತಿದ್ದಳು. ಆದರೆ ನಿಜವಾಗಿ ಜೊತೆಯಲ್ಲಿಲ್ಲ ಎಂಬುದರತ್ತ ಆಕೆಯು ಗಮನವೇ ಹರಿದಿರಲಿಲ್ಲ. ಇದೇ ರೀತಿ ಆಕೆ ಕೊಂಚದೂರ ಹೋದ ಮೇಲೆ ಏನೋ ವಸ್ತು ಒಂದನ್ನು ಕಂಡು ಅದನ್ನು ನನಗೆ ತೋರಿಸಲು ಬಹಳ ಆಕಾಂಕ್ಷೆಯಿಂದ ಮುಖ ತಿರುಗಿಸಿ ನನ್ನನ್ನು ಹುಡುಕಹತ್ತಿ ಸ್ತಂಭೀಭೂತಳಾಗಿ ನಿಂತಳು. ಸುತ್ತಲೂ ದೃಷ್ಟಿಹರಿಸಿ ಬಹಳ ವ್ಯಾಕುಲಳಾಗಿ ನನ್ನನ್ನು ಹುಡುಕಹತ್ತಿದಳು. ಆಗ ಉಕ್ಕಿಬಂದ ಗೇಲಿಮಾಡುವ ಆಸೆಯನ್ನು ಹತ್ತಿಕ್ಕದಾದೆ. ಮಾರ್ಕೆಟ್‌ನ ಚಕ್ರವ್ಯೂಹದ ಗಲ್ಲಿಗಳಲ್ಲಿ ಎದುರಿಗೆ ಕಾಣಿಸುತ್ತಿದ್ದ ಮನೆಯಲ್ಲಿ ನುಸುಳಿದೆ. ನನ್ನ ಬಗ್ಗೆ ಧ್ಯಾನವನ್ನೇ ಹರಿಸದ ಹಳ್ಳಿಹುಡುಗಿ ಆಕೆ ನನ್ನನ್ನು ಹುಡುಕಿ ಹುಡುಕುತ್ತಲೇ ಇರಲಿ ಆಗ ಅವಳಿಗೆ ಬುದ್ಧಿ ಬರುತ್ತದೆ ಎಂಬುದು ನನ್ನ ಯೋಚನೆಯಾಗಿತ್ತು. ನಾನು ನಗುತ್ತಾ ನೋಡಿದೆ. ನನ್ನ ಪತ್ನಿ ಅಳುಮುಖ ಮಾಡಿಕೊಂಡು ಸುತ್ತಲೂ ಕಾತರದ ದೃಷ್ಟಿಹರಿಸಿ ಅಲ್ಲಿ ಇಲ್ಲಿ ಹೋಗುತ್ತಿದ್ದಳು. ಆಕೆ ಒಮ್ಮೆ ನನ್ನ ಬಳಿಯೂ ಬಂದಳು. ಆದರೆ ನನ್ನನ್ನು ಗುರ್ತಿಸಲೇ ಇಲ್ಲ. ಹುಚ್ಚಳಂತೆ ನನ್ನನ್ನೇ ಹುಡುಕುತ್ತಾ ನನ್ನ ಮುಂದೆ ಹಾದು ಹೋದಳು. ಅವಳು ಹಳ್ಳಿಯವಳಾದರೂ ಬಹಳ ಚಾಲಾಕಿ ಹುಡುಗಿಯಾಗಿದ್ದಾಳೆ, ನಾನು ಬೇಕೆಂದೇ ಬಚ್ಚಿಟ್ಟುಕೊಂಡಿದ್ದೇನೆಂದು ಆಕೆ ಯೋಚಿಸಿ ಬೇಕೆಂದೇ ನನ್ನನ್ನು ಗುರ್ತಿಸುತ್ತಿಲ್ಲ, ಅಂದುಕೊಂಡೆ. ಆದರೆ ಆಕೆಯ ಮುಖದಲ್ಲಿ ಕರುಣೆ ತುಂಬಿ ಕಾಣಿಸಿದಾಗ ಅವಳು ನಿಜವಾಗಿ ನನ್ನನ್ನು ನೋಡಿಲ್ಲವೆಂಬುದು ಅರ್ಥವಾಯಿತು. ಕೊನೆಯಲ್ಲಿ ಒಂದು ಗಡಿಯಾರದ ಅಂಗಡಿಯ ಮುಂದೆ ಅವಳನ್ನು ಅಡ್ಡಗಟ್ಟಿ ನಾನು ನುಡಿದೆ "ಹಾ ಇಲ್ಲಿ ನೋಡು, ನಾನು ಇಲ್ಲಿದ್ದೇನೆ." ಅವಳು ಗಾಬರಿಗೊಂಡಳು. ಬೆಚ್ಚಿದಳು. ಆಶ್ಚರ್ಯದಿಂದ ನನ್ನ ನೋಡತೊಡಗಿದಳು. ಸ್ವಲ್ಪ ಹೊತ್ತು ನನ್ನನ್ನು ನೋಡುತ್ತಲೇ ಇದ್ದು ನೀಳ ಉಸಿರನ್ನು ಬಿಟ್ಟು ನಡುಗುತ್ತಲೆ ಹುಸಿನಗುವನ್ನು ಮುಖದಲ್ಲಿ ತಂದುಕೊಂಡು ನುಡಿದಳು, "ನೀವು ನೀವು ಎಲ್ಲಿದ್ದಿರಿ ನೀವು ! ಎಷ್ಟು ಹೊತ್ತಿನಿಂದ ನಿಮ್ಮನ್ನು ನಾನು ಹುಡುಕುತ್ತಿದ್ದೇನೆ." ಆಶ್ಚರ್ಯದ ವಿಷಯವೆಂದರೆ ಆಗ ನನಗೆ ಅವಳು ಸತ್ಯವನ್ನೇ ನುಡಿಯುತ್ತಿದ್ದಾಳೆ ಅನ್ನಿಸಿತು. ಮನೆಗೆ ಹಿಂತಿರುಗುತ್ತಿದ್ದಾಗ ನಾನು ಅವಳಿಗೆ ನಾನು ಕಣ್ಣಾಮುಚ್ಚಾಲೆ ಆಡುತ್ತಿದ್ದಾಗ ನೀನು ನನ್ನನ್ನು ಗುರ್ತಿಸುವ ಹಲವು ಸಂದರ್ಭ ಒದಗಿಸಿಕೊಟ್ಟಿದ್ದೆ. ನಾನು ಎದುರಿಗೇ ನಿಂತಿದ್ದೆ. ಅವಳಿಗೆ ಮೊದಲು ನನ್ನ ಮಾತಿನಲ್ಲಿ ನಂಬಿಕೆ ಬರಲಿಲ್ಲ. ಆದರೆ ನಾನು ಇದನ್ನೇ ಹಲವು ಬಾರಿ ಹೇಳಿದಾಗ ಅವಳು ಆಶ್ಚರ್ಯ ಚಕಿತಗೊಂಡಳು. "ನೀವು ಹೇಳ್ತಾ ಇರೋದು ನಿಜವೇ ? ಆದರೆ ಇನ್ನು ಮುಂದೆ ಹೀಗೆ ಮತ್ತೆ ಮಾಡ್ಬೇಡಿ. ಹೀಗೆ ಮಾಡೋದ್ರಿಂದ ನಾವು ದೊಡ್ಡ ಗಂಡಾಂತರದಲ್ಲಿ ಸಿಕ್ಕಿ ಬೀಳಬೇಕಾಗುತ್ತೆ" ನುಡಿದಳು.

"ರೀ, ಕಂಡಕ್ಟರ್ ಭಾಯಿ. ಇಲ್ಲಿ ನಿಲ್ಲಿಸಿ. ನಾನು ಇಲ್ಲೇ ಇಳಿಯುತ್ತೇನೆ. ನೋಡಿ ಭಾಯಿ ಸಾಹೇಬ್ ನೋಡಿ... ನನ್ನ ಕನ್ನಡಕ ಸ್ವಲ್ಪ ಎಚ್ಚರ ಇರ್ಲಿ." ಆದರೆ ನೋಡಿ ನನ್ನ ಮಾತನ್ನು ಯಾರೂ ಕೇಳಿಸಿಕೊಳ್ಳುತ್ತಲೇ ಇಲ್ಲ. ನಾನು ಇಳಿಯುವುದಕ್ಕೆ

ಮುಂಚೆಯೇ ಕಂಡಕ್ಟರ್ ಶಿಳ್ಳೆ ಊದಿದ – ಒಬ್ಬ ದಪ್ಪ ಮನುಷ್ಯ ಬಾಗಿಲಲ್ಲಿ ಅಚಲನಾಗಿ ನಿಂತಿದ್ದ. ಹವಾಯಿ ಶರ್ಟ್ ಧರಿಸಿದ್ದ ಯುವಕನೊಬ್ಬ ಮೊಳಕೈಯಿಂದ ತಗುಲಿಸಿದ ರಭಸಕ್ಕೆ ನನ್ನ ಕನ್ನಡಕ ಸೊಟ್ಟಾಯಿತು. ಅದಕ್ಕೇ ನಾನು ಹೇಳುತ್ತಿರುವುದು ನನ್ನ ಮೇಲೆ ಯಾರೂ ಧ್ಯಾನ ನೀಡುವುದಿಲ್ಲ. ಬಸ್ಸಿನಲ್ಲಿ ಮಾತ್ರವಲ್ಲ. ಟ್ರಾಮ್‌ನಲ್ಲೂ ಇಲ್ಲ, ರಸ್ತೆಯಲ್ಲಿ ನಡೆಯುವಾಗಲೂ ಇಲ್ಲ.

ಇಂದು ಒಂದು ವಿಧದಲ್ಲಿ ಚೆನ್ನಾಗಿಯೇ ಇದೆ. ಮಧುರವಾದ ಹವೆ ಮತ್ತು ಬಿಸಿಲು ಸೇರಿ ಪ್ರೀತಿಯ ದಿನವಾಗಿತ್ತು. ಮಳೆಗಾಲದ ದಿನ ಅದಕ್ಕೆ ಬಿಸಿಲು ತೀಕ್ಷ್ಣವಾಗಿರಲಿಲ್ಲ. ಇಂತಹ ಸಮಯದಲ್ಲಿ ಇಂತಹ ರಸ್ತೆಯಲ್ಲಿ ಹೋಗುವುದು ಒಳ್ಳೆಯದು ಎಂಬುದು ಗೊತ್ತಿತ್ತು. ಅಲ್ಲಿ ಇಲ್ಲಿ ಸ್ವಲ್ಪ ಮುಂದೆ ಒಂದು ಚೌಕ ಕಾಣುತ್ತಿದೆಯಲ್ಲಾ ಅದಕ್ಕೆ ಸ್ವಲ್ಪ ಮುಂದೆಯೇ ನನ್ನ ಆಫೀಸು ಇರುವುದು. ನಾನು ಆ ಚೌಕ ತಲುಪಿ ರಸ್ತೆಯನ್ನು ದಾಟುವವನಿದ್ದೆ ಅಷ್ಟರಲ್ಲಿ ಟ್ರಾಫಿಕ್ ಪೋಲೀಸ್ ಕೈಯನ್ನು ಅಡ್ಡ ಹಿಡಿದ. ನಾನು ದಾಟಬೇಕಾದ ರಸ್ತೆಯಲ್ಲಿ ಸಂಚಾರ ತಡೆದು, ಅದೆಷ್ಟು ಗಾಡಿಗಳು ನಿಂತುಬಿಟ್ಟಿದ್ದವು. ಹೇ ಟ್ರಾಫಿಕ್ ಪೋಲೀಸ್ ಭಾಯಿ ನಾನು ರಸ್ತೆ ದಾಟುತ್ತಿದ್ದುದು ನಿನಗೆ ಕಾಣಿಸಲಿಲ್ಲವೇ ? ಸ್ವಲ್ಪ ಹೊತ್ತು ಕೈಯನ್ನು ಹಾಗೆ ಮೇಲೆತ್ತಿ ನಿಂತಿದ್ದರೆ ನಿನ್ನ ಕೈ ಮುರಿದುಹೋಗುತ್ತಿತ್ತೆ ?

ನಾನು ನಿಂತು ಹೋಗುತ್ತಿರುವ ಲಿಫ್ಟ್ ಸುಮಾರು ನೂರು ವರ್ಷಗಳಷ್ಟು ಹಳೆಯದು. ಇದರ ನಾಲ್ಕು ಕಡೆ ಕರಿಯ ಲೋಹದ ಗ್ರಿಲ್ ಇದೆ. ನೋಡಲು ಥೇಟ್ ಪಂಜರದಂತಿದೆ. ಲಿಫ್ಟ್ ಚಲಿಸುವಾಗ ಸ್ವಲ್ಪ ಅದುರುತ್ತದೆ ಹಾಗೂ ಬಹು ನಿಧಾನವಾಗಿ ಮೇಲೇರುತ್ತದೆ. ಅದೇ ಲಿಫ್ಟ್ ಮೂಲಕವೇ ನಾನು ಕಳೆದ 13 ವರ್ಷಗಳಿಂದ ಮೇಲೆ ಹತ್ತುತ್ತಿದ್ದೇನೆ. ಕಳೆದ 13 ವರ್ಷಗಳಿಂದ ವಾರದಲ್ಲಿ ಆರು ದಿನ ಲಿಫ್ಟ್ ಮ್ಯಾನ್ ರಾಮ್ ಸ್ವರೂಪ್ ನಮ್ಮನ್ನು ಮೇಲೆ ಹತ್ತಿಸುತ್ತಿದ್ದಾನೆ. ಇಷ್ಟೇ ಅಲ್ಲ, ಏನು ಭಾಯಿ ರಾಮಸ್ವರೂಪ್, ನೀನಂತೂ ನನ್ನನ್ನು ಚಿಕ್ಕವನಾಗಿದ್ದಾಗಿನಿಂದ ಬಲ್ಲೆ. ಆಗ ನನಗೆ 16, 17 ವಯಸ್ಸು. ಆಗ ನನ್ನ ಮುಖದ ಮೇಲೆ ಮುದಿತನದ ಚಿಹ್ನೆ ಇರಲಿಲ್ಲ. ಈಗ ನನ್ನ ಹೆಸರೇನು ಹೇಳು ? ಒಂದು ವೇಳೆ ನಿಜವಾಗಿ ಈ ಪ್ರಶ್ನೆಯನ್ನು ನಾನು ಹಾಕಿದರೆ ರಾಮಸ್ವರೂಪ್ ಮರೆತುಬಿಡುತ್ತಾನೆ. ಹೇಳುತ್ತಾನೆ, "ಓಹೋ, ಚೆನ್ನಾಗಿ ನೆನಪಿದೆ. ನೀವೇ ಅರವಿಂದ ಬಾಬು ಅಲ್ಲವೇ ?"

ಆದರೆ, ಅಲ್ಲ, ನಾನು ಯಾವ ಕಾಲದಲ್ಲೂ ಅರವಿಂದನಾಗಿರಲಿಲ್ಲ. ನಾನು ಯಾವಾಗಲೂ, ಬಾಲ್ಯದಿಂದಲೂ ಅರಿಂದಮ ಬಸುವಾಗಿಯೇ ಇದ್ದೇನೆ.

ನನ್ನ ಕೆಲಸ ಬ್ಯಾಂಕಿನಲ್ಲಿತ್ತು. ದುತಲ್ಲೆಯಲ್ಲಿ ನನ್ನ ಆಫೀಸು ಇತ್ತು. ಮೊದಲು ನಾನು ಬೇರೆ ಬೇರೆ ಭಾಗಗಳಲ್ಲಿ ದುಡಿದಿದ್ದೆ. ಈ ಹತ್ತುವರ್ಷಗಳಿಂದ ಕ್ಯಾಷ್ ವಿಭಾಗದಲ್ಲಿದ್ದೇನೆ. ನಾನು ಬಹು ಬೇಗಬೇಗ ನೋಟುಗಳನ್ನು ಎಣಿಸಬಲ್ಲೆ. ಲೆಕ್ಕದಲ್ಲೂ ಸಹ ಬಹಳ ಚತುರ. ಅಧಿಕಾರಿಗಳು ಇದಕ್ಕಾಗಿಯೇ ಕ್ಯಾಷ್ ವಿಭಾಗ ಬಿಟ್ಟು ಬೇರೆಲ್ಲೂ ನನ್ನನ್ನು ಕಳಿಸುವುದಿಲ್ಲ. ಒಂದುವೇಳೆ ಹೋದರೂ ಕೆಲವೇ ದಿನಗಳಲ್ಲಿ ಕರೆಸಿಕೊಂಡು ಬಿಡುತ್ತಾರೆ. ಹಿಂದಿನ ಹತ್ತು ವರ್ಷಗಳಿಂದ ನಾನು ಬಹಳ

ಕುಶಲತೆಯಿಂದ ಕಾರ್ಯ ನಿರ್ವಹಿಸಿದ್ದೇನೆ. ಒಮ್ಮೆ 'ಪೇಮೆಂಟ್' ವಿಭಾಗವಾದರೆ ಇನ್ನೊಮ್ಮೆ 'ರಿಸೀವಿಂಗ್' ವಿಭಾಗದಲ್ಲಿ, ಹೆಚ್ಚಾಗಿ ಪೇಮೆಂಟ್ ಡೆಸ್ಕ್‌ನಲ್ಲೇ ದುಡಿದಿದ್ದೇನೆ. ಕಾರಣ ಏನೆಂದರೆ ಇಂತಹ ಸ್ಥಳಗಳಿಗೆ ಹೆಚ್ಚು ಎಚ್ಚರವಿರುವ ಮನುಷ್ಯರ ಅಗತ್ಯವಿರುತ್ತದೆ. ಒಂದು ತಂತಿಯ ಪಂಜರದಲ್ಲಿದ್ದಂತೆ ನಾನು ಹಣದ ರಾಶಿಯ ಮಧ್ಯೆ ಇರುತ್ತೇನೆ. ನನ್ನ ಮುಂದಿನ ಹಲವು ಗೂಡುಗಳ ಮೇಜಿನಲ್ಲಿ ರೂಪಾಯಿಗಳ ನೋಟು, ಚಿಲ್ಲರೆ ಹಣ ಇರುತ್ತದೆ. ಯಾವ ಗೂಡಿನಲ್ಲಿ ಎಷ್ಟು ಹಣವಿದೆಯೆಂಬುದನ್ನು ನಾನು ಕಣ್ಣುಮುಚ್ಚಿಯೇ ತಿಳಿಸಬಲ್ಲೆ. ಪೇಮೆಂಟ್ ಸಮಯದಲ್ಲಿ ಗೂಡು ತೆರೆದು ಬೇಕಾದಷ್ಟು ಹಣವನ್ನು ಮಾತ್ರ ಹೊರತೆಗೆದು ಮತ್ತೆ ಗೂಡನ್ನು ಮುಚ್ಚಿಡುತ್ತೇನೆ. ಇದಾದನಂತರ ಪುನಃ ಹಣ ಎಣಿಸುವೆನು. ಅನಂತರ ಹಣ ನೀಡಿ ಆ ಮುಂದಿನ ಪೇಮೆಂಟ್‌ಗಾಗಿ ಕೈ ಚಾಚುತ್ತೇನೆ. ಟೋಕನ್ ತೆಗೆದುಕೊಂಡು ಡ್ರಾಯರ್ ತೆರೆಯುತ್ತೇನೆ. ರೂಪಾಯಿ ಎಣಿಸಿ ಪೇಮೆಂಟ್. ಇದೇ ಕ್ರಮ ಜಾರಿ ಇರುತ್ತದೆ. ಹೊರಗಿನ ಗುಂಪಿನಲ್ಲಿನ ಜನ ನನ್ನನ್ನು ಸಣ್ಣ ಕಿಟಕಿಯಿಂದ ನೋಡಿದವರಿಗೆ ನನ್ನ ಕೆಲಸ ಕ್ರಾಂತಿಕಾರಕವಾಗಿ ತೋರುತ್ತದೆ. ಬಹಳ ಕಷ್ಟವೆಂದು ಅವರೆಲ್ಲ ಯೋಚಿಸಬಹುದು. ಅವರು ನನ್ನನ್ನು ನೋಡುತ್ತಾರೆ. ಆದರೆ ನನಗೆ ಅವರ ನೆನಪಿರುವುದಿಲ್ಲ. ಅವರು ನನ್ನನ್ನು ನೋಡುತ್ತಾರೆ. ನನಗೆ ಅವರ ನೆನಪಿರುವುದಿಲ್ಲ. ರಾಮಬಾಬು ನಮ್ಮ ಬ್ಯಾಂಕಿನ ಹಳೆಯ ಗಿರಾಕಿ. ಅವರು ಒಂದು ದೊಡ್ಡ ಕಾರಖಾನೆಯ ಮಾಲೀಕರು. ಬ್ಯಾಂಕಿನ ಏಜೆಂಟರು ಅವರನ್ನು ಗೌರವಿಸುತ್ತಾರೆ. ಆದರೆ ಮನುಷ್ಯ ಬಹಳ ಹರಟುವ ಪ್ರವೃತ್ತಿಯವ. ಬಹಳಷ್ಟು ವೇಳೆ ಅವರು ತಮ್ಮ ಮನುಷ್ಯನನ್ನು ಕಳುಹಿಸದೆ ತಾವೇ ಖುದ್ದಾಗಿ ಚೆಕ್ಕನ್ನು ಪಡೆಯಲು ಬರುತ್ತಾರೆ. ಎಷ್ಟೋ ಬಾರಿ ನಾನು ಅವರಿಗೆ ಪೇಮೆಂಟ್ ಕೊಟ್ಟಿದ್ದೇನೆ. ಕಿಟಕಿಯಲ್ಲಿ ಮುಗುಳ್ನಕ್ಕು ಧನ್ಯವಾದ ಹೇಳಿದ್ದಾರೆ. ಒಂದು ಬಾರಿ ನನ್ನ ದೊಡ್ಡ ಭಾವಮೈದುನ ಕಲ್ಕತ್ತೆಗೆ ಬಂದು ತಿರುಗಾಡಲು ಬಹಳ ಹಣ ಖರ್ಚು ಮಾಡಿಬಿಟ್ಟಿದ್ದ. ಒಂದು ಬಾರಿ ಅವನು ನನ್ನನ್ನು ಪಾರ್ಕ್ ಸ್ಟ್ರೀಟ್‌ನ ಒಂದು ದೊಡ್ಡ ರೆಸ್ಟೊರೆಂಟ್‌ಗೂ ಕರೆದೊಯ್ದಿದ್ದ. ಅಲ್ಲಿ ಹೋದಾಗ ನಾನು ನೋಡಿದೆ. ರಾಮ್‌ಬಾಬು ಕುಳಿತಿದ್ದರು. ಒಬ್ಬರೇ, ಕೈಯಲ್ಲಿದೆ ಸ್ವಚ್ಛ ಬಿಳಿಯ ಜಿನ್ ಲೋಟ. ಅವರು ಭಾವುಕ ಕಣ್ಣುಗಳಿಂದ ನೋಡುತ್ತಿದ್ದರು. ನಿಜ ಹೇಳಬೇಕೆಂದರೆ ನಾನು ಎಂದೂ ನನ್ನ ಭವಿಷ್ಯದ ಬಗ್ಗೆ ಯೋಚಿಸುವುದೇ ಇಲ್ಲ. ಅಲ್ಲದೇ ಈ ವಿಷಯದಲ್ಲಿ ಭೇಟಿಯಾಗುವೆನೆಂದು ನಾನೆಂದೂ ಯೋಚಿಸಿರಲಿಲ್ಲ. ನಾನಂತೂ ಪರಿಚಯದವರೆಂಬ ಒಂದೇ ಕಾರಣದಿಂದ ಮುಂದೆ ನಡೆದಿದ್ದೆ. ಇದ್ದಕ್ಕಿದ್ದಂತೆಯೇ ರಾಮಬಾಬು ಹುಬ್ಬುಗಂಟಿಕ್ಕಿ ನುಡಿದರು. "ನಿಮ್ಮನ್ನು ಎಲ್ಲೋ ನೋಡಿದಂತಿದೆ. ಎಲ್ಲಿ ಅಂತ ಹೇಳ್ತೀರಾ ? ನನಗಂತೂ ಜ್ಞಾಪಕವೇ ಬರುತ್ತಿಲ್ಲ." ಆಗ ನನ್ನ ಭಾವಮೈದುನನ ಮುಂದೆ ನನಗೆ ಬಹಳ ನಾಚಿಕೆ ಆಗುತ್ತಿತ್ತು. ಆ ಮನುಷ್ಯ ನಿಜವಾಗಿ ನನ್ನನ್ನು ಗುರುತಿಸುತ್ತಿಲ್ಲವೇ ? ಅಥವಾ ಆ ಮನುಷ್ಯ ದುರಹಂಕಾರಿಯೇ ? ಹಾಗಿದ್ದರೆ ನಾನೇ ನನ್ನ ಅವಮಾನ ಮಾಡಿಕೊಂಡಾಯ್ತು. ಆಗ ನಾನು ಬಹು ನಿಧಾನವಾಗಿ ನನ್ನ ಬ್ಯಾಂಕಿನ ಹೆಸರನ್ನು ಹೇಳಿದೆ. ನಾನು ಕ್ಯಾಷ್...

ತಕ್ಷಣ ಸ್ವಚ್ಛ ಜಿನ್‌ನಂತೆ ರಾಮ್‌ಬಾಬು ಅವರ ಮುಖ ಸ್ವಚ್ಛವಾಯಿತು. ಪ್ರಸನ್ನರಾಗಿ ನುಡಿದರು. ‘‘ಹಾ ಗುರುತು ಹತ್ತಿತು. ಆ ಚಿಕ್ಕ ಕಿಟಕಿಯಲ್ಲಿ ಆ ಪಂಜರದಲ್ಲಿ ಕುಳಿತಿರೋ ನಿಮ್ಮನ್ನು ನೋಡಿ ನೋಡಿ ಅಭ್ಯಾಸವಾಗಿಬಿಟ್ಟಿದೆ. ಇದ್ದಕ್ಕಿದ್ದಂತೆಯೇ ಈ ಸ್ಥಳದಲ್ಲಿ.....? ತಮಗೆ ಅರ್ಥವಾಗಲಿಲ್ಲ. ನಿಜವಾಗಿ ಎಲ್ಲ ಮನುಷ್ಯರಿಗೂ ಒಂದೊಂದು ವ್ಯಕ್ತಿತ್ವ ಇರುತ್ತದೆ. ಇದರಿಂದಲೇ ಮನುಷ್ಯ ಗುರುತಿಸಲ್ಪಡುವುದು. ಹೇಗೆ ನೀವು ಆ ಪಂಜರದೊಳಗೆ ಇರುತ್ತೀರೋ ಹಾಗೆ ನಾನು ಕೋಟ್ ಪ್ಯಾಂಟ್ ಹಾಗೂ ಈ ಬೊಕ್ಕತಲೆ...ಯ ವ್ಯಕ್ತಿ ನಾನು. ಇವುಗಳಿಂದ ನಮ್ಮನ್ನು ಪ್ರತ್ಯೇಕಿಸಿದರೆ ನಮ್ಮ ಬೇರೆ ಪರಿಚಯವೇ ಇರುವುದಿಲ್ಲ. ನೋಡಿ, ಸ್ವಲ್ಪ ಹೊತ್ತಿನ ಮುಂಚೆ ನಾನು ವ್ಯಕ್ತಿತ್ವದ ಬಗ್ಗೆ ಯೋಚಿಸುತ್ತಿದ್ದೆ. ಬಾಲ್ಯದಲ್ಲಿ ನಾವು ರೈಲ್ವೆ ಕಾಲೊನಿಯೊಳಗೆ ವಾಸಿಸುತ್ತಿದ್ದೆವು. ನನ್ನ ತಂದೆ ರೈಲ್ವೆ ಇಲಾಖೆಯಲ್ಲಿ ಕೆಲಸದಲ್ಲಿದ್ದರು. ನಾವು ಕಟಿಹಾರ್ ರೈಲ್ವೆ ಕಾಲೊನಿಯಲ್ಲಿ ಕ್ವಾರ್ಟರ್ಸ್‌ನಲ್ಲಿದ್ದಾಗ ಪಕ್ಕದ ಮನೆಗೆ ಸಾಮಾನ್ಯವಾಗಿ ಒಬ್ಬ ಹುಡುಗಿ ಬರುತ್ತಿದ್ದಳು.

ಅವಳಿಗೆ ಮಲತಾಯಿ ಒಬ್ಬಳಿದ್ದಳು. ಮನೆಯಲ್ಲಿ ಪ್ರೀತಿ ವಿಶ್ವಾಸ ದೊರೆಯುತ್ತಿರಲಿಲ್ಲ. ನಮ್ಮ ಮನೆಗೆ ಬಂದು ಅಡಿಗೆ ಮನೆಯಲ್ಲಿ ಒಲೆಯ ಮುಂದೆ ನಮ್ಮ ತಾಯಿಯ ಜೊತೆ ಬಂದು ಕೂಡುತ್ತಿದ್ದಳು. ಹರಿದಿದ್ದ ಫ್ರಾಕ್‌ನ್ನು ಮಂಡಿಯವರೆಗೂ ಎಳೆದುಕೊಳ್ಳುತ್ತಾ ಸಂಕೋಚದಿಂದ ಮುದುಡಿ ಕುಳಿತು ಪರೋಟಾ ತಟ್ಟುತ್ತಿದ್ದಳು. ಅಳುವ ನನ್ನ ತಂಗಿಯನ್ನು ಎತ್ತಿಕೊಂಡು ಸಮಾಧಾನ ಮಾಡುತ್ತಿದ್ದಳು. ತಾಯಿ ಹೇಳುತ್ತಿದ್ದರು. ‘ನಾನು ನಿನ್ನ ಮದುವೆಯನ್ನು ಇವಳೊಡನೆಯೇ ಮಾಡುತ್ತೇನೆ’ ಎಂದು. ಅದನ್ನು ಕೇಳಿ ನಾನು ಅವಳನ್ನು ಸರಿಯಾಗಿ ನೋಡುತ್ತಿದ್ದೆ. ಆಗ ನನಗೆ ಒಂದು ತರಹ ನಶೆ ಬಂದಂತಾಗುತ್ತಿತ್ತು. ಅವಳದು ಅದೆಷ್ಟು ಒಣಗಿದ ಕರುಣಾಮಯಿ ಮುಖ. ಅವಳು ಅದೆಷ್ಟು ಸುಂದರಳಾಗಿದ್ದಳೆಂದರೆ ಭೂಮಿಯ ಮೇಲೆ ಹೆಚ್ಚು ದಿನ ಬದುಕಿರಬಾರದೆಂದೇ ಭೂಮಿಗೆ ಬಂದಿದ್ದಾಳೋ ಎನಿಸುತ್ತಿತ್ತು’’ ಇಷ್ಟು ಹೇಳಿ ರಾಮಬಾಬು ಒಂದು ದೀರ್ಘ ಉಸಿರನ್ನು ಬಿಟ್ಟರು.

ನಾನು ವ್ಯಾಕುಲಗೊಂಡು ಪ್ರಶ್ನಿಸಿದೆ. ‘‘ಅನಂತರ ಏನಾಯಿತು? ಏನು ಸತ್ತುಹೋದಳೆ?’’ ರಾಮಬಾಬು ತಲೆ ಅಲ್ಲಾಡಿಸಿದ. ‘‘ಇಲ್ಲ. ಇಲ್ಲ. ಅವಳೇಕೆ ಸಾಯುತ್ತಾಳೆ? ದೊಡ್ಡವನಾದ ಮೇಲೆ ಅವಳನ್ನೇ ನಾನು ಮದುವೆ ಆದದ್ದು. ಈಗಲೂ ಅವಳೇ ನನ್ನ ಪತ್ನಿಯಾಗಿದ್ದಾಳೆ. ಈಗ ತುಂಬಾ ದಪ್ಪನಾಗಿ ಬಿಟ್ಟಿದ್ದಾಳೆ. ಮೇಲಾಗಿ ಅಸಭ್ಯಳು. ನನ್ನ ಮೇಲೂ ತನ್ನ ಹುಕುಂ ನಡೆಸುತ್ತಾಳೆ. ನಾನು ಯಾವಾಗ ನೋಡಿದರೆ ಆಗ ಫ್ರಿಜ್ ತೆರೆಯುತ್ತಿರುತ್ತಾಳೆ, ಅಲ್ಮಾರದಿಂದ ಒಡವೆ ತೆಗೆಯುತ್ತಿರುತ್ತಾಳೆ. ನೌಕರನನ್ನು ಬಯ್ಯುತ್ತಿರುತ್ತಾಳೆ, ಡ್ರೈವರನಿಗೆ ಕಾರು ಹೊರ ತೆಗೆಯಲು ಹೇಳುತ್ತಿರುತ್ತಾಳೆ. ಆಗ ಯಾರಿಗೆ ಏನು ಹೇಳುತ್ತಾಳೆ ಎಂಬುದು ಅರ್ಥವಾಗುವುದಿಲ್ಲ.’’

‘‘ಇವಳ ಖಾಯಿಲೆಯಲ್ಲಿ ತಾಯಿ ಕಿತ್ತಲೆಹಣ್ಣು ಕೊಟ್ಟು ಬಂದಿದ್ದುದು. ಇಂದಿನ ಮಾತನ್ನೆ ಕೇಳಿ ಇಂದು ಆಕೆಯೊಡನೆ ಜಗಳ ಕಾದೇ ಹೊರಟಿದ್ದೇನೆ. ಮನಸ್ಸಿನಲ್ಲಿ ಒಂದು

ತರಹ ಎಳೆತವಿತ್ತು. ಹಿಂದಿನ ಆ ಪ್ರೀತಿ ಪ್ರೇಮ ನನಗೆ ಅರಿವಿಲ್ಲದೆಯೇ ಮುಗಿದುಹೋಗಿತ್ತು. ಆದರೆ ಈಗ ಏಕಾಂತದಲ್ಲಿ ಕುಳಿತಾಗ ಅದೇ ಹಿಂದಿನ ನೆನಪು, ಒಲೆಯ ಬಳಿ ಮೊಣಕಾಲತನಕ ಎಳೆದುಕೊಳ್ಳುತ್ತಿರುವ ಫ್ರಾಕ್‌ನ ಆ ಹುಡುಗಿಯು ಕುಳಿತಿರುವ ಭಂಗಿ ನೆನಪು ಬಂತು. ಜೊತೆಯಲ್ಲೆ ತಾಯಿಯ ನೆನಪೂ ಬಂತು. ನನ್ನ ತಾಯಿ ಅತ್ಯಂತ ಮಮತೆಯಿಂದ ಆ ಹುಡುಗಿ ಕುಳಿತಿರುವುದನ್ನೇ ನೋಡುತ್ತಿರುತ್ತಿದ್ದಳು. ಇಲ್ಲಿ ಕುಳಿತು ಕುಳಿತು ನನ್ನ ಮನಸ್ಸಿನಲ್ಲಿ ಪ್ರೀತಿ ಉಕ್ಕಿ ಬರುತ್ತಿದೆ. ಮನೆಗೆ ಹೋದೊಡನೆಯೆ ಅವಳ ಕೋಪ ಹೋಗಲಾಡಿಸಲು ಯತ್ನಿಸುತ್ತೇನೆ.. ಅರ್ಥವಾಯಿತೆ ?'' ಇಷ್ಟು ಹೇಳಿ ರಾಮಬಾಬು ಬಿಳಿಯ ಸ್ವಚ್ಛ ಜಿನ್ ಅನ್ನು ಗಂಟಲೊಳಗೆ ಇಳಿಸಿದರು. ಆನಂತರ ಪುನಃ ನುಡಿದರು. ''ಆ ಕಿಟಕಿಯ ಚಿತ್ರ ಏನಿದೆ, ನಿಮ್ಮನ್ನು ದಿನವೂ ನಾನು ನೋಡುವ ದೃಶ್ಯ ಅದೇ ಸತ್ಯ, ಅದೇ ಕಿಟಕಿ.....''

ಹಣ ಪಡೆಯಲು ಕಿಟಕಿಯ ಮುಂದೆ ಟೋಕನ್ ಹಿಡಿದು ನಿಂತಿರುವ ಆ ಇಪ್ಪತ್ತಮೂರು ಇಪ್ಪತ್ತನಾಲ್ಕು ವಯಸ್ಸಿನ ಹುಡುಗ ನನ್ನನ್ನು ಬಲ್ಲ. ಆತನ ತಂದೆ ಹಳೆಯ ವಾಹನಗಳ ಖರೀದಿ ಮಾರಾಟ ವ್ಯಾಪಾರ ಮಾಡುತ್ತಾರೆ. ಹಿಂದೆ ಆ ಮುದುಕರೇ ಬರುತ್ತಿದ್ದರು. ಈಗ ಈ ಹುಡುಗ ಬರುತ್ತಿದ್ದಾನೆ. ಒಮ್ಮೊಮ್ಮೆ ಕಣ್ಣಿಗೆ ಕಣ್ಣು ಸೇರಿದಾಗ ನಾನು ಪ್ರಶ್ನಿಸುತ್ತೇನೆ. ''ನಿಮ್ಮ ತಂದೆ ಆರೋಗ್ಯವಾಗಿದ್ದಾರೆ ತಾನೆ ?'' ಆತ ಸಂತೋಷಗೊಂಡು ತಲೆಯಲ್ಲಾಡಿಸುತ್ತಾ ''ಹಾ'' ಎನ್ನುತ್ತಾನೆ. ಆದರೆ ನನಗೆ ಸಂದೇಹ. ಒಂದು ವೇಳೆ ಬೇರೆ ಯಾರಾದರೂ ಸಾಮಾನ್ಯ ಮನುಷ್ಯನನ್ನು ನನ್ನ ಸ್ಥಳದಲ್ಲಿ ಕೂಡಿಸಿದರೆ ಆತ ಈ ಬದಲಾವಣೆಯನ್ನು ಅರ್ಥಮಾಡಿಕೊಳ್ಳಲು ಸಾಧ್ಯವೆ ? ಆಗ ಅವನು ಇನ್ನೂ ಆಲಸ್ಯದಿಂದಲೇ ನಿಂತು ನಿಧಾನವಾಗಿ ಟೋಕನ್ ಕುಟ್ಟುತ್ತಾ ಇರುತ್ತಾನೆ. ಅಲ್ಯದ ದೃಷ್ಟಿಯಲ್ಲೇ ಆ ಹೊಸ ವ್ಯಕ್ತಿಯನ್ನು ನೋಡಿ ಪರಿಚಿತ ನಗುವನ್ನು ಹರಿಸುವನು. ತಪ್ಪನ್ನು ಅರಿಯಲು ಕೊಂಚ ಸಮಯ ತೆಗೆದುಕೊಳ್ಳುವುದು. ಏತಕ್ಕೆಂದರೆ ಆತ ನನ್ನನ್ನು ಸರಿಯಾಗಿ ಎಂದೂ ನೋಡೇ ಇಲ್ಲ. ಆತ ಆಗ ತನ್ನ ಹೊಸಪ್ರೇಮಿಯ ಬಗ್ಗೆ ಯೋಚಿಸುತ್ತಿದ್ದಿರಬಹುದು. ಅಥವಾ ಹೊಸ ಸ್ಕೂಟರ್ ಕೊಳ್ಳುವ ಮಾತು ಯೋಚಿಸುತ್ತಿದ್ದಿರಬಹುದು. ಆತ ಕತ್ತು ತಿರುಗಿಸಿ ರಿಸ್‌ಪ್ಯನ್‌ನಲ್ಲಿ ಕುಳಿತಿದ್ದ ಹುಡುಗಿಯನ್ನು ನೋಡಿದ. ಅನಂತರ ಕೈಗಡಿಯಾರ ಒಂದು ಬಾರಿ ತನ್ನ ಟೋಕನ್ ನಂಬರ್ ನೋಡಿ, ಕಿಟಕಿಯೊಳಗೆ ನೋಡಿದ. ನನ್ನ ಬಳಲಿದ್ದ ಕೈ ಒಂದು ದೊಡ್ಡ ನೋಟಿನ ಬಂಡಲ್‌ನಲ್ಲಿ ನೋಟುಗಳನ್ನು ಎಣಿಸುತ್ತಿತ್ತು. ಒಮ್ಮೆ ನನ್ನನ್ನು ನೋಡಿ ಪಕ್ಕಕ್ಕೆ ದೃಷ್ಟಿಯನ್ನು ತಿರುಗಿಸಿದ. ನನಗನಿಸಿತು. ಆತ ನನ್ನನ್ನು ನೋಡಿರಲಾರ ಎಂದು. ಹದಿನೈದು ನಿಮಿಷಗಳ ನಂತರ ದಿನದ ಎರಡು ಗಂಟೆ ಹೊಡೆಯುತ್ತದೆ. ಆಗ ಕ್ಯಾಷ್‌ಬಾಕ್ಸ್ ಮುಚ್ಚಿ ಕೆಳಗೆ ಊಟ ಮಾಡಲು ಹೋಗುತ್ತೇನೆ. ಆಗ ರಸ್ತೆಯಲ್ಲಿ ಆತ ನನ್ನನ್ನು ಭೇಟಿ ಮಾಡಿದರೆ ಅಥವಾ ಫುಟ್‌ಪಾತ್‌ನ ಅಂಗಡಿಯೊಂದರಲ್ಲಿ ಅರಾರೋಟ್‌ನ ಬಿಸ್ಕತ್ ತಿನ್ನುತ್ತಾ ಮಣ್ಣಿನ ಲೋಟದಲ್ಲಿ ಚಹಾ ಕುಡಿಯುತ್ತಿದ್ದರೆ ಆಗ ನನ್ನನ್ನು ಆತ ಗುರುತಿಸುವನೆ ?''

''ಬಾಳೆಹಣ್ಣು ಹೇಗೆ ಕೊಡ್ತೀಯಾ ?'' ''ಜೋಡಿಗೆ ನಲವತ್ತು ಪೈಸೆ'' ''ಏನು

ಹೇಳ್ತಿ?'' "ಹಾ ಇದು ಒಳ್ಳೆ ಬಾಳೆ." ಇದು ನನಗೆ ಗೊತ್ತು ಅರ್ಥವಾಗುತ್ತೆ. ಚಿನ್ನದ ಹಳದಿ ಬಣ್ಣ, ಚುಕ್ಕೆ ಶರೀರ, ವಿಶಾಲಮುಖ ಒಳ್ಳೆಯ ಬಾಳೆ ಎದುರಿಗೆ ಕಾಣಿಸುತ್ತದೆ. ಆದರೆ ಇಂದು ನಾನು ಬಾಳೆ ತಿನ್ನುವ ದಿನವಲ್ಲ. ನೆನ್ನೆ ತಾನೆ ನಾನು ಬಾಳೆ ತಿಂದಿದ್ದೆ. ಎರಡು ದಿನ ಒಟ್ಟಿಗೆ ನಾನು ಬಾಳೆ ತಿನ್ನುತ್ತೇನೆ. ಒಂದು ಬಾಳೆ ಹಣ್ಣು ಕೊಡು. ಬೇಡ ಬೇಡ, ಒಂದೇ ಒಂದು ಬೇಕು. ಹುಂ ಇಲ್ಲಿ ತಗೋ ಇಪ್ಪತ್ತು ಪೈಸೆ. ಓಹ್ 1 ಒಳ್ಳೆಯ ಬಾಳೇಹಣ್ಣು. ತುಂಬಾ ಚೆನ್ನಾಗಿದೆ. ಅದನ್ನು ತಿಂದು ಆದರ ಸ್ವಾದದ ನೆನಪಿನಲ್ಲಿ ಅದರ ಸಿಪ್ಪೆಯನ್ನು ಕೈಲಿ ಹಿಡಿದೇ ಇದ್ದೆ. ಹತ್ತು ಹದಿನೈದು ನಿಮಿಷ ಅಲ್ಲಿ ಇಲ್ಲಿ ಸುತ್ತುತ್ತಿದ್ದೆ. ಬಾಳೇ ಸಿಪ್ಪೆ ನನ್ನ ಕೈಲಿ ಇತ್ತು. ನನ್ನ ಸುತ್ತ ಮುತ್ತ ಜನ ಗಮನ ಹರಿಸದೆಯೆ ನಡೆದುಹೋಗುತ್ತಿದ್ದರು. ಎಲ್ಲರ ಮುಖವೂ ನಿರ್ವಿಕಾರವಾಗಿತ್ತು. ಈ ಜನ ಯಾವಾಗಲೂ ಯುದ್ಧ ಮಾಡಿದವರಲ್ಲ. ದೇಶ ಅಥವಾ ಜಾತಿಗಾಗಿ ಜೀವ ತೆತ್ತವರಲ್ಲ. ಈ ಜನ ಕೊನೆಯವರೆಗೆ ಒಂದೆಡೆ ಕಲೆತು ಯಾವುದೇ ಸಮಸ್ಯೆಗೆ ಪರಿಹಾರ ಯೋಚಿಸಿದವರೂ ಅಲ್ಲ. ಜಾತಿ ಕ್ರಮೇಣ ಸಾಯುತ್ತಿದೆ. ಅವರಿಗೆ ಸಮಯದ ಅರಿವೇ ಇಲ್ಲ. ಸಾವಿರದ ಒಂಬೈನೂರ ಅರವತ್ತೊಂಬತ್ತರ ಅರ್ಥ ಇವರಿಗೆ ಕೇವಲ ಒಂದು ಸಂಖ್ಯೆ. ಎರಡು ಸಾವಿರ ವರ್ಷಗಳ ಇತಿಹಾಸ ಇವರು ತಿಳಿಯರು. ಇವರುಗಳಿಗೆ 'ಟೆಲಿಪತಿ' ಅತವಾ 'ಕ್ರೀಕ್' ಶಬ್ದಗಳೂ ಹಾಗೆಯೇ 'ಭಾರತವರ್ಷ' ಸಹ ಒಂದು ಶಬ್ದ ಮಾತ್ರ.

ದಯವಿಟ್ಟು ನನ್ನ ಕಡೆ ನೋಡಿ. ಇಲ್ಲಿ ನಾನಿದ್ದೇನೆ. ಅರಿಂದಮ ಬಸು- ಅರಿಂದಮ ಬಸು ಹೆಚ್ಚು ಉದ್ದವಿಲ್ಲ. ತೆಳ್ಳಗೂ ಇಲ್ಲ, ಬೆಳ್ಳಗೂ ಇಲ್ಲ. ನಾನೂ ಒಬ್ಬ ಮನುಷ್ಯ ನಾನೇನು ಟೆಲಿಪತಿ ಅಲ್ಲ, ಕ್ರೀಕ್ ಸಹ ಅಲ್ಲ, ಭಾರತವರ್ಷವೂ ನಾನಲ್ಲ. ಈ ಶಬ್ದಗಳ ಮಧ್ಯೆ ನಾನು ಅರಿಂದಮ ಬಸು. ಈ ಶಬ್ದಗಳಲ್ಲಿ ಕೊಂಚ ವ್ಯತ್ಯಾಸವಿದೆ. ಏನು ? ನೀವು ಅದನ್ನು ಗುರುತಿಸಬಲ್ಲಿರಾ ?

ಹುಂ ಬಿಡಿ ಈ ಮಾತುಗಳನ್ನು. ಆಗಾಗ್ಯೆ ನನಗೆ ಅನುಮಾನ ಬರುತ್ತದೆ. ಏನು ನಾನು ನಾನೇ ಹೌದೆ ? ಅಲ್ಲವೆ ? ಬ್ಯಾಂಕಿನ ಈ ಕಿಟಕಿಯಲ್ಲಿ ಕೈ ತೂರಿಸಿ ಜನರು ಹಣವನ್ನು ಎಣಿಸಿಕೊಳ್ಳುತ್ತಾರೆ. ಕೆಲವರು ಮುಗುಳ್ನಗೆ ಬೀರಿದರೆ ಕೆಲವರು ಧನ್ಯವಾದ ಹೇಳುತ್ತಾರೆ. ಯಾರಿಗೂ ಗೊತ್ತ ಆಗುವುದಿಲ್ಲ. ಕಿಟಕಿಯ ಆ ಕಡೆ ಬಹಳ ಪರಿವರ್ತನೆ ಆಗಿದೆ ಎಂಬುದು. ನ್ಯೂ ಮಾರ್ಕೆಟ್ಟಿನ ಆ ಘಟನೆಯನ್ನೇ ತೆಗೆದುಕೊಳ್ಳಿ. ತನ್ನ ಪತ್ನಿ ನಡೆದು ನಡೆದು ಸುಸ್ತಾಗಿ ನನ್ನ ಹುಡುಕುತ್ತಿದ್ದಳು. ನನ್ನನ್ನು ಎದುರಿಗೇ ಕಂಡು ಕಾಣದಂತೆ ಕಣ್ಣಲ್ಲಿ ಕಣ್ಣೀರು ತುಂಬಿ, ಹಾಗೆ ಮುಂದೆ ಹೋಗಿದ್ದಳು. ಈ ಮನುಷ್ಯ ಎಲ್ಲಿ ಹೋದ ಎಂದು ಆಶ್ಚರ್ಯಪಡಿಸುತ್ತಾ.

ನಾನು ಚೆನ್ನಾಗಿ ತಿಳಿದೇ ಬಾಳೆ ಸಿಪ್ಪೆಯನ್ನು ಫುಟ್‌ಪಾತಿನ ಮೇಲೆಯೇ ಇರಿಸಿದೆ. ಉದಾಸೀನ ಮನೋಭಾವದ ಸಜ್ಜನರೇ ನಿಮ್ಮಲ್ಲಿ ಯಾರಾದರೂ ಇದರ ಮೇಲೆ ಕಾಲಿರಿಸಿ ಜಾರಿ ಬೀಳದೇ ಇದ್ದರೆ, ಅಥವಾ ತಮಗೆ ಹೆಚ್ಚಿಗೆ ಪೆಟ್ಟು ಬೀಳದೇ ಇದ್ದರೆ ಬೀಳುವಾಗ ನೀವು ನಿಮ್ಮನ್ನೆ ನಿಯಂತ್ರಿಸಿಕೊಂಡಿದ್ದರೆ ಆಗ ನಿಮಗೆ ಲಾಭವೇ ಆಗಿರುತ್ತದೆ.

ನಾಲ್ಕು ಕಡೆ ತಾವು ನೋಡುತ್ತೀರಿ. ತಾವು ಯಾವ ರಸ್ತೆಯಲ್ಲಿ ನಡೆಯುತ್ತಿದ್ದೀರಿ ಎಂಬುದು ಅರ್ಥವಾಗುತ್ತದೆ. ದುರ್ಘಟನೆ ಗಂಭೀರವಾದದ್ದಾಗಿದ್ದರೆ ತಮ್ಮ ಕಾಲು ಕೈ ಮುರಿಯುಬಹುದು. ಅಥವಾ ತಲೆ ಒಡೆಯುಬಹುದು. ಇದನ್ನೆಲ್ಲಾ ಯೋಚಿಸಿ ತಾವು ಬಹಳ ಜಾಗ್ರತಗೊಳ್ಳುತ್ತೀರಿ. ಬಹುಶಃ ನಿಮ್ಮೊಳಗೆ ನಿದ್ರಿಸುತ್ತಿರುವ 'ನಾನು ' ಜಾಗ್ರತಗೊಂಡು ಯೋಚಿಸಲು ಪ್ರಾರಂಭಿಸುತ್ತದೆ. 'ಜೀವನ ಎಷ್ಟು ಒಳ್ಳೆಯದು' ಆಗ ಬಹುಶಃ ನಾನೂ ನಿಮ್ಮಗಳ ಬಗ್ಗೆ ಜಾಗ್ರತಗೊಳ್ಳುತ್ತೇನೆ. ಆಗ ಬಹುಶಃ ತಮಗೆ ಇದು ಸಾವಿರದ ಒಂಭೈನೂರ ಎಂಬತ್ತಾರನೆಯ ವರ್ಷ ಜುಲೈ ತಿಂಗಳು ಎಂಬುದೂ ನೆನಪಿಗೆ ಬರುತ್ತದೆ. ಇಂದು ನಿಮ್ಮ ಮದುವೆಯ ದಿನ. ಇದನ್ನು ನೀವು ಬೇಕೆಂದೇ ಮರೆತುಬಿಟ್ಟಿದ್ದೀರಿ. ಈ ವರ್ಷಕ್ಕೆ ನಾಲ್ವತ್ತು ವರ್ಷ ತುಂಬುತ್ತದೆ. ಈಗ ನೀವು ಯೋಚಿಸಿ ನೋಡಿ ಈ ಕ್ರಾಂತಿಹೀನ ಭಾರತದಲ್ಲಿ, ಈ ನಿಸ್ತೇಜ ಮಧ್ಯಾಹ್ನ ದಾರಿಯಲ್ಲಿ, ಬಾಳೆಸಿಪ್ಪೆ ಎಸೆದು ನಾನೇನು ತಮಗೆ ಭಾರಿ ನಷ್ಟವನ್ನೇನು ಮಾಡಿಲ್ಲ ಎಂಬುದು ವೇದ್ಯವಾಗುತ್ತದೆ. ಏನು ತಾವು ಈ ಚಂದ್ರನ ಬಗ್ಗೆ ಯೋಚಿಸುತ್ತಿದ್ದೀರೇನು ? ಹಾಗೆಯೇ ಈ ಮೂರು ಜನ ದುಸ್ಸಾಹಸ ವ್ಯಕ್ತಿಗಳ ಬಗ್ಗೆಯೂ ಯೋಚನೆ ಬರುತ್ತದೆ. ಏನು ? ಯೋಚಿಸಬೇಡಿ. ಇವೆಲ್ಲಾ ಯೋಚಿಸಿ ನಮಗೆ ಆಗುವ ಲಾಭವಾದರೂ ಏನು ? ಕೆಲಸವಿಲ್ಲದ ವ್ಯಕ್ತಿ ಸುಮ್ಮನೆ ಯೋಚಿಸಿ ಯೋಚಿಸಿ ಉತ್ತೇಜಿತಗೊಳ್ಳುತ್ತಾನೆ. ಅನಂತರ ಆಯಾಸ ಅನುಭವಿಸುತ್ತಾನೆ. ಅವರ ಬಳಿ ಒಳ್ಳೆಯ ಯಂತ್ರಗಳಿವೆ. ಅವರು ನಿರಾಯಾಸವಾಗಿ ಚಂದ್ರನ ಮೇಲೆ ಇಳಿಯುಬಲ್ಲರು. ಅನಂತರ ಹಿಂತಿರುಗಿಯೂ ಬರಬಲ್ಲರು. ಇದನ್ನೆಲ್ಲಾ ಯೋಚಿಸಿ ತಾವು ವೃಥಾ ಉತ್ತೇಜಿತರಾಗಬೇಡಿ. ರಸ್ತೆ ನೋಡಿಕೊಂಡು ಚಲಿಸಿ. ರಾಜಭವನದ ಎದುರಿಗೆ ತಿರುಗುವಾಗ ನೋಡಿರಿ. ಎದುರಿನ ಮೈದಾನ ಎಷ್ಟು ಸುಂದರವಾಗಿದೆ, ಎಷ್ಟು ವಿಶಾಲವಾಗಿದೆ. ಮೇಲೆ ತೆರೆದ ಆಕಾಶ ! ಅಕ್ಕಪಕ್ಕದಲ್ಲಿ ನಡೆದಾಡುತ್ತಿರುವ ಜನರನ್ನೂ ಗಮನಿಸಿ. ಅವರನ್ನು ಗುರುತಿಸಿ. ಎಷ್ಟು ಸಾಧ್ಯವೊ ಅಷ್ಟು ಜನರ ಮುಖಗಳನ್ನು ನೋಡಿರಿ. ಏತಕ್ಕೆಂದರೆ ಮತ್ತೊಮ್ಮೆ ಭೇಟಿ ಆದರೆ ಅವರನ್ನು ಸುಲಭವಾಗಿ ಗುರುತಿಸಲು ಅನುಕೂಲವಾಗುತ್ತದೆ. ಈ ಸುಂದರ ಸಂಜೆ ನಾನೂ ನಿಮ್ಮ ಜೊತೆ ಸುತ್ತಾಡುತ್ತಿದ್ದೇನೆ. ನನ್ನನ್ನು ನೋಡಿ. ಇದೇ ತಾನೆ ನಾನು ನನ್ನ ಆಫೀಸು ಬಿಟ್ಟಿದ್ದೇನೆ. ಈಗ ಸ್ವಲ್ಪ ಹೊತ್ತಿನ ಹಿಂದಿನ ಮಾತು. ಇಂದು ಮೈದಾನದಲ್ಲಿ ಆಟ ನೋಡಲು ಹೋಗುತ್ತೇನೆ. ನೀವೂ ಅಲ್ಲಿಗೇ ಹೋಗುತ್ತಿರಬಹುದು. ಹೌದೇ !

ನೋಡಿ ಎಷ್ಟು ವಿಚಿತ್ರ ಮಾತು ! ಆ ಹುಡುಗ ಆಫ್ ಸೈಡ್ ನಿಂತು ಒಂದು ಒಳ್ಳೆಯ ಅವಕಾಶ ಕಳೆದುಬಿಟ್ಟ. ಈಗ ಹತ್ತುನಿಮಿಷ ಮಾತ್ರ ಉಳಿದಿದೆ. ಇಲ್ಲಿಯುವರೆಗೂ ಒಂದು ಗೋಲ್ ಆಗಿರುವುದಿಲ್ಲ. ಓಹ್ ಆ ಹುಡುಗ. ಈಶ್ವರ ಆತನಿಗೆ ಎಷ್ಟು ಕೆಂಪು ಸಮವಸ್ತ್ರ ತೊಡಿಸಿದ್ದಾನೆ ! ಆತನನ್ನು ಆಟದ ಮೈದಾನದಿಂದಲೇ ಹೊರಹಾಕಬೇಕು. ರೀ ಸ್ವಾಮಿ, ತಾವು ತಮ್ಮ ಚೂಪಾದ ಮಾತು ಉಪಯೋಗಿಸಿ ಆತನ ಹೃದಯದಲ್ಲಿರುವ ಆ ಭೂತವನ್ನು ಹೊರಓಡಿಸಿ. ನನ್ನ ನಾಲಿಗೆಯಲ್ಲಿ ಕೆಟ್ಟ ಮಾತು ತಡೆಯುತ್ತದೆ. ನೋಡಿ, ಸಿಟ್ಟಿನಲ್ಲಿ ನನ್ನ ಕೈ ಕಾಲು ನಡುಗುತ್ತದೆ. ಇಂದು ಬೆಳಿಗ್ಗೆಯಿಂದ

ಚಂದ್ರ ಮತ್ತು ಮನುಷ್ಯನ ದುಸ್ಸಾಹಸದ ಬಗ್ಗೆ ಹೆಚ್ಚಿಗೆ ಯೋಚಿಸಿ ಯೋಚಿಸಿ ನನ್ನ ಮನಸ್ಸು ಚೈತನ್ಯಹೀನವಾಗಿದೆ. ಇದರ ಮೇಲೆ ಈ ಕೆಲಸಕ್ಕೆ ಬಾರದ ಟೀಮು ! ನಮ್ಮ ದಳ ಒಂದನೇ ಸ್ಥಾನವನ್ನು ಕಳೆದುಕೊಂಡುಬಿಟ್ಟಿದೆ. ಒಂದನೇ ಸ್ಥಾನ ! ಎಷ್ಟು ಭಯಂಕರ ಮಾತು. ಇನ್ನು ಒಂಬತ್ತು ಹತ್ತು ನಿಮಿಷ ಮಾತ್ರ ಉಳಿದಿದೆ. ತಾವು ಏನು ಹೇಳುತ್ತಿದ್ದೀರಿ ? ಗೋಲಾಗುತ್ತದೆ ಎಂದೇ ? ಹೇಗೆ ಆಗುತ್ತದೆ ? ಈ ಟೀಮಿನ ಎಲ್ಲ ಆಟಗಾರರು ಹಿಂದೆ ಸರಿದು ಗೋಲಿನ ಮುಂದೆ ಗೋಡೆಯನ್ನೇ ನಿರ್ಮಿಸಿ ಬಿಟ್ಟಿದ್ದಾರೆ. ಈ ಜನ ಹೇಗೆ ಆಟವಾಡುತ್ತಿದ್ದಾರೆ. ಇವರಲ್ಲಿ ಗೋಲ್ ಹೊಡೆಯುವ ಇಚ್ಛೆ ಯಾರಿಗಿದೆ ? ಅದೇ ಆಫ್ ಸೈಡ್‌ನಲ್ಲಿ ನಿಂತಿರುವ ಆ ಹುಡುಗ ಸುಲಭವಾದ ಒಂದು ಅವಕಾಶವನ್ನು ಹಾಳು ಮಾಡಿಬಿಟ್ಟ. ನನಗೆನಿಸುತ್ತೆ, ನಾನು ಆತನ ಮುಂದೆ ನಿಂತು ನನ್ನನ್ನು ನೋಡು, ನಾನು ಅರಿಂದಮ ಬಸು. ಈ ಟೀಮನ್ನು ನಾನು ಬಾಲ್ಯದಿಂದ ಉತ್ತೇಜಿಸುತ್ತಿದ್ದೇನೆ. ಅದು ಗೆಲ್ಲುತ್ತದೆ ಎಂದು ದೇವರಿಗೆ ಅರ್ಚನೆ ಮಾಡಿಸಿದ್ದೇನೆ. ಅದು ಸೋತರೆ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಸಹ ಇದೆ. ನೀನು ಎಂದಾದರೂ ಇದನ್ನೆಲ್ಲಾ ಯೋಚಿಸಿದ್ದೀಯಾ ? ಈ ಗುಂಪಿನಲ್ಲಿ ನಾನೊಬ್ಬ ವಿಶೇಷ ಮನುಷ್ಯ ಎಂಬುದೂ ನಿನಗೆ ಗೊತ್ತಿರಲಾರದು. ಎಷ್ಟು ದುಃಖದಿಂದ ಹನಿದುಂಬಿದ ಕಣ್ಣಿನಿಂದ ನಾನು ಗಡಿಯಾರ ನೋಡುತ್ತಿದ್ದೇನೆ ಇದರಿಂದ ಯಾರಿಗೇನು ? ನಾನು ನಕ್ಕರೆ ಅತ್ತರೆ ಅಥವಾ ಇನ್ನೇನು ಮಾಡಿದರೂ ತಾನೆ ಯಾರಿಗೆ ಏನು ? ಯಾರೂ ನನ್ನನ್ನು ನೋಡುತ್ತಲೇ ಇಲ್ಲ.

ಇಲ್ಲಾ ಸ್ವಾಮಿ. ಗೋಲ್ ಆಗಲಿಲ್ಲ. ರೆಫರಿ ನೀಳ ಶಿಳ್ಳೆ ಊದಿದ. ಆಟ ಮುಗಿದುಹೋಯಿತು. ಈಗ ದಯವಿಟ್ಟು ನನ್ನತ್ತ ಒಮ್ಮೆ ನೋಡಿ. ನಾನೆಷ್ಟು ಸೊರಗಿದ್ದೇನೆ ನೋಡಿ. ನನ್ನ ಭುಜ ಮುರಿದು ಹೋದಂತಿದೆ. ನೋಡಿ ನಮ್ಮ ಟೀಮನ್ನು ಕಂಡರೆ ನನಗೆಷ್ಟು ಪ್ರೀತಿ. ಆದರೆ ಇದರಿಂದ ಟೀಮಿಗೇನು ? ಅವರಲ್ಲಿ ಯಾರಿಗೂ ನನ್ನ ಪರಿಚಯುವೇ ಇಲ್ಲ. ಆದರೆ ಅವರ ಆ ಎಲ್ಲ ಸೋಲುಗೆಲವುಗಳಿಗೂ ನಾನು ಅತ್ತಿದ್ದೇನೆ. ಕುಣಿದಾಡಿದ್ದೇನೆ. ಗೊತ್ತಿಲ್ಲದವನ ಬೆನ್ನು ತಟ್ಟಿದ್ದೇನೆ; ಸುಮ್ಮಸುಮ್ಮನೆ. ಇದರಿಂದ ಯಾರಿಗೆ ತಾನೇ ಏನು ? ಬೆಳಗ್ಗೆಯಿಂದ ಚಂದ್ರ ಮತ್ತು ಆ ಮೂರು ಜನರ ಬಗ್ಗೆ ನಾನೆಷ್ಟು ಯೋಚಿಸಿ ಚಿಂತಾಕ್ರಾಂತನಾಗಿದ್ದೇನೆ, ಸರಿಯಾಗಿ ಊಟವನ್ನೂ ಮಾಡಿರುವುದಿಲ್ಲ. ಇಷ್ಟು ಉತ್ತೇಜಿತನಾಗಿದ್ದೆ ಬೆಳಿಗ್ಗೆಯಿಂದ ! ಇದರಿಂದ ಯಾರಿಗೆ ಏನು ಪ್ರಯೋಜನ ? ಯಾರಿಗೆ ಲಾಭ ? ಯಾರಿಗೆ ನಷ್ಟ ?

ಕೃಪೆ ಇಟ್ಟು ನನ್ನತ್ತ ಒಮ್ಮೆ ನೋಡಿ, ಇಲ್ಲವೇ ? ನನಗೆ ಗೊತ್ತು. ತಾವು ತಮ್ಮ ಟೀಮಿನ ಸ್ಥಿತಿ ಕಂಡು ವ್ಯಾಕುಲರಾಗಿದ್ದೀರಿ. ಇದರ ಮೇಲೆ ಚಂದ್ರ ಮತ್ತು ಆ ಮೂರು ಜನರ ಬಗ್ಗೆ ಸಹ ಯೋಚನೆ ಆಗಿದೆ. ಭೂಮಿಯ ಮೇಲೆ ಎಷ್ಟೊಂದು ಘಟನೆಗಳು ಜರುಗುತ್ತಿವೆ ! ಮನುಷ್ಯ ಇಪ್ಪತ್ತೊಂಬತ್ತುವರೆ ಅಡಿ ಉದ್ದ ಲಾಂಗ್‌ಜಂಪ್ ಮಾಡುತ್ತಿದ್ದಾನೆ. ಬಂದೂಕಿನ ಗುಂಡು ತಗುಲಿ ಪ್ರೆಸಿಡೆಂಟ್‌ನ ಸಾವು ಸಂಭವಿಸುತ್ತದೆ. ಓಟಿನಲ್ಲಿ ತಮ್ಮ ಪಾರ್ಟಿ ಸೋಲುತ್ತಿದೆ. ಕ್ರಾಂತಿ ಆಗಲು ಇನ್ನೇನು ಹೆಚ್ಚು ಕಾಲವಿಲ್ಲ. ಆದಕ್ಕೇ ನಾನು ಅರಿಂದಮ ಬಸು, ಬ್ಯಾಂಕಿನ ಕ್ಯಾಷ್ ಕ್ಲರ್ಕ್.

ತಮ್ಮಿಂದ ಇಷ್ಟು ಹತ್ತಿರ ನಿಂತಿದ್ದರೂ ತಮಗೆ ಕಾಣಿಸುತ್ತಿಲ್ಲ.

ಆ ದುತಲ್ಲೆಯ ವರಾಂಡದಲ್ಲಿ ರೈಲಿಂಗ್ ಹಿಡಿದು ಬಗ್ಗಿ ನಿಂತಿರುವ ನಾಲ್ಕು ವರ್ಷದ ಆ ಹುಡುಗ ನನ್ನ ಚಿಕ್ಕ ಮಗ ಹಾಪು. ಬಹಳ ಚಂಚಲ ಸ್ವಭಾವದವನು. ಬೆಳಿಗ್ಗೆಯಿಂದ ಹಠ ಮಾಡುತ್ತಿದ್ದಾನೆ. ರಥದ ಜಾತ್ರೆ ನೋಡಬೇಕು. 'ಬೇಗ ಬಂದು ಬಿಡಿ ಅಪ್ಪ' ಹೇಳಿದ್ದ. ಈಗಲೂ ಆತ ನನಗಾಗಿಯೇ ವರಾಂಡದಲ್ಲಿ ನಿಂತು ಕಾಯುತ್ತಿದ್ದಾನೆ. ಗುಂಗುರು ಕೂದಲಿನ ಕೆಳಗೆ ಆತನ ಕಣ್ಣುಗಳು ಹೊಳೆಯುತ್ತಿವೆ. ಇಷ್ಟು ದೂರದಿಂದಲೇ ನಾನು ಅದನ್ನು ಕಾಣಬಲ್ಲೆ.

ನಾನು ಒಳಗೆ ಹೋಗುವವನಿದ್ದೆ. ಅಷ್ಟರಲ್ಲಿ ಆತ ಧಪ ಧಪ ಕಾಲು ಹಾಕುತ್ತಾ ಕೆಳಗೆ ಇಳಿದುಬಂದ. ಆತನ ತಾಯಿ ಒಳಗೇ ಕೂಗುತ್ತಿದ್ದಳು: "ಹಾಪು... ಎಲ್ಲಿ ಹೋದೆ ? ಹಾ, ಹಾಪು – ಪೂ..." ಹಾಪು ನಗುತ್ತಾ ಓಡಿಬಂದು ನನ್ನ ಮೇಲೆ ಬಿದ್ದ. "ಅಪ್ಪಾ ಎಷ್ಟು ತಡಮಾಡಿದಿರಿ, ಹೂ, ಹೊರಡಿ" ಆತ ನುಡಿದ. "ಹಾ ! ಜನಾಬ್," ನುಡಿದೆ. ಹೊರಗಿನಿಂದ ಬಂದು ತನ್ನ ಜನರನ್ನು ಸೇರಿಕೊಂಡೊಡನೆ ಜೀವದಲ್ಲಿ ಜೀವ ಬರುತ್ತದೆ. ನಾನು ಮಗುವನ್ನು ಎತ್ತಿಕೊಂಡೆ. ಆತನ ಶರೀರದಿಂದ ಬೆವರಿನ ಸುವಾಸನೆ ಬರುತ್ತಿತ್ತು. ಚಳಿಗಾಲದ ಬಿಸಿಲಿನಂತೆ ಆ ಶರೀರದ ಬಿಸಿ ಹಿತವಾಗಿತ್ತು. ಆತನ ಶರೀರದೊಳಗೆ ಮುಖ ಹುದುಗಿಸಿದಾಗ ಆತನಲ್ಲಿ ಲೀನವಾದಂತೆನಿಸುತ್ತಿತ್ತು. ನಾನು ನುಡಿದೆ. "ಹೋಗೋಣ ಮಗು, ಬಹಳ ಹಸಿವಾಗುತ್ತಿದೆ. ಸ್ವಲ್ಪ ವಿಶ್ರಮಿಸಿಕೊಂಡು ಊಟ ಮಾಡ್ತೀನಿ."

ನಾನು ಎಷ್ಟು ಹೊತ್ತು ಮಲಗಿದ್ದೆನೊ ಅಷ್ಟೂ ಹೊತ್ತು ಹಾಪು ನನ್ನ ಶರೀರಕ್ಕೆ ಅಂಟೇ ಇದ್ದ. ಅಧೀರನಾಗಿ ಹೇಳಲು ಪ್ರಾರಂಭಿಸಿದ. 'ಹೂಂ, ಬೇಗ ಹೊರಡಿ ಅಪ್ಪ'. ಆತನ ತಾಯಿ ಆತನನ್ನು ಸೆಳೆದುಕೊಂಡಳು. ನಾನು ಬಹು ಪ್ರೀತಿಯಿಂದ ನುಡಿದೆ "ಒಯ್ಯಬೇಡ ಇನ್ನೂ ಮಗು." ನಿಜವಾಗಿ ಆತನ ಹಟ ನನಗೆ ಅಚ್ಚುಮೆಚ್ಚು.

ನನ್ನ ಮಗ ತುಂಬಾ ತುಂಟ. ಜಾತ್ರೆಗೆ ಹೋದೊಡನೆ ನನ್ನ ಕೈತಪ್ಪಿಸಿಕೊಂಡು ಓಡಲು ಪ್ರಯತ್ನಿಸುತ್ತಾನೆ. ನಾನು ನುಡಿದೆ. ಹಾಗೆಲ್ಲಾ ಮಾಡಬಾರದು ಮಗು, ನೀನು ನನ್ನ ಕೈ ಹಿಡಿದುಕೊಂಡೇ ಇರಬೇಕು. ಆಗ ನೀನು ಚೆನ್ನಾಗಿ ಸುತ್ತಿ ಸುತ್ತಿ ಜಾತ್ರೆ ನೋಡಬಹುದು." ಅವನು ಅತ್ತ-ಇತ್ತ ನೋಡಲು ಪ್ರಾರಂಭಿಸಿದ. ಅನಂತರ ಜೋರಾಗಿ ಅರಚುತ್ತಾ ಪ್ರಶ್ನಿಸಿದ. "ಅದೇನು ಅಪ್ಪಾ, ಅಲ್ಲಿ ಏನಿದೆ" ನಾನು ಅವನಿಗೆ ಅದು ಉಯ್ಯಾಲೆ, ಅದು ಸರ್ಕಸ್‌ನ ಡೇರೆ ಮತ್ತು ಅದು ಮೃತ್ಯು ಕೂಪ ಎಂತೆಲ್ಲಾ ಹೇಳಿದೆ.

ಕೈಯಲ್ಲಿ ಕರಿದ ಒಂದು ಹಪ್ಪಳ ಹಿಡಿದು ಹಾಪು ಉಯ್ಯಾಲೆ ಹತ್ತಿ ಕುಳಿತ. ಉಯ್ಯಾಲೆ ಸುತ್ತುತ್ತಿತ್ತು. ಹಾಪು ಕಾಣಿಸುತ್ತಿದ್ದ. ತಿರುಗುಯ್ಯಾಲೆ ಆಕಾಶದತ್ತ ಮೇಲೆ ಹೋದಾಗ ಹಾಪು ಹಿಹಿಹಿ ಎಂದು ನಗುತ್ತಿದ್ದ. ಕೈಯಾಡಿಸುತ್ತಿದ್ದ. ಉಯ್ಯಾಲೆ ಕೆಳಗೆ ಇಳಿದು ಮತ್ತೆ ಮೇಲೇರಿತು. ಹಾಪು ನನ್ನತ್ತ ನೋಡಿ ನೋಡಿ ನಗುತ್ತಿದ್ದ. ಅದನ್ನು ನೋಡೇ ನನ್ನ ಮನಸ್ಸು ಸಂತೋಷದಿಂದ ತುಂಬಿ ಬಂದಿತ್ತು.

ಮೃತ್ಯುಕೂಪದ ಕಟ್ಟೆಯ ಮೇಲೆ ನಿಂತು ನಾನು ನೋಡುತ್ತಿದ್ದೆ. ಅಸಾಧ್ಯ ಶಬ್ದದೊಡನೆ ಮೋಟಾರು ಸೈಕಲ್ ಬಹಳ ವೇಗದಿಂದ ಬಾವಿಯೊಳಗೆ ಸುತ್ತು

ಹಾಕುತ್ತಿತ್ತು. ಹಾಪು ನನ್ನನ್ನು ತಬ್ಬಿ ಹಿಡಿದು ಎಲ್ಲವನ್ನೂ ನೋಡುತ್ತಿದ್ದ.

ನಾವು ಅನಂತರ ಅರ್ಧಗಂಟೆಯ ಸರ್ಕಸ್‌ನ್ನೂ ನೋಡಿದೆವು. ಎರಡು ಶಿರದ ಮನುಷ್ಯ, ಹಾಡುವ ಬೊಂಬೆ, ಎಂಟು ಅಡಿ ಎತ್ತರದ ಮನುಷ್ಯ, ಹಾಪು ಮಾತನಾಡುವುದನ್ನೂ ನಿಲ್ಲಿಸಿ ಆಶ್ಚರ್ಯಚಕಿತ ದೃಷ್ಟಿಯಿಂದ ಎಲ್ಲವನ್ನೂ ನೋಡುತ್ತಿದ್ದ. ಹೊರಗೆ ಬಂದು ಆತನನ್ನು ಬಿಟ್ಟೆ. ಅವನು ನನ್ನೊಡನೆ ನಡೆಯುತ್ತಿದ್ದ. ಆತನ ಕೈ ನನ್ನ ಬೆವರಿನಿಂದ ತೊಯ್ದಿತ್ತು. ಅದಕ್ಕೆ ಆತನ ಕೈ ನಾನು ಬಿಟ್ಟಿದ್ದೆ.

ಹಾಪು ಹೋಗುತ್ತಿದ್ದ. ಅಂಗಡಿಯಲ್ಲಿ ತಗುಲಿಹಾಕಿದ್ದ ಪೀಪಿ ನೋಡುತ್ತಿದ್ದ. ಬಗ್ಗಿ ಮುಂದೆ ಓಡಿ ವಿಮಾನದ ಓಟ ನೋಡತೊಡಗಿದ್ದ. ಏರ್‌ಗನ್, ಬಣ್ಣದ ಚೆಂಡು, ಸುತ್ತಿ ಸುತ್ತಿ ಎಲ್ಲ ಕಡೆಗಳಲ್ಲೂ ನೋಡುತ್ತಿದ್ದ. ನಿಧಾನವಾಗಿ ಹಾಪು ಗುಂಪಿನಲ್ಲಿ ಸೇರಿ ನಡೆಯುತ್ತಿದ್ದ. ಆಗ ನಾನು ನಮ್ಮ ಟೀಮ್‌ನ ವಿಷಯ ಯೋಚಿಸುತ್ತಿದ್ದೆ. ಇಂದು ಖಾಮೆಖಾ ಎಲ್ಲಾ ಹಾಳುಗೆಡುಹಿದ. ಚಂದ್ರನತ್ತ ಮೂರು ಜನ ಹೋಗುತ್ತಿದ್ದರು. ಏನು ಅವರು ಚಂದ್ರನನ್ನು ತಲುಪುತ್ತಾರೆಯೋ ? ಇದ್ದಕ್ಕಿದ್ದಂತೆಯೇ ಗೊತ್ತಾಯಿತು. ಹಾಪು ಎಲ್ಲೂ ಕಂಡುಬರುತ್ತಿರಲಿಲ್ಲ. ಗುಂಪಿನಲ್ಲಿ ಒಂದು ಸೆಕೆಂಡ್‌ನ ಹಿಂದೆ ಆತನ ನೀಲಿ ಬಣ್ಣದ ಷರ್ಟು ಕಂಡುಬಂದಿತ್ತು. ನೋಡು ನೋಡುತ್ತಿದ್ದಂತೆ ಕಾಣದಾಗಿದ್ದ. ಹಾಪೂ ಕೂಗುತ್ತಾ ನಾನು ಮುಂದೆ ಓಡಿದೆ.

"ಸರ್ ನಿಮ್ಮಲ್ಲಿ ಯಾರಾದರೂ ನೀಲಿ ಬಣ್ಣದ ಷರಟು ಧರಿಸಿದ್ದ ನಾಲ್ಕು ವರ್ಷದ ಹುಡುಗನನ್ನು ನೋಡಿದಿರಾ ? ಆತನ ಹೆಸರು ಹಾಪು. ಬಹಳ ತುಂಟ, ನೋಡಿಲ್ಲವೆ ? ನೀಳವಾದ ತಲೆಗೂದಲು. ಹೊಳೆಯುತ್ತಿರುವ ತುಂಟತನ. ತುಂಬಿದ ಕಣ್ಣುಗಳು. ಅಲ್ಲಿ, ಅಲ್ಲಿ ! ಬೊಂಬೆ ಅಂಗಡಿಯ ಮುಂದೆ ನಿಂತಿರುವ ಹುಡುಗ ಅವನಲ್ಲ. ನಿಜವಾಗಿ ಅವರಿಬ್ಬರಲ್ಲಿ ಬಹಳ ಹೋಲಿಕೆ ಇದೆ ! ಇಲ್ಲ, ಆತನ ಮುಖದಲ್ಲಿ ಅಂತಹದೇನೂ ವಿಶೇಷ ಗುರುತೇನೂ ಇರುವುದು ನನಗೆ ನೆನಪಿಲ್ಲ. ಆತ ಸಂಪೂರ್ಣವಾಗಿ ಸಾಧಾರಣ ಮುಖದ ಹುಡುಗ. ನನ್ನನ್ನೇ ಹೋಲುತ್ತಾನೆ. ನಾನು ಇಷ್ಟೇ ಹೇಳಬಲ್ಲೆ. ಆತನ ವಯಸ್ಸು ಕೇವಲ ನಾಲ್ಕು. ಮೈಮೇಲೆ ನೀಲಿಬಣ್ಣದ ಷರಟು. ಆದರೆ ನೀಲಿ ಬಣ್ಣದ ಷರಟು ಧರಿಸಿರುವವರು ಇಲ್ಲಿ ಬಹಳ ಮಂದಿ ಇದ್ದಾರೆ. ಇವರಲ್ಲಿ ನಾಲ್ಕು ವರ್ಷದವರೂ ಇದ್ದಾರೆ. ಅಲ್ಲಾ ಸಾರ್, ಈ ಸಾವಿರಾರು ಜನರ ಮಧ್ಯೆ ನನ್ನ ಹಾಪು ಇದ್ದಾನೆ ಎಂಬುದನ್ನು ನಂಬಲೇ ಆಗದು. ಅಲ್ಲದೆ ಹಾಪುವಿಗೂ ತಾನು ಯಾರೆಂಬುದನ್ನು ಸ್ಪಷ್ಟವಾಗಿ ಹೇಳುವುದು ಕಷ್ಟ. ತಮಗೆ ಸರಿಯಾಗಿ ಅರ್ಥವಾಗಲಿಲ್ಲವೆದು ತೋರುತ್ತದೆ. ಹಿಂದೊಮ್ಮೆ ಆತನ ತಾಯಿಗೂ ಅರ್ಥವಾಗಿರಲಿಲ್ಲ. ಒಂದು ವೇಳೆ ನೀವೇನಾದರೂ ಹಾಪುವನ್ನು ಕಂಡರೆ ದಯವಿಟ್ಟು ಆತನಿಗೆ ನಾನೇ ಆತನ ತಂದೆ ಎಂದ ತಿಳಿಸಿ. ಅದಕ್ಕಾಗಿಯೇ ತಮ್ಮಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ. ನನ್ನನ್ನು ತಾವು ಒಮ್ಮೆ ಚೆನ್ನಾಗಿ ನೋಡಿ. ಕೃಪೆ ಮಾಡಿ ಮರೆಯಬೇಡಿ."

# ಹಿಂದಿನ ಭೂಮಿ

*ದೇವೇಶ್ ರಾಯ್*

ದಿನಪೂರ್ತಿ ಗಾಳಿ ಮನಸ್ವೀ ಬೀಸುತ್ತಿತ್ತು. ಚೈತ್ರ ಮಾಸದ ದಿನದಂತೆ ಸ್ವೇಚ್ಛೆಯಿಂದ ಅದು ಬೀಸುತ್ತಿತ್ತು ಹಗಲು ರಾತ್ರಿ. ಕ್ಲಾಸು ಪೂರೈಸಿದೊಡನೆ ವಿಶ್ರಾಂತಿ ಗೃಹದತ್ತ ಹೋಗುವಾಗ ವಿನಯನ ದೃಷ್ಟಿ ಸ್ಕೂಲಿನ ಉತ್ತರದಲ್ಲಿ ಕಟ್ಟಿರುವ ಒಂದು ಮನೆಯತ್ತ ಹರಿಯಿತು. ಅಲ್ಲಿಂದ ಮತ್ತೆ ಕ್ಲಾಸಿಗೆ ಹೋಗುವಾಗ ನೀಲಗಿರಿ ಮರದ ಸುಳಿಯತ್ತ ಆತನ ದೃಷ್ಟಿ ಬಿತ್ತು. ಸ್ಮಶಾನದ ಆಗ್ನೇಯ ಮೂಲೆಯಲ್ಲಿ ಆ ಮರವಿದ್ದುದರಿಂದ ಅಲ್ಲಿಂದ ಸ್ಮಶಾನ ಕಾಣಿಸುತ್ತಿರಲಿಲ್ಲ.

ಈ ಗಾಳಿಯಿಂದಾಗಿ ಶರೀರದಲ್ಲಿನ ನೀರು ಅಧಿಕ ಪ್ರಮಾಣದಲ್ಲಿ ಒಣಗಿ ಹೋಗುವುದರಿಂದ ಚರ್ಮ ಒಣಗಿ ಒರಟಾಗುತ್ತದೆ. ಮುಖದ ಮೇಲೆ ಕೈ ಆಡಿಸಿದರೆ ಜ್ವರ ಬಂದಂತೆನಿಸುತ್ತದೆ. ಬಿಳಿ ಬಟ್ಟೆ ಅಥವಾ ಒಗೆದ ಬಟ್ಟೆ ತೊಟ್ಟಿದ್ದರೆ, ಮುಖ ಚೌರ ಮಾಡಿಸಿಕೊಂಡಿದ್ದರೆ, ಬಹುಶಃ ಅಷ್ಟೊಂದು ತುರಿಕೆ, ಶುಷ್ಕತೆ ಕಂಡುಬರುತ್ತಿರಲಿಲ್ಲ.

ನೀಲಗಿರಿ ಮರದಷ್ಟು ಎತ್ತರವಿಲ್ಲದ, ಉತ್ತರ ದಿಕ್ಕಿನಲ್ಲಿದ್ದ ಆ ಮನೆಯ ತಲೆಯು ಮೇಲೆ ಆಕಾಶ ಬಿಟ್ಟು ಮತ್ತೇನು ಇರಲಿಲ್ಲ. ಆ ಆಕಾಶ ಹಾಗೂ ನೀಲಗಿರಿ ಮರಗಳು ಶೂನ್ಯದತ್ತ ಮುಖ ಮಾಡಿ ಹಿಂದೊಮ್ಮೆ ಅಲ್ಲಿ ಏನೋ ಇದ್ದು ಈಗ ಇಲ್ಲದಿರುವಿಕೆಯನ್ನೊ ಅಥವಾ ಸಮಾಪ್ತಿಗೊಂಡ ಜಾತ್ರೆಯ ಕ್ಷೇತ್ರವನ್ನೊ ಬಹುಶಃ ಗಮನಿಸುತ್ತಿದ್ದಿರಬಹುದು. ಈ ಶೂನ್ಯತೆಯು ಜೊತೆ ವಿನಯನಿಗೆ ಎಷ್ಟು ತಾದಾತ್ಮ್ಯತೆ ಬೆಳೆದಿತ್ತೆಂದರೆ ವಸಂತ ಋತುವಿನಂತೆ ಬೀಸುತ್ತಿದ್ದ ತಂಗಾಳಿ ಎಷ್ಟು ಮನಸ್ಸನ್ನು ಸಂತೋಷಗೊಳಿಸಬೇಕಾಗಿತ್ತೋ ಅದು ಆಗುತ್ತಿರಲಿಲ್ಲ. ಆತನ ಮನಸ್ಸಿನಲ್ಲಿದ್ದ ಒಂದು ಅತೃಪ್ತಿಗೆ ಕೊನೆಯೇ ಇಲ್ಲದಾಗಿತ್ತು. ಅದೇ ಎಲ್ಲೆಡೆ ಆತನಿಗೆ ಕಾಣಿಸುತ್ತಿತ್ತು. ಮೈದಾನದಲ್ಲಿ ಅಶೋಕ, ಹುಡುಗರೊಡನೆ ಕ್ರಿಕೆಟ್ ಆಟವಾಡುತ್ತಿದ್ದ. ಅಶೋಕನ ಪ್ಯಾಂಟ್ ಹಾಗೂ ಕ್ರಿಕೆಟ್ ಆಟದಲ್ಲಿನ ಆತನ ಭಂಗಿ ವಿನಯನನ್ನು ಮೋಹಿತಗೊಳಿಸಿತ್ತು. ಕಪ್ಪು ಹಲಗೆ ಮೇಲೆ ತಾನೇ ನಿರ್ಮಿಸಿದ್ದ ಮರದ ಕೊಂಬೆಯ ಮೇಲಿಂದ ಹಾರಲು ಸಿದ್ಧವಾಗಿದ್ದ ಪಕ್ಷಿಯ ಚಿತ್ರದತ್ತ ದೃಷ್ಟಿ ಹರಿಸಿದ್ದ. ಬಾಗಿಲಲ್ಲಿ ನಿಂತಿದ್ದ ಅವನಿಗೆ ಮನಸ್ವೀ ಬೀಸುತ್ತಿದ್ದ ಗಾಳಿಯ ಅನುಭವವಾಗುತ್ತಿತ್ತು. ಆತ ಇಂದು

ಮುಖ ಚೌರ ಮಾಡಿಕೊಂಡಿದ್ದರೆ, ಇಸ್ತ್ರಿ ಮಾಡಿದ, ಒಗೆದ ಬಟ್ಟೆಯನ್ನು ಧರಿಸಿದ್ದರೆ ಸ್ವಾಗತಿಸುತ್ತಿರುವ ಈ ಗಾಳಿಯನ್ನು ಆನಂದಿಸುತ್ತಿದ್ದ, ಸುಟ್ಟ ಪದಾರ್ಥ ಒಣಗಲು ಗಾಳಿಯನ್ನು ಆಹ್ವಾನಿಸುವಂತೆ. ತನ್ನನ್ನು ತಾನೇ ವ್ಯರ್ಥವಾಗಿ ವ್ಯಯಿಸುತ್ತಿರುವಂತೆ ವಿನಯ ಕಣ್ಣು ಮುಚ್ಚಿ ಮುಖವನ್ನು ಗಾಳಿಗೆ ಒಡ್ಡಿ ನಿಂತಿದ್ದ. ವಸಂತದ ಗಾಳಿಯನ್ನು ದಕ್ಷಿಣ ಮಾರುತ ಅನ್ನುವುದುಂಟು. ಅವನದು ಉತ್ತರ ಬಂಗಾಳ. ದಕ್ಷಿಣದಲ್ಲಿ ಸಮುದ್ರವಿತ್ತು. ಸಮುದ್ರದ ದಡದಲ್ಲೇ ಕಲ್ಕತ್ತಾ ನಿರ್ಮಾಣಗೊಂಡಿತ್ತು. ಈ ಗಾಳಿ ಕಲ್ಕತ್ತಾ ಕಡೆಯಿಂದಲೇ ಬೀಸುತ್ತಿತ್ತು. ಈ ಅನುಭವ ಆತನನ್ನು ವ್ಯರ್ಥ ವಿನಾಶದತ್ತ ಕೊಂಡೊಯ್ಯುತ್ತಿತ್ತು.

ಸಂಜೆಗೆ ಗಾಳಿಯ ಚಲನೆ ನಿಧಾನಗೊಂಡಿತ್ತು. ಕೃಷ್ಣಪಕ್ಷದ ಪ್ರಥಮ ಚಂದ್ರ ಆಕಾಶದಲ್ಲಿ ನೇತಾಡುತ್ತಿದ್ದ. ಬೀಸುತ್ತಿದ್ದ ಗಾಳಿಯಲ್ಲಿ ರಾತ್ರಿಯ ಕಠೋರ ಚಳಿಯಿತ್ತು. ರಸ್ತೆಯ ಧೂಳು ಕೊಚ್ಚಿಹೋಗಿತ್ತು.

ಚಪ್ಪಲಿಯ ಸ್ಥಿತಿ ಎಷ್ಟು ಕೆಟ್ಟಿತ್ತು ಅಂದರೆ ನಡೆಯುವಾಗ ಅದರಿಂದ ಹೊರಡುತ್ತಿದ್ದ ಶಬ್ದ ಯಾರೋ ಕುಂಟ ಕಾಲೆಳೆದುಕೊಂಡು ನಡೆಯುತ್ತಿರುವಂತೆನಿಸುತ್ತಿತ್ತು. ಜನತೆಯ ಕಾಲಿನ ಶಬ್ದ ಕೆಳಗೆ ಅದು ಕೇಳಿಸದೆಯೇ ಉಳಿದು ಹೋಗುತ್ತಿತ್ತು. ಆದರೆ ಸಂಜೆ ಜನಗಳ ಗುಂಪಿನ ಗದ್ದಲ ಕಡಿಮೆ ಇದ್ದಾಗ ವಿನಯನಿಗೆ ಆ ಶಬ್ದ ಸ್ಪಷ್ಟವಾಗಿ ಕೇಳಿಬರುತ್ತಿತ್ತು. ರಾತ್ರಿಯ ಗಾಢ ನಿದ್ದೆಯಿಂದ ಇದ್ದಕ್ಕಿದ್ದಂತೆಯೇ ಎಚ್ಚರವಾದರೆ ಗಡಿಯಾರದ ಟಿಕ್ ಟಿಕ್ ಧ್ವನಿ ಸ್ಪಷ್ಟವಾಗಿ ಕೇಳಿಸುವಂತೆ ಕುಂಟನ ನಡಿಗೆಯ ಶಬ್ದ ಕಿವಿಯಲ್ಲಿ ಗುಯ್‌ಗುಟ್ಟುತ್ತಿತ್ತು – ಅವಿಶ್ರಾಂತ ದುಡಿಮೆ ಅರ್ಥಶೂನ್ಯ. ಇಷ್ಟೊಂದು ಏಕಾಂತತೆ, ಇಷ್ಟು ನಿಶ್ಚಿಂತೆ, ಹಾಗೂ ಕ್ರೋಧಶೂನ್ಯತೆ! ವಿನಯನಿಗೆ ಅನಿಸಿತು, ಪ್ರಪಂಚ ನಿಲ್ಲುವುದಿಲ್ಲ ಚಲಿಸುತ್ತಲೇ ಇರುತ್ತದೆ. ವಿನಯ ಇದ್ದಕ್ಕಿದ್ದಂತೆಯೇ ಒಮ್ಮೆ ನಿಂತ. ನಡಿಗೆಯ ಶಬ್ದವೂ ನಿಂತಿತು. ಅಂದರೆ ಆ ಶಬ್ದ ತನ್ನ ಕಾಲಿನದೇ! ನನ್ನ ದಾರಿಯಲ್ಲೇ ಶಬ್ದ! ನನ್ನದೇ ಶಬ್ದ! ಈ ನಿಶ್ಚಯಕ್ಕೆ ಬಂದು ಪುನಃ ವಿನಯ್ ನಡೆಯತೊಡಗಿದ. ಕುಂಟನ ನಡಿಗೆ, ಕ್ರೋಧ ಶೂನ್ಯ. ಅಭ್ಯಸ್ತ ನಡಿಗೆ ಇದು ಬದಲಾಗದು. ನಿಲ್ಲುವುದೂ ಇಲ್ಲ. ಸ್ಯಾಂಡಲನ್ನು ಈ ಕೂಡಲೆ ಸರಿಪಡಿಸುತ್ತೇನೆ ಅಂದುಕೊಂಡು ಆತ ತನ್ನ ಸುತ್ತಲು ಹಾಗೂ ಎದುರಿಗೆ ನೋಡಿದ. ಏನೂ ಉಪಾಯ ಕಾಣಿಸಲಿಲ್ಲ. ಇದು ಕಲ್ಕತ್ತಾ ಆಗಿದ್ದರೆ ಎಲ್ಲರ ನಡಿಗೆಯ ಶಬ್ದದಲ್ಲಿ ತನ್ನದು ಮುಚ್ಚಿಹೋಗುತ್ತಿತ್ತು. ಆದರೆ ಇಲ್ಲಿ ಮತ್ತೆ ಯಾರ ನಡಿಗೆಯ ಶಬ್ದ ಕೇಳಿಸದು. ಮರಣಾವಸ್ಥೆಯಲ್ಲಿರುವ ರೋಗಿ ಹೇಗೆ ರೋಗಗ್ರಸ್ಥ ಶರೀರವನ್ನು ಒಮ್ಮೆ ಮುದುಡಿಕೊಳ್ಳುತ್ತಾನೆ, ಇನ್ನೊಮ್ಮೆ ನೀಳ ಮಾಡುತ್ತಾನೆ, ಕೈ ಆಡಿಸುತ್ತಾನೆ, ಕಣ್ಣು ಮಿಟುಕಿಸಿ ಮನಸ್ಸಿನಲ್ಲಿನ ಆವಶ್ಯಕ ವಿಷಯವನ್ನು ತುರ್ತಾಗಿ ಹೊರಗೆಡಹಲು ಆತುರಪಡುತ್ತಾನೆ ಆದರೆ ಮತ್ತೊಂದೇ ಕ್ಷಣದಲ್ಲಿ ಬಾಡಿಹೋಗುತ್ತಾನೊ ಹಾಗೇ ಚಪ್ಪಲಿಯನ್ನು ರಿಪೇರಿ ಮಾಡಿಸುವ ವಿಷಯ ಮನದಲ್ಲಿ ವ್ಯಗ್ರಗೊಂಡು ಮತ್ತೊಂದು ಕ್ಷಣದಲ್ಲೇ ಬಾಡಿ ಹೋಯಿತು. ಭಕಲ್ ಭನ್, ಭಕಲ್ ಭನ್! ಇದೊಂದು ವಿಚಿತ್ರ ಶಬ್ದ! ಕತ್ತಲೆಯಲ್ಲಾಗಲಿ, ತೀಕ್ಷ್ಣ

ಬೆಳಕಿನಲ್ಲಾಗಲಿ, ಕೃಷ್ಣ ಪಕ್ಷದಲ್ಲಾಗಲಿ, ಶುಕ್ಲ ಪಕ್ಷದಲ್ಲಾಗಲಿ, ಕ್ಷೌರ ಮಾಡಿಕೊಂಡಿರಲಿ, ಇಲ್ಲದಿರಲಿ, ಯಾವಾಗಲೂ ಇದೊಂದು ಶಬ್ದ ಕೇಳಿ ಬರುತ್ತಿತ್ತು. ಇಲ್ಲಿ ಸಾಮಾನ್ಯ ಜನರು ಇದ್ದರೆ! ಇಲ್ಲ! ಅದಕ್ಕೆ ಇಲ್ಲಿ ಜಟಕಾ ಗಾಡಿ ಚಲಿಸಲಿ, ಎತ್ತಿನ ಗಾಡಿ ಚಲಿಸುತ್ತಿರಲಿ, ಅವುಗಳಿಂದ ಚಿ–ಚೀ ಶಬ್ದ ಏಳುತ್ತಿರಲಿ ಏಳುತ್ತವೆ, ಯಾರೂ ಇದನ್ನು ಒಪ್ಪುವವರಿಲ್ಲ. ಯಾರೂ ಎಚ್ಚರಿಕೆ ನೀಡುವವರಿಲ್ಲ, ಯಾರೂ ಮಾಲೀಕರಿಲ್ಲ, ಯಾರೂ ನೌಕರರಿಲ್ಲ. ಎಲ್ಲರೂ ಸಾರ್ವಜನಿಕರೇ. ಭಕಲ್ ಭಕ್, ಭಕಲ್ ಭಕ್....! ಜ್ವರದಿಂದ ಪೀಡಿತ ರೋಗಿಯ ರೀತಿಯಲ್ಲಿ ಕೊಂಚ ಕಠೋರ ಸ್ವರ ಹೊರಡಿಸಿ ವಿನಯ್ ತನ್ನ ಮನಸ್ಸಿನ ತುಮುಲವನ್ನು ಹೊರಹಾಕಲು ಬಯುಸಿದ. ಆದರೆ ಈ ನಡಿಗೆಯ ಶಬ್ದ! ಈ ನಡಿಗೆಯ ಶಬ್ದವನ್ನು ನಿಲ್ಲಿಸುವ ಕ್ರಮ ಆತನಿಗೆ ತಿಳಿಯದು. ಆ ನಗರಕ್ಕೇ ತಿಳಿಯದು. ಅದಕ್ಕೆ ಅವರತ ಭಕಲ್ ಭಕ್, ಭಕಲ್ ಭಕ್ ಕೇಳಿಬರುತ್ತಲೇ ಇದೆ.

ಪೂರಾ ದಿನದ ಅನುಭವವನ್ನು ಮುಖ್ಯವಾಗಿ ಸಂಜೆ ನಡೆಯುತ್ತಾ, ಅವನು ಯಾವ ರೀತಿ ಸ್ವರ ಹೊರಡಿಸಿ ತನ್ನನ್ನು ತಾನೇ ವ್ಯಕ್ತಪಡಿಸಿದ್ದನೋ ಅದರಂತೆ ವಿನಯನ ಹೊಟ್ಟೆಯಿಂದ ಕಂಠದ ತನಕ ಎದ್ದ ಒಂದು ದೊಡ್ಡ ನಗು ಗಂಟೆ ಬಾರಿಸಿತು. ನಗುವಿನ ಸಂಪ್ರದಾಯವನ್ನೇ ಮರೆತು ವಿನಯ್ ಕುಡುಕನಂತೆ ನಗಲು ಪ್ರಯತ್ನಿಸಿದ. ಬಹುಶಃ ಈ ನಗುವಿನ ಮೂಲಕ ಆತ ತನ್ನ ಬಾಯಿಂದ ಹೊರಡುತ್ತಿದ್ದ ವಾಸನೆಯನ್ನು ಮೂಸಿ ನೋಡುವುದಿತ್ತು. ತೇಗುವ ಮೊದಲ ಪ್ರಯತ್ನವನ್ನು ಆತ ಹತ್ತಿಕ್ಕದಾಗಿದ್ದ. ಏತಕ್ಕೆಂದರೆ ಆಗ ಆತ ಬಾಲ್ಯದಿಂದ ಇಂದಿನವರೆಗೆ ತನ್ನಲ್ಲಿ ಎಷ್ಟು ವಸ್ತುಗಳು ಸಂಚಿತಗೊಂಡಿವೆ ಎಂಬುದನ್ನು ಯೋಚಿಸುತ್ತಿದ್ದಂತೆ, ಹೊಟ್ಟೆ ಕಟ್ಟು ಊದಿಕೊಂಡಿದೆ ಎನಿಸಿತು. ಆಹ್! ಏನು ವಿಷಯ ? ಸಂಜೆಯ ಸಮಯ, ಇಬ್ಬರು ಸಹೋದರರೂ ಆಲೂ ಕಬಾಬ್ ತಿಂದದ್ದೇ ತಿಂದದ್ದು! ಈ ಚಿಂತೆಯಲ್ಲಿ ಮುಳುಗೇಳುತ್ತಾ ಮೂರು ನಾಲ್ಕು ಬಾರಿ ತೇಗಲು ಪ್ರಯತ್ನಿಸಿದ. ಗಂಟಲಿನಲ್ಲಿ ಏನೊ ಕೆರತ ಆದಂತಾಯಿತು. ಈ ಚಿಂತೆಯಿಂದ ಮುಕ್ತಗೊಂಡು ಒಂದೆರಡು ಬಾರಿ ಪ್ರಯತ್ನಿಸಿದ ನಂತರ ತೇಗಲು ಶಕ್ತನಾದ. ಆತ ಆ ಸಮಯದಲ್ಲಿ ಬಾಯಿ ತೆರೆಯುವುದನ್ನೇ ಮರೆತುಬಿಟ್ಟಿದ್ದ. ಅದಕ್ಕೆ ಕೆಟ್ಟ ವಾಸನೆಯನ್ನು ಆಘ್ರಾಣಿಸಲು ಅಶಕ್ತನಾದ. ಈಗ ಆತ ಬಾಯಿ ತೆರೆದು ಒಂದೆರಡು ಬಾರಿ ಪ್ರಯತ್ನಿಸಿ ನುಡಿದ – "ಆಹಾ! "ಏನು ಮಾಡುತ್ತಿದ್ದಿ?" ತನ್ನನ್ನೇ ಧಿಕ್ಕರಿಸಿಕೊಂಡು ನಡೆಯಲು ಪ್ರಾರಂಭಿಸಿದ. ಕೂಡಲೇ ಕೆಟ್ಟ ಶಬ್ದ ಕೇಳಿಸಿತು. ಭಕಲ್ ಭಕ್, ಭಕಲ್ ಭಕ್. ಈ ಶಬ್ದವನ್ನು ಕೇಳದವನಂತೆ ನಟಿಸುತ್ತಾ ವಿನಯ್ ಯೋಚಿಸಿದ -'ನಾನೇನೊ ನಡೆಯುತ್ತಿದ್ದೇನೆ ಆದರೆ ಎಲ್ಲಿಗೆ? ಇದನ್ನೇ ಯೋಚಿಸಿಲ್ಲವಲ್ಲ! ಅಂದರೆ ನಾನೇನು ಯೋಚಿಸಿದ್ದೇನೆ? ಏನೂ ಇಲ್ಲ. ಮನೆಯಿಂದ ಹೊರಡುವಾಗಲೂ ನಾನು ಯೋಚಿಸಿರಲಿಲ್ಲ. ಬೆಳಗ್ಗೆಯ ಗತಿಯಂತೆ ಇಂದು ಸಂಜೆ ಸುಬೇಲ್ ದಾ ರವರ ಮನೆಗೆ ಹೋಗಬೇಕೆ? ಹೋಗಿ ಅಲ್ಲಿ ಏನು ಮಾಡಲಿ? ಅಲ್ಲಿ ಇನ್ನೊಮ್ಮೆ ಪೇಪರನ್ನು ಓದುತ್ತೇನೆ ಅಷ್ಟೇ ತಾನೆ? ಅಥವಾ

ಹೊರ ವರಾಂಡದಲ್ಲಿ ಮಲಗುತ್ತೇನೆ. ಅಥವಾ ಆ ಹುಡುಗಿಯ ಹೆಸರೇನು? ಗುಲಾಬ್, ಟಗರ್ ಅಥವಾ ಜುಹೀ? ಒಟ್ಟಿನಲ್ಲಿ ಏನೊ ಒಂದು?'

ವಿಚಾರಸೂತ್ರ ವಿನಯನ ಕೈತಪ್ಪಿತು. ಈ ಸೂತ್ರ ಕಳೆದುಹೋದ ನಂತರ ಬೇರೊಂದು ಸೂತ್ರ ಸಿಕ್ಕಿತು. ಛಕಲ್ ಛಕ್, ಛಕಲ್ ಛಕ್! ಕಾಲಿನ ಯಾವ ಸದ್ದಿನಿಂದ ಆತ ಅಚೇತನನಾಗಿದ್ದನೋ ಸಮಯ ದೊರೆತೊಡನೆ ಆತ ಅದರ ಮೇಲೆ ಆಕ್ರಮಣ ಮಾಡಿದ. ಛಕಲ್ ಛಕ್, ಛಕಲ್ ಛಕ್! ಇಲ್ಲ, ಹೋಗುವುದಿಲ್ಲ ಇಲ್ಲ, ಹೋಗುವುದಿಲ್ಲ. ಸುಬೀರ್ ದಾ ರವರ ಮನೆಗೆ ನಾನು ಹೋಗುವುದಿಲ್ಲ. ಗಲ್ಲಿ ಎದುರಿಗೇ ಇತ್ತು. ಆದ್ದರಿಂದಲೇ ತನ್ನಲ್ಲೇ ತಾನು ಹೇಳಿಕೊಂಡ – ಇಲ್ಲ ಹೋಗುವುದಿಲ್ಲ, ಇಲ್ಲ ಹೋಗುವುದಿಲ್ಲ. ಏನೇ ಆದರೂ ನಾನು ಹೋಗುವುದಿಲ್ಲ; ನಾನು ಹೋಗುವುದಿಲ್ಲ. ಹೇಳುತ್ತಾ ಹೇಳುತ್ತಾ ಎರಡು ಹೆಜ್ಜೆ ಮುಂದೆ ಹೋಗಿ ತನ್ನನ್ನು ತಾನೇ ಗದರಿಸಿಕೊಂಡ. 'ಇದೆಲ್ಲಾ ಏನಾಗುತ್ತಿದೆ! ಕೊನೆಯ ಪಕ್ಷ ಇಲ್ಲಿ ಸುಬೀರ್ ದಾ ನ ಮನೆಯಾದರೂ ಇದೆ. ಅಲ್ಲಿಗೇ ಹೋಗುತ್ತೇನೆ. ಇಲ್ಲದಿದ್ದರೆ ಎಲ್ಲಾ ಸಮಯ ಮನೆಯಲ್ಲೇ ಕಳೆಯಬೇಕಾಗುತ್ತದೆ.

ವಿನಯ ಬಲಗಡೆ ತಿರುಗಿದ. ಛಕಲ್ ಛಕ್, ಛಕಲ್ ಛಕ್! ವಿಚಿತ್ರ ತೊಂದರೆ! ಎಲ್ಲವೂ ಏರುಪೇರು! ಇಂದು ಬಾಬು ಈ ಯ ಹಾಡುಗಳನ್ನು ಅವಲಂಬಿಸಿ ಚಿತ್ರ ಮಾಡುವ ಮಾತು ಇತ್ತು. ಹುಡುಗಿಯ ಹೆಸರು ಬಾಬುಈ ತರುಣಿಯ ಹೆಸರು ಬಾಬುಈ. ಛಕಲ್ ಛಕ್, ಛಕಲ್ ಛಕ್ – ಈ ಶಬ್ದವಂತೂ ಆಗುತಲೇ ಇತ್ತು. ಕತ್ತಲಿರಲಿ, ಬೆಳಕಿರಲಿ, ಅಂತೂ ವಿರಾಮಹೀನ. ಸುಧೀರಬಾಬುಗಳ ಮನೆಯ ಒಳಗೆ ಹೋಗಿ ವಿನಯ ಉದಾಸಿಯಾದ. ಕಲ್ಕತ್ತಾದ ಬಗ್ಗೆ ಆತನ ಮನಸ್ಸು ಉದಾಸಗೊಂಡಿತು. ತಂದೆ, ತಾಯಿ, ಅಣ್ಣ ತಂಗಿಯರಿಂದ ತುಂಬಿದ ಮನೆಯಿಂದ, ಗೆಳೆಯರು ಮಿತ್ರರುಗಳಿಂದ ತುಂಬಿದ ಕಾಫಿ ಕ್ಲಬ್‌ನಿಂದ, ಜನಗಳಿಂದ ತುಂಬಿದ ಟ್ರಾಂನಿಂದ, ಅವನು ಇಲ್ಲಿಗೆ ಬಂದ. ಬಾಗಿಲು ತೆಗೆಯುವಾಗ ಆಗುವ ನಡಿಗೆಯ ಶಬ್ದವನ್ನು ಆತ ಕೊಂಚಕಾಲ ನಿಯಂತ್ರಿಸಿದ. ಗೇಟ್ ತೆಗೆಯುವಾಗ ಈತ ಒಂದು ನೀಳ ಉಸಿರನ್ನು ಬಿಟ್ಟ. ಆನಂತರ ಪುನಃ ಛಕಲ್ ಛಕ್ – ಛಕಲ್ ಛಕ್. ಒಂದೇ ಶಬ್ದ ಕೇಳಿಸುತ್ತಿತ್ತು.

ಕಲ್ಕತ್ತಾದ ಬಂದರಿನಲ್ಲಿ ಹಡಗನ್ನು ನಿಲ್ಲಿಸಿ ಸಂಜೆಯನ್ನು ಕಳೆಯಲು ಬಂಗಾಳ, ಅಸ್ಸಾಂನಿಂದ ಹಿಡಿದು ಮಧ್ಯಪ್ರದೇಶದ ತನಕ ಹಬ್ಬಿರುವ ವಿಶಾಲ ಮೈದಾನದಲ್ಲಿ ಬಿಟ್ಟ ನಾವಿಕನಂತಾಗಿದ್ದ ವಿನಯ್.

ಅದೇ ಒಂದು ಶಬ್ದ. ಅಮಾವಾಸ್ಯೆಯಾಗಲಿ, ಪೂರ್ಣಿಮೆಯಾಗಲಿ, ಶೀತ ಕಾಲವಾಗಲಿ, ಬೇಸಿಗೆಯಾಗಲಿ ಕಾಣುತ್ತಿದ್ದುದು ಒಂದೇ ದೃಶ್ಯ. ಅದೇನು ಸ್ಥಿರ ಚಿತ್ರವೇ, ಅಲ್ಲವೇ? ಚಲನಚಿತ್ರವೇ? ಅದೇ ಹಿಂದಿನ ಆಕಾಶ, ಚಂದ್ರ, ನಕ್ಷತ್ರ, ಮರ ಜೊತೆಯಲ್ಲೆ ಇವು ಏನು ದೃಶ್ಯ ನಿರ್ಮಿಸುತ್ತಿತ್ತೋ ಅವೆಲ್ಲಾ ನಿರ್ಜೀವವಾಗಿತ್ತು. ಆದರೆ ಈ ನಿರ್ಜೀವ ವೇದಿಕೆಯ ಮೇಲೆ ಅವುಗಳ ಅಭಿನಯ ನಡೆಸುವ ಏರ್ಪಾಟು ಮಾಡಲಾಗಿತ್ತು. ಈ ಎಲ್ಲ ಪಾತ್ರಧಾರಿಗಳೂ, ಗಂಡು

ಹೆಣ್ಣುಗಳು ಜೀವನದ ಅನುಕರಣೆಯನ್ನು ಕಲಿತವರೇ. ಆದರೆ ಅನುಕರಣೆಯಿಂದ ಕಲೆ ಆಗುವುದಿಲ್ಲ. ಒಂದು ವೇಳೆ ಇವರು ಕಲಾ ನಿರ್ಮಾಣ ಮಾಡಬಲ್ಲರಾದರೆ ಈ ಸನಾತನ ದೃಶ್ಯ ಪರದೆಯ ಮೇಲೆ ಅದೆಷ್ಟು ಸುಖಾಂತ ಹಾಗೂ ದುಃಖಾಂತ ಘಟನೆಗಳು ಘಟಿಸಿದ್ದಾವು. ಆದರೆ ಹಾಗೆ ಆದಂತಿಲ್ಲ. ಎಲ್ಲವೂ ಒಂದು ಪ್ರಹಸನ ಹಾಗೂ ತಮಾಷೆಯಾಗಿ ಉಳಿದಿದೆ – ಹಾಯ್ ರಾಮ್ !

ಮತ್ತೆ ಅದೇ. ಬೆಳಕಾಗಲಿ ಅಥವಾ ಅಂಧಕಾರ ! ಒಂದು ವೇಳೆ ಇದು ಕೃಷ್ಣ ಪಕ್ಷವಾದರೆ ದೃಶ್ಯವೇ ಬದಲಾಗುತ್ತದೆ. ಈ ಬದಲಾವಣೆಯೇ ಸಂಜೆ ಆದುದನ್ನು ಸೂಚಿಸುತ್ತದೆ. ಶುಕ್ಲಪಕ್ಷದ ಪ್ರಥಮ ರಾತ್ರಿ, ಮತ್ತು ಕೃಷ್ಣಪಕ್ಷದ ಕೊನೆಯ ರಾತ್ರಿಗಳು ಪ್ರಾಗೈತಿಹಾಸಿಕವಾದವುಗಳು. ಆಗ್ನೇಯ ದಿಕ್ಕಿನಲ್ಲಿರುವ ಮಾವಿನ ಮರದ ಮೇಲೆ ಚಳಿಯ ಬಿಸಿಲು ಬಿದ್ದಿದೆ. ಬಿಸಿಲನ್ನಾದರೆ ಹುಡುಕಾದರೂ ಕೂಡಿಸಬಹುದು ಆದರೆ ಬೆಳದಿಂಗಳನ್ನು ಹುಡುಕಲು ಸಾಧ್ಯವೇ ? ಅಡಿಗೆ ಮನೆ ಉದ್ದದಲ್ಲೇನೂ ಕಡಿಮೆ ಇರಲಿಲ್ಲ. ಆದರೆ ಗಿಡ್ಡಗಿತ್ತು. ತುಂಬಾ ಗಿಡ್ಡಗೂ ಇರಲಿಲ್ಲ. ತಲೆಯ ಮೇಲಿನ ಸೂರು ಬದಲಾಯಿಸಿರಲಿಲ್ಲ. ದೊಡ್ಡ ಹುಡುಗಿಯ ಮದುವೆ ಸಮಯದಲ್ಲಿ ಸುಧೀರ್ ಭಾಯಿ ನೆಲಗಚ್ಚು ಮಾಡಿಸಿದ್ದ. ಆಗ ಮಾಡಿಸಿದ್ದ ರೇಲಿಂಗ್ ಸೂರನ್ನು ಮುಟ್ಟುತ್ತಿತ್ತು. ಬೇಸರಪಡಿಸುವ ವಿಷಯ. ಅಂಗಳದ ಒಂದು ಮೂಲೆಯಲ್ಲಿ ಸುಧೀರನ ತಾಯಿಯ ಮೃತ್ಯು ಸಂಭವಿಸಿದ್ದುದರಿಂದ ಅನ್ನವನ್ನು ಬೇಯಿಸುತ್ತಿದ್ದರು. ಅಡಿಗೆ ಮನೆ ಮನೆಯ ಪೂರ್ವ ಭಾಗದಲ್ಲಿತ್ತು. ಆದರೆ ಅದು ವಾಸ್ತವವಾಗಿ ಇದ್ದದ್ದು ಪಶ್ಚಿಮ ದಿಕ್ಕಿನಲ್ಲೇ. ಉತ್ತರ ದಿಕ್ಕಿನಲ್ಲಿ ಎಂಟೇ ಕೊಠಡಿಗಳಿದ್ದವು. ದಕ್ಷಿಣದಲ್ಲಿ ಒಂದು ಕೊಠಡಿ ಕಟ್ಟಲಾಗಿತ್ತು.

ಅದೇ ಹಿಂದಿನ ದೃಶ್ಯ. ಬೆಳಕಿರಲಿ ಅಥವಾ ಅಂಧಕಾರ. ಬೆಳಗಿನ ದೃಶ್ಯ ಬದಲಾಗುತ್ತದೆ. ಶರದ್ ಋತುವಿನಲ್ಲಿ ಪ್ರಾತಃಕಾಲ ಒಂದು ಸ್ಥಿರರೂಪ ಪಡೆದಿರುತ್ತದೆ. ಇದನ್ನು ಬಿಟ್ಟರೆ ಅದು ಅಸ್ಥಿರವೇ. ಅಸ್ಥಿರವಾಗಿ ಚಲಿಸುವ, ಓಡುವ ಪ್ರಾತಃಕಾಲ. ಪ್ರತಿದಿನವೂ ಬದಲಾಯಿಸುತ್ತದೆ. ಬದಲಾಗುತ್ತದೆ. ಬದಲಾಗುತ್ತಿರುತ್ತದೆ. ಮಧ್ಯಾಹ್ನ ಮುಳುಗು ಹಾಕಿ ಈಜುವ ರೀತಿಯಲ್ಲಿರುತ್ತದೆ. ಸಂಜೆ ತಂಗುವುದಿಲ್ಲ. ಮೀನುವಿಗೆ ಸಂಜೆ ಕೂಡ ಜಡೆ ಹಾಕಬೇಕಾಗುತ್ತದೆ. ಜಡೆ ಹಾಕಿಕೊಳ್ಳದೆ ಆಕೆ ರಸ್ತೆಗಿಳಿಯಲು ಹೇಗೆ ಸಾಧ್ಯ. ಆದರೆ ಅವಳು ರಸ್ತೆಯಲ್ಲಿ ಹೋಗಲೇಬೇಕಾಗುತ್ತಿತ್ತು. ಏತಕ್ಕೆಂದರೆ ಅವಳ ವಯಸ್ಸು ಹದಿನೈದು. ಸ್ಕೂಲಿನಿಂದ ಹಿಂತಿರುಗಿದ ನಂತರ ಮೀನು ತನ್ನ ಅಣ್ಣ ಹಾಗೂ ನನಗೆ ಬೆಲ್ಲ ಮತ್ತು ಪುರಿ ಕೊಡದೆ ಹೇಗೆ ಹೋಗಲು ಸಾಧ್ಯ ? ಆದಕ್ಕೇ ಮೀನೂಳ ಕೈಯ ಕೊಬ್ಬರಿ ಎಣ್ಣೆಯ ಸುಗಂಧ ನನ್ನ ಪುರಿ ತುಂಬಿದ ಬಟ್ಟಲಿಗೆ ಹತ್ತಿರುತ್ತಿತ್ತು. ಓಹ್ ! ಮೀನೂಗೆ ಎಷ್ಟೊಂದು ಕಷ್ಟ ! ಎಷ್ಟೊಂದು ಉದ್ವಿಗ್ನತೆ ಆಗುತ್ತದೆ ! ಸಂಜೆಯ ಹೊತ್ತು ಮನೆಯ ಹೊರಗಡೆ ಇರುವಂತಹ ನಿಶ್ಯಬ್ದತೆ ಇಂದು ಎಲ್ಲೆಡೆ ಆವರಿಸಿತ್ತು. ಮತ್ತೆ ಜಡಚೇತನದಲ್ಲಿ ? ಬಂದರು ಕಟ್ಟೆಯಲ್ಲಿರುವಂತೆ ಸದಾಕಾಲವೂ ಸ್ಮಶಾನ ದೃಶ್ಯ ಆಗ ಅಲ್ಲಿ ನೆಲೆಸಿತ್ತು. ಏನು ಆ ಮನೆಯಲ್ಲೇ ಅಥವಾ ಏನು ನನ್ನ ಮನೆಯಲ್ಲೇ ? ಅಥವಾ ನನಗೆ ಮಾತ್ರ

ಹಾಗೆ ಅನಿಸುತ್ತದೆಯೋ ? ಭಕಲ್ ಭಕ್, ಭಕಲ್ ಭಕ್ ಈಗಲೂ ನಡೆಯುತ್ತಿತ್ತು. ಈ ಮನೆ ಮತ್ತು ನಾವು ! ಈ ಗಾಡಿ ಮತ್ತು ಮನೆಯ ಯಾತ್ರಿಕರು ? ಯಾವಾಗ ನಿಲ್ದಾಣ ಬರುವುದೋ ತಿಳಿಯದು.

ಉತ್ತರ ದಿಕ್ಕಿನ ಎರಡು ಕೊಠಡಿಗಳ ಬದಿಯ ಕೊಠಡಿ ಒಳಗೆ ಹೋಗಲು ಟಿನ್‌ನ ಬಾಗಿಲೊಂದಿತ್ತು. ಕೊಠಡಿಯ ಮೂರು ಕಡೆಗಳಲ್ಲೂ ಅನೇಕ ಕಿಟಕಿಗಳಿವೆ. ಪಶ್ಚಿಮದ ಗೋಡೆಗೆ ತಾಗಿದಂತೆ ಬಾಬುಈಯ ಒಂದು ಮೇಜು ಇತ್ತು. ಅದರ ಮೇಲೆ ಸರಸ್ವತಿಯದೊಂದು ಫೋಟೊ ಮತ್ತು ತಲೆನೋವಿನ ಔಷಧಿ ಇತ್ತು. ಹುಡುಗಿಗೆ ಆಗಾಗ್ಯೆ ತಲೆನೋವು ಬರುತ್ತಿತ್ತು. ಓದುವುದಕ್ಕಾಗಿ ಮೇಜಿನ ಮೇಲೆ ಲಾಟೀನು ಇರಿಸಿದೆ. ಪಕ್ಷಿಗಳ ಪಂಜರದಂತೆ ಮುಚ್ಚಿದ ಅದರಿಂದ ಬೆಳಕು ಹೊರಬರುತ್ತಿರಲಿಲ್ಲ. ಆದರೆ ಹದಿನೈದು ಹದಿನಾರು ವರ್ಷದ ಯುವತಿಯ ಸುತ್ತಲೂ ಪ್ರಕಾಶ ಉತ್ಪನ್ನವಾಗುತ್ತದೆ. ಪಶ್ಚಮ ಭಾಗದ ಕಿಟಕಿ ಮುಚ್ಚಲಾಗಿತ್ತು. ಪೂರ್ವ ದಿಕ್ಕಿನ ಕಿಟಕಿ ತೆರೆದಿತ್ತು. ಬಾಬುಈ ಪೂರ್ವದ ಕಿಟಕಿ ಕಡೆ ಬೆನ್ನು ಮಾಡಿ ಕುಳಿತಿದ್ದಳು. ಆದ್ದರಿಂದಲೇ ಮುಖದ ನಾಲ್ಕೂ ಕಡೆ ಹೊರಟು ಬೆಳಕು ಕಿಟಕಿಯಿಂದ ತೂರಿ ಹೊರಗೆ ಬರುತ್ತಿತ್ತು. ಯಾರಾದರೂ ದರ್ಶಕರು ಇದ್ದಿದ್ದರೆ ಲಾಟೀನಿನ ಬೆಳಕಿನ ಮುಂದೆ ಬಾಬುಈಯ ಮುಖದ ಸೀಮಾರೇಖೆ ಕಂಡು ಬರುತ್ತಿತ್ತು. ಅದೇನು ಪವಿತ್ರತೆಯ ಸರಪಣಿಯ ಕೊಂಡಿಯೋ ? ಆದರೆ ಈ ರೇಖೆಯಲ್ಲಿ ವೃತ್ತದ ಸಂಕೇತವಿತ್ತು. ಆದರೆ ಕೊಂಚ ಅದು ಮುಂದು ಹೋಗಿದ್ದುದರಿಂದ ಶರೀರದ ವಿಶೇಷತೆ ಹೆಚ್ಚಿದಂತಿತ್ತು. ಇದರ ಜೊತೆಯಲ್ಲಿ ಕೆದರಿದ ಕೂದಲು. ಬಾಬುಈಗೆ ಗೊತ್ತಿರಲಿಲ್ಲ ತಾನು ಒಬ್ಬ ಸೌಂದರ್ಯವತಿ ಎಂದು. ಸೌಂದರ್ಯಕ್ಕೆ ತನ್ನ ಸೌಂದರ್ಯ ಅರ್ಥವೇ ಆಗಿರುವುದಿಲ್ಲ. ದರ್ಶಕರಿಗೆ ಮನುಷ್ಯ ಒಂದು ಕಾಂತಿಯ ಕೇಂದ್ರ ಆಗಬಲ್ಲ ಎಂಬುದು ಅರಿವಿದೆ. ಸೌಂದರ್ಯಕ್ಕೂ ಗೊತ್ತಿದೆ, ಮನುಷ್ಯನೇ ಸೌಂದರ್ಯವಂತ ಆಗಬಲ್ಲ ಎಂದು. ಬಾಬುಈ ಹಾಡು ಹೇಳುತ್ತಾಳೆ – ತುಮಿ ಕಿ ಕೆಬೋಲಿ ಛವಿ (ಏನು ನೀನು ಕೇವಲ ಸೌಂದರ್ಯವೇ ? – ರವೀಂದ್ರನಾಥ ಠಾಕೂರ್).

ಟಿನ್ ಬಾಗಿಲಿನಿಂದ ನುಸುಳಿ ಭಾವಿಯ ಬಳಿ ಸುತ್ತಿ ಉತ್ತರದ ಗೋಡೆ ಬಳಿ ವಾಸನೆ ಭರಿತ ಅಂಧಕಾರ ಮಧ್ಯದಲ್ಲಿ ಒಂದು ಚಿಕ್ಕ ಕಿಟಕಿ ನಿರ್ಮಿತಗೊಂಡಿದೆ. ಕಿಟಕಿಯ ಎದುರಿಗೆ ಒಂದು ಮೇಜಿದೆ. ಅದರ ಎದುರಿಗೆ ಚಂದನ್. ಚಂದನ್‌ನ ಬೆರಳುಗಳು ಬಾಯೊಳಗಿದ್ದವು. ಪಶ್ಚಿಮದ ಕಡೆ ಬೆನ್ನು ಮಾಡಿ ಪೂರ್ವದ ಕಡೆ ತಿರುಗಿ ಚಂದನ್ ನಿಂತಿದ್ದನು. ಲಾಟೀನಿನ ಬೆಳಕು ಅವನ ಮುಖದ ನೆರಳನ್ನು ಹೊರಚೆಲ್ಲಿ ಒಂದು ಚಿತ್ರ ನಿರ್ಮಿಸಿತ್ತು. ಬೆಳಕು ಮತ್ತು ನೆರಳಿನ ಸಮ್ಮಿಳನದಿಂದ ಎಂತಹ ಚಿತ್ರ ನಿರ್ಮಾಣಗೊಳ್ಳುತ್ತದೆ ? ಲಾಟೀನು ಬಲಗಡೆ ಇತ್ತು. ಚಂದನ್‌ನ ಮೂಗು ಉದ್ದವಿತ್ತು. ಅದಕ್ಕೆ ಆತನ ಎಡಕಣ್ಣಿನ ಕೊನೆಯಲ್ಲಿ ಅಂಧಕಾರ ತುಂಬಿತ್ತು. ಆತನ ಭುಜ ಅಗಲವಾಗಿತ್ತು. ಸ್ಯಾಂಡೊ ಬನೀನು ಧರಿಸಿದ್ದ. ಕಿಟಕಿಯ ಕಡೆ ಕಾಣುತ್ತಿದ್ದ ತಲೆಯ ಕೂದಲು ಚಿಕ್ಕದಾಗಿದ್ದುವು. ಗಲ್ಲ ಬಿರುಸಾಗಿತ್ತು. ಆದರೆ ಕಣ್ಣು

ಕಠೋರವೇಕೆ ? ಚಂದನ್ ಹಲ್ಲುಗಳಿಂದ ಉಗುರುಗಳನ್ನು ಏಕೆ ಕಡಿಯುತ್ತಿರುತ್ತಾನೆ ? ಎದುರಿನ ಕಿಟಕಿಯಿಂದ ಬರುತ್ತಿದ್ದ ಬೆಳಕಿನ ಸ್ರೋತದಲ್ಲಿ ದೂರದಲ್ಲಿ ಮನುಷ್ಯರ ಆಕೃತಿಯ ಬದಲು ಶಿರಸ್ಸು ಮಾತ್ರ ಕಂಡುಬರುತ್ತಿತ್ತು. ಚಂದನ ಭಯಭೀತನಾಗಿದ್ದ.

ಅಂಗಳದಲ್ಲಿ ಎಡಗಡೆಗೆ ಅಡಿಗೆ ಮನೆ ಇತ್ತು. ಶ್ರಾದ್ಧಕ್ಕಾಗಿ ಅಡಿಗೆ ಆಗುತ್ತಿದ್ದ ವರಾಂಡದಲ್ಲಿ, ಬುಡ್ಡಿದೀಪ ಪಾತ್ರೆಗಳ ಅಸಂಗತ ನೆರಳಿನ ಚಿತ್ರ ಮೂಡಿಸಿತ್ತು. ಒಮ್ಮೆ ಬೆಳಕು ಮೂಡಿದರೆ ಮತ್ತೊಂದು ಕ್ಷಣದಲ್ಲಿ ಕತ್ತಲು. ಗೋಣಿಯ ಚೀಲದ ಬಟ್ಟೆಯ ರಂಧ್ರಗಳಲ್ಲಿ ದಾರದ ಮಧ್ಯೆ ತೂರಿದ ಬೆಳಕು ಆಕಾಶ ಒಂದು ವೇಳೆ ಅಡಿಗೆ ಮನೆಯ ಛಾವಣಿಯ ಮೇಲೆ ಇಳಿಯುವಂತಾದರೆ ಅದರ ಮೇಲೂ ನೆರಳು ಮೂಡಿಸಲು ಶಕ್ಯವಿತ್ತು. ವರಾಂಡದ ಒಂದು ಮೂಲೆಯಲ್ಲಿ ಬೆಂಕಿ, ಸೌದೆ, ಇದ್ದಿಲು ಮುಂತಾದವು ಕತ್ತಲೆಯಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದವು. ಶ್ರಾದ್ಧ ನಡೆಯುತ್ತಿದ್ದ ಕೊಠಡಿಯಲ್ಲಿ ಒಂದು ಚಿಕ್ಕ ಒಲೆಯ ಮೇಲೆ ಸುಧೀರ್ ಬಾಬುವಿನ ಪತ್ನಿ ಅಡಿಗೆ ಮಾಡುತ್ತಿದ್ದಳು. ಬುಡ್ಡಿ ದೀಪದ ಪರಿಮಿತ ಬೆಳಕಿನಲ್ಲಿ, ಶಾಂತಿಯ ಹವಾದಲ್ಲಿ ರೋಮಾಂಚಗೊಂಡಂತೆ ಕುಳಿತಿದ್ದ ಸುಧೀರ್ ಬಾಬುನ ಮೂವತ್ತು ವರ್ಷದ ಪತ್ನಿ ಅಪರಿಚಿತಳಂತೆ ಕಾಣುತ್ತಿದ್ದಳು.

ಗೋಧೂಳಿ ಸಮಯದಲ್ಲಿ ಪ್ರಪಂಚ ಬಹಳ ನಿರ್ಮಲವಾಗಿ ಕಾಣಿಸುತ್ತದೆ. ಆದರೆ ಸಂಜೆಯ ಕತ್ತಲಿನಲ್ಲಿ ಅದು ಕಳೆದುಹೋದಂತೆನಿಸುತ್ತದೆ. ಯೋಚಿಸು. ಸಂಜೆಯ ಬಗ್ಗೆ ಯೋಚಿಸು. ಯೋಚಿಸಲೇಬೇಕು. ಸಂಜೆ ಬಗ್ಗೆ ನಾನು ಈಗ ಯೋಚಿಸುತ್ತೇನೆ. ಈಗ ನಾನು ಅತ್ತಿಗೆಯೊಡನೆ ಒಂದೆರಡು ಮಾತನಾಡಿ ದಕ್ಷಿಣ ದಿಕ್ಕಿನಲ್ಲಿರುವ ವರಾಂಡದ ಹಿಂದಿನ ಜಗುಲಿಯ ಮೇಲೆ ಮಲಗಿ ಯೋಚಿಸುತ್ತೇನೆ. ಏನು ? ಏನು ಯೋಚಿಸಲಿ ? ಯೋಚಿಸಿದ್ದೆ. ಮತ್ತೆ ಈಗ ನಾನು ಯಾವ ಯೋಚನೆಯಲ್ಲಿ ಮುಳುಗಿದ್ದೇನೆ.

"ಯಾರು ?" ಅತ್ತಿಗೆಯ ಸ್ವರ ಕೇಳಿದೊಡನೆಯೇ ಆಕೆಯ ಕಣ್ಣುಗಳಿಗೆ ತಿಳಿಯ ಹೇಳಬಹುದಿತ್ತು. ಸ್ವಲ್ಪವೇ ಎತ್ತರವಿದ್ದ ಮಣೆಯ ಮೇಲೆ ಮೊಣಕಾಲಿನ ಬಲದ ಮೇಲೆ ಅತ್ತಿಗೆ ಕುಳಿತಿರುತ್ತಾಳೆ. ಒಂದು ಮೊಣಕಾಲನ್ನು ಸ್ವಲ್ಪ ಬದಿಗೆ ಸರಿಸಿ ಕೈಯಲ್ಲಿ ಚಮಚ ಅಥವಾ ಅಂತಹುದೇ ಏನೋ ಹಿಡಿದು ಕುಳಿತಿದ್ದಾಳೆ. ಎಡಗೈಯಲ್ಲಿ ಏನೋ ಇದೆ. ಕಾಲಿನ ಶಬ್ದ ಕೇಳಿದೊಡನೆಯೇ ಸೊಂಟದ ಮೇಲ್ಭಾಗವನ್ನು ನೆಟ್ಟಗೆ ಮಾಡಿ ಕತ್ತನ್ನು ಮೇಲೆತ್ತಿ ನೋಡಲು ತೊಡಗಿದಳು.

"ನಾನು ವಿನಯ್." ಅಡಿಗೆ ಮನೆಯ ಮೆಟ್ಟಿಲ ಮೇಲೆ ವಿನಯ್ ಕಾಲಿರಿಸಿದ.

"ವಿನಯ್ ಬಾ ಬಾ." ಮನೆಯಲ್ಲಿ ಎಲ್ಲರೂ ಕುಶಲ ತಾನೆ ?

ವಿನಯನ ಉತ್ತರ ಕೇಳುವುದರಲ್ಲಿ ಅತ್ತಿಗೆಯ ಶರೀರದ ಮೇಲ್ಭಾಗ ಸಡಿಲಗೊಂಡಿತು. ಎಡಗೈಯಿಂದ ಆಕೆ ಒಲೆಗೆ ಕಟ್ಟಿಗೆ ಹಾಕಿದಳು. ಬೆಂಕಿಯ ಕೆಲ ಕಿಡಿಗಳು ಸಿಡಿದವು. ಕಣ್ಣನ್ನು ಸಂಕುಚಿತಗೊಳಿಸಿ ಮುಖ ತಿರುಗಿಸಿದಳು ಅತ್ತಿಗೆ. ಏನೋ ಪ್ರಶ್ನಿಸಬೇಕೆಂಬ ಭಾವವನ್ನು ಮುಖದಲ್ಲಿ ಹೊಮ್ಮಿಸಿ ವಿನಯನತ್ತ ತಿರುಗಿದಳು. ಯಾವಾಗಲೂ ವಿನಯ ಈ ಪ್ರಶ್ನೆಗೆ ಹೂಂ ಎಂದು, ಜಗುಲಿಯ

ಮೇಲೆ ಸಾಮಾನ್ಯವಾಗಿ ಕೂಡುತ್ತಿದ್ದ. ಅತ್ತಿಗೆ ಒಂದೇ ಮಾತನ್ನು ಪುನಃ ಪುನಃ ಏಕೆ ಪ್ರಶ್ನಿಸುತ್ತಾಳೆ ? ಇದೇನು ಒಂದು ಅಭ್ಯಾಸವೇ ? ಪ್ರತಿದಿನದ ಮಾತು ಒಂದೇ ಸಮ. ಬೇಲಾ ಬಹುಶಃ ಇದನ್ನು ಅರ್ಥ ಮಾಡಿಕೊಳ್ಳುತ್ತಿಲ್ಲ. ಆಕೆಯ ಆತ್ಮಾಭಿಮಾನವೇ ಆಕೆಯ ಧ್ವನಿಯಲ್ಲಿ ಪರಕೀಯತೆಯ ಸ್ವರ ಎತ್ತುತ್ತಿದೆ.

"ಕುಳಿತಿ...ಕೊ" ಕುಳಿತಿದ್ದ ವಿನಯನಿಗೆ ಅತ್ತಿಗೆ ನುಡಿದಳು. ವಿನಯ್ ಒಂದು ಹುಲ್ಲುಕಡ್ಡಿ ಹಿಡಿದುಕೊಳ್ಳಲು ಕೈಚಾಚಿದ. ಮತ್ತು ಆ ಹುಲ್ಲಿನಲ್ಲಿ ತಲೆ ಬುಡ ಇಲ್ಲದ ಏನನ್ನೋ ಪರೀಕ್ಷಿಸತೊಡಗಿದ. ಅತ್ತಿಗೆ ಆ ಹುಲ್ಲನ್ನೇ ನೋಡತೊಡಗಿದಳು. ಹಾಗೇ ಆ ಅರ್ಥಹೀನ ಬುದ್ಧಿಯನ್ನು. ವಿನಯ ಆ ಹುಲ್ಲನ್ನು ಕಿತ್ತು ಎಸೆದುಬಿಟ್ಟ.

"ಸ್ಕೂಲಿಗೆ ಹೋಗಿದ್ದೆಯಾ ?" ಅತ್ತಿಗೆ ಪ್ರಶ್ನಿಸಿದಳು. ಈಗ ಅತ್ತಿಗೆ ಪ್ರಶ್ನಿಸುತ್ತಾಳೆ "ಈಗ ಏನೇನು ತಿಂದೆ." ಇದನ್ನು ಕೇಳುವ ಮುನ್ನವೇ ನಾನು ಎದ್ದು ಬಿಡುತ್ತೇನೆ. ಮತ್ತೆ ಯಾರಾದರೂ ಬಂದರೆ ಅತ್ತಿಗೆ ಮನಬಿಚ್ಚಿ ಹರಟೆ ಹೊಡೆಯಬಲ್ಲಳು. ಆಕೆಗೆ ಅಪಳದೇ ವಿಚಾರವೇನೂ ಇಲ್ಲ. ತಂದೆ ಮನೆಯಿಂದ ಮೂವತ್ತು ವರ್ಷಗಳ ಹಿಂದೆ ಎಷ್ಟು ಮಾತು ಕಲಿತುಬಂದಿದ್ದಳೊ ಅವೆಲ್ಲ ಐದೇ ವರ್ಷಗಳಲ್ಲಿ ಮುಗಿದುಹೋಗಿದೆ. ಈ ಹಳ್ಳಿಯಂತಹ ನಗರದಲ್ಲಿ ಮಾತು ಹುಡುಕಿದರೂ ಸಿಗದು. ಎಲ್ಲಿ ಮಾತು ಹುಟ್ಟುತ್ತದೊ ಆದರೆ ಅದು ಅತ್ತಿಗೆಗಾಗಿ ನಿರ್ಮಿತಗೊಂಡ ಸ್ಥಳವಾಗಿರಲಿಲ್ಲ. ಅತ್ತಿಗೆ ಈ ರೀತಿ ಏಕೆ ನೋಡುತ್ತಿದ್ದಾಳೆ ! ಈ ಶಿಷ್ಟ ಮಹಿಳೆಯ ಮುಖದಮೇಲೆ ಇರುವ ಶಾಂತಿ ನೋಡಿದೊಡನೆಯೇ ಗೋಚರಿಸುತ್ತದೆ. ಬಾಬುರೀ, ಚಂದನ್ ಸೋನಾ, ರೂಪಾ, ಮಾಲಾ ಈ ಹೆಸರುಗಳನ್ನು ಇವರೇಕೆ ಇಟ್ಟುಕೊಂಡಿದ್ದಾರೆ. ಈಗ ಎರಡು ಮಾತಿಲ್ಲ. ಏಕೆ ? ಒಲೆಯಲ್ಲಿ ಬಿಸಿ ಇದೆ. ಅದಕ್ಕೇ ಕಣ್ಣಿನಲ್ಲಿ ಹೊಗೆ ?

"ಸುಧೀರ್ ಬರಲಿಲ್ಲವೇ ?" ವಿನಯ್ ಅತ್ತಿಗೆಯನ್ನು ಪ್ರಶ್ನಿಸಿದ.

"ಇಲ್ಲ, ಆದರೆ ನೀನು ಎಲ್ಲಿ ಹೋಗುತ್ತಿದ್ದಿ ?" ಅತ್ತಿಗೆ ಒಲೆಯ ಕಡೆ ತಿರುಗಿ ಪ್ರಶ್ನಿಸಿದಳು. "ಹೂಂ.... ಆ ಕೊಠಡಿಯಲ್ಲಿ ಹೋಗುತ್ತಿದ್ದೇನೆ. ಸುಧೀರ್ ಇನ್ನೂ ಏಕೆ ಹಿಂತಿರುಗಿಲ್ಲ. ?"

"ಟ್ಯೂಷನ್‌ಗೆ ಹೋಗಿದ್ದಾನೆ."

ಯೋಚಿಸುತ್ತೇನೆ ಎಂದು ಯೋಚಿಸಿದ್ದೆ. ಸಾಯಂಕಾಲ ಸಮಯ ಚಿಂತೆಗಳ ಚರಿತ್ರೆಯೇ ಆಗಿರುತ್ತದೆ. ಪ್ರಥಮ ಅಧ್ಯಾಯ – ಸೋನಾ, ರೂಪಾ, ಮೀರಾ, ಇವರಲ್ಲಿ ಸತ್ವದ ದೊಡ್ಡ ಕೊರತೆ ಇದೆ. ಎರಡನೆಯ ಅಧ್ಯಾಯ – ಬಾಬುಈ. ಮೂರನೆ ಅಧ್ಯಾಯ 'ನಾನು'. ನಾಲ್ಕನೆ ಅಧ್ಯಾಯ ಅತ್ತಿಗೆ, ಐದನೆಯ ಅಧ್ಯಾಯ ಸುಧೀರ್ ದಾ. ಬಾಬುಈ ಏನು ಯೋಚಿಸುತ್ತಿದ್ದಿ ?

ಸುಚಿತ್ರ ಮಿತ್ರಾಳ (ಬಂಗಾಳದ ಸುಪ್ರಸಿದ್ಧ ಗಾಯಕಿ) ಚಿತ್ರ ತಯಾರಿಸಲು ಹೇಳಿದ್ದಳು. ನಾನು ತಯಾರಿಸಿರಲಿಲ್ಲ. ಮಾಡೂ ಕೊಡುವುದಿಲ್ಲ. ಬಾಬುಈ ನೀನು ಓದುವುದನ್ನು ಬಿಟ್ಟುಬಿಡು. ಹಾಡು ಪಾಡು ಬಿಟ್ಟುಬಿಡು, ಬಟ್ಟೆ ಒಗೆ, ಅಡಿಗೆ ಮನೆ ಸ್ವಚ್ಛ ಮಾಡು. ಆದರಿಂದ ಕೈಗೆ ಅರಿಶಿನ ಮತ್ತು ಮಸಾಲೆಯ ವಾಸನೆ ಹತ್ತಲಿ. ಶರೀರಕ್ಕೆ ಅರಿಶಿನ ಹಚ್ಚಿ, ಸ್ವಾಗತ ಬಯಸುವ ಕೆಂಪು ಮಕಮಲ್ ಬಟ್ಟೆಯ ಕೆಳಗೆ

ನಿನ್ನ ಬೀಳ್ಕೊಡುಗೆ ಆಗಲಿ. ಇಲ್ಲದಿದ್ದರೆ ನೀನು ಸತ್ತುಹೋಗುವೆ. ಹೋಗಿ ಸಾಯಿ. ವಿನಯನಿಗೆ ನಗು ಬಂತು. ಹೊಟ್ಟೆಯಲ್ಲಲ್ಲ, ಮುಖದಲ್ಲಿ. ಬಾಬು ಈ ಬಾಸು ಸಾಯಲಿದ್ದಾಳೆ. ಅವಳನ್ನು ಉಳಿಸುವವರು ಯಾರು? ಸಂಜೆಯ ಹೊತ್ತು ಕೆಟ್ಟ ಯೋಚನೆಗಳನ್ನು ಮನದಲ್ಲಿ ತರುವುದು ನಿಶಿದ್ಧ. ದಕ್ಷಿಣ ಬಾಗಿಲತ್ತ ಹೋಗುವುದು ಕೂಡ ನಿಶಿದ್ಧ. ದಕ್ಷಿಣದ ಬಾಗಿಲನ್ನು ತೆರೆದು ಸಾಯುತ್ತಾಳೆ. ಖಂಡಿತಾ ಸಾಯುತ್ತಾಳೆ. ಹಾಸಿಗೆಯ ಮೇಲೆ ಬಹಳ ದಿನಗಳಿಂದ ಮಲಗಿರುವ ರೋಗಿಯ ನಗುವಿನಂತೆ ವಿನಯನಿಗೆ ತನ್ನ ನಗು ಕಂಡಿತು. ಆದ್ದರಿಂದಲೇ ರೋಗದಿಂದ ಕೂಡಿದ್ದ, ಚಿಂತಿತ ರೋಗಿಯಾಗಿ ತಾನಿರುವಂತೆನಿಸಿತು. ಸಂಜೆಗೆ ಸರಸ್ವತಿ ಚಿತ್ರದ ಬದಿಯಲ್ಲಿ ತಲೆನೋವಿನ ಶೀಷೆಯ ಕಡೆ ನೋಡುತ್ತಾ ಬಾಬುಈ ಸುಚಿತ್ರಾಮಿತ್ರಳ ಬಗ್ಗೆ ಯೋಚಿಸುತ್ತಾಳೆಯೆ? ಯೋಚಿಸಬಹುದು. ಮತ್ತೆ ಆಕೆಯ ಈಗಿನ ವಯೋಧರ್ಮಾನುಕ್ಕನುಸಾರ ಬೇರೆ ಏನನ್ನಾದರೂ ಸಹ ಯೋಚಿಸಬಹುದು. ಎಲ್ಲ ತರಹ ಯೋಚನೆಗಳನ್ನು ಸೇರಿಸಿಕೊಂಡು ಮನಸ್ಸು ಭಾರವಾಗುತ್ತದೆ... ಬಾಬುಈ ಸುಚಿತ್ರಾಮಿತ್ರಳ ಚಿತ್ರವನ್ನು ಕೇಳಿದ್ದಳು. ನಾನು ರಚಿಸುತ್ತೇನೆ. ಅದಕ್ಕೆ ಮೊದಲು ಅವಳ ಹಾಡನ್ನು ಕೇಳಬೇಕು. – ಆರ್ ದೇಖೊನಾ ಅಂಧಾರೆ ಮೊರೆ ದೇಖತೆ ದಾಓ (ಮತ್ತೆ ನನ್ನನ್ನು ಕತ್ತಲಲ್ಲಿ ಇರಿಸಬೇಡ, ನಾನು ನೋಡಲು ಬಿಡು).

"ಬಾಬುಈ, ನಿನ್ನ ತನ್ನತನ ಎಲ್ಲಿದೆ? ನನಗೆ ತೋರಿಸಬಲ್ಲೆಯಾ?"

"ನನ್ನ ತನ್ನತನ ವೆಂಬುದೇ ಇಲ್ಲ. ಸಂಪೂರ್ಣ ಜೀವನ ಶೂನ್ಯದಲ್ಲಿ ಹುಡುಕುತ್ತಿದೆ – ಹಾಯ್‌ರೇ."

"ವಿನಯ್ ಚಹ ತರಲೇ?"

"ಬೇಡ"

ಏನು, ಬೇಲಾ ಇಲ್ಲಿಯವರೆಗೂ ವಿಚಿತ್ರ ರೀತಿಯಲ್ಲಿ ಏನೋ ಯೋಚಿಸುತ್ತಿದ್ದಾಳೆಯೇ? 'ಇಲ್ಲ'. 'ಬೇಲಾ' ಇದೇನೂ ವಿಚಾರವಲ್ಲ. ಶರೀರ. ಚೈತನ್ಯವಲ್ಲ. ಅಸ್ತಿತ್ವ ನಾನೂ ಸಹ. ನಾನೂ ಹಾಗೇ ಇದ್ದೇನೆ. ವ್ಯಕ್ತಿಗೆ ವ್ಯಕ್ತಿತ್ವವಿರುತ್ತದೆ. ಮತ್ತು ಈ ವ್ಯಕ್ತಿ ನಗರದಲ್ಲಿರುತ್ತಾನೆ. ನನ್ನ ಹಿಂದೆ ಇಪ್ಪತ್ತಾರು ವರ್ಷಗಳ ಪಾಪವಿದೆ. ನಾನು ಹದಿನೈದು ವರ್ಷಗಳ ಸಾಮಾನ್ಯ ಜೀವನ ಬಯಸಿದ್ದೆ. ಬಾಬುಈ ಆ ಹಾಡನ್ನು ಹಾಡು: 'ಅಮೂರ್ ಅಪನಾರೆ ದೇಖತೆ ದಾವೋ' (ತನ್ನನ್ನು ತಾನು ನೋಡಲು ಬಿಡು).

ಈ ಸ್ಟಿಮ್ಯುಲಸ್ ಶರೀರದ್ದು. ಮನದ್ದು. ಎಲ್ಲಿ? ಮನಸ್ಸು ಒಂದು ಚೂರುಹುಲ್ಲು. ಇಷ್ಟು ಕೋಮಲ, ತೆಳವು ಮನಸ್ಸು, ನೀನೆಲ್ಲಿದ್ದಿ? ಹೇ ಮನಸ್ಸೆ, ನೀನು ಎಲ್ಲಿದ್ದಿ? ಹೇ ಮನಸ್ಸೆ, ನೀನು ಶರೀರದಲ್ಲಿ ಸೇರಿಹೋಗು. ಬಾ..ಬಾ... ನನ್ನ ಒಣಗಿದ ಶರೀರಕ್ಕೆ ಬಿರುಗಾಳಿ ತಾ. ಮನಸ್ಸೇ ಇಳಿದು ಬಾ.ಬಾ.

ಮನಸ್ಸು ಒಂದು ವಿಷಯದಿಂದ ಇನ್ನೊಂದಕ್ಕೆ ಹೋಗುತ್ತಾ ಬಿರುಗಾಳಿಯ ಬಗ್ಗೆ ಯೋಚಿಸುತ್ತಿದ್ದಂತೆ ಆಕಾಶ ಸಮುದ್ರ, ಬೆಟ್ಟ ಇವೆಲ್ಲಾ ಸೇರಿದಂತಾಗಿ ಆತನ ಮನದಲ್ಲಿ ಒಂದು ವಿಚಿತ್ರ ರೀತಿಯ ಕಾಂತಿಯಾಗಿ ಮಾರ್ಪಟ್ಟಿತು. ಸಣ್ಣ ದೊಡ್ಡ

ಗಲಾಟೆ ಕೇಳುತ್ತಾ ಕೇಳುತ್ತಾ, ದೊಡ್ಡದಾಗಿ ಏನನ್ನೊ ಕಳೆದುಕೊಂಡಂತೆನಿಸಿತು. ಬಹಳ ವಿಸ್ತೃತವಾದದ್ದು 'ವಾಯಿಡ್', 'ವಾಯಿಲ್ಡ್', ವಾಯಿಡ್ ಜೊತೆ ಸ್ವರಸಂಗಮಿಸುತ್ತದೆ. ಆದಕ್ಕೇ ವಾಯಿಲ್ಡ್ ಶಬ್ದ ಮನಸ್ಸಿನಲ್ಲಿ ಮೂಡಿತು. ವಿನಯನಿಗೆ ಇದು ಅರಿವಿದ್ದರೂ ಇದನ್ನು ರದ್ದುಗೊಳಿಸಲಿಲ್ಲ. 'ವಾಯಿಲ್ಡ್' ಶಬ್ದದೊಳಗೆ 'ವಾಯಿಲ್ಡ್ ನೆಸ್' ಇದ್ದೇ ಇರುತ್ತದೆ. ಏನೂ ಇಲ್ಲದೆ ಇದ್ದರೆ ಚಿತ್ರ ಬಡಿಸುವ ಇಚ್ಛೆ ಬರುವುದಾದರೂ ಎಲ್ಲಿಂದ? ಇಲ್ಲಿಯ ಚಿತ್ರದಲ್ಲಿ ಲಾಟೀನಿನ ಸುತ್ತಲಿರುವ ಪರಿಚಿತ ಮುಖದ ಮಕ್ಕಳು ಕಾಣಿಸುವುದಿಲ್ಲ. ಮನುಷ್ಯನ ಶರೀರದ ರೇಖೆಗಳ ಸಂಕೇತ, ಬಣ್ಣ, ಗೆರೆಗಳ ಹೊಳಪು, ಬೆಳಕಿನಲ್ಲಿ ಬಣ್ಣದ ನೆರಳು ಅಥವಾ ಅತ್ತಿಗೆಯ ಕೊಠಡಿಯ ಮೇಲ್ಭಾಗ ಒಮ್ಮೆಗೇ ಕಾಣಿಸುವುದು. ಕಾಲಿನ ಸದ್ದಿನಿಂದ ದ್ರೋಣಲತೆಯ ರೇಖಾಸೃಷ್ಟಿ. ಎರಡು ಕಾಲುಗಳ ಮಧ್ಯೆ ಮುಖ ಮುಚ್ಚಿಕೊಂಡಿರುವ ನಾಯಿ ದುರುಗುಟ್ಟಿಕೊಂಡು ನೋಡುತ್ತಿತ್ತು. ಆ ಪ್ರಾಣಿಯೇ ಸುಂದರ, ಮಾನವೀಯ ಕೂಡ. ಆದರೆ ಅತ್ತಿಗೆಯ ಮುಖದಲ್ಲಿ ಆ ಕೇಶೌರ್ಯ ಎಲ್ಲಿ ಹೋಯಿತು. ಕಣ್ಣನ್ನು ಮುಚ್ಚಿಕೊಂಡು ಕೊರೆದಿರುವ ಮೂರ್ತಿಯ ವಿಲುಪ್ತ ರೇಖೆಗಳನ್ನು ವಿನಯ ಹುಡುಕುತ್ತಿರುವಂತಿತ್ತು. ಯಾವ ರೇಖೆಯಲ್ಲಿ ಅತ್ತಿಗೆಯ ಕೈಶೂರ್ಯ ಇತ್ತು.

ಚೆನ್ನಾಗಿ ಎದ್ದು ಕಾಣುವ ಬಣ್ಣದಲ್ಲಿ ಯಾವುದೊ ಒಂದು ದೊಡ್ಡ ವಸ್ತು, ಅಗಲವಸ್ತು, ಭಾರಿಯದಾದ ವಸ್ತು, ಭಾರವಾದ ವಸ್ತು ಕಾಣಿಸುತ್ತದೆ. ಎದುರಿನ ಎಲ್ಲ ವಿಷಯಗಳ ರೇಖೆಗಳೂ ಸಂಕೀರ್ಣ ಮಹತ್ವವುಳ್ಳವುಗಳು ಅವುಗಳ ಬಣ್ಣ ನಿರ್ಜೀವ. ಸುಚಿತ್ರಾ ಮಿತ್ರಳ ಚಿತ್ರದಲ್ಲಿ ಬಾಬುಈ ಏನನ್ನು ನೋಡಲು ಬಯಸುತ್ತಾಳೆ? ನಾನು ಏನು ನೋಡಲು ಬಯಸುತ್ತೇನೆ. ನೋಡಲಿ ಬಿಡು. ತನ್ನನ್ನು ತಾನೇ.

ಗಗನೇಂದ್ರನಾಥ ಠಾಕೂರರ ನಿರ್ಮಿತ ಯಕ್ಷಪುರಿ (ಅಸ್ಪಷ್ಟ ಆಲೋಕ, ತ್ರಿಕೋಣ ಆಲೋಕ ಮತ್ತು ಅಲ್ಲಿ ನೆರಳು ಬಿದ್ದರೆ ಎಲ್ಲವೂ ಸ್ವರ್ಣಸ್ತಂಭವಾಗುತ್ತದೆ. ಒಮ್ಮೊಮ್ಮೆ ಮನುಷ್ಯ ಶರೀರದ ಸಂಕೇತವಾಗುತ್ತಾನೆ. ನಂದಿನಿಯ ಕೆಲ ಬೆರಳುಗಳು, ಕೆಂಪು ದಾಸವಾಳದ ಎಸಳುಗಳು. ಇವೆಲ್ಲವೂ ಅಸಂಭವವಾಗಿ ತೋರಿದರೂ ಅಸಂಭವವೇನಲ್ಲ). ಅವನೀಂದ್ರನಾಥನ ಶಾಹಜಹಾ (ಬಹಳವಾಗಿ ದುಃಖಿತ. ಫಿಗರ್ ಇರಲಿ ಇಲ್ಲದಿರಲಿ, ರೇಖೆಗಳಂತೂ ಅಳಿಸಿಹೋದಂತಿದ್ದವು. ಚಳಿ ದಿನಗಳಲ್ಲಿ ಕನ್ನಡಿಯ ಮೇಲೆ ಉಸಿರು ಬಿಟ್ಟಾಗ ರಚಿತಗೊಳ್ಳುವ ಉಸಿರಿನ ಪರದೆ – ಇದು ಬಹು ಸೂಕ್ಷ್ಮ ಆವಿಯಾಗಿ ಹೋಗುತ್ತದೆ).

ರವೀಂದ್ರನಾಥರ ನೃತ್ಯ (ಪ್ರಾಚೀನ ಮಿತ್ರರ ಎಲಿಮೆಂಟ್‌ಲಿಟೀ, ಕೈ ಕಾಲಿನ ಸರಳ ಭಂಗಿಯಿಂದ ಎಲಿಮೆಂಟ್‌ಲಿಟಿಯೇ ಬೇಕಾಗಿದೆ. ಓಹ್! ಎ–ಲಿ–ಮೆಂಟಲಿ, ಹಿಬ್ರೂ ಮಂತ್ರೋಚ್ಚರಣ, ಎ–ಲಿ–ಮೆಂಟಲ್, ದಪ್ಪ ರೇಖೆಯ ಮೇಲೆ ಇಷ್ಟು ಜಟಿಲ ಬಣ್ಣವೇಕೆ? [illegible] ದೆವ್ವದ್ದಾದರೂ ಆರತಿಯನ್ನು ಹೋಲುವುದೇಕೆ? ಮುಖದ ಮೇಲೆ, ಶವದ ಆಧಾರದ ಮೇಲೆ ಬರೆದ ಚಿತ್ರದಂತಹ ಅವಮಾನವತ್,

ಸಾಯುವುದೇ, ಜೀವಿಸುವುದೇ ? ಮುಂದಿನ ಬಣ್ಣದಲ್ಲಿ ದಪ್ಪರೇಖೆಗಳಲ್ಲಿ ! – ಬಾಬುಈ ಅದಕ್ಕೇ ನಿನ್ನ ಹಾಡು ನನಗೆ ಹಿಡಿಸದು, ದಪ್ಪಗಂಟಲು, ತೆರೆದ ಮನಸ್ಸು ಸುಚಿತ್ರಾಳಂತೆ, ಬಾಬುಈ ಸುಚಿತ್ರಾ ಮಿತ್ರಳಾಗುತ್ತಾಳೆಯೆ ? ಬಾಬುಈ ನೀನು ಸುಚಿತ್ರಾ ಮಿತ್ರಳಾಗುವೆಯಾ ?

ನಂದಲಾಲ ಬಸುಗಳ ಶಿವ (ಇಲ್ಲ – ಇಲ್ಲ – ಖಂಡಿತಾ ಇಲ್ಲಾರೀ – ಯಾವ ಮನೆಯಲ್ಲಿ ಅನ್ನಪೂರ್ಣೆ ಇದ್ದಾಳೆಯೋ, ಅಲ್ಲಿ ಊಟಕ್ಕೆ ಹಾತೊರೆಯುತ್ತಾರೆಯೆ ? ಇದು ಬಹಳ ಕಷ್ಟದ ಕೆಲಸ, ಕಷ್ಟ – ಇಲ್ಲ – ಇಲ್ಲ – ಇಲ್ಲಾರೀ). ಯೊಮಿನಿರಾಯ್‌ರವರ ಜನ್ಮಾಷ್ಟಮಿ ಕೀ ಛವಿ. (ಏನು ವಿಷಯ ? ಬಂಕಿಮ್ ಮುರಳಿ, ತ್ರಿಭಂಗ ಮುರಳಿ, ತ್ರಿಭಂಗ ಎಲ್ಲಿ ? ಕೇವಲ ಒಂದು ಮೊಣಕಾಲು ಮುರಿದಿದೆ, ಅದರ ಮೇಲೆ ಸಂಪೂರ್ಣ ಶರೀರದ ಭಾರ, ಪ್ರವಾಹದ ಧಾರೆಯಂತೆ ಇಳಿಯುತ್ತಿದೆ. ತೇಗದ ಮರದಂತೆ ದೃಢ, ಮೀನಿನಂತೆ ಕಣ್ಣು, ಮೀನಿನ ಕಣ್ಣಿನಂತೆ ಸ್ವಚ್ಛ ಕಣ್ಣು, ಇಷ್ಟು ಸರಳ. ಇದರಲ್ಲಿ ಇಷ್ಟೊಂದು ವಿಸ್ಮಯ ತುಂಬುವ ಶಕ್ತಿ ನನ್ನಲ್ಲಿ ಇಲ್ಲ). ವಾನ್ ಗಾಗ್‌ಕೆ ಕ್ರಾಸ್ ಆನ್ ದಿ ಸ್ಟೀವ್ – (ಓಹ್, ನನ್ನನ್ನು ಉಳಿಸು.. ಈ ಯಾತನೆಯನ್ನು ನಾನು ಸಹಿಸಲಾರೆ. ಕರಿಯ ಕಾಗೆ, ಆಕಾಶದ ಗತಿ, ವ್ಯಾಕುಲ ರೆಕ್ಕೆಗಳಿಗೆ ಸರಪಣಿ, ಬಿರುಗಾಳಿ, ಕೆಳಗೆ ಮಹಾಕಾವ್ಯದ ನದಿ, ಹಾಯ್. ನಾನು ಇದನ್ನು ಸಹಿಸಲಾರೆ. ಯಾರಿದ್ದೀರಿ ನನ್ನನ್ನು ರಕ್ಷಿಸಿ, ಹಾಯ್. ಯಾರು ನನ್ನನ್ನು ರಕ್ಷಿಸುತ್ತೀರಿ ? ಕರಿಯ ಕಾಗೆಯ ರೆಕ್ಕೆಯ ಹಿಂದೆ ಸೂರ್ಯ ಮರೆಯಾಗಿದ್ದ. ಈ ಅಂಧಕಾರದ ಆಕರ್ಷಣೆಯ ಕೆಳಗಿನ ಪ್ರವಾಹ ಎರಡೂ ದಡಗಳನ್ನು ನಾಶ ಮಾಡುವಂತಿದೆ. ನಾನು ಗೊತ್ತು ಗುರಿ ಇಲ್ಲದ ದಡದ ತನಕ ಕೊಚ್ಚಿಹೋಗಲಾರೆ. ನನಗೆ ದಡ ಬೇಕು. ಮನೆ ಬೇಕು. ಬಾಬುಈ ನೀನೆಲ್ಲಿದ್ದಿ ? ಕಾಗೆ, ರಕ್ತ ಪಿಪಾಸುವಾಗುತ್ತದೆ. ನನ್ನ ಎದೆಯಲ್ಲಿ ಇನ್ನು ರಕ್ತವಿಲ್ಲ. ಆ ಕಪ್ಪು ಕತ್ತಲಿನಲ್ಲಿ, ನನ್ನ ರಕ್ತದಿಂದ ಮಹಾಕಾವ್ಯದ ನದಿ ಕೆಂಪಾಗಿ ಹೋಗಿದೆ. ಬಾಬುಈ ನೀನೆಲ್ಲಿದ್ದೀಯಾ ? ಮನಸ್ಸೇ ನೀನೆಲ್ಲಿದ್ದಿ ? ನನ್ನ ಪಕ್ಕೆಲುಬುಗಳೆಲ್ಲಿ ? ನಂದಿಲಾಲ ಬಸುವಿನ ಅರ್ಜುನ್ ಆಹಾ ! ಮಲಗಿರುವ ಅರ್ಜುನ, ರಫ್ ಡ್ರಾಯಿಂಗ್, ರಫ್ ರೇಖೆಗಳು ! ವಿಶಾಲ ಮುಖ, ಎದೆ, ತೊಡೆ, ದುಂಡು ಆಕಾರ ತಳೆದು ಮೊಳಕಾಲ ತನಕ ಹರಡಿದೆ. ಮಡಿಸಿದ ಮೊಳಕಾಲು, ಮೊಳಕೈ ಬಲದ ಮೈಮೇಲಿನ ಕೈಕೆಲಸ ಭೂಮಿಯಲ್ಲಿನ ಕಮಲದ ದಳಗಳಂತೆ ಇದ್ದುವು. ಮತ್ತು ಎರಡನೆ ಕೈ ಸಹಾಯಕ್ಕೆ ಸಿದ್ಧವಿದೆ. ವಿದ್ರೋಹಿಗಳಂತೆ ಶರೀರದ ಸಮಸ್ತ ಅಂಗಗಳು ಎಚ್ಚರಗೊಂಡಿದ್ದವು. ಎರಡು ಪಂಜಗಳ ಮಧ್ಯೆ ಮುಖವನ್ನು ಮುಚ್ಚಿಕೊಂಡಿರುವ ಹುಲಿಯು ಮರದ ಮರ್ಮರ ಧ್ವನಿಯಿಂದ ಬೆಚ್ಚಿ ಎಚ್ಚರಗೊಳ್ಳುವ ರೀತಿಯಲ್ಲಿ; ಬೆನ್ನು ಎಷ್ಟು ಅಗಲವಾಗಿದೆ ಎಂದರೆ ವಟವೃಕ್ಷದಂತಿದೆ. (ನನಗೆ ಸಿಕ್ಕಿಬಿಟ್ಟಿದೆ ಅಗತ್ಯವಾದ ಭಾವಗೀತೆ. ನನಗೆ ದೊರಕಿಬಿಟ್ಟಿದೆ – ದೊರಕಿ ಬಿಟ್ಟಿದೆ – ನಾನು ಚಿತ್ರ ಬರೆಯುತ್ತೇನೆ. ಸಮುದ್ರದಂತೆ ಒರಟಾದ, ನಿಸರ್ಗದಂತೆ ಶೃಂಗರಿಸಿದ, ಮಹಾಕಾವ್ಯದಂತೆ ಮಹತ್ತರವಾದ, ಕವಿತೆಯಂತಹ ಕರುಣಾರ್ದ್ರವಾದ ಚಿತ್ರವನ್ನು ರಚಿಸುತ್ತೇನೆ. ಬಾಬುಈಯ ಅರ್ಜುನ

ನಾನೇ).

ಪ್ರತೀಕ್ಷೆಯ ಈ ಕ್ಷಣದಲ್ಲಿ ವಿನಯ್ ಕಣ್ಣು ತೆರೆದು ಬಗ್ಗಿ ನೋಡಿ ಪುನಃ ಕಣ್ಣು ಮುಚ್ಚಿದ. ಕ್ಷಿಪ್ರದಲ್ಲೆ ಆತನ ಕಣ್ಣು, ಅಡಿಗೆ ಮನೆಯ ಗೋಣೀಚೀಲದ ರಂಧ್ರಗಳಿಂದ ಬಿಸಿಲಿನತ್ತ ಹರಿಯಿತು. ಅಂಗಳದಲ್ಲಿ ಬಿದ್ದಿದ್ದ ಕೀಟಗಳ ರೀತಿಯ ಬಿಸಿಲಿನ ತುಣುಕುಗಳು ಅಂಗಳದ ಅಡಿಗೆಮನೆಯಲ್ಲಿ ಹರಡಿತ್ತು. ಈ ಕೊಠಡಿಯಿಂದ ಎಲ್ಲೆ ದಾಟಿ ಬಿಸಿಲು ಒದ್ದೆ ಸೀರೆಯಂತೆ ಬಿದ್ದಿತ್ತು. ಮತ್ತೊಂದು ಕಡೆ ಎರಡೂ ಕೊಠಡಿಯಲ್ಲಿನ ಬೆಳಕು ಇಬ್ಬನಿಯಂತೆ ಕಾಣಿಸುತ್ತಿತ್ತು. ನನಗೆ ಸಿಕ್ಕಿದೆ. ನಾನು ಪರೀಕ್ಷಿಸುತ್ತೇನೆ. ಈ ಮಂತ್ರವನ್ನು ಜಪಿಸುತ್ತಾ, ಕಣ್ಣನ್ನು ತೆರೆದು, ಒಮ್ಮೊಮ್ಮೆ ಕಣ್ಣನ್ನು ಮುಚ್ಚಿ ಅದನ್ನೇ ಜಪಿಸುತ್ತಾ ನಡೆದಿದ್ದೆ. ಆ ಗಾಢರಾತ್ರಿಯಲ್ಲಿ ಯಾವುದೋ ಸ್ಮಶಾನದಲ್ಲಿನ ರಾತ್ರಿಯ ರೋದನ, ನದಿಯ ಮೇಲೆ ತೇಲಿ ಬರುತ್ತಿರುವ ನರಿಯ ಕೂಗಿನಂತೆ ಆ ಶಬ್ದ ಆಳದಿಂದ ಕೇಳಿಬರುತ್ತಿತ್ತು. ಲಾಟೀನಿನಿಂದ ಹೊರಬರುತ್ತಿದ್ದ ಮಂದ ಬೆಳಕಿನ ಕಿರಣಗಳಲ್ಲಿ ಯಾವುದೇ ಮುಖವಾಗಲಿ, ಉಜ್ವಲ ಬೆಳಕಾಗಲಿ ಲಾಟೀನಿನ ಮಂದ ಬೆಳಕಿನಲ್ಲಿ ಕ್ಷೀಣವಾಗಿ ಕಾಣುತ್ತಿತ್ತು. ಒದ್ದೆಯಾದ ಸೀರೆಯ ರೀತಿಯ ಬೆಳಕು, ಬೆಳಕಿನ ಕೀಟಗಳಂತೆ ಕಾಣುವ ಬೆಳಕು, ದ್ರೋಣ ಲತೆಯಂತಹ ಬಳ್ಳಿ ರೇಖೆಗಳು, ಇದ್ದಕ್ಕಿದ್ದಂತೆಯೇ ಉಪಸ್ಥಿತವಿದ್ದ ಕೈಶೌರ್ಯದ ಅಂತರ್ಧಾನ, ಗೋಣಿಚೀಲದ ಸಹಸ್ರ ಕಿಟಕಿಗಳು, ಗೋಡೆಯ ಕಿಟಕಿಯಲ್ಲಿ ಯಾರದೋ ನಾಚಿ ಕುಳಿತಿರುವ ಹುಡುಗಿಯ ಕಣ್ಣುಗಳು, ಹಿಂದೆ ತಿರುಗಿ ನಿಂತಿರುವ ಯುವತಿಯ ಮುಂದೆ ತಲೆ ನೋವಿನ ಔಷಧ ವಿನಯನನ್ನು ಸುತ್ತುವರಿದಿದ್ದವು. ಬಹಳ ಉದಾಸನಾಗಿ ವಿನಯ ಹೇಳಲು ಆಶಿಸಿದ – "ನಾನು ಪ್ರಸನ್ನ ನಾರಾಯಣ ವಿದ್ಯಾಲಯದ ಡ್ರಾಯಿಂಗ್ ಮಾಸ್ತರು. ನಾನು ಪರೀಕ್ಷಿಸುವುದಿಲ್ಲ. ನಾನು ಚಿತ್ರಗಳನ್ನು ಬರೆಯುವುದಿಲ್ಲ."

"ಯಾರು ? ವಿನಯ್ ಕಾಕಾ ?"

"ಹಾ."

"ಏಕೆ ಸುಮ್ಮನೆ ಮಲಗಿದ್ದಿ ?"

"ಥೂ. ಸುಮ್ನೆ ಮಲಗಿರೋದು ನಂಗೆ ಸರಿಬೀಳೋದಿಲ್ಲ."

"ಏನು ? ಯಾವ್ದು ಚೆನ್ನಾಗಿ ಕಾಣ್ಸುತ್ತೆ ?"

"ಹಾಡೋದ್ರಲ್ಲಿ."

"ಸರಿ – ಹಾಗಾದ್ರೆ ಹಾಡು."

"ಇಲ್ಲ. ತಾಯಿ ಬಯ್ತಾಳೆ."

"ಬಯ್ಯೋದಿಲ್ಲ. ನಾನು ಹೇಳ್ತಾ ಇದ್ದೇನೆ."

"ಇಂದು ನರೇನ್ ಚಾಚಾ ಅಲ್ಲಿ ಹೋಗಿದ್ದ. ಅಲ್ಲಿ ಕೆಳಗೆ ಬ್ಯಾನರ್ಜಿ ಜನ ಇದ್ದಾರಲ್ಲ ಅವರು ಹಾಡಲು ಕರೆದುಕೊಂಡು ಹೋಗಿದ್ದರು."

"ಯಾವ ಯಾವ ಹಾಡು ಹಾಡ್ದೆ."

"ಬಹಳ ಚೆನ್ನಾಗಿತ್ತು."

"ಏಕೆ ?"

ಬಾಬುಈ ಏನೂ ಹೇಳಲಿಲ್ಲ.

ಅಂಗಳದಲ್ಲಿ, ಶ್ರಾದ್ಧ ನಡೆಸುತ್ತಿದ್ದ ಕೊಠಡಿಯ ಗೋಣಿಚೀಲದ ತೂತುಗಳಲ್ಲಿ ತೂರಿದ ಬೆಳಕು ಕೀಟಗಳಂತೆ ಕಾಣುತ್ತಿತ್ತು. ಈ ಇಬ್ಬರೂ ಒಬ್ಬೊಬ್ಬರ ನೋಟವನ್ನು ತಪ್ಪಿಸಲು, ಆ ಪ್ರಕಾಶ ಬಿಂದುವನ್ನೇ ನೆಟ್ಟಗಣ್ಣಿನಿಂದ ನೋಡುತ್ತಿದ್ದರು. ಆ ಜಟಿಲ ರೇಖಾ ಚಿತ್ರವನ್ನು ನೋಡುತ್ತಿದ್ದಂತೆ ವಿನಯ್‌ಗೆ ನೆನಪು ಬಂತು. ಇಂದು ಪೂರ್ಣ ದಿನ ಚೈತ್ರ ಮಾಸದ ಗಾಳಿ ಬೀಸುತ್ತಿದೆ. ಅದೇ ಕಾರಣದಿಂದಲೇ ಪ್ರಕೃತಿಯು ಈತನ ಶರೀರದಲ್ಲಿ ಒಂದು ತರಹ ಶೂನ್ಯವನ್ನು ಹುಟ್ಟು ಹಾಕಿದೆ. ಈ ಅಲೋಕ್ ಬಂಧುವನ್ನು ನೋಡಿ ಬಾಬುಈ ವಿನಾಶದಿಂದ ನಿಶ್ಚಿಂತ ಮುಕ್ತಿಯನ್ನು ಪಡೆದಿದ್ದಾಳೆಂದೆನಿಸಿತು. ಆಕೆಯ ಕಣ್ಣಿನಲ್ಲಿ ಆಕೆಯ ಮುಖದಲ್ಲಿ ಒಂದು ರೀತಿಯ ಉತ್ಸಾಹವಿತ್ತು. ಅದನ್ನು ಯಾವ ಕಾರಣದಿಂದಲೂ ಕಳೆದುಕೊಳ್ಳಲು ಆಕೆ ಸಿದ್ಧಳಿರಲಿಲ್ಲ. ಈ ಅಂಗಳವನ್ನೇ ಕೇಂದ್ರ ಬಿಂದುವಾಗಿ ಮಾಡಿಕೊಂಡು ಇಬ್ಬರ ಮಧ್ಯೆ ಎಂತಹ ಮೌನ ಸ್ಥಾಪನೆಯಾಗಿತ್ತೆಂದರೆ ಅದು ಯಾವ ಕ್ಷಣದಲ್ಲಾದರೂ ನೀಳ ಉಸುರಿನ ಜೊತೆಯಲ್ಲಿ ಶಬ್ದದ ಗರ್ಭಪಾತ ಆಗಬಹುದು. ಮತ್ತು ಈ ಸರ್ವನಾಶವನ್ನು ತಡೆಯಲೆಂದೇ ಆ ಇಬ್ಬರೂ ತಮ್ಮ ಮುಖಭಾವಗಳಿಂದ ತಮ್ಮನ್ನು ಸ್ಥಿಮಿತದಲ್ಲಿಟ್ಟಿರಲು ಪ್ರಯತ್ನ ನಡೆಸಿದ್ದಾರೆ. ಅದಕ್ಕೇ ಅವರಿಬ್ಬರ ಕಣ್ಣಿನ ಮುಂದೆ ಆರ್ತರೂಪದ ವಿಭಿನ್ನ ಆಕಾರಗಳು ಒಡೆದು ಹೊಸದಾಗಿ ಹೊಸ ಆಕಾರ ತಾಳತೊಡಗಿವೆ.

ಹಿಸ್ಟಿರಿಯಾ ರೋಗಿ ಹೇಗೆ ಸ್ವಲ್ಪ ಹೊತ್ತು ಈ ಪ್ರಪಂಚವನ್ನು ಅಪಾರ್ಥಿವ ಮತ್ತು ಉದ್ದೇಶಹೀನವೆಂದು ಭಾವಿಸಿ ಪಾರ್ಥಿವ ಹಾಗೂ ನಿರ್ದಿಷ್ಟ ವಸ್ತುವಿನ ಬಗ್ಗೆ ಅಸಹಾಯ ದೃಷ್ಟಿಯನ್ನು ಬೀರುತ್ತಾನೋ ಹಾಗೇ ಈ ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತಿದ್ದರು.

ವಿನಯ್ ನಕ್ಕನು. ಯಾರ ಎದೆಯಲ್ಲಿ ಹಾಲಿಲ್ಲವೋ ಅಂತಹ ತಾಯಿ ಒಬ್ಬಳು ಇದ್ದು ಅವಳ ಮಗನೊಬ್ಬ ಹಾಲಿಗಾಗಿ ಹಂಬಲಿಸುತ್ತಿದ್ದರೆ ಇನ್ನೊಬ್ಬ ಪುತ್ರ ಸ್ವಸ್ಥನಿದ್ದು ಹಾಲು ತುಂಬಿದ ತಾಯಿಯ ಅನ್ವೇಷಣೆಯಲ್ಲಿದ್ದವನ ಚಿತ್ರ ಮೂಡಿತು. ತಕ್ಷಣ ಆತ ಬಾಬುಈ ಕಡೆ ನೋಡಿ ಪ್ರಶ್ನಿಸಿದ. "ನೀನು ಏಕೆ ಏನೂ ಹೇಳಲಿಲ್ಲ ? ನರೇನ್ ಬಾಬುವಿನ ಮನೆಯಲ್ಲಿ ಏನು ನಡೆಯಿತೆಂದು ?"

ಮಂಡಿಗಳ ಮಧ್ಯೆ ಮುಖವನ್ನಿಟ್ಟುಕೊಂಡು ಬಾಬುಈ ಮುದುಡಿ ಕುಳಿತಿದ್ದಳು. ಈಗ ಅವಳು ತನ್ನ ಭಂಗಿಯನ್ನು ಬದಲಾಯಿಸಿ ಪದ್ಮಾಸನ ಹಾಕಿ ಕುಳಿತುಬಿಟ್ಟಳು. ತಲೆ ಅಲ್ಲಾಡಿಸಿ ಕೂದಲನ್ನು ಸರಿಪಡಿಸಿಕೊಂಡಳು. ಅವಳ ಕಥೆಯನ್ನು ಕೇಳಲು ವಿನಯ್ ಕೂಡ ತನ್ನ ಭಂಗಿಯನ್ನು ಬದಲಾಯಿಸಿದ. ಬಾಬುಈ ನೀರಿನ ಕೊಕ್ಕರೆಯಂತಾದಳು.

ಆನಂತರ ವಿಷಾದದ ಮುಳುಗು ಹಾಕುತ್ತಾ ಹಾಕುತ್ತಾ ಹಾಡುತ್ತಾ ಇರುವಂತೆ ಅವಳ ಗಂಟಲಿನಿಂದ ಹಾಡು ಹೊರಬಿತ್ತು. ಮತ್ತು ಎತ್ತರದ ಧ್ವನಿಯಿಂದ ಬಾಬುಈ

ಹಾಡಲು ಪ್ರಾರಂಭಿಸಿದಳು – ನಿಶೀಥ್ ಕೀ ಕೌಎ ಗೈಲೊ ಮೌನೆ ? (ಮಧ್ಯರಾತ್ರಿ ನನ್ನ ಮನದಲ್ಲಿ ಏನು ಹೇಳಿ ಹೋಯಿತು ?)

ಐದು ಶಬ್ದಗಳ ಲಯದಲ್ಲಿ ಹಾಡು ಪ್ರತಿಧ್ವನಿಸುತ್ತಿರುವಂತೆ ಕೇಳಿಬಂತು. ಮೊದಲು ಮಂದ್ರ ಸ್ಥಾಯಿಯಲ್ಲಿ, ಅನಂತರ ಮಧ್ಯಮ ಸ್ಥಾಯಿಯಲ್ಲಿ, ತದನಂತರ ತಾರಾಸ್ಥಾಯಿಯಲ್ಲಿ 'ಕೋಕಿ ಭೋ ಮೆ ? ಇದೇನು ನಿದ್ದೆಯಲ್ಲೇ ? ಸರಳ ಗಂಭೀರ 'ನೀ' ಊರ್ಧ್ವಗಾಮಿ 'ನ' ಮತ್ತು ನಿಮ್ನಗಾಮಿ 'ಯ' ಸ್ತಬ್ಧಗೊಂಡ 'ಮ' ದಿಂದ ಬೆದರಿದಳು. ಜಿಂಕೆ, ದ್ರೋಣಲತೆಯಂತೆ ಅದರ ರೇಖೆಗಳು. ಆ ಜಾಗರಣ ಶಬ್ದದಲ್ಲಿ ಜಾ–ಗ–ರ–ಣ–ದ ಪ್ರತಿಯೊಂದು ಶಬ್ದದಲ್ಲೂ ಆನಂದದ ಚಿಕ್ಕ ಅಲೆಗಳು, ವಿರಹ, ಸಂಶಯ, ಆಗ್ರಹ. ಮತ್ತು ಮಂದ್ರ ಸ್ವರದಲ್ಲಿ 'ಏನು ಗೊತ್ತು' ಹೇಳಿ ಕಣ್ಣು ಮುಚ್ಚಿಕೊಳ್ಳುವುದು ! ಈ ಅಂಗಳದಲ್ಲಿ ಕತ್ತಲೆಯಂತಹ ಅಸ್ಪಷ್ಟ ಬೆಳಕು. ಮಾವಿನ ಮರದಿಂದಾಗಿ ಬೆಳಕು ಸರಿಯಾಗಿ ಪಸರಿಸದಾಗಿತ್ತು.

'ನಾನಾ ಕಾಜೆ, ನಾನಾ ಮತೆ, ಫಿರಿಘರೆ, ಫಿರಿ ಪಥ್' (ವಿಭಿನ್ನ ಕೆಲಸಗಳಲ್ಲಿ ವಿಭಿನ್ನ ವಿಚಾರಗಳ ಕಾರಣದಿಂದಾಗಿ ಮನದಲ್ಲೇ ಸುತ್ತುತ್ತಲಿರುತ್ತೇನೆ. ರಸ್ತೆಯಲ್ಲಿ ಸುತ್ತುತ್ತಲಿರುತ್ತೇನೆ). ಈ ಕೊಠಡಿಯಿಂದ ಆ ಕೊಠಡಿಗೆ, ಆ ಕೊಠಡಿಯಿಂದ ಈ ಕೊಠಡಿಗೆ ಮತ್ತೆ ನನ್ನ ಪಥದಲ್ಲಿ ನಾನು ಏಕಾಂಗಿ. ಮತ್ತು ಸದಾಕಾಲವೂ ರಾತ್ರಿಯಾಗಲಿ ಹಗಲಾಗಲಿ, ನನ್ನ ಕಿವಿಯಲ್ಲಿ ಬರುತ್ತಿರುತ್ತದೆ. ಸಂಜೆ ಮೀನುವನ್ನು ಕರೆಯುತ್ತದೆ. ನನ್ನ ಕಡಲೇಪುರಿಯ ಬಟ್ಟಲಿನಲ್ಲಿ ಕೊಬ್ಬರಿ ಎಣ್ಣೆಯ ವಾಸನೆ. ತಾಯಿಯ ಬಗ್ಗೆ ಒಂದು ಮಾತು – ಅಮ್ಮ ನಿನಗೆ ರಾತ್ರಿ ಹೊತ್ತು ನಿದ್ದೆ ಬರುತ್ತದೆಯೇ ? 'ಶೇ ಕಥಾ ಕಿ ಅಶೋಚರೆ ಬಾಜೆ ಖನ್ನೆ ಖನ್ನೆ' (ಏನು ಈ ಮಾತು, ನಿನ್ನ ಅರಿವಿಲ್ಲದೆಯೇ ಸದಾ ಕೇಳಿಸುತ್ತಿರುತ್ತದೆಯೇ ?). ಗೊತ್ತಿಲ್ಲ, ತಿಳಿದೂ ಇಲ್ಲ. ನನ್ನ ಶರೀರದ ಯಾವ ಅಂಶವನ್ನೂ ನಾನು ನೋಡಬಲ್ಲನೊ ಅದರ ಆಂತರ್ಯದಲ್ಲೆಲ್ಲೊ ಈ ಶರೀರದಲ್ಲಿ ಹುದುಗಿರುವ ಹೃದಯವೆಂಬುದಿದೆ. ಅದರ ಅರಿವಿದ್ದರೆ ? ನನಗೆ ಗೊತ್ತಿಲ್ಲ. ಅದರ ಅರಿವೂ ಇಲ್ಲ. ಆಹಾಕಾರ. ಸುತ್ತಲೂ ಆಹಾಕಾರ ! "ಶೈ ಕಥಾ ಕಿ ಆಕಾರಣೆ ವ್ಯಥಿಥೆ ಹೃದಯೆ" (ಏನು ಆ ಮಾತು ಯಾವ ಕಾರಣವೂ ಇಲ್ಲದೆ ಮನಸ್ಸಿಗೆ ಚುಚ್ಚುತ್ತಿದೆಯೇ ?) ಚರ್ಚ್‌ನ ಪ್ರಾರ್ಥನೆಯಲ್ಲಿನ ಸಾಮೂಹಿಕ ಸಂಗೀತದಂತೆ, ಜೊತೆಯಲ್ಲೆ ಹಾಡುವ ನಾಲ್ಕು ಧ್ವನಿಗಳು ಅಂತಿಮದ ವಿಸ್ತೃತ ('ಏಕಿಭವ'). ಇದೆಂತಹ ಭಯ. ಇದು ಕೊನೆಗೊಳ್ಳುತ್ತಿದ್ದಂತೆ ಮತ್ತೊಂದು ತರಂಗ (ಏಕಿಜಎ), ಇದೆಂತಹ ಜಯ ? ಅಲೆಗಳ ಮೇಲೆ ಅಲೆಗಳು, ಬಿರುಗಾಳಿಯ ಮೇಲೆ ಬಿರುಗಾಳಿ, ದಡ ಅಲ್ಲೋಲ ಕಲ್ಲೋಲವಾಗಿದೆ. ಒಂದು ಭಯಂಕರ ಪ್ರಾರ್ಥನಾ ಸಮುದ್ರದ ಅಲೆಗಳಂತೆ ತನ್ನ ಆಘಾತದಿಂದ ಮುರಿದು ಚೂರಾಗಿ, ಧ್ವಂಸವಾಗಿ ಕೊಚ್ಚಿಹೋಗಿ, ಮುಳುಗಿಹೋಗಿ, ನಾಮಾವಶೇಷವಾಗಿ ಹೋಗಿ, ಸಂಕೀರ್ಣ ಕ್ಷುದ್ರ ಮಾಂಸವನ್ನು ಕರಗಿಸಿ, ಮೂಳೆಯನ್ನು ಹೊರತೆಗೆದು ರಕ್ತನಾಳದಿಂದ ರಕ್ತವನ್ನು ಹೊರಚೆಲ್ಲಿ, ಬಿಸಿಕೆಂಪುರಕ್ತ ದ್ವೀಪವನ್ನು ಸೃಷ್ಟಿಸುತ್ತದೆ. ಆಹ್ ! ಮೂಡುತ್ತದೆ ಕೆಂಪುಬಣ್ಣ ಆಹ್ ! ಸೃಷ್ಟಿ ! ಸೃಷ್ಟಿ ! ಪೃಥ್ವಿಯ ಮೇಲೆ

ಹರಡಿರುವ ಹವೆಯನ್ನು ಮೇಲುಕೆಳಗು ಮಾಡುತ್ತಿದೆ ಸೃಷ್ಟಿ. ಎ-ಲಿ-ಮೆಂ-ಟ-ಲ್-ಲಿ-ರಿ-ಕ-ಲ್. ನಾನು ಚಿತ್ರ ಬರೆಯುತ್ತೇನೆ. ಹಾಡುತ್ತೇನೆ. ನಾನು ಸಮುದ್ರ ನೋಡುತ್ತೇನೆ. ಆಹ್ ! ಏ ! ಬಾಲೆ. ತಲೆ ಎತ್ತಿ, ಒಣಗಿದ ತುಟಿಗಳಿಂದ ಯಾವ ಹಟದಿಂದ ಈ ಸಿಲುಬೆಗೆ ಮೊಳೆ ಹೊಡೆದು ಸಿಗಿಸಿರುವ ಜೀಸಸ್ ಕ್ರೈಸ್ಟ್‌ನ ಪಾದತಳದಲ್ಲಿ 'ಭಕ್ತಳಂತೆ' ಏಕೆ ಕುಳಿತಿದ್ದಿ ? ಓಹ್ ! ಅಕಾಲ ಮುಪ್ಪಿನ ಈ ಇಪ್ಪತ್ತಾರನೇ ವರ್ಷದಲ್ಲಿ ಎರಡು ಮೊಳಕಾಲುಗಳ ನಡುವೆ ತಲೆಯನ್ನು ಹುದುಗಿಸಿ ಬೆನ್ನನ್ನು ಅಟ್ಲಾಸ್ ತರಹ ನಿಲ್ಲಿಸಿ ಖಿನ್ನವಾಗಿ ಯಾವ ಹಾಡು ಕೇಳಲಿ ? ಈ ನೋವಿನ ರಾತ್ರಿಯನ್ನು ಹೇಗೆ ಕಳೆಯಲಿ ? ನನ್ನ ಮನಸ್ಸಿನಲ್ಲಿ ಇದನ್ನು ತುಂಬಿದವರಾರು ? – ಇದೆಲ್ಲಾ ನಾನು ಸಹಿಸಲಾರೆ. ಈ ಮಾತು ಬಾರಿಬಾರಿಗೂ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತಿದೆ. 'ಮತ್ತೆ ಅಲ್ಲ ಮತ್ತೆ ಅಲ್ಲ'. ದೃಷ್ಟಿಶಕ್ತಿ ಆರಿಹೋದಂತೆ. ಅದೊಂದು ಧ್ಯಾನದ ವೃಷ್ಟಿಯೇ ಇರಬಹುದು, ಕಣ್ಣುಮುಚ್ಚಿದಂತೆ, ಶಿವನ ಧ್ಯಾನದಂತೆ, ಹಣೆಯ ಮಧ್ಯದಲ್ಲಿ ಉದ್ದಗೆರೆಗಳು. ಕೊಳಲು ನುಡಿಯುತ್ತದೆ, ಮನದಲ್ಲಿ ಅಥವಾ ವನದಲ್ಲಿ ಕೊಳಲನ್ನು ಯಾರು ನುಡಿಸುತ್ತಾರೆ ? ಯಾರನ್ನು ಕರೆಯುತ್ತದೆ ? ಯಾರಿಗೆ ಗೊತ್ತು ? ಯಾರಿಗೆ ಗೊತ್ತು 'ಶೈ ಕಥಾಕಿ ನಾನಾ ಸುರೆ ಬಲೆ ಮೋರೆ ಚಲೋ ದೂರೆ' (ಕಥೆಯಲ್ಲಿ ಈ ಮಾತನ್ನು ಬೇರೆಬೇರೆ ಸ್ವರದಲ್ಲಿ ನನಗೆ ಹೇಳುತ್ತದೆ-ನಡೆ ದೂರ ನಡೆ).

ಈ ನಾಲ್ಕು ಶಬ್ದಗಳ ಪ್ರತಿಯೊಂದರ ಹಿಂದೆ ಒಂದು ಚಿಕ್ಕ ಅಲೆ,ಧ್ಯಾನದ ದನಿ, ಹೃದಯದ ಮಾತು, ಹೆದರಿದ ಹರಿಣಿ ಪ್ರಾರ್ಥನೆಯ ತರಂಗದಲ್ಲಿ ಸಿಲುಕಿ ಕೊಚ್ಚಿಹೋದ ದಡ ಕಾಣಿಸುತ್ತದೆ. ನಡಿ, ಎಲ್ಲಾದರೂ ದೂರ ಹೊರಟುಹೋಗೋಣ. ಸಮುದ್ರದ ಸಂಗಮದಲ್ಲಿ, ದೂರ ಸಮುದ್ರ ಮಧ್ಯೆ, ದೂರ ಸಮುದ್ರದ ಮರಳು ಕೆಳಗೆ, ದೂರ, ನೀಲಾಕಾಶದ ಅಂತಸ್ತಳದೊಳಗೆ, ದೂರ ಸಮುದ್ರದ ತಳದೊಳಗೆ, ನನ್ನ ಶಿರಸ್ಸಿನಿಂದ ರಕ್ತ ಬಸಿದಿಕೊ, ಮಲೆಗಳಿಂದ ರಸ ತೆಗೆ, ದೃಷ್ಟಿಯ ಒಂದು ದ್ವೀಪ, ಪ್ರವಾಲ್ ದ್ವೀಪ, ಕೆಂಪು ಬಣ್ಣದ ಆವೇಗ ತುಂಬಿದ ಒಂದು ದ್ವೀಪ ನಿರ್ಮಿಸು ಬಾಬುಈ ಬಾಲಿಕೆಯ ಕೈಜೋಡಿಸಿ ನಾನು ನನ್ನ ಸಮಸ್ತ ಪಾಪಗಳನ್ನು ನಿನ್ನ ಪಾದದಡಿ ಇರಿಸುತ್ತಿದ್ದೇನೆ.

ಬೆಟ್ಟದಿಂದ ಇಳಿದ ನದಿ ಸಮುದ್ರ ಸೇರುತ್ತದೆ. ಗಂಗಾ ಬ್ರಹ್ಮಪುತ್ರ ಪ್ರವಹಿಸುವ ಮಣ್ಣಿನ ಒಂದು ದೇಶ, ಭೂಗೋಳದ ಒಂದು ಹೆಸರು ಪೃಥ್ವಿಯ ಕೆಲ ಮನುಷ್ಯರು. ಸ್ವರ್ಗದ ಕೊಂಚ ಶೋಭೆ ಸೇರಿಸು. ನದಿ ಸಮುದ್ರದಲ್ಲಿ ಸೇರುತ್ತದೆ. ಹೂಂ ದೂರ ನಡೆ. ದಡದ ಮೇಲೆ, ಗಂಗಾ ದಡದ ಮೇಲೆ ಕಲ್ಕತ್ತಾ ಒಂದು ಬಂದರು. ಕಲ್ಕತ್ತಾ ಒಂದು ಹೆಸರು. ಸಮುದ್ರದ ದಡದಲ್ಲಿ ಅದರ ಅಕ್ಕಪಕ್ಕದಲ್ಲಿ ಅದೆಷ್ಟೊ ಹೆಸರುಗಳಿವೆ. ಕಲ್ಕತ್ತಾ ಇದಾದ ನಂತರ ಸಮುದ್ರ.

ಕಲ್ಕತ್ತಾ ಸಮುದ್ರದ ಹತ್ತಿರವಿದೆ. ಭಾಗೀರಥಿ ನದಿಯ ದಡದ ಮೇಲಿರುವ ಒಂದು ಬಂದರು ಕಟ್ಟೆ. ಅಸ್ಸಾಂ, ಬಂಗಾಳ, ಬಿಹಾರ, ಒರಿಸ್ಸಾ, ಉತ್ತರ ಪ್ರದೇಶ, ಮಧ್ಯಪ್ರದೇಶ ಮುಂತಾದವು ಅದರ ಹಿಂದಿರುವ ಭೂಮಿ. ಅದಾದ ನಂತರ ಇದೆ

ಮಧ್ಯ ಸಮುದ್ರ.

ಈ ಅಂಧಕಾರದಲ್ಲಿ ಆ ಇಬ್ಬರೂ ರವೀಂದ್ರ ಸಂಗೀತದ ಗೀತಕ್ಕೆ ಹಸ್ತಲಿಪಿ ಆಗುತ್ತಾರೆ. ಕತ್ತರಿಸಿರುವ ಕೆಲ ಮಾತು, ಮುರಿದಿರುವ ವಾಕ್ಯ. ಅಲ್ಲಿ ಇಲ್ಲಿ ಸರಿಸಿರುವ ಅಕ್ಷರಗಳು, ಮತ್ತೆ ಆ ಸಂಗೀತ ಅನೇಕ ಸ್ವರಗಳಿಂದ ತುಂಬಿರುತ್ತದೆ.

# ಕಥೆಗಾರರ ಪರಿಚಯ

*ತಾರಾಶಂಕರ ಬಂದೋಪಾಧ್ಯಾಯ (1889–1971):* ಶರತ್‌ಚಂದ್ರರ ನಂತರ ಬಾಂಗ್ಲಾ ಕಥಾಸಾಹಿತ್ಯದ ನಾಯಕರಾಗಿದ್ದವರು ತಾರಾಶಂಕರ್. ಕಥೆ, ಕಾದಂಬರಿ, ನಾಟಕ ಮತ್ತು ಕವನ ರಚನೆಯಲ್ಲಿ ಇರರು ಸಿದ್ಧಹಸ್ತರಾಗಿದ್ದರು. ರವೀಂದ್ರನಾಥ ಠಾಕೂರರು ಇವರ ಬಗ್ಗೆ ಹೇಳಿದ್ದರು: "ಇವರು ಮಣ್ಣು ಮತ್ತು ಮನುಷ್ಯರನ್ನು ಅರಿತಿದ್ದಾರೆ. ಇವುಗಳೊಡನೆ ಇವರಿಗೆ ಗಾಢವಾದ ಸಂಬಂಧವಿದೆ." ಈ ಸಂಬಂಧ ಬಾಹ್ಯಕವಲ್ಲ ಆದರೆ ಅತ್ಯಂತ ಆಂತರಿಕವಾದದ್ದು. ಇವರಿಗೆ 1947ರಲ್ಲಿ ಶರತ್ ಸ್ಮೃತಿ ಪುರಸ್ಕಾರ, 1955 ರಲ್ಲಿ ರವೀಂದ್ರ ಸ್ಮೃತಿ ಪುರಸ್ಕಾರ, 1956ರಲ್ಲಿ ಸಾಹಿತ್ಯ ಅಕಾಡೆಮಿ ಪುರಸ್ಕಾರ ಮತ್ತು 1960ರಲ್ಲಿ ಜ್ಞಾನಪೀಠ ಪುರಸ್ಕಾರ ಲಭಿಸಿದೆ. ಕಲ್ಕತ್ತಾ, ಉತ್ತರ ಬಂಗಾಳ, ಯಾದವಪುರ ಹಾಗೂ ರವೀಂದ್ರ ಭಾರತಿ ವಿಶ್ವವಿದ್ಯಾನಿಲಯಗಳು ಇವರಿಗೆ 'ಡಿ ಲಿಟ್' ಪದವಿ ನೀಡಿ ಪುರಸ್ಕರಿಸಿವೆ. ಇವರು ರಾಷ್ಟ್ರಪತಿಗಳಿಂದ ರಾಜ್ಯಸಭೆಯ ಸದಸ್ಯರಾಗಿಯೂ ಆಯ್ಕೆಗೊಂಡಿದ್ದರು. ಸಾಹಿತ್ಯ ಅಕಾಡೆಮಿಯ ಫೆಲೊ ಕೂಡ ಆಗಿದ್ದರು, ಇವರ ಕಥೆಗಳು ಹಾಗೂ ಕಾದಂಬರಿಗಳು ಇತರ ಭಾರತೀಯ ಭಾಷೆಗಳಿಗೂ ಅನುವಾದಗೊಂಡಿವೆ. ಇವರ ಕೆಲವು ಕಾದಂಬರಿಗಳನ್ನು ಆಧರಿಸಿ ಚಲನಚಿತ್ರಗಳೂ ನಿರ್ಮಾಣಗೊಂಡಿವೆ. ಇವರು ವೀರಭೂಮಿ ಜಿಲ್ಲೆಯ ಲಾಭಪುರ್ ಗ್ರಾಮದ ಒಂದು ಜಮೀನ್ದಾರಿ ಮನೆತನದಲ್ಲಿ ಜನ್ಮ ತಳೆದಿದ್ದರು. ಮೃತರಾದದ್ದು ಕಲ್ಕತ್ತಾದಲ್ಲಿ. ಬರೆಯುವುದೇ ಅವರ ಜೀವನವಾಗಿತ್ತು. ಭಾರತ ಸರಕಾರ ಇವರಿಗೆ ಪದ್ಮಭೂಷಣ ಪ್ರಶಸ್ತಿ ನೀಡಿ ಗೌರವಿಸಿದೆ.

*ಬನಫೂಲ್:* ಬನಫೂಲ್‌ರ ನಿಜಹೆಸರು ಶ್ರೀ ಬಲಾಯಿ ಚಾಂದ್ ಮುಖೋಪಾಧ್ಯಾಯ. ವೃತ್ತಿಯಲ್ಲಿ ಇವರು ಡಾಕ್ಟರ್. ಕಲ್ಕತ್ತಾ ಮೆಡಿಕಲ್ ಕಾಲೇಜಿನಿಂದ ಬಂದ ನಂತರ ಬಹಳ ವರ್ಷಗಳು ಇವರು ಭಾಗಲ್‌ಪುರ್‌ನಲ್ಲಿ ಡಾಕ್ಟರ್ ಕೆಲಸ ಮಾಡುತ್ತಿದ್ದರು. ಪ್ರಸ್ತುತ ಇವರು ಕಲ್ಕತ್ತಾದಲ್ಲೇ ವಾಸಿಸುತ್ತಿದ್ದಾರೆ. ಕವಿತೆ ಕಥೆ, ಕಾದಂಬರಿ, ನಾಟಕ ಪ್ರಬಂಧ ಆದಿಯಾಗಿ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಇವರು ಸಿದ್ಧಹಸ್ತರು. ಇವರು ಲೆಕ್ಕವಿಲ್ಲದಷ್ಟು ಕಥೆಗಳನ್ನು ಬರೆದಿದ್ದಾರೆ. ಹೊಸ ವಿಷಯ ಆಯ್ಕೆ ಹಾಗೂ ಶೈಲಿಯಲ್ಲಿ ಇವರ ಸರಿಸಮನಾದವರು ಮತ್ತೊಬ್ಬರಿಲ್ಲವೆಂದು ತಿಳಿಯಲಾಗಿದೆ. ಇವರಿಗೆ 1952ರಲ್ಲಿ ಕಲ್ಕತ್ತಾ

ವಿಶ್ವವಿದ್ಯಾನಿಲಯದ 'ಶರತ್' ಸ್ಮೃತಿ ಪುರಸ್ಕಾರ, 1961ರಲ್ಲಿ ಆನಂದ ಪುರಸ್ಕಾರ, 1962ರಲ್ಲಿ ರವೀಂದ್ರ ಪುರಸ್ಕಾರ ಲಭಿಸಿವೆ. ಇವರ ಕಥೆ ಹಾಗೂ ಕಾದಂಬರಿಗಳು ಚಾರಿತ್ರಿಕ ಚಿತ್ರಶಿಲೆಗಳಂತಿರುತ್ತವೆ. ಇವುಗಳ ವಿಚಿತ್ರ ರೀತಿಯು ಅಂತ್ಯ ಓದುಗರನ್ನು ಮುಗ್ಧಗೊಳಿಸುವುದಲ್ಲದೆ ವಿಸ್ಮಿತಗೊಳಿಸುತ್ತವೆ. 1957ರಲ್ಲಿ ಭಾರತ ಸರಕಾರ ಇವರಿಗೆ ಪದ್ಮಭೂಷಣ ಪ್ರಶಸ್ತಿ ನೀಡಿ ಗೌರವಿಸಿದೆ.

***ಅಚಿಂತ್ಯ ಕುಮಾರ್ ಸೇನ್‌ಗುಪ್ತ** (1902-1976):* ಅಚಿಂತ್ಯಕುಮಾರ್ ಸೇನ್‌ಗುಪ್ತ ಕಲ್ಲೋಲ್ ಗೋಷ್ಠಿಯ ಪ್ರಧಾನ ಲೇಖಕರಾಗಿದ್ದರು. ಇವರು ಕಥೆ, ಕಾದಂಬರಿ, ಕವಿತೆ, ಜೀವನಚರಿತ್ರೆ, ಬಾಲ ಸಾಹಿತ್ಯ ಮತ್ತು ನಾಟಕ ಪ್ರಕಾರಗಳಲ್ಲಿ ಸಿದ್ಧಹಸ್ತರು. ಇವರ ಸಾಹಿತ್ಯದಲ್ಲಿ ತೀಕ್ಷ್ಣದೃಷ್ಟಿ, ಗಂಭೀರ ಸಹಾನುಭೂತಿ, ಮತ್ತು ಅಪಾರ ಮಮತೆ ತುಂಬಿರುತ್ತದೆ. ಇವರು ಕಾನೂನು ವಿಭಾಗದಲ್ಲಿ ಕೆಲಸ ಮಾಡಿದ್ದರು. ಜಿಲ್ಲಾ ಜಡ್ಜ್ ಆಗುವ ಅವಕಾಶ ಸಹ ಇವರಿಗೆ ಲಭಿಸಿತ್ತು. ಪೂರ್ವಬಂಗಾಳದ ಬಡ ಮುಸಲ್ಮಾನ್ ಗಂಡು ಹೆಣ್ಣುಗಳು, ಸರಕಾರದ ಉಚ್ಚ ಅಧಿಕಾರಿಗಳು, ರಾಜಧಾನಿಯ ಉನ್ನತ ಸಮಾಜದ ಜನರ ವಿಭಿನ್ನ ಜೀವನಕ್ರಮಗಳನ್ನು ತೀರಾ ಹತ್ತಿರದಿಂದ ನೋಡಿ ಅವುಗಳ ಬಗ್ಗೆ ಬರೆದಿದ್ದಾರೆ. ಇವರ ಲೇಖನಗಳಲ್ಲಿ ಶಬ್ದಮಾಧುರ್ಯ ತುಂಬಿರುತ್ತದೆ. 1975ರಲ್ಲಿ ಇವರಿಗೆ ರವೀಂದ್ರ ಪುರಸ್ಕಾರ ಲಭಿಸಿತ್ತು.

***ಪ್ರೇಮೇಂದ್ರ ಮಿತ್ರ**:* ಪ್ರೇಮೇಂದ್ರ ಮಿತ್ರರು 'ಕಲ್ಲೋಲ್ ಗೋಷ್ಠಿ'ಯ ಪ್ರಮುಖ ಲೇಖಕರಲ್ಲಿ ಒಬ್ಬರು. ಇವರಿಗೆ ಸಾಹಿತ್ಯದ ವಿವಿಧ ಪ್ರಕಾರಗಳಾದ ಕವಿತೆ, ಗೀತೆ ಪ್ರಬಂಧ, ಬಾಲಸಾಹಿತ್ಯ ಮತ್ತು ಕಥೆ ರಚನೆಯಲ್ಲಿ ನಿಪುಣತೆ ಇದ್ದಿತು. ಇವರು ರಚಿಸಿದ್ದ 'ಛನಾದಾ ಓ' ಪರಾಶರವರ್ಮರ ಕಥೆಗಳನ್ನು ಓದಿ ಮಕ್ಕಳೂ ವೃದ್ಧರೂ ಆದಿಯಾಗಿ ಎಲ್ಲರೂ ಮೋಹಿತಗೊಂಡಿದ್ದರು. ಜೀವನದ ಕೆಲವರ್ಷಗಳನ್ನು ಇವರು ಕಾಶಿಯಲ್ಲಿ ಕಳೆದಿದ್ದರು. ವಿಭಿನ್ನರೀತಿಯ ಸಾಹಿತ್ಯ ಕೃಷಿ ಮಾಡಿರುವ ಇವರು ಕೆಲವರ್ಷಗಳು ಕಲ್ಕತ್ತಾದ ಆಕಾಶವಾಣಿ ಕೇಂದ್ರದಲ್ಲಿ ಸಾಹಿತ್ಯ ಸಲಹಾಗಾರರಾಗಿದ್ದರು. ಸಾಹಿತ್ಯವೇ ಇವರ ಜೀವನದ ಮೂಲ ಆಧಾರವಾಗಿತ್ತು. ಇವರ ಲೇಖನಗಳಲ್ಲಿ ಮಾನವ ಜೀವನದ ಬಗ್ಗೆ ಇರುವ ಅಪಾರ ಮಮತೆ ವ್ಯಕ್ತವಾಗುತ್ತದೆ. ಬಾಹ್ಯ ಜೀವನದ ಹಿಂದೆ ಇರುವ ಮಾನಸಿಕ ತುಮುಲದ ಅನ್ವೇಷಣೆಯಲ್ಲಿ ಇವರಿಗೆ ಅತೀವ ಆಸಕ್ತಿ. ಇವರಿಗೆ ಮಾನವನ ಮನಸ್ಸಿನ ತಳ ಮುಟ್ಟುವ ಆಸೆ ಬಹಳ. 1955ರಲ್ಲಿ ಶರತ್‌ಸ್ಮೃತಿ ಪುರಸ್ಕಾರ, 1958ರಲ್ಲಿ ರವೀಂದ್ರಸ್ಮೃತಿ ಪುರಸ್ಕಾರ ಮತ್ತು 1967ರಲ್ಲಿ ಸಾಹಿತ್ಯ ಅಕಾಡೆಮಿ ಪುರಸ್ಕಾರ ಇವರಿಗೆ ಲಭಿಸಿದೆ. ಪದ್ಮಶ್ರೀ ಪ್ರಶಸ್ತಿ ಸಹ ಲಭಿಸಿದೆ. ಇವರು ಈಗ ಜೀವಿಸಿಲ್ಲದಿರುವುದು ನಮ್ಮ ದೌರ್ಭಾಗ್ಯ.

***ಅನ್ನದಾ ಶಂಕರ್ ರಾಯ್** (1904):*ಇವರು ಟೆಂಕಾಲನ್‌ನಲ್ಲಿ ಜನಿಸಿದರು. 1928ರಲ್ಲಿ ಇವರು ಐ.ಸಿ.ಎಸ್. ಪರೀಕ್ಷೆಯಲ್ಲಿ ಉತ್ತೀರ್ಣಗೊಂಡರು. 1951ರಲ್ಲಿ ಕೆಲಸಕ್ಕೆ ರಾಜೀನಾಮೆ ನೀಡಿ 1927ರಿಂದ 29ರ ತನಕ ಯೂರೋಪಿನಲ್ಲಿದ್ದರು. 1957ರಲ್ಲಿ ಜಪಾನಿಗೆ ಹೋದರು. 1963ರಲ್ಲಿ ಪಶ್ಚಿಮ ಜರ್ಮನಿ ಮತ್ತು ಇಂಗ್ಲೆಂಡ್‌ಗೆ

ಹೋದರು. 1962ರಲ್ಲಿ ಇವರಿಗೆ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಲಭಿಸಿತ್ತು. 1931ರಲ್ಲಿ ರಚಿಸಿದ ಪ್ರವಾಸಿಗ್ರಂಥ ಪಥ್‌ಪ್ರವಾಸ್' ಇಂದಾಗಿ ಇವರಿಗೆ ಬಹಳ ಖ್ಯಾತಿ ಲಭಿಸಿತು. ಇವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ರಚನೆ ಮಾಡಬಲ್ಲರು. ಇವರ ಪ್ರಖ್ಯಾತ ಕಾದಂಬರಿ 'ಸತ್ಯಾಸತ್ಯ' ಆರು ಭಾಗಗಳಲ್ಲಿ ಪ್ರಕಾಶಿತಗೊಂಡಿದೆ. ಈ ಕಾದಂಬರಿ 1932–42ರಲ್ಲಿ ಬರೆದುದು. ರತ್ನ 'ಓ ಶ್ರೀಮತಿ' 1956–57ರಲ್ಲಿ ಬರೆದುದು. ಸುಮಾರು 40 ವರ್ಷಗಳಿಂದ ಇವರು ಕಥೆಗಳನ್ನು ಬರೆಯುತ್ತಿದ್ದಾರೆ. ಗಲ್ಪ್ (1960)ಮತ್ತು ಕಥಾ (1970)ಇವರ ಕಥಾ ಸಂಕಲನಗಳು. ಕಥೆಗಳಲ್ಲಿ ಕಥಾತತ್ವ ಹಾಗೂ ಚರಿತ್ರೆಗೆ ಇವರು ಹೆಚ್ಚು ಗಮನ ಹರಿಸುತ್ತಾರೆ. ಕಥೆ ಕಥೆಗಾಗಿ ಎಂಬುದರಲ್ಲಿ ಇವರಿಗೆ ಆಸಕ್ತಿಯಿಲ್ಲ. ಸತ್ಯದ ಅನ್ವೇಷಣೆಯೇ ಇವರ ಕಥೆಗಳ ಮೂಲೋದ್ದೇಶವಾಗಿರುತ್ತದೆ. ಇವರ ಕಥೆಗಳನ್ನು ಕಾಲದ ಮಾನದಂಡದಂತೆ ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು 1930ರಿಂದ 1956ರ ತನಕ, ಎರಡನೆಯದು 1956ರಿಂದ ಪ್ರಾರಂಭವಾಗುತ್ತದೆ. 'ಮೀನ್ ಪಿಯಾಸಿ' ಕಥೆಯಿಂದ ಇವರ ಸಾಹಿತ್ಯಯಾತ್ರೆಯ ಎರಡನೆಯ ಚರಣ ಪ್ರಾರಂಭವಾಗುತ್ತದೆ. ಮೊದಲನೆ ಚರಣದಲ್ಲಿ ಮಾನವನ ಬಾಹ್ಯಗುಣಗಳತ್ತ ಧ್ಯಾನ ಹರಿಸಿದ್ದರೆ ಎರಡನೆ ಚರಣದಲ್ಲಿ ಆಂತರಿಕ ಗುಣಗಳತ್ತ ಧ್ಯಾನ ಹರಿಸಿದ್ದಾರೆ. ಇವರು ಸಾಹಿತ್ಯ ಜೀವನದ ಪ್ರಾರಂಭದಲ್ಲಿ ಒರಿಯಾ, ಇಂಗ್ಲಿಷ್ ಹಾಗೂ ಬಾಂಗ್ಲಾ ಭಾಷೆಗಳಲ್ಲಿ ಬರೆಯುತ್ತಿದ್ದು, ಪ್ರಸ್ತುತ ಕೇವಲ ಬಂಗಾಳಿಯಲ್ಲಿ ಮಾತ್ರ ಬರೆಯುತ್ತಿದ್ದಾರೆ. ಈಗ ಕಲ್ಕತ್ತಾದಲ್ಲಿ ವಾಸವಾಗಿದ್ದಾರೆ.

***ಸತೀನಾಥ ಭಾದುಡಿ (1907–1965):*** ಸತೀನಾಥ ಭಾದುಡಿಯವರು ಪೂರ್ಣಿಯಾದ ವಾಸಿಗಳು. ಬಹಳ ವರ್ಷಗಳ ಪರ್ಯಂತ ಇವರು ರಾಜಕೀಯದಲ್ಲಿದ್ದರು. ಬಿಹಾರದ ಕಾಂಗ್ರೆಸ್ ಪಾರ್ಟಿಯಲ್ಲಿ ಇವರು ಬಹಳ ಪರಿಚಿತ ವ್ಯಕ್ತಿಯಾಗಿದ್ದರು. ಆಗಸ್ಟ್‌ನ ವಿದ್ರೋಹದಲ್ಲಿ ಭಾಗವಹಿಸಿ ಇವರು ಜೈಲಿಗೆ ಹೋಗಿದ್ದರು. ಅದೇ ಜೈಲಿನಲ್ಲಿ ಇವರು ತಮ್ಮ ಪ್ರಥಮ ಕಾದಂಬರಿ 'ಜಾಗರಿ' ರಚಿಸಿದರು – (1945ರಲ್ಲಿ) ಈ ಪುಸ್ತಕದಿಂದಾಗಿ ಇವರಿಗೆ ಬಹಳ ಖ್ಯಾತಿ ಲಭಿಸಿತು. ಈ ಕೃತಿಗಾಗಿ ಇವರಿಗೆ 1950ರಲ್ಲಿ ರವೀಂದ್ರ ಸ್ಮೃತಿ ಪುರಸ್ಕಾರ ಲಭಿಸಿದೆ. ಕಥೆ, ಕಾದಂಬರಿ, ಪ್ರಬಂಧ ರಚನೆಯಲ್ಲಿ ಇವರು ಸಿದ್ಧಹಸ್ತರು. ಇವರ 'ಸತ್ತಿ ಭ್ರಮಣ್ ಕಾಹಿನಿ' (ಭ್ರಮಣೆಕಹಾನಿ) ಒಂದು ಅಸಾಮಾನ್ಯ ಕೃತಿ. ಅಂತರ್ಯ ಒಳಹೊಕ್ಕು ನೋಡುವಲ್ಲಿ ಇವರಿಗೆ ಸಿದ್ಧಿ ಲಭಿಸಿದೆ. ಮಾನವನ ಸೂಕ್ಷ್ಮಾತಿಸೂಕ್ಷ್ಮ ಸಮಸ್ಯೆಗಳನ್ನು ಹಾಗೂ ಉದ್ವೇಗಗಳ ವಿಶ್ಲೇಷಣೆಯಲ್ಲಿ ಇವರನ್ನು ಲೇಖಕರ ಲೇಖಕರೆಂದು ಮಾನ್ಯ ಮಾಡಲಾಗಿದೆ. 'ಢೋಂಢಾಯಿ ಚರಿತ್ ಮಾನಸ್' (ಎರಡು ಭಾಗಗಳಲ್ಲಿ) ಭಾರತೀಯ ಕಾದಂಬರಿ ಕ್ಷೇತ್ರದಲ್ಲಿ ಅದ್ವಿತೀಯವೆಂದು ಪರಿಗಣಿಸಲಾಗಿದೆ. ಇವರು ಪ್ರಖ್ಯಾತ ಹಿಂದಿ ಲೇಖಕ ಫಣೀಶ್ವರನಾಥ್ ರೇಣುರವರ ಸಾಹಿತ್ಯ ಗುರುಗಳಾಗಿದ್ದರು.

***ಆಶಾಪೂರ್ಣದೇವಿ (1879):*** ಮನುಷ್ಯನ ಮನಸ್ಸಿನ ರಹಸ್ಯಗಳನ್ನು ಹೊರಗೆಡಹುವಲ್ಲಿ ಆಶಾಪೂರ್ಣದೇವಿಯವರು ಬಹಳ ನಿಪುಣರು ಹಾಗೂ ಮನುಷ್ಯ ಜೀವನದ ಬಗ್ಗೆ ಬಹಳ ಸಹಾನುಭೂತಿ ಉಳ್ಳವರು. ಸಹಜ ಸಾಂಸಾರಿಕ

ಜೀವನ ಯಾತ್ರೆಯು ಹಿಂದೆ ಇರುವ ವೈಚಿತ್ರ್ಯಗಳನ್ನು ಪೃಥಕ್ಕರಿಸುವಲ್ಲಿ ಅವರಿಗೆ ಅಸಾಮಾನ್ಯ ಕುಶಲತೆ ಇದೆ. ಅವರು ನಮ್ಮ ಸಮಾಜ ಹಾಗೂ ಸಾಂಸಾರಿಕ ಜೀವನದ ಮೇಲೆ ತೀಕ್ಷ್ಣ ಬೆಳಕು ಚೆಲ್ಲಿದ್ದಾರೆ. 1966ರಲ್ಲಿ ಇವರಿಗೆ ಲೀಲಾ ಪುರಸ್ಕಾರ ಹಾಗೂ ರವೀಂಧ್ರ ಪುರಸ್ಕಾರಗಳು ಲಭಿಸಿವೆ. ಇವರ ಹಲವು ಪುಸ್ತಕಗಳ ಆಧಾರದ ಮೇಲೆ ಚಲನ ಚಿತ್ರಗಳಾಗಿವೆ. ಇವರಿಗೆ ಭಾರತೀಯ ಜ್ಞಾನಪೀಠ ಪ್ರಶಸ್ತಿ ಸಹ ದೊರೆತಿದೆ.

*ಸುಬೋಧ್ ಘೋಷ್:* ಸುಬೋಧ್‌ಘೋಷ್ ಕಾದಂಬರಿಕ್ಷೇತ್ರದ ಅತ್ಯಂತ ಶಕ್ತಿಶಾಲಿ ಲೇಖಕರು. ಕಥೆ, ಕಾದಂಬರಿ ಮತ್ತು ಪ್ರಬಂಧ ರಚನೆಯಲ್ಲಿ ಇವರು ಅತ್ಯಂತ ನಿಪುಣರು. ಇವರಿಗೆ ಬಹಳಷ್ಟು ವಿಚಿತ್ರ ವಿಷಯಗಳ ಮಾಹಿತಿ ಇತ್ತು. ಇವರ ಬಾಲ್ಯದ ದಿನಗಳು ಛೋಟ ನಾಗಪುರದಲ್ಲಿ ಕಳೆದಿತ್ತು. ಇವರ ಬಹಳಷ್ಟು ರಚನೆಗೆ ಇದೇ ಪ್ರಸ್ಥಭೂಮಿ. 'ಶತಾಕಿಯ' ಕಾದಂಬರಿ ಇವರ ಉತ್ಕೃಷ್ಟ ಕಾದಂಬರಿಯೆಂದು ಪರಿಗಣಿಸಲ್ಪಟ್ಟಿದೆ. ವಿಚಿತ್ರ ಅನುಭವಗಳ ಜೊತೆ, ಗಹನ ಬೌದ್ಧಿಕ ವಿಚಾರಗಳ ಸಂಯೋಗವನ್ನು ಬಹುಚೆನ್ನಾಗಿ ಸಾಧಿಸಿದ್ದಾರೆ. ಇವರು ಜನಿಸಿದ್ದು ಹಜಾರಿಬಾಗ್‌ನಲ್ಲಿ. ಪ್ರಸ್ತುತ ಇವರು ಕಲ್ಕತ್ತೆಯ ಒಂದು ದಿನಪತ್ರಿಕೆಯಲ್ಲಿ ಸಹಾಯಕ ಸಂಪಾದಕರಾಗಿದ್ದಾರೆ. ಇವರ ಶೈಲಿ ಅಸಾಮಾನ್ಯವಾದುದ್ದು. ಇವರು ಆದಿನಿವಾಸಿ ಜನಗಳ ಜೀವನವನ್ನು ಯಾವ ಕುಶಲತೆಯಿಂದ ಚಿತ್ರಿಸುತ್ತಾರೆಯೋ ? ಅದೇ ಕುಶಲತೆಯಿಂದ ನಗರ ಜೀವನವನ್ನು ಚಿತ್ರಿಸಬಲ್ಲರು. ಮಾನವ ಮನದ ಕಳ್ಳದಾರಿಗಳ ರಹಸ್ಯಗಳನ್ನು ಗುರುತಿಸುವಲ್ಲಿ ಸಿದ್ಧಹಸ್ತರಾದ ಅವರು ಇಂದು ನಮ್ಮೊಡನಿಲ್ಲ.

*ಜ್ಯೋತಿರಿಂದ್ರ ನಂದಿ:* ಜ್ಯೋತಿರಿಂದ್ರ ನಂದಿ ಯುದ್ಧ ನಂತರದ ಕಾಲದ ಮಧ್ಯಮವರ್ಗ ಹಗೂ ನಿಮ್ನವರ್ಗದ ನಿಪುಣ ಬರಹಗಾರರು. ಮಾನಸಿಕ ಭಾವನೆಗಳ ವಿಶ್ಲೇಷಣೆಯಲ್ಲಿ ಇವರು ತಮ್ಮದೇ ಆದ ಒಂದು ರೀತಿಯನ್ನು ರೂಪಿಸಿಕೊಂಡಿದ್ದಾರೆ. ಇವರ ಭಾಷೆ ಹಾಗೂ ಬರೆಯುವ ರೀತಿಯೂ ವೈಶಿಷ್ಟ್ಯಪೂರ್ಣವಾದದ್ದು. ಅನೇಕ ಏರಿಳಿತಗಳನ್ನು ಪ್ರದರ್ಶಿಸುವುದರಲ್ಲಿಯೂ ಇವರು ನಿಪುಣರು. ಇವರ ಕಥೆ ಹಾಗೂ ಕಾದಂಬರಿಗಳಲ್ಲಿ ಸಮಕಾಲೀನ ಸಮಾಜದ ತಪ್ಪುಗಳು ಮಾತ್ರ ಚಿತ್ರಿತಗೊಂಡಿಲ್ಲ. ಆದರೆ ಮಾನವ ಜೀವನದಲ್ಲಿ ಪ್ರಕೃತಿಯ ಪ್ರಭಾವವನ್ನು ಬಹು ಚೆನ್ನಾಗಿ ಪ್ರದರ್ಶಿಸಿದ್ದಾರೆ. ಈ ಸಾಹಿತ್ಯ ಕ್ಷೇತ್ರದಲ್ಲಿ ಇವರು ತಮ್ಮದೇ ಆದ ಒಂದು ದಾರಿಯನ್ನು ಕಂಡುಕೊಂಡಿದ್ದಾರೆ. ಅದರಲ್ಲೆ ಇವರು ನಡೆಯುತ್ತಿದ್ದಾರೆ.

*ನರೇಂದ್ರನಾಥ ಮಿತ್ರ (1916–1975):* ನರೇಂದ್ರನಾಥರು ಮಿತಭಾಷಿಗಳು, ಮೃದು ಭಾಷಿಗಳು. ಕಥೆ ಹಾಗೂ ಕಾದಂಬರಿಗಳಲ್ಲಿ ಅವರ ವಿಶೇಷ ವ್ಯಕ್ತಿತ್ವ ಸ್ಥಾಪಿತಗೊಂಡಿದೆ. ಮಧ್ಯಮವರ್ಗದ ಜೀವನ ಚಿತ್ರಣದಲ್ಲಿ ಇವರು ನಿಪುಣ – ಕಥೆಗಾರರು. ಮಾನವನ ಮನಸ್ಸಿನ ರಹಸ್ಯಗಳನ್ನು ಹೊರತೆಗೆಯುವುದರಲ್ಲಿ ಅಂದರೆ ಹೃದಯದ ವಿಶ್ಲೇಷಣೆಯಲ್ಲಿ ಇವರಿಗೆ ಆಳವಾದ ಒಲವಿದೆ, ಇವರ ಮಿತ್ರ ಲೇಖಕರ ಅಭಿಪ್ರಾಯದಂತೆ ಇವರಷ್ಟು ಅಧಿಕ ಸಂಖ್ಯೆಯ ಉತ್ಕೃಷ್ಟವಾದ ಕಥೆಗಳನ್ನು ಮತ್ಯಾರೂ ಬರೆದಿರುವುದಿಲ್ಲ. ಅವರ ಚರಿತ್ರೆ ಚಿತ್ರಣ ನಮ್ಮನ್ನು ಬಹಳವಾಗಿ

ಪ್ರಭಾವಿತರನ್ನಾಗಿಸುತ್ತದೆ. ಕಲ್ಕತ್ತೆಯ ಒಂದು ವೃತ್ತಪತ್ರಿಕೆಯೊಡನೆ ಸಂಬಂಧ ಇರಿಸಿಕೊಂಡಿರುವ ಇವರು ಜನಿಸಿದ್ದು ಫರೀದಾಬಾದ್‌ನಲ್ಲಿ.

*ನಾರಾಯಣ ಗಂಗೋಪಾಧ್ಯಾಯ (1918–1970):* ನರೇಂದ್ರನಾಥ ಮಿತ್ರರ ಸಹಪಾಠಿ ನಾರಾಯಣ ಗಂಗೋಪಾಧ್ಯಾಯ. ಇಬ್ಬರೂ ಜೊತೆ ಜೊತೆಯಾಗಿಯೇ ಸಾಹಿತ್ಯ ಕ್ಷೇತ್ರಕ್ಕೆ ಪ್ರವೇಶಿಸಿದರು. ಇವರ ತಂದೆ ಇವರಿಗಿಟ್ಟಿದ್ದ ಹೆಸರು ನಾರಾಯಣನಾಥ ಗಂಗೋಪಾಧ್ಯಾಯ. ಇವರು ಜನಿಸಿದ ಊರು ದಿನಾಜಪುರ್. ಕಲ್ಕತ್ತಾ ವಿಶ್ವವಿದ್ಯಾನಿಲಯದಲ್ಲಿ ಇವರು ಬಾಂಗ್ಲಾ ಭಾಷೆ ಅಂದರೆ ಸಾಹಿತ್ಯದ ರೀಡರ್ ಆಗಿದ್ದರು. ಕತೆ, ಕಾದಂಬರಿ, ಕವಿತೆ, ನಾಟಕ, ಚಿತ್ರನಾಟ್ಯ, ಪ್ರಬಂಧ, ಬಾಲಸಾಹಿತ್ಯ ರಚಿಸುತ್ತಿದ್ದರಲ್ಲದೆ ಸಂಗೀತದ ಬಗ್ಗೆಯೂ ವೃತ್ತಪತ್ರಿಕೆಗಳಿಗೆ ಲೇಖನ ಬರೆಯುತ್ತಿದ್ದರು. ಅಂದರೆ ಇವರು ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲೂ ನಿಪುಣರಾಗಿದ್ದರು. ಇವರು 1994ರಲ್ಲಿ ಬರೆದ ಪ್ರಥಮ ಕಾದಂಬರಿ 'ಉಪನಿವೇಷ್' ಇವರನ್ನು ಸಾಹಿತ್ಯ ಕ್ಷೇತ್ರದ ಶಿಖರದ ಮೇಲೆ ಒಯ್ದಿತು. ಇವರ ಲೇಖನಗಳಲ್ಲಿ ಬಾಹ್ಯ ಜಗತ್ ಹಾಗೂ ಅಂತರ ಲೋಕದ ಅದ್ಭುತ ಸಮನ್ವಯವನ್ನು ಕಾಣುತ್ತೇವೆ. ಅವರು ರೊಮ್ಯಾಂಟಿಕ್ ಹಾಗೂ ಜೊತೆಯಲ್ಲೆ ಯಥಾರ್ಥವಾದಿಗಳು. ಮನುಷ್ಯನ ನಾಲ್ಕೂ ಸುತ್ತಿನ ವಾತಾವರಣ ಇವರ ಸಾಹಿತ್ಯದಲ್ಲಿ ಜಾಗ ಮಾಡಿಕೊಂಡಿದೆ. ಇವರು ಸಮಾಜದ ಕಟು ವಿಶ್ಲೇಷಕರು, ಮತ್ತು ರೊಮ್ಯಾಂಟಿಕ್ ಪಂಥದ ಪ್ರೇಮಿಗಳು ಸಹ ಆಗಿದ್ದರು.

*ಸಂತೋಷ್ ಕುಮಾರ್ ಘೋಷ್:* ಸಂತೋಷ್ ಕುಮಾರ್ ಘೋಷ್ ಸಹ ನರೇಂದ್ರನಾಥ ಮಿತ್ರ ಮತ್ತು ನಾರಾಯಣ ಗಂಗೋಪಾಧ್ಯಾಯರ ಜೊತೆಯಲ್ಲಿ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದರು. ಇವರು ಜನಿಸಿದ್ದು ಫರೀದ್‌ಪುರ್‌ನಲ್ಲಿ. ಅನಂತರ ಕಲ್ಕತ್ತೆಗೆ ಹೊರಟು ಹೋದರು. ಹೆಚ್ಚಿಗೆ ನಗರ ಜೀವನದ ಬಗ್ಗೆಯೇ ಬರೆದಿರುವ ಇವರು ಗ್ರಾಮೀಣ ಜೀವನ ಕುರಿತು ಏನೂ ಬರೆದಿರುವುದಿಲ್ಲ. ಕಥೆ, ಕಾದಂಬರಿ, ನಾಟಕ, ಕವಿತೆ, ಪ್ರಬಂಧ ಮುಂತಾದ ಸಾಹಿತ್ಯದ ಎಲ್ಲಾ ಪ್ರಕಾರಗಳ ರಚನೆಯಲ್ಲೂ ಸಿದ್ಧಹಸ್ತರೆನಿಸಿದ್ದ ಇವರ ಲೇಖನಿ ತೀಕ್ಷ್ಣವಾದದ್ದು ಹಾಗೂ ವ್ಯಂಗ್ಯಾತ್ಮಕವಾದದ್ದು. ಈ ಮಾಧ್ಯಮದಿಂದಲೇ ಇವರು ಮನಸ್ಸಿನ ಸೂಕ್ಷ್ಮತಮ ಅನುಭವಗಳನ್ನು ವ್ಯಕ್ತಗೊಳಿಸುವಲ್ಲಿ ನಿಪುಣರು. ಸ್ವಲ್ಪ ವೇದನೆ ಹಾಗೂ ಸ್ವಲ್ಪ ನಿರಾಸೆ ಕೂಡ ಕಾಣುತ್ತೇವೆ. ಆದರೂ ಇವರು ಜೀವನವನ್ನು ತುಂಬಾ ಪ್ರೀತಿಸುತ್ತಾರೆ. ಕೆಲಕಾಲ ಇವರು ದೆಹಲಿಯಲ್ಲಿದ್ದರು. ಈಗ ಇವರು ಒಂದು ಹೆಸರಾಂತ ದಿನಪತ್ರಿಕೆಯ ಜಂಟಿ ಸಂಪಾದಕರಾಗಿದ್ದಾರೆ.

*ಸಮರೇಶ್ ಬಸು:* ನರೇಂದ್ರನಾಥ್, ನಾರಾಯಣ್, ಸಂತೋಷ್ ಕುಮಾರ್ ಇವರ ಹೆಸರುಗಳ ಜೊತೆಯಲ್ಲೇ ಹೆಸರಿಸಬೇಕಾದ ಇನ್ನೊಂದು ಹೆಸರೆಂದರೆ ಸಮರೇಶ್ ಬಸು. ಸಮರೇಶ್ ಬಂಗಾಳದ ಮಣ್ಣನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿರುವವರು, ಇವರು ಯಥಾರ್ಥವಾದಿಗಳು. ಢಾಕಾದಲ್ಲಿ ಜನಿಸಿದ ಇವರು ತಮ್ಮ ಬಾಳಿನಲ್ಲಿ ಹಲವು ವಿಧದ ಕೆಲಸಗಳನ್ನು ನಿರ್ವಹಿಸಿದ್ದಾರೆ. ಕೊನೆಯಲ್ಲಿ ಇವರು ಸಾಹಿತ್ಯವನ್ನೇ

ಜೀವನವನ್ನಾಗಿ ಅಂಗೀಕರಿಸಿದರು. ಮಾನವ ಜೀವನದ ಬಗ್ಗೆ ಇವರ ಕುತೂಹಲ ಮತ್ತು ಸಹಾನುಭೂತಿ ಅಪರಿಮಿತ. ಇವರ ಕಥೆಗಳಲ್ಲಿ ಹಾಗೂ ಕಾದಂಬರಿಗಳಲ್ಲಿ ಈ ಬಗ್ಗೆ ಬಹಳ ವಿವರ ದೊರೆಯುತ್ತದೆ. ಇವರ ಲೇಖನದ ವಿಷಯು ಕೇವಲ ಮನುಷ್ಯನೇ ಅಲ್ಲ ಪ್ರಕೃತಿಯೂ ಹೌದು, ಪ್ರವಾಸ ಸಾಹಿತ್ಯವನ್ನು ಇವರು 'ಕಾಲೂಕಟ್' ಹೆಸರಿನಿಂದ ಬರೆಯುತ್ತಾರೆ. ಇವರು ಹಾಡುಗಳನ್ನು ರಚಿಸುತ್ತಾರಲ್ಲದೆ ಚೆನ್ನಾಗಿ ಹಾಡುತ್ತಾರೆ. ಮಣಿಕ್ ಬಂದೋಪಾಧ್ಯಾಯ ಮತ್ತು ತಾರಾಶಂಕರ ಬಂದೋಪಾಧ್ಯಾಯರಿಂದ ಪ್ರಭಾವಿತರಾಗಿರುವ ಸಮರೇಶ್ ಬಸು ಈ ತಮ್ಮ ಪಥದ ಶ್ರೇಷ್ಠ ಶಿಲ್ಪಿಯಾಗಿದ್ದಾರೆ. ಜೀವನವನ್ನು ಇವರು ತಮ್ಮ ಅನುಭವಗಳ ಮೂಲಕ ಅರಿತಿದ್ದಾರೆ. ಈ ಅನುಭವಗಳೇ ಇವರ ಅಂತರ್ಯದಲ್ಲಿ ಆಳವಾಗಿ ಬೇರುಬಿಟ್ಟಿದೆ.

*ಬಿಮಲ್ ಕರ್ (1921):* ಬಿಮಲ್ ಕರ್ ಮಾನವಧರ್ಮಿ ಲೇಖಕರು. ಇವರು ಜೀವನವನ್ನು ತಮ್ಮದೇ ಆದ ದೃಷ್ಟಿಯಿಂದ ನೋಡುತ್ತಾರೆ. ಪ್ರಾರಂಭದಲ್ಲಿ ಇವರು ಡಾಕ್ಟರ್ ಪರೀಕ್ಷೆಗೆ ಕೂಡಲು ಬಯಸಿದ್ದರು. ಆದರೆ ಓದನ್ನು ಪೂರೈಸಲಿಲ್ಲ. ಅನಂತರ ಇವರು ಕಥೆ, ಕಾದಂಬರಿಗಳಲ್ಲಿ ಚಿಕಿತ್ಸಕನ ಮಮತೆ ರಹಿತ ಹಾಗೂ ಉದಾಸೀನ ದೃಷ್ಟಿಯನ್ನು ಬೀರಿದ್ದಾರೆ. ಬಾಂಗ್ಲಾ ಕಥಾಸಾಹಿತ್ಯದಲ್ಲಿ ಹೊಸ ರೀತಿಯ ಆಂದೋಳನದ ಪ್ರವರ್ತಕರು. ಮಾನಸಿಕ ಸ್ಥೈರ್ಯ ಹಾಗೂ ಬುದ್ಧಿ ಇವರ ಆಯುಧಗಳು. ಇವರು ಉದ್ವೇಗದಿಂದ ಏನನ್ನೂ ವರ್ಣಿಸಿದುದಿಲ್ಲ. ಪರಿಸ್ಥಿತಿಯ ಮುಂದೆ ಆತ್ಮಸಮರ್ಪಣೆಯನ್ನು ಮಾಡಿಕೊಳ್ಳುವುದಿಲ್ಲ. 24ಪರಗಣದಲ್ಲಿ ಜನಿಸಿದ ಇವರ ಬಾಲ್ಯ ಹಜಾರಿಬಾಗ್‌ನಲ್ಲಿ ಕಳೆಯಿತು. ಪ್ರಸ್ತುತ ಇವರು ಕಲ್ಕತ್ತೆಯ ಒಂದು ವಿಖ್ಯಾತ ಸಾಹಿತ್ಯ ಪತ್ರಿಕೆಯೊಡನೆ ಸಂಪರ್ಕ ಇರಿಸಿಕೊಂಡಿದ್ದಾರೆ. ಜೀವನದ ಜೊತೆಯಲ್ಲೆ ಇದ್ದು ಮೃತ್ಯುದರ್ಶನ ಮಾಡುತ್ತಿದ್ದ ಇವರ ಕಥೆ ಹಾಗೂ ಕಾದಂಬರಿಗಳಲ್ಲಿ ಜೀವನ ಚೇತನ ಹಾಗೂ ಮೃತ್ಯು ಚೇತನ ಒಂದೇ ದಾರದಲ್ಲಿ ಪೋಣಿಸಿರುವಂತೆ ಕಾಣುತ್ತದೆ. ಇವರ ಅನೇಕ ಕಥೆಗಳ ಆಧಾರದ ಮೇಲೆ ಚಲನಚಿತ್ರಗಳು ನಿರ್ಮಿಸಲ್ಪಟ್ಟಿವೆ.

*ರಮಾಪದ್ ಚೌಧರಿ (1922):* ರಮಾಪದ್ ಚೌಧರಿ ಆಧುನಿಕ ಬಾಂಗ್ಲಾ ಕಥಾಸಾಹಿತ್ಯಕಾರರಲ್ಲಿ ಪ್ರಮುಖರು. ಎರಡನೆ ವಿಶ್ವಯುದ್ಧದ ಸಮಯದಲ್ಲಿ ಬರವಣಿಗೆ ಪ್ರಾರಂಭಿಸಿದ್ದ ಇವರು ಜನಿಸಿದ್ದು ಖಡಗ್‌ಪುರದಲ್ಲಿ. ಕೆಲವರ್ಷಗಳು ಇವರು ನೌಕರಿಯ ನಿಮಿತ್ತ ನಾಗಪುರದಲ್ಲಿದ್ದರು. ಭಿನ್ನಭಿನ್ನ ನೌಕರಿಗಳನ್ನು ಮಾಡಿದನಂತರ ಈಗ ಇವರು ಕಲ್ಕತ್ತೆಯ ದಿನಪತ್ರಿಕೆಯೊಂದರಲ್ಲಿ ಸಂಪಾದಕರಾಗಿದ್ದಾರೆ. ಅರಣ್ಯಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಇವರು ಹಲವು ಕಥೆಗಳನ್ನು ಹೆಣೆದಿದ್ದಾರೆ. ಇತ್ತ ನಗರ ಜೀವನದ ಮೇಲೂ ಹಲವು ಕಥೆ ಕಾದಂಬರಿಗಳನ್ನು ಬರೆದಿದ್ದಾರೆ. ಇವರ ಕಥೆಗಳನ್ನು ಆಧರಿಸಿ ಹಲವು ಚಲನ ಚಿತ್ರಗಳೂ ಆಗಿವೆ. ಇವರ ಭಾಷೆಯಲ್ಲಿ ಲಾವಣ್ಯವಿದ್ದು ಇವರ ವೈಶಿಷ್ಟ್ಯ ಕಥಾವಸ್ತುವಿನ ವೈಚಿತ್ರ್ಯದಲ್ಲಿ ಹಾಗೂ ಹೊಸತನದಲ್ಲಿ ಮಾತ್ರವಲ್ಲ ಟ್ರೀಟ್ ಮೆಂಟ್‌ನಲ್ಲೂ ಇದೆ. ಇವರು ಜೀವನ ನೌಕೆಯನ್ನು ಎಲ್ಲಾ ನದಿತಟದಲ್ಲೂ

ಬಂಧಿಸಿದ್ದಾರೆ. ಹಾಗೇ ಎಲ್ಲರ ಹೃದಯದಲ್ಲೂ ಶಾಶ್ವತ ನೆಲೆಸಿದ್ದಾರೆ. ಇವರಿಗೆ ರವೀಂದ್ರ ಪುರಸ್ಕಾರ ಸಹ ಲಭಿಸಿದೆ.

*ಸೈಯದ್ ಮುಸ್ತಾಫಾ ಸಿರಾಜ್ (1930):* ಸ್ವಾತಂತ್ರ್ಯಾನಂತರದ ಕಾಲದ ತರುಣ ಲೇಖಕರಲ್ಲಿ ಸೈಯಾದ್ ಮುಸ್ತಾಫಾ ಸಿರಾಜ್ ಒಂದು ಪ್ರಮುಖ ಹೆಸರು. ಇವರ ಜೀವನದ ಅನುಭವಗಳು ವಿಚಿತ್ರವಾಗಿವೆ. ಇವರು ಮುರ್ಶಿದಾಬಾದ್‌ನ ಒಂದು ಸುತ್ತಾಡುವ ದಳದ ಹಾಡುವ 'ಮಾಸ್ತರ್'ರಾಗಿದ್ದಾರು. ಇದು 1950–58ರ ವಿಷಯ. 1949–50ರ ತನಕ ಇವರು ಪತ್ರಕಾರರಾಗಿದ್ದರು. ಆಗ ಇವರು ಕಲ್ಕತ್ತೆಯ ಒಂದು ಪ್ರಖ್ಯಾತ ದಿನಪತ್ರಿಕೆಯೊಡನೆ ಸಂಬಂಧ ಇರಿಸಿಕೊಂಡಿದ್ದರು. ತಾರಾಶಂಕರರ ದಾರಿಯಲ್ಲೇ ನಡೆದು ತಮ್ಮದೇ ಆದ ದಾರಿಯನ್ನು ಕಂಡುಕೊಂಡಿರುವ ಇವರ ಪ್ರಥಮ ಕಥೆ ಭಾಲೊ ಟಾಶಾ ಓ ಡಾವುನ್ ಟ್ರೈನ್' 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಬರವಣಿಗೆಯೇ ಇವರ ಜೀವನದ ಮುಖ್ಯ ಮಾರ್ಗ. ಇವರು ಬಂಗಾಳದ ಗ್ರಾಮೀಣ ಜೀವನಕ್ಕೆ ಏನು ಪ್ರಾಮುಖ್ಯತೆ ನೀಡಿದ್ದಾರೆ ಅದೇ ಪ್ರಾಮುಖ್ಯತೆಯನ್ನು ನಗರ ಜೀವನ ಚಿತ್ರಣಕ್ಕೂ ನೀಡಿದ್ದಾರೆ. ಇವರು ಬರೆಯುವುದೂ ಹೆಚ್ಚು. ಸಮಾಜದ ಬಗ್ಗೆ ಹೆಚ್ಚು ಕಾಳಜಿ ಇರುವ ಲೇಖಕರೆಂದು ಪರಿಗಣಿಸಲ್ಪಟ್ಟಿದ್ದಾರೆ.

*ಮತಿ ನಂದಿ (1932):* ಉತ್ತರ ಕಲ್ಕತ್ತಾದ ಒಂದು ಗೌರವಸ್ಥ ಕುಟುಂಬದಲ್ಲಿ ಜನ್ಮ ತಾಳಿದ ಇವರು ಆಟೋಮೊಬೈಲ್ ಇಂಜಿನಿಯರಿಂಗ್‌ನಲ್ಲಿ ಡಿಪ್ಲೊಮಾ ಪಡೆದಿದ್ದರು. ರಾಜ್ಯ ಸಾರಿಗೆ ಇಲಾಖೆಯಲ್ಲಿ ಎರಡು ವರ್ಷ ದುಡಿದು ಅನಂತರ ಬಿ.ಎ. ಪಾಸು ಮಾಡಿಕೊಂಡು ಪತ್ರಕಾರರಾದರು. ಕ್ರಿಕೆಟ್ ಆಟದ ಭಕ್ತರಿದ್ದು, ಕ್ರಿಕೆಟ್ ಕುರಿತೇ ಮೂರು ಪುಸ್ತಕಗಳನ್ನು ರಚಿಸಿದ್ದಾರೆ. 1956ರಲ್ಲಿ 'ದೇಶ್' ಪತ್ರಿಕೆಯಲ್ಲಿ 'ಛತ್' ಹೆಸರಿನ ಕಥೆ ಬರೆದು ಎಲ್ಲರ ಗಮನವನ್ನು ತನ್ನತ್ತ ಸೆಳೆದರು. ಇವರ ಬರಹದ ಶೈಲಿಯಲ್ಲಿ ದೃಢತೆ ಇದೆ. ವೃಥಾ ಕಿಂಚಿತ್ತೂ ಹೇಳರು. ಕಠೋರ ವಾಸ್ತವಿಕತೆಯ ನೆಲದ ಮೇಲೆ ನಿಂತು ಮನುಷ್ಯನ ಬಗ್ಗೆ ವಿಶ್ವಾಸ ಇಡುವ ಇವರು ಮಧ್ಯಮ ಹಾಗೂ ನಿಮ್ನವರ್ಗದವರ ಬಗ್ಗೆ ಬರೆಯುವುದರಲ್ಲಿ ನಿಪುಣರು.

*ಸುನೀಲ್ ಗಂಗೋಪಾಧ್ಯಾಯ (1934):* ಸುನೀಲ್ ಗಂಗೋಪಾಧ್ಯಾಯರು ಫರೀದ್ ಪುರದಲ್ಲಿ ಜನಿಸಿದರು. ಇವರು ಕವಿ ಹಾಗೂ ಕಥೆಗಾರರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದ ಇವರ ಕವಿತೆ 'ಏಕಟಿ ಕವಿತಾ' ದಿಂದ ಇವರು ಪ್ರಸಿದ್ಧಗೊಂಡರು. ಇವರು ಕವಿ ಸುನೀಲ್‌ರಾಗಿ ಅಥವಾ ಕಥೆಗಾರ ಸುನೀಲ್‌ರಾಗಿ ಹೆಚ್ಚು ಪ್ರಖ್ಯಾತರಾಗಿದ್ದಾರೋ, ಹೇಳುವುದು ಕಷ್ಟ. ಹಲವಾರು ವಿಧದ ನೌಕರಿಗಳನ್ನು ಮಾಡಿರುವ ಇವರು ಈಗ ಕಲ್ಕತ್ತಾದ ಒಂದು ದಿನಪತ್ರಿಕೆಯನ್ನು ಸೇರಿದ್ದಾರೆ. 1980ರಲ್ಲಿ ಅಮೇರಿಕಾ ಪ್ರವಾಸ ಮಾಡಿ ಬಂದಿರುವ ಇವರು ಬರೆದಿರುವುದು ಬಹಳ. ಇವರ ಅನೇಕ ಕಾದಂಬರಿಗಳು ಚಲನಚಿತ್ರಗಳಾಗಿವೆ. ಇವರು ತಮ್ಮ ಕಥೆಗಳಲ್ಲಿ ಮಧ್ಯಮವರ್ಗದ ಜೀವನದ ವಿವಿಧ ಮುಖಗಳನ್ನು ಜೀವಂತವಾಗಿ ಚಿತ್ರಿಸಿದ್ದಾರೆ. ಭಾಷೆಯಲ್ಲಿ ಲಾಲಿತ್ಯ ತುಂಬಿದೆ. ವಸ್ತುವಿನ ಆಯ್ಕೆ, ನಿರೂಪಣೆ, ಹಾಗೂ

ಜೀವಂತಶೈಲಿ ಇವರನ್ನು ಜನಪ್ರಿಯಗೊಳಿಸಿದೆ.

***ಪ್ರಫುಲ್ಲರಾಯ್ (1934):*** ಪ್ರಫುಲ್ಲರಾಯ್ ಢಾಕಾದಲ್ಲಿ ಜನಿಸಿದರು. ಮನುಷ್ಯನ ಬಿಸಿ ಜೀವನದ ಬಗ್ಗೆ ಹೆಚ್ಚಿನ ಸಂಖ್ಯೆಯಲ್ಲಿ ಕಾದಂಬರಿಗಳನ್ನು ಬರೆಯುವ ಮೂಲಕವೇ ಇವರು ಸಾಹಿತ್ಯ ಜೀವನ ಪ್ರಾರಂಭಿಸಿದರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡ 'ಪೂರ್ವ ಪಾವಂತ್ಯ' ಕಾದಂಬರಿ ಮೂಲಕವೇ ಇವರು ಸಾಹಿತ್ಯ ಪ್ರಪಂಚದಲ್ಲಿ ಪ್ರತಿಷ್ಠಾಪಿತಗೊಂಡರು. ಎರಡು ಭಾಗಗಳಲ್ಲಿ ಪ್ರಕಟಗೊಂಡಿರುವ ಇವರ ಬೃಹತ್ ಕಾದಂಬರಿ 'ಕೆಯಾವಾತರ್ ನೌಕಾ' ಈ ಯುಗದ ಬಂಗಾಳ ಸಾಹಿತ್ಯದ ಚರಿತ್ರೆಯಾಗಿದೆ. ಈ ದಿನಗಳಲ್ಲಿ ಇವರು ಕಲ್ಕತ್ತೆಯ ಒಂದು ದೈನಿಕ ಪತ್ರಿಕೆಯ ವಿಭಾಗೀಯ ಸಂಪಾದಕರಾಗಿದ್ದಾರೆ. ಇವರ ಕಾದಂಬರಿಗಳನ್ನು ಅವಲಂಬಿಸಿ ಹಲವು ಚಲನಚಿತ್ರಗಳಾಗಿವೆ. ಕಥೆ ಹೆಣೆಯುವುದರಲ್ಲಿ ಹಾಗೂ ಚಲನಚಿತ್ರದಲ್ಲಿ ಇವರಿಗೆ ಸಮಾನ ನಿಪುಣತೆ ಇದೆ.

***ಶೀರ್ಷೇಂದು ಮುಖೋಪಾಧ್ಯಾಯ (1935):*** ಇವರು ಜನಿಸಿದ್ದು ಮೈಮನ್ ಸಿಂಹ (ಬಂಗಾಳ ದೇಶ)ದಲ್ಲಿ. 1959ರಲ್ಲಿ ಇವರು ಶಿಕ್ಷಕ ವೃತ್ತಿ ಪ್ರಾರಂಭಿಸಿದರು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡ 'ಜಲತರಂಗ್' ಕಥೆಯಿಂದಲೇ ಇವರು ಲೇಖಕರಾಗಿ ಪ್ರತಿಷ್ಠಾಪನೆಗೊಂಡದ್ದು. ಇವರು ಇದುವರೆಗೆ ಹತ್ತು ಕಾದಂಬರಿಗಳು, ಐವತ್ತಕ್ಕೂ ಹೆಚ್ಚು ಸಣ್ಣ ಕಥೆಗಳನ್ನು ರಚಿಸಿದ್ದಾರೆ. ಇವರ ಕಥೆ ಹಾಗೂ ಕಾದಂಬರಿಗಳಲ್ಲಿ ಯಥಾರ್ಥವಾದ ಸೆಳೆತವನ್ನು ಸ್ಪಷ್ಟವಾಗಿ ನೋಡಬಹುದು, ಅನುಭವಿಸಬಹುದು. ಶೀರ್ಷೇಂದುರವರ ಕಥೆಗಳಲ್ಲಿ ಅಸ್ಥಿರತೆಯನ್ನು ಕಾಣುವುದಿಲ್ಲ. ಒಂದು ತರಹ ಸ್ಥಿರ ವಿಶ್ವಾಸ ಹಾಗೂ ಆಸ್ತಿಕತೆಯ ಬೋಧನೆ ಇರುತ್ತದೆ. ಇವರು ಕಥೆಗಳಲ್ಲಿ ಆತ್ಮಕಥೆಯ ರೂಪ ನೀಡಿ ಇದೇ ಮಾಧ್ಯಮದಿಂದ ಮಾನವ ಜೀವನದ ಆಂತರ್ಯ ಮುಟ್ಟಲು ಪ್ರಯತ್ನಿಸುತ್ತಾರೆ.

***ದೇವೇಶ್ ರಾಯ್ (1936):*** ದೇವೇಶ್ ರಾಯ್ ಜಲಪಾಇಗುಡಿಯಲ್ಲಿ ವಾಸಿಸುತ್ತಿದ್ದಾರೆ. ಇವರು ಬಾಂಗ್ಲಾ ಸಾಹಿತ್ಯದ ಅಧ್ಯಾಪಕರು. ಎಂಬತ್ತರ ದಶಕದ ಬಾಂಗ್ಲಾ ಸಣ್ಣಕಥೆಗಾರರ ಆಂಧೋಲನದ ಪ್ರಮುಖ ನೇತಾರರು. ಬರವಣಿಗೆಯಲ್ಲಿ ಭಾಷಾ ಪ್ರಯೋಗಕ್ಕೆ ಇವರು ಹೆಚ್ಚಿನ ಆದ್ಯತೆ ನೀಡುತ್ತಾರೆ. ಇವರ ಪ್ರಥಮ ಕಥಾಸಂಕಲನ 'ದೇವೇಶ್ ರಾಯ್‌ರ್ ಗಲ್ಪ್' 1959ರಲ್ಲಿ ಪ್ರಕಟಗೊಂಡಿತ್ತು. ಇವರ ಪ್ರಥಮ ಕಾದಂಬರಿ 'ಯಯಾತಿ' 1972ರಲ್ಲಿ ಪ್ರಕಟಗೊಂಡಿತ್ತು. 'ದೇಶ್' ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದ ಕಥೆ 'ಹಾಡ್‌ಕಾಟಾ' ಓದುಗರನ್ನು ಬಹಳ ಆಕರ್ಷಿಸಿತ್ತು. ಇವರು ಇನ್ನೂರಕ್ಕೂ ಹೆಚ್ಚು ಕಥೆಗಳನ್ನು ಬರೆದಿದ್ದಾರೆ.

*Printed at* Printsman, 18A/11, Doriwalan, New Delhi-110005